ವಜ್ರಮಹೋತ್ಸವ ವರ್ಷ

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ–67

ಹರಿಹರ ಕವಿಯ

# ಗಿರಿಜಾಕಲ್ಯಾಣ ಮಹಾಪ್ರಬಂಧಂ

ಗದ್ಯಾನುವಾದ :

ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ





ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : : ಬೆಂಗಳೂರು–18.
1976

ವಜ್ರಮಹೋತ್ಸವ ವರ್ಷ

ಪಂಚವಾರ್ಷಿಕ ಯೋಜನೆಯ ಪುಸ್ತಕಮಾಲೆ-67

ಹರಿಹರ ಕವಿಯ

# ಗಿರಿಜಾಕಲ್ಯಾಣ ಮಹಾಪ್ರಬಂಧಂ

ಗದ್ಯಾನುವಾದ :

ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ



ಕನ್ನಡ ಸಾಹಿತ್ಯ ಪರಿಷತ್ತು
ಚಾಮರಾಜಪೇಟೆ : : ಬೆಂಗಳೂರು-18.
1976

*GIRIJA KALYANA MAHA PRABANDHAM Original with Prose rendering by Vidwan Sri M. G. Nanjundaradhya First Published in 1976 by the Kannada Sahitya Parishat, Bangalore–560018 in Commemoration of its Diamond Jubilee, Demy Octavo Pages xii+384, Price Rs. 9-00*



ಮೊದಲನೆಯ ಮುದ್ರಣ : 1976



ಬೆಲೆ : ಒಂಬತ್ತು ರೂಪಾಯಿಗಳು



ಪ್ರಕಾಶಕರು :

ಕನ್ನಡ ಸಾಹಿತ್ಯ ಪರಿಷತ್ತು, ಚಾಮರಾಜಪೇಟೆ, ಬೆಂಗಳೂರು–560018

ಮುದ್ರಣ : ಶ್ರೀ ಮೀರಾ ಪ್ರಿಂಟರ್ಸ್, ಶಿವರಾಂಪೇಟೆ, ಮೈಸೂರು–570001

# ಪ್ರಸ್ತಾವನೆ

ಕನ್ನಡದ ಪ್ರಾಚೀನ ಕಾವ್ಯ ಸಂಪತ್ತು ಅಮೂಲ್ಯವಾಗಿದೆ. ಈ ಸಂಪತ್ತನ್ನು ಈಗಿನ ಕನ್ನಡ ಜನತೆ ಓದಿ ತಿಳಿದುಕೊಳ್ಳುವುದು ಅತ್ಯಾವಶ್ಯಕವಾಗಿದೆ. ಆದರೆ ಈ ಕಾವ್ಯಗಳು ಜನಸಾಮಾನ್ಯರಿಗೆ ಕಠಿಣವಾಗಿ ತೋರುವುದರಿಂದ ಇವುಗಳ ವ್ಯಾಸಂಗದಲ್ಲಿ ಉತ್ಸಾಹಪೂರ್ಣವಾದ ಪ್ರವೃತ್ತಿ ಕಂಡುಬರುತ್ತಿಲ್ಲ. ಅನೇಕ ಸಂದರ್ಭಗಳಲ್ಲಿ ಮೂಲ ಗ್ರಂಥಗಳೂ ದೊರೆಯುವುದಿಲ್ಲ. ಎಷ್ಟೋ ವೇಳೆ ವಿಶ್ವವಿದ್ಯಾನಿಲಯದವರು ಪ್ರಾಚೀನ ಕಾವ್ಯಗಳನ್ನು ಕನ್ನಡ ಬಿ.ಎ., ಎಂ.ಎ. ಪದವಿ ಪರೀಕ್ಷೆಗಳಿಗೆ ಪಠ್ಯಪುಸ್ತಕಗಳಾಗಿ ಇಟ್ಟಾಗಲಂತು ಮೂಲಗ್ರಂಥಗಳ ಅಭಾವ ವಿಶೇಷವಾಗಿ ಕಂಡುಬರುತ್ತದೆ.

ಆದ್ದರಿಂದ ಈ ಕೊರತೆಯನ್ನು ನಿವಾರಣೆ ಮಾಡಲು ಕನ್ನಡ ಸಾಹಿತ್ಯ ಪರಿಷತ್ತು ತನ್ನ ಪಂಚವಾರ್ಷಿಕ ಯೋಜನೆಯಲ್ಲಿ ಹಳಗನ್ನಡ ಕಾವ್ಯಗಳ ಪುನರ್ಮುದ್ರಣಕ್ಕೆ ವಿಶೇಷ ಗಮನಹರಿಸಿ ಅದಕ್ಕಾಗಿ ಪ್ರತ್ಯೇಕ ಯೋಜನೆಯನ್ನು ಹಾಕಿಕೊಂಡಿತು. ಆರಿಸಿದ ಹಳಗನ್ನಡ ಹಾಗೂ ನಡುಗನ್ನಡ ಕಾವ್ಯಗಳನ್ನು ಹೊಸಗನ್ನಡ ಗದ್ಯದಲ್ಲಿ ಅನುವಾದಿಸಿ ಆ ಅನುವಾದದೊಡನೆ ಮೂಲಪಾಠವನ್ನು ಪ್ರಕಟಿಸಿ ಪುಸ್ತಕ ರೂಪದಲ್ಲಿ ಹೊರತರುವುದು ಮತ್ತು ಸರ್ಕಾರದ ಸಹಾಯ ಪಡೆದು ಆ ಪುಸ್ತಕಗಳು ಸಾಧ್ಯವಾದಮಟ್ಟಿಗೆ ಸುಲಭ ಬೆಲೆಯಲ್ಲಿ ದೊರೆಯುವಂತೆ ಮಾಡುವುದು, ಇವು ಆ ಯೋಜನೆಯ ಮುಖ್ಯ ಅಂಶಗಳು.

ಈ ಯೋಜನೆಯ ಕಾರ್ಯನಿರ್ವಹಣೆಗಾಗಿ ಪರಿಷತ್ತು ಮೊದಲು ಅನೇಕ ವಿದ್ವಾಂಸರಿಗೆ ಪ್ರಾರ್ಥನಾ ಪತ್ರಗಳನ್ನು ಕಳಿಸಿ ಯಾವ ಯಾವ ಕಾವ್ಯಗಳನ್ನು ಹೊಸಗನ್ನಡಾನುವಾದಕ್ಕೆ ತೆಗೆದುಕೊಳ್ಳಬಹುದು ಎಂದು ತಿಳಿಸುವಂತೆ ಕೇಳಿಕೊಳ್ಳಲಾಯಿತು. ಆ ಪಂಡಿತರ ಸಹಾನುಭೂತಿಯುತವಾದ ಮತ್ತು ಮೆಚ್ಚುಗೆಯ ಸೂಚನೆಗಳು ಬಂದ ಮೇಲೆ ಅನುವಾದಗ್ರಂಥಗಳ ಪಟ್ಟಿಯೊಂದನ್ನು ಪರಿಷತ್ತು ಸಿದ್ಧಪಡಿಸಿತು. ಆ ಪಟ್ಟಿಯಲ್ಲಿ ಸುಮಾರು ಅರುವತ್ತಕ್ಕೂ ಮಿಕ್ಕು ಕಾವ್ಯಗಳು ಇದ್ದುವು.

ತರುವಾಯ ಆ ವಿದ್ವಜ್ಜನರ ಒಂದು ಸಭೆಯನ್ನು ದಿನಾಂಕ 23–9–73ನೆಯ ಭಾನುವಾರ ಬೆಳಗ್ಗೆ 10 ಗಂಟೆಗೆ ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಕರೆಯಲಾಯಿತು. ಆ ಸಭೆ ಬೆಳಗ್ಗೆಯಿಂದ ಸಂಜೆಯವರೆಗೆ ನಡೆದು ಅನುವಾದ ಕಾರ್ಯದ ವಿಷಯವನ್ನು

ಕುರಿತು ಕೂಲಂಕಷವಾಗಿ ಸಮಾಲೋಚಿಸಿ ಈ ಕೆಳಕಂಡ ತೀರ್ಮಾನಗಳನ್ನು ಕೈಗೊಂಡಿತು.

1. ಭಾರತೀಯ ಜ್ಞಾನಪೀಠದವರು, ವಿಶ್ವವಿದ್ಯಾನಿಲಯದವರು, ಖಾಸಗಿ ಪ್ರಕಾಶಕರು ಪರಿಷತ್ತಿನ ಉದ್ದೇಶದಂತೆ ಈಗಾಗಲೆ ಕನ್ನಡ ಕಾವ್ಯಗಳನ್ನು ಅನುವಾದ ಮಾಡಲು ಕಾರ್ಯ ಕೈಗೊಂಡಿದ್ದರೆ, ಅಂಥ ಕಾವ್ಯಗಳನ್ನು ಪರಿಷತ್ತು ಅನುವಾದಕ್ಕೆ ತೆಗೆದುಕೊಳ್ಳಬೇಕಾಗಿಲ್ಲ.

2. ಅಗತ್ಯ ಕಂಡ ಕಡೆ ಮೂಲವನ್ನು ಪರಿಷ್ಕರಿಸಿ ಅನುವಾದವನ್ನು ಕೈಗೊಳ್ಳತಕ್ಕದ್ದು.

3. ಈ ಕೆಳಗೆ ಕಾಣಿಸಿದ ಹಳಗನ್ನಡ ಮತ್ತು ನಡುಗನ್ನಡ ಕಾವ್ಯಗಳನ್ನು ಸದ್ಯದಲ್ಲಿ ಅನುವಾದಕ್ಕೆ ಆರಿಸಿಕೊಳ್ಳತಕ್ಕದ್ದು :

**ಹಳಗನ್ನಡ :** ವಿಕ್ರಮಾರ್ಜುನವಿಜಯ, ಆದಿಪುರಾಣ, ಗದಾಯುದ್ಧ, ನೇಮಿನಾಥಪುರಾಣ (1. ಕರ್ಣಪಾರ್ಯ 2. ನೇಮಿಚಂದ್ರ), ಯಶೋಧರಚರಿತೆ, ಅನಂತನಾಥ ಪುರಾಣ, ಧರ್ಮಾಮೃತ, ಕಾದಂಬರಿ, ಪಂಚತಂತ್ರ, ನಳಚಂಪು, ವಡ್ಡಾರಾಧನೆ, ಗಿರಿಜಾ ಕಲ್ಯಾಣ, ಜಗನ್ನಾಥವಿಜಯ, ಕಬ್ಬಿಗರಕಾವ, ಶಬರಶಂಕರವಿಲಾಸ, ಹರಿಹರನ ರಗಳೆಗಳು, ಕೆಳದಿನೃಪವಿಜಯ, ದಮಯಂತೀಸ್ವಯಂವರ, ಶಾಂತಿಪುರಾಣ, ಚಂದ್ರಪ್ರಭ ಪುರಾಣ, ಉದ್ಭಟಕಾವ್ಯಂ, ಕುಸುಮಾವಳಿ ಕಾವ್ಯ. ಅಭಿನವ ದಶಕುಮಾರಚರಿತೆ, ಮಲ್ಲಿನಾಥಪುರಾಣ, ರಾಜಶೇಖರ ವಿಳಾಸ, ಚಿಕ್ಕದೇವರಾಜ ವಂಶಾವಳಿ, ದಿವ್ಯಸೂರಿಚರಿತೆ.

**ನಡುಗನ್ನಡ :** ಸಿದ್ಧರಾಮಚಾರಿತ್ರ, ಬಸವಪುರಾಣ, ಪ್ರಭುಲಿಂಗಲೀಲೆ, ತೊರವೆ ರಾಮಾಯಣ, ರಾಮನಾಥಚರಿತ, ಭರತೇಶವೈಭವ, ಅನುಭವಾಮೃತ, ಗೀತಗೋಪಾಲ, ಹದಿಬದೆಯಧರ್ಮ, ನಳಚರಿತ್ರೆ, ಅದ್ಭುತರಾಮಾಯಣ, ಚನ್ನಬಸವಪುರಾಣ, ಭಾಗವತ, ಹರಿಕಥಾಮೃತಸಾರ, ಭಿಕ್ಷಾಟನಚರಿತೆ, ಮೋಹನತರಂಗಿಣಿ.

4. ಅನುವಾದ ಕಾರ್ಯವನ್ನು ನಡೆಸಲು ಪರಿಷತ್ತಿನ ಪ್ರಕಟಣಾ ಸಮಿತಿ ಆಶ್ರಯದಲ್ಲಿ ಎರಡು ಅನುವಾದಕ ಮಂಡಲಿಗಳು ಇರತಕ್ಕದ್ದು ; ಒಂದು ಬೆಂಗಳೂರಿನಲ್ಲಿ, ಇನ್ನೊಂದು ಮೈಸೂರಿನಲ್ಲಿ. ಅನುವಾದ ಕಾರ್ಯವನ್ನು ನಡೆಸಿಕೊಡಲು ಒಪ್ಪಿರುವ ಪಂಡಿತರು ಈ ಎರಡು ಅನುವಾದಕ ಮಂಡಲಿಗಳ ಪೈಕಿ ತಮಗೆ ಹತ್ತಿರವಿರುವ ಮಂಡಲಿಯ ಸದಸ್ಯರಾಗಬಹುದು.

5. ಮಂಡಲಿಯ ಸದಸ್ಯರಾದ ಅನುವಾದಕರು ಕನ್ನಡದಲ್ಲಿ ವಿದ್ವಾಂಸರಾಗಿದ್ದು ಆಧುನಿಕರಿಗೆ ಹಿತಕರವಾದ ಹೊಸಗನ್ನಡ ಶೈಲಿಯನ್ನು ಚೆನ್ನಾಗಿ ಬಲ್ಲವರಾಗಿರಬೇಕು. ಅವರಿಗೆ ಹಳಗನ್ನಡ ಮತ್ತು ಸಂಸ್ಕೃತ ಸಾಹಿತ್ಯ ವಾಙ್ಮಯದಲ್ಲಿ ಉತ್ತಮವಾದ ಪರಿಣತಿ

ಇರಬೇಕು. ಒಂದೊಂದು ಅನುವಾದಕ ಮಂಡಲಿಗೂ ಒಬ್ಬೊಬ್ಬ ಅಧ್ಯಕ್ಷರಿದ್ದು ಆ ಮಂಡಲಿಯ ಸಲಹೆಯಂತೆ ಅನುವಾದ ಕಾರ್ಯವು ನಡೆಯತಕ್ಕದ್ದು.

6. ಮೈಸೂರಿನ ಅನುವಾದಕ ಮಂಡಲಿಗೆ ಶ್ರೀ ಕೆ. ವೆಂಕಟರಾಮಪ್ಪ ಅವರು ಅಧ್ಯಕ್ಷರಾಗಿರಬೇಕೆಂದೂ ಬೆಂಗಳೂರಿನ ಅನುವಾದಕ ಮಂಡಲಿಗೆ ವಿದ್ವಾನ್ ಎನ್. ರಂಗನಾಥಶರ್ಮಾ ಅವರು ಅಧ್ಯಕ್ಷರಾಗಿರಬೇಕೆಂದೂ ಪರಿಷತ್ತಿನ ಅಧ್ಯಕ್ಷರು ನೀಡಿದ ಸೂಚನೆಗೆ ಸಭೆ ತನ್ನ ಸಮ್ಮತಿ ನೀಡಿತು.

7. ಒಂದು ತಿಂಗಳಿಗೆ ಕನಿಷ್ಠಪಕ್ಷದಲ್ಲಿ ಮೂರು ಸಲವಾದರೂ ಈ ಅನುವಾದಕ ಮಂಡಲಿಯು ಆಯಾ ಊರಿನಲ್ಲಿ ಸಭೆ ಸೇರಿ ಕಾರ್ಯವಿಧಾನವನ್ನೂ ಕಾರ್ಯಪ್ರಗತಿಯನ್ನೂ ಪರಿಶೀಲಿಸತಕ್ಕದ್ದು. ಅನುವಾದ ಕಾರ್ಯದಲ್ಲಿ ಸಂಭವಿಸಬಹುದಾದ ಎಡರು ತೊಡರು, ಸಂದೇಹಗಳನ್ನು ಪರಸ್ಪರವಾಗಿ ಚರ್ಚಿಸಿ ಪರಿಹರಿಸಿಕೊಳ್ಳತಕ್ಕದ್ದು.

(ಅ) ಒಬ್ಬೊಬ್ಬ ಅನುವಾದಕನಿಗೆ ಒಂದೊಂದು ಕಾವ್ಯವನ್ನು ಪೂರ್ತಿಯಾಗಿ ಅನುವಾದಿಸುವ ಕಾರ್ಯವನ್ನು ವಹಿಸಿಕೊಡಬೇಕು. ವಿಶೇಷ ಸಂದರ್ಭದಲ್ಲಿ ಒಂದು ಪುಸ್ತಕವನ್ನು ಇಬ್ಬರು, ಮೂವರು ಅನುವಾದಕರಿಗೆ ವಹಿಸಿಕೊಡಬಹುದು.

(ಆ) ಅನುವಾದದಲ್ಲಿ ಏಕರೂಪತೆ ಇರಬೇಕು. ಮಧ್ಯದಲ್ಲಿ ವಿಚ್ಛಿನ್ನತೆ ಕಾಣಬಾರದು. ಕಥೆಯಂತೆ ಓದಿಸಿಕೊಂಡು ಹೋಗಬೇಕು.

(ಇ) ಅನುವಾದವು ಆಧುನಿಕರಿಗೆ ಪ್ರಿಯವಾಗುವ ಹೊಸಗನ್ನಡ ಗದ್ಯದಲ್ಲಿ ಇರಬೇಕು.

(ಈ) ಭಾಷೆಯು ಸರಳವಾಗಿಯೂ ಶುದ್ಧವಾಗಿಯೂ ಇರಬೇಕು. ಅನುವಾದವು ಮೂಲದಿಂದ ದೂರ ಹೋಗಬಾರದು ಮತ್ತು ಮೂಲವನ್ನು ಬಿಡಲೂಬಾರದು.

(ಉ) ಇದು ಪ್ರಾಚೀನ ಕಾವ್ಯಗಳ ಅನುವಾದವಾದ್ದರಿಂದ ವಿಷಯದ ಗಂಭೀರತೆ ಪವಿತ್ರತೆಗಳಿಗೆ ಅನುಗುಣವಾಗಿ ಭಾಷೆಯು ಲಲಿತಗಂಭೀರವಾಗಿ ಇರಬೇಕು.

(ಊ) ಪ್ರತಿಯೊಬ್ಬ ಅನುವಾದಕನೂ ತಾನು ಅನುವಾದಿಸಿದ ಗ್ರಂಥಕ್ಕೆ ಒಂದು ಉಪೋದ್ಘಾತ, ಶಬ್ದಾರ್ಥಕೋಶ, ಅನುಬಂಧಗಳನ್ನು ತಯಾರಿಸಿ ಕೊಡಬೇಕು. ಉಪೋದ್ಘಾತದಲ್ಲಿ ಪ್ರಸ್ತುತ ಕವಿಯ ದೇಶಕಾಲಾದಿ ಪರಿಚಯ, ಪ್ರಸ್ತುತ ಕಾವ್ಯದ ವಿಮರ್ಶೆ ಮುಂತಾದವು ಸಂಕ್ಷೇಪವಾಗಿ ಇರಬೇಕು. ಕಾವ್ಯದಲ್ಲಿ ಬಂದಿರುವ ನ್ಯಾಯಗಳು, ಗಾದೆಗಳು, ಪೂರ್ವಕತೆಗಳು ಮುಂತಾದವುಗಳ ವಿವರಣೆ ಅನುಬಂಧದಲ್ಲಿ ಇರಬೇಕು. ವಿವರಣೆ ಸಂಕ್ಷಿಪ್ತವಾಗಿದ್ದರೆ ಆಯಾ ಪುಟದ ಅಡಿಟಪ್ಪಣಿಯಲ್ಲಿ ಬರಬಹುದು.

(ಋ) ಅನುವಾದಕನು ಮೂಲ ಪರಿಷ್ಕೃತ ಪಾಠವನ್ನೂ ಅದರ ಕೆಳಗಡೆ ಅನುವಾದವನ್ನೂ ಕೊಡಬೇಕು.

(ಋ) ಉಪೋದ್ಘಾತದಲ್ಲಿ ಅನುವಾದಕನು ತನ್ನ ಸ್ವಂತ ವಿಷಯವೇನನ್ನೂ ಪ್ರಸ್ತಾಪಿಸಕೂಡದು.

(ಎ) ಯಾವೊಬ್ಬ ಅನುವಾದಕನ ಅನುವಾದನಕಾರ್ಯ ಮಂಡಲಿಗೆ ತೃಪ್ತಿಕರವಾಗಿ ಕಂಡುಬಾರದಿದ್ದಲ್ಲಿ ಅಥವಾ ಅನುವಾದಕ ತಾನಾಗಿ ಒಪ್ಪಿಸಿದ ಕಾರ್ಯ ಮಾಡಲು ತನ್ನಿಂದ ಸಾಧ್ಯವಿಲ್ಲವೆಂದು ತಿಳಿಸಿದ ಸಂದರ್ಭದಲ್ಲಿ ಆ ಅನುವಾದಕಮಂಡಲಿ ಅಧ್ಯಕ್ಷ ಪರಿಷತ್ತಿನ ಅಧ್ಯಕ್ಷರಿಗಾಗಲೀ ಅಥವಾ ಪರಿಷತ್ತಿನ ಪ್ರಕಟಣಾ ಸಮಿತಿ ಪ್ರಧಾನ ಸಂಪಾದಕರಿಗಾಗಲೀ ಆ ವಿಷಯವನ್ನು ತಿಳಿಸಿ ಆ ಕಾರ್ಯಕ್ಕೆ ಬೇರೊಬ್ಬ ವಿದ್ವಾಂಸರನ್ನು ಗೊತ್ತುಮಾಡಬಹುದು. ಹಾಗೆಯೇ ಅನುವಾದಕ ಮತ್ತು ಅನುವಾದಕ ಮಂಡಲಿ ಅಧ್ಯಕ್ಷರ ಮಧ್ಯೆ ಉದ್ಭವಿಸಬಹುದಾದ ಸಮಸ್ಯೆಗಳನ್ನು ಪರಿಷತ್ತಿನ ಅಧ್ಯಕ್ಷರು ಅಥವಾ ಪ್ರಕಟಣಾ ಸಮಿತಿಯ ಪ್ರಧಾನ ಸಂಪಾದಕರು ಪರಿಹರಿಸತಕ್ಕದ್ದು.

(ಏ) ನಿಯಮದಂತೆ ಗ್ರಂಥದ ಅನುವಾದಕಾರ್ಯ ಮುಗಿದಕೂಡಲೆ ಮಂಡಲಿಯ ಅಧ್ಯಕ್ಷರು ಅದನ್ನು ಅನುವಾದಕರಿಂದ ಪಡೆದು ತಮ್ಮ ಸಲಹೆಯೊಡನೆ ಅದನ್ನು ಪರಿಷತ್ತಿನ ಅಧ್ಯಕ್ಷರಿಗೆ ಕಳುಹಿಸಿಕೊಡತಕ್ಕದ್ದು.

8. ಹೀಗೆ ಅನುವಾದ ಕಾರ್ಯವನ್ನು ವಿದ್ವಾಂಸರಿಂದ ಮಾಡಿಸಿದಾಗ ಅವರಿಗೆ ಯುಕ್ತಸಂಭಾವನೆಯನ್ನು ಕೊಡುವ ಬಗ್ಗೆ ಸಭೆ ತೀರ್ಮಾನ ಕೈಗೊಂಡು, ಸಂಭಾವನೆ ಗ್ರಂಥದ ಪರಿಮಾಣದ ಆಧಾರದ ಮೇಲೆ ಸಲ್ಲಬೇಕೆಂದು ನಿರ್ಣಯಿಸಿ ಗ್ರಂಥದ 400 ಅಕ್ಷರಗಳಿಗೆ ಒಂದು ಘಟಕವೆಂದೂ ಒಂದು ಘಟಕಕ್ಕೆ 2 ರೂ. ನಂತೆ ಸಂಭಾವನೆ ನೀಡಬೇಕೆಂದೂ ನಿಶ್ಚಯಿಸಲಾಯಿತು. ಮತ್ತು ಅನುವಾದಕ ಮಂಡಲಿಯ ಅಧ್ಯಕ್ಷರಿಗೆ ಅನುವಾದಕರಿಗೆ ಸಲ್ಲುವ ಸಂಭಾವನೆಯ ಶೇಕಡ 15ರಷ್ಟನ್ನು ಸಂಭಾವನೆಯಾಗಿ ಕೊಡತಕ್ಕದ್ದೆಂದೂ ಸಭೆ ನಿರ್ಣಯಿಸಿತು. ಮತ್ತು ಅವರು, ಮೂಲಪಾಠ ಪರಿಷ್ಕರಣ, ಮುನ್ನುಡಿ, ಉಪೋದ್ಘಾತ, ಶೋಧನೆ, ಮೇಲ್ವಿಚಾರಣೆ ಇತ್ಯಾದಿ ಕಾರ್ಯಗಳನ್ನು ಗಮನದಲ್ಲಿಟ್ಟುಕೊಂಡು ಹಸ್ತಪ್ರತಿಯನ್ನು ಸಿದ್ಧಮಾಡಿ ಪರಿಷತ್ತಿಗೆ ಒಪ್ಪಿಸತಕ್ಕದ್ದೆಂದೂ ತೀರ್ಮಾನಿಸಲಾಯಿತು.

9. ಅನುವಾದಕರಿಗೆ ಅನುವಾದ ಕಾರ್ಯಕ್ಕಾಗಿ ಹಣ ಸಂದಾಯವಾದಮೇಲೆ ಆ ಗ್ರಂಥದ ಪೂರ್ಣ ಹಕ್ಕು ಪರಿಷತ್ತಿಗೆ ಸೇರುತ್ತದೆ. ಪುಸ್ತಕ ಪ್ರಕಟಣೆಯಾದಮೇಲೆ ಅನುವಾದಕರಿಗೆ ಗೌರವಧನ ನೀಡುವ ಪ್ರಶ್ನೆ ಬರುವುದಿಲ್ಲ. ಪುಸ್ತಕ ಅಚ್ಚಾದಮೇಲೆ ಅನುವಾದಕರಿಗೆ ಆ ಗ್ರಂಥದ ಹತ್ತು ಪ್ರತಿಗಳನ್ನು, ಮಂಡಲಿಯ ಅಧ್ಯಕ್ಷರಿಗೆ ಎರಡು ಪ್ರತಿಗಳನ್ನು ಉಚಿತವಾಗಿ ನೀಡತಕ್ಕದ್ದು.

ಮೇಲ್ಕಂಡ ತೀರ್ಮಾನದಂತೆ ಅನುವಾದಕಾರ್ಯ ಕೈಗೊಳ್ಳಲು ಪರಿಷತ್ತು ಮೈಸೂರಿನಲ್ಲಿ ಮತ್ತು ಬೆಂಗಳೂರಿನಲ್ಲಿ ಅನುವಾದಕ ಮಂಡಲಿಗಳನ್ನು ರಚಿಸಿ ಅದಕ್ಕೆ

ಬೇಕಾದ ಸಲಕರಣೆಗಳನ್ನು ಒದಗಿಸಿಕೊಟ್ಟಿದೆ. ಯೋಜನೆಯ ಪ್ರಕಾರ ಅನುವಾದ ಕಾರ್ಯ ಎರಡು ಕಡೆಯೂ ನಡೆಯುತ್ತಿದೆ. ವಿದ್ವಾಂಸರು ಅನುವಾದಕ ಮಂಡಲಿ ಅಧ್ಯಕ್ಷರೊಡನೆ ಸಹಕರಿಸುತ್ತಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರು ವಿಶೇಷ ಆಸಕ್ತಿ ವಹಿಸಿ ಅನುವಾದಕಾರ್ಯ ಅಚ್ಚುಕಟ್ಟಾಗಿ ನಡೆಯುವಂತೆ ಶ್ರಮಿಸುತ್ತಿದ್ದಾರೆ. ಪರಿಷತ್ತಿನ ಪ್ರಕಟಣಾಸಮಿತಿಯ ಪ್ರಧಾನ ಸಂಪಾದಕರಾದ ಡಾ|| ರಂ. ಶ್ರೀ. ಮುಗಳಿಯವರು ಅಷ್ಟೇ ಮುತುವರ್ಜಿಯಿಂದ ಅನುವಾದಕರಿಗೆ, ಮಂಡಲಿ ಅಧ್ಯಕ್ಷರಿಗೆ, ತಮ್ಮ ಸಲಹೆ ಸೂಚನೆಗಳನ್ನು ನೀಡಿ ಸಹಕರಿಸುತ್ತಿದ್ದಾರೆ. ಒಟ್ಟಿನಲ್ಲಿ ಈ ಎಲ್ಲ ವಿದ್ವನ್ಮಣಿಗಳೂ ಇದೊಂದು ಕನ್ನಡ ನುಡಿಯ ಮಹತ್ತರವಾದ ಸೇವೆ ಎಂಬ ಭಾವನೆಯಿಂದ ದುಡಿಯುತ್ತಿದ್ದಾರೆ. ಇವರೆಲ್ಲರಿಗೂ ಪರಿಷತ್ತಿನ ಪರವಾಗಿ ಕೃತಜ್ಞತೆಗಳನ್ನು ಸಲ್ಲಿಸುತ್ತೇವೆ.

ಈಗ 20 ಗ್ರಂಥಗಳ ಅನುವಾದಕಾರ್ಯ ಮುಗಿದು ಅವು ಅಚ್ಚಿಗೆ ಹೋಗಿವೆ. 1977ನೆಯ ಏಪ್ರಿಲ್ ತಿಂಗಳಿನಲ್ಲಿ ನಡೆಯುವ ಕನ್ನಡ ಸಾಹಿತ್ಯ ಪರಿಷತ್ತಿನ ವಜ್ರ ಮಹೋತ್ಸವ ಸಂದರ್ಭದಲ್ಲಿ ಈ ಗ್ರಂಥಗಳು ಹೊರಬಿದ್ದು ಸಾರ್ವಜನಿಕರ ಕೈಗೆ ಸೇರುವಂತೆ ಮಾಡಬೇಕೆಂದು ಪರಿಷತ್ತು ನಿಶ್ಚಯಿಸಿದೆ. ಆ ವೇಳೆಗೆ ಈ ಎಲ್ಲ ಗ್ರಂಥಗಳನ್ನು ಮುದ್ರಿಸಿ ಕೊಡುವ ಜವಾಬ್ದಾರಿಯನ್ನು ಮೈಸೂರಿನ ಶ್ರೀ ಮೀರಾ ಪ್ರಿಂಟರ್ಸ್ ಮಾಲಿಕರಾದ ಶ್ರೀ ಕೆ. ಪಿ. ಪುಟ್ಟಸ್ವಾಮಿಯವರು ವಹಿಸಿಕೊಂಡಿದ್ದಾರೆ. ಅದಕ್ಕಾಗಿ ಅವರು ಈ ವರ್ಷ ಬೇರೆ ಯಾವ ಮುದ್ರಣ ಕೆಲಸಗಳನ್ನೂ ತೆಗೆದುಕೊಳ್ಳದೆ ಪರಿಷತ್ತಿನ ಈ ಅನುವಾದ ಗ್ರಂಥಗಳ ಮುದ್ರಣಕ್ಕೇ ವಿಶೇಷ ಗಮನಕೊಟ್ಟಿದ್ದಾರೆ. ಇವರಿಗೆ ಪರಿಷತ್ತು ಎಷ್ಟು ಕೃತಜ್ಞತೆಯನ್ನು ಅರ್ಪಿಸಿದರೂ ಸಾಲದು. ಇಂಥ ಗ್ರಂಥಗಳ ಕರಡಚ್ಚು ತಿದ್ದುವ ಕಾರ್ಯ ಎಷ್ಟು ಕಷ್ಟಕರವಾದುದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಇದರ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯದ ಪ್ರಸಾರಾಂಗದ ಉಪನಿರ್ದೇಶಕರಾದ ಶ್ರೀ ಆರ್. ಎಲ್. ಅನಂತರಾಮಯ್ಯನವರು ಮತ್ತು ಕನ್ನಡ ಅಧ್ಯಯನ ಸಂಸ್ಥೆಯ ಸಂಪಾದನ ವಿಭಾಗದ ಸಹಾಯಕ ನಿರ್ದೇಶಕರಾದ ಶ್ರೀ ಬಿ. ಎಸ್. ಸಣ್ಣಯ್ಯನವರು ಹೊತ್ತುಕೊಂಡು ತಮಗಾಗುವ ಅಪಾರ ಶ್ರಮವನ್ನು ಲೆಕ್ಕಿಸದೆ ಪ್ರೀತಿಯಿಂದ ದುಡಿಯುತ್ತಿದ್ದಾರೆ. ಈ ಮಹನೀಯರಿಗೆ ಪರಿಷತ್ತು ತುಂಬಾ ಆಭಾರಿಯಾಗಿದೆ.

ಈ ಅನುವಾದ ಗ್ರಂಥಗಳು ಕನ್ನಡ ಜನತೆಗೆ ಸುಲಭ ಬೆಲೆಯಲ್ಲಿ ದೊರೆಯಬೇಕೆಂಬ ಪರಿಷತ್ತಿನ ಆಶೆಯು ಸರ್ಕಾರದ ನೆರವಿನಿಂದ ಕೈಗೂಡಿದೆ ಎಂದು ತಿಳಿಸಲು ಸಂತೋಷಿಸುತ್ತೇನೆ. ವಜ್ರಮಹೋತ್ಸವದ ವೇಳೆಗೆ ಬಿಡುಗಡೆಯಾಗಲಿರುವ 20 ಅನುವಾದ ಗ್ರಂಥಗಳಿಗೆ ತಗಲುವ ವೆಚ್ಚ ಸುಮಾರು 4 ಲಕ್ಷ ರೂಪಾಯಿಗಳೆಂದು ಅಂದಾಜು ಮಾಡಲಾಗಿದೆ. ಈ ಅಂದಾಜಿನಂತೆ ಅನುವಾದ ಕೃತಿಗಳ ಬೆಲೆಯನ್ನು ಗೊತ್ತು ಮಾಡುವುದಾದರೆ ಈಗ ಇಟ್ಟಿರುವ ಬೆಲೆಯ ಮೂರು ಅಥವಾ ನಾಲ್ಕುಪಟ್ಟು ಹೆಚ್ಚಾಗು

ತ್ತದೆ. ಅನುವಾದ ಕೃತಿ ಎಷ್ಟೇ ಪುಟವಿರಲಿ 10 ರೂಪಾಯಿಗಳಿಗಿಂತ ಹೆಚ್ಚು ಬೆಲೆ ಇಡಕೂಡದು, ಪುಸ್ತಕದ ಬೆಲೆಯನ್ನು ನೋಡಿಯಾದರೂ ಜನರು ಈ ಗ್ರಂಥಗಳನ್ನು ಕೊಂಡು ಓದಲಿ ಎನ್ನುವ ದೃಷ್ಟಿಯಿಂದ ಉದಾರ ಧನಸಹಾಯಕ್ಕಾಗಿ ಈ ಯೋಜನೆಯನ್ನು ರಾಜ್ಯ ಸರ್ಕಾರದ ಮುಂದಿಡಲಾಯಿತು. ರಾಜ್ಯ ಸರ್ಕಾರ ಅನುವಾದ ಕೃತಿಗಳ ಮಹತ್ವವನ್ನರಿತು ಪರಿಷತ್ತಿನ ಕೋರಿಕೆಯನ್ನು ಸಹಾನುಭೂತಿಯಿಂದ ಪರಿಶೀಲಿಸಿ ಉಚಿತ ಪ್ರಮಾಣದಲ್ಲಿ ಧನಸಹಾಯ ನೀಡಲು ಒಪ್ಪಿದೆ. ಇದರಿಂದ ಈ ಪುಸ್ತಕಗಳನ್ನು ಸುಲಭ ಬೆಲೆಗೆ ಕೊಡಲು ಸಾಧ್ಯವಾಗಿದೆ. ಈ ಸಹಾಯಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ನಾಡಿನ ಜನತೆಯ ಪರವಾಗಿ ರಾಜ್ಯ ಸರ್ಕಾರಕ್ಕೆ ತನ್ನ ಅಪಾರ ಕೃತಜ್ಞತೆಗಳನ್ನು ಅರ್ಪಿಸುತ್ತದೆ.

ಕನ್ನಡಿಗರು ಈ ಅಮೂಲ್ಯವಾದ ಕೃತಿಗಳನ್ನು ಉತ್ಸಾಹದಿಂದ ಬರಮಾಡಿಕೊಂಡು ಇವುಗಳ ಪೂರ್ಣ ಪ್ರಯೋಜನ ಪಡೆಯಬೇಕೆಂದು ಪರಿಷತ್ತು ಬಯಸುತ್ತದೆ.

ಬೆಂಗಳೂರು

ದಿನಾಂಕ : 2–10–1976

ಗಾಂಧಿ ಜಯಂತಿ

ದೇಶಹಳ್ಳಿ ಜಿ. ನಾರಾಯಣ

ಅಧ್ಯಕ್ಷ

ಕನ್ನಡ ಸಾಹಿತ್ಯ ಪರಿಷತ್ತು

# ಮುನ್ನುಡಿ

ಕನ್ನಡ ಸಾಹಿತ್ಯದ ಅಭಿವೃದ್ಧಿಗಾಗಿ ಶ್ರಮಿಸುತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ಸಾಹಿತ್ಯದ ಸಂರಕ್ಷಣೆಗಾಗಿಯೂ ಕೆಲಸ ಮಾಡಬೇಕಾಗಿದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ಅಭ್ಯಾಸ ಮಾಡಿದವರಿಗೆ ಸಾಹಿತ್ಯದಲ್ಲಿ ವಿವಿಧ ರೀತಿಯ ಆಂದೋಳನಗಳು ನಡೆದಿರುವುದು ಗೋಚರವಾಗದೆ ಇರದು. ಚಂಪೂರೂಪದಲ್ಲಿ ಬರವಣಿಗೆ ಕೆಲವು ಕಾಲ ನಡೆದು ವಚನ, ರಗಳೆ, ಷಟ್ಪದಿ, ಸಾಂಗತ್ಯ ಈ ಮುಂತಾದ ಪ್ರಕಾರಗಳು ತರುವಾಯ ಬಳಕೆಗೆ ಬಂದುದನ್ನು ನಾವು ಖಚಿತವಾಗಿ ಗುರುತಿಸಬಹುದು. ಅಲ್ಲಿಂದ ನವೋದಯದ ಕಾಲದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಹೊಸ ಛಂದಸ್ಸು 'ಭಾವಗೀತೆ' ಗಳ ಧಾಟಿಯಲ್ಲಿ ಬಂದದ್ದನ್ನೂ ನಾವು ನೋಡುತ್ತೇವೆ ಈಚೆಗೆ ಮುಕ್ತ ಛಂದಸ್ಸೂ, 'ನವ್ಯ ಕಾವ್ಯ' ದ ಧಾಟಿಯ ಗದ್ಯ ಛಂದಸ್ಸೂ ಬಳಕೆಯಲ್ಲಿವೆ. ಈ ರೀತಿಯ ಮಾರ್ಪಾಡು ಸಾಹಿತ್ಯ ರಚನೆಯಲ್ಲಿ ಅನಿವಾರ್ಯ ಮತ್ತು ಅವಶ್ಯ. ಇದು ಸಾಹಿತಿಗಳ, ಕವಿಗಳ ಪ್ರಗತಿಪರ ಮನೋಭಾವವನ್ನೂ ಸಾಮಾಜಿಕ ಪ್ರಜ್ಞೆಯನ್ನೂ ಪ್ರದರ್ಶಿಸುತ್ತದೆ. ಈ ಹೊಸ ದೃಷ್ಟಿ ಮೂಡಿದಂತೆ ಹಳೆಯದರ ಕಡೆ ಜನ ದೃಷ್ಟಿ ಹರಿಸುವುದು ಅಪರೂಪ. ಛಂದಸ್ಸಿನ ಬಗ್ಗೆ ಈ ಮಾತು ಹೇಗೆ ಅನ್ವಯಿಸುತ್ತದೆಯೋ ಹಾಗೆಯೇ ಕಾವ್ಯ ವಸ್ತುವಿಗೂ ಅನ್ವಯಿಸುತ್ತದೆ. ದೇವರು, ಪುರಾಣ, ಶ್ಲೀಲ, ಅಶ್ಲೀಲ, ಈ ವಿಷಯಗಳಲ್ಲಿಯೂ ಜನತೆಯ ಕಲ್ಪನೆ ಮತ್ತು ಅವುಗಳಿಗೆ ನೀಡುವ ಮೌಲ್ಯ ವ್ಯತ್ಯಾಸವಾಗುತ್ತಲೇ ಹೋಗುತ್ತವೆ. ಆ ಹಳೆಯ ಸಾಹಿತ್ಯ ಪ್ರಕಾರಗಳು ಮತ್ತು ವಿಷಯಗಳು ಇಂದಿನ ದೃಷ್ಟಿಗೆ ದಾರಿ ಮಾಡಿಕೊಟ್ಟಿವೆ ಎಂಬುದನ್ನು ನಾವು ಮರೆಯಬಾರದು. ಹೊಸ ಸಾಹಿತ್ಯ ಸೃಷ್ಟಿಯ ಮೋಹದಲ್ಲಿ ಹಳೆಯದು ನಮ್ಮ ಕೈಬಿಟ್ಟು ಹೋಗಬಾರದು ಎಂಬುದನ್ನು ನಾವು ಅರಿಯಬೇಕು. ಏಕೆಂದರೆ ಈಚೆಗೆ ಪಂಪಾದಿ ಕವಿಗಳ ಕಾವ್ಯಾಭ್ಯಾಸ ಪದವಿ ಪರೀಕ್ಷೆಗಳಲ್ಲಿ ಬಿಟ್ಟರೆ ಉಳಿದ ಕಡೆ ಕಡಮೆ ಆಗುತ್ತಿದೆ. ಅದನ್ನು ಉಳಿಸಿಕೊಳ್ಳಬೇಕು, ನಮ್ಮ ಜನಕ್ಕೆ ಅದು ಎಟುಕುವಂತಿರಬೇಕು ಎಂಬ ಉದ್ದೇಶದಿಂದ ಪರಿಷತ್ತು ಹಳಗನ್ನಡ ಕಾವ್ಯಗಳನ್ನು ಹೊಸಗನ್ನಡಕ್ಕೆ ಅನುವಾದಿಸಿ ಮೂಲಪಾಠಗಳೊಡನೆ ಸುಲಭ ಬೆಲೆಗೆ ಕೊಡಲು ಯೋಜನೆಯೊಂದನ್ನು ಹಾಕಿಕೊಂಡಿದೆ. ಇದರ ವಿವರ ಪರಿಷತ್ತಿನ ಅಧ್ಯಕ್ಷರ ಪ್ರಸ್ತಾವನೆಯಲ್ಲಿ ವಿವರವಾಗಿ ಬಂದಿದೆ.

ಹಳಗನ್ನಡ ಕಾವ್ಯಗಳನ್ನು ಹಳೆಯ ಮಾದರಿಯಲ್ಲಿ ಓದಿ, ವ್ಯಾಸಂಗ ಮಾಡಿ ಅದರಲ್ಲಿ ಪಾಂಡಿತ್ಯವನ್ನು ಸಂಪಾದಿಸಿಕೊಂಡಿರುವ ಜನ ನಮ್ಮಲ್ಲಿ ಈಗ ಕಡಮೆ. ಆದರೂ ಆ ರೀತಿಯ ಪಾಂಡಿತ್ಯವುಳ್ಳವರನ್ನು ಪರಿಷತ್ತು ಆರಿಸಿ ಅವರಿಂದ ಈ ಅನುವಾದ ಕಾರ್ಯ

ಗಳನ್ನು ಮಾಡಿಸಿದೆ. ಕಾವ್ಯವನ್ನು ಅಭ್ಯಾಸ ಮಾಡಿದವರು, ಪಾಠ ಹೇಳಿದವರು, ಕವಿಯ ಮನೋಭಾವವನ್ನು ಅರಿತವರು, ಹೊಸಗನ್ನಡವನ್ನು ಬಲ್ಲವರು ನಮಗೆ ಈ ಅನುವಾದ ಕಾರ್ಯವನ್ನು ಮಾಡಿಕೊಟ್ಟಿದ್ದಾರೆ. ಅವರೆಲ್ಲರಿಗೆ ಪರಿಷತ್ತು ತನ್ನ ಹೃತ್ಪೂರ್ವಕವಾದ ವಂದನೆಯನ್ನು ಸಲ್ಲಿಸುತ್ತದೆ.

ವಿದ್ವಾಂಸರಿಂದ ಆದ ಕಾವ್ಯಾನುವಾದವನ್ನು ನಿಷ್ಣಾತ ಪಂಡಿತರು ನೋಡಿ, ಅವಶ್ಯವಾದ ಕಡೆಗಳಲ್ಲಿ ತಿದ್ದಿ ಪರಿಷತ್ತಿನ ಪ್ರಕಟಣೆಗಾಗಿ ಕೊಟ್ಟಿದ್ದಾರೆ. ಹೀಗೆ ಘನ ವಿದ್ವಾಂಸರಿಬ್ಬರು ತಮ್ಮ ಪೂರ್ಣ ಪಾಂಡಿತ್ಯದಿಂದ ಈ ಅನುವಾದ ಕಾರ್ಯವನ್ನು ನೆರವೇರಿಸಿ ಕೊಟ್ಟಿದ್ದಾರೆ. ಹೀಗಿದ್ದರೂ ಆ ಕಾವ್ಯಗಳ ಕೆಲವು ಘಟ್ಟಗಳಲ್ಲಿ, ಸಂದರ್ಭಗಳಲ್ಲಿ ಅರ್ಥ ಕ್ಲಿಷ್ಟವಾಗಿ ಅಭಿಪ್ರಾಯ ಚರ್ಚೆಗೆ ಅವಕಾಶವನ್ನು ಒದಗಿಸಬಹುದು. ಅಂಥ ಸ್ಥಿತಿ ಅನಿವಾರ್ಯ. ಆದ್ದರಿಂದ ಅಲ್ಲಿ ವ್ಯಕ್ತಪಡಿಸಿರುವ ಅಭಿಪ್ರಾಯ ಪರಿಷತ್ತಿನದೆಂದು ಯಾರೂ ಭಾವಿಸಬಾರದು. ಅದು ಪಂಡಿತರ ಅಭಿಪ್ರಾಯ. ಅದರಲ್ಲಿ ಭಿನ್ನಾಭಿಪ್ರಾಯವಿದ್ದರೆ ವಿದ್ವಾಂಸರು ಸೂಚಿಸಬಹುದು. ಏಕೆಂದರೆ 'ಜಗನ್ನಾಥ ವಿಜಯ' 'ರಾಜಶೇಖರ ವಿಳಾಸ' 'ಪಂಪಭಾರತ' ಮುಂತಾದ ಕಾವ್ಯಗಳ ಅಭಿಪ್ರಾಯವನ್ನು ಇಂದು ಖಚಿತವಾಗಿ ಹೇಳು ವುದು ಕಷ್ಟಕರವಾದುದೇ.

'ಗಿರಿಜಾಕಲ್ಯಾಣ ಮಹಾಪ್ರಬಂಧಂ' ಕಾವ್ಯವನ್ನು ಶ್ರೀ ವಿದ್ವಾನ್ ಎಂ. ಜಿ. ನಂಜುಡಾರಾಧ್ಯ ಅವರು ಅನುವಾದ ಮಾಡಿಕೊಟ್ಟಿದ್ದಾರೆ. ಅನುವಾದಕ ಮಂಡಲಿ ಅಧ್ಯಕ್ಷರಾದ ಶ್ರೀ ಕೆ. ವೆಂಕಟರಾಮಪ್ಪ ಅವರು ಪರಿಶೀಲಿಸಿ ಕೊಟ್ಟಿದ್ದಾರೆ. ಅನುವಾದಕರು ಪಂಡಿತರು. ಸಂಸ್ಕೃತ ಕಾಲೇಜಿನಲ್ಲಿ ಪಾಠಹೇಳಿ ಅನುಭವ ಗಳಿಸಿದ್ದಾರೆ. ಈ ಕೃತಿ ಅವರ ವಿಶಿಷ್ಟ ಅಭ್ಯಾಸದ ಕಾವ್ಯಗಳ ಗುಂಪಿಗೆ ಸೇರಿದ್ದು. ಶ್ರೀಯುತರು ಕನ್ನಡದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ವೀರಶೈವ ಶಾಸ್ತ್ರ ಸಾಹಿತ್ಯಗಳನ್ನು ಆಳವಾಗಿ ಅಭ್ಯಾಸ ಮಾಡಿದ್ದಾರೆ. ಕನ್ನಡದಲ್ಲಿ ಬಹು ಸರಳವಾಗಿ ಬರೆಯಬಲ್ಲ ಸಾಮರ್ಥ್ಯವನ್ನು ಪಡೆದಿ ದ್ದಾರೆ.

ಅನುವಾದವನ್ನು ಮಾಡಿಕೊಟ್ಟ ಅನುವಾದಕರಿಗೂ, ಅನುವಾದ ನೋಡಿ ಪರಿಶೀಲಿಸಿ ಕೊಟ್ಟ ಶ್ರೀ ಕೆ. ವೆಂಕಟರಾಮಪ್ಪ ಅವರಿಗೂ ನಮ್ಮ ಅಭಿನಂದನೆಗಳು. ಕನ್ನಡಿಗರು ಇದರ ಉಪಯೋಗವನ್ನು ಪಡೆಯುತ್ತಾರೆಂದು ನಂಬಿದ್ದೇನೆ.

ಬೆಂಗಳೂರು
2–10–76

ರಂ. ಶ್ರೀ. ಮುಗಳಿ
ಪ್ರಧಾನ ಸಂಪಾದಕ

# ಬಿನ್ನಹ

ಮಹಾಕವಿ ಹರಿಹರನ ಏಕೈಕ ಚಂಪೂಕಾವ್ಯ 'ಗಿರಿಜಾ ಕಲ್ಯಾಣ'. ಇದನ್ನು ಸರಳ ಗನ್ನಡಕ್ಕೆ ಅನುವಾದ ಮಾಡುವ ಕೆಲಸವನ್ನು ನಡೆಸಿರುವವರು ಸಂಸ್ಕೃತ ವಿದ್ವಾಂಸರು. ವಿದ್ವಾನ್ ಶ್ರೀ ಎಂ. ಜಿ. ನಂಜುಂಡಾರಾಧ್ಯರವರು ಮೈಸೂರು ಮಹಾರಾಜರವರ ಸಂಸ್ಕೃತ ಪಾಠಶಾಲೆಯಲ್ಲಿ ಶಕ್ತಿ ವಿಶಿಷ್ಟಾದ್ವೈತದರ್ಶನ ಪ್ರಾಧ್ಯಾಪಕರಾಗಿದ್ದು ಹಲವು ಕೃತಿ, ಲೇಖನಗಳನ್ನು ರಚಿಸಿ ಸುಪ್ರಸಿದ್ಧರಾಗಿರುವ ಮಹಾವಿದ್ವಾಂಸರು. ಇವರು ಅಭಿಮಾನ ದಿಂದ ಈ ಕನ್ನಡ ಕೃತಿಯ ಅನುವಾದ ಕಾರ್ಯವನ್ನು ಕೈಕೊಂಡು ಬಹಳ ಸಮರ್ಪಕ ವಾಗಿ ಮಾಡಿಕೊಟ್ಟಿದ್ದಾರೆ. ಇವರು ತಮ್ಮ ಪಾಂಡಿತ್ಯ ಪ್ರೌಢಿಮೆಗಳಿಂದ ಅರಮನೆ ಗುರುಮನೆಗಳಲ್ಲಿ ಸನ್ಮಾನಿತರಾದವರು. ಶ್ರೀ ಆರಾಧ್ಯರು ಸ್ವಂತವಾಗಿ ಒಂದು ಅಚ್ಚು ಕೂಟವನ್ನು ನಡೆಸುತ್ತ ಒಂದು ಮಾಸಪತ್ರಿಕೆಯ ಸಂಪಾದಕ ಪ್ರಕಾಶಕರೂ ಆಗಿದ್ದಾರೆ. ಹೀಗೆ ಅನೇಕ ಕಾರ್ಯಗಳಲ್ಲಿ ತೊಡಗಿದ್ದರೂ ಕೇವಲ ಮಾತೃಭಾಷೆಯ ಮೇಲಿನ ಅಭಿ ಮಾನದಿಂದ 'ಗಿರಿಜಾಕಲ್ಯಾಣ'ದ ಗದ್ಯಾನುವಾದ ಕಾರ್ಯವನ್ನು ಒಪ್ಪಿಕೊಂಡು ಅತ್ಯಂತ ಶ್ರದ್ಧೆಯಿಂದ ಮಾಡಿಕೊಟ್ಟಿರುವ ಶ್ರೀ ಎಂ. ಜಿ. ನಂಜುಂಡಾರಾಧ್ಯರ ಕರ್ಮ ಶ್ರದ್ಧೆ ಕೊಂಡಾಡ ತಕ್ಕುದಾಗಿದೆ. ಅವರ ಅನುವಾದಗ್ರಂಥ ಕನ್ನಡಿಗರಿಗೆ ಉಪಯುಕ್ತ ವೆನಿಸುವುದರಲ್ಲಿ ಸಂಶಯವಿಲ್ಲ.

ಮೈಸೂರು

ಕೆ. ವೆಂಕಟರಾಮಪ್ಪ

# ವಿಷಯ ಸೂಚಿ

# ಉಪೋದ್ಘಾತ

## ೧. ಕವಿ–ಕಾಲ ವಿಚಾರ

ಕನ್ನಡ ಸಾಹಿತ್ಯಾಕಾಶದಲ್ಲಿ ಬೆಳಗುವ ಶ್ರೇಷ್ಠ ಕವಿತಾರೆಗಳಲ್ಲಿ ಹರಿಹರನಿಗೆ ವಿಶಿಷ್ಟ ಸ್ಥಾನವಿದೆ. ಹರಿಹರನ ಜೀವನವನ್ನು ಕುರಿತು ಪದ್ಮರಾಜಪುರಾಣ, ಚನ್ನಬಸವಪುರಾಣ, ಭೈರವೇಶ್ವರಕಾವ್ಯದ ಕಥಾಮಣಿ ಸೂತ್ರರತ್ನಾಕರ, ರಾಘವಾಂಕಚರಿತೆ ಮುಂತಾದ ಗ್ರಂಥಗಳಲ್ಲಿ ಕೆಲ ಕೆಲವು ಅಂಶಗಳು ಉಕ್ತವಾಗಿವೆ.

ಹರಿಹರನ ಜನ್ಮಸ್ಥಳ ತುಂಗಭದ್ರಾತೀರದ ಹಂಪೆ. ಶೈವಾಗಮ ಸಂಪ್ರದಾಯದ ಕುಟುಂಬದಲ್ಲಿ ಆತನ ಜನನ. ತಾಯಿ ಶರ್ವಾಣಿ, ತಂದೆ ಮಹಾದೇವ ಎಂದು "ರಾಘವಾಂಕಚರಿತ"ದಲ್ಲಿ ಹೇಳಿದೆ. ರಾಘವಾಂಕ ಈತನ ಸೋದರಳಿಯ. ಆತನ ತಾಯಿ ರುದ್ರಾಣಿ ಎಂದಿರುವುದರಿಂದ ಹರಿಹರನಿಗೆ ರುದ್ರಾಣಿ ಸಹೋದರಿ ಇರಬಹುದೆಂದು ಊಹಿಸಲಾಗಿದೆ.

ಗಿರಿಜಾಕಲ್ಯಾಣದಲ್ಲಿ ಹರಿಹರನು ಹೇಳಿಕೊಂಡಿರುವುದು ಆತನ ಗುರುಪರಂಪರೆ. ಹಂಪೆಯ ಶಂಕರದೇವ ಈತನ ಕುಲಗುರು. ಆತ ಅತಿ ವಿಖ್ಯಾತ, ಪರಿಪೂತ, ಇಂದುಧರ ಸಂಭೂತ, ಪುಣ್ಯವ್ರಾತ, ಮೇಲಾಗಿ ಮುಕ್ತಿ (ಭೂತಳಾತಿಶಯಸುಖ)ಪ್ರದಾತ, ಶೈವಾಗಮ ಸಿದ್ಧ. ಆ ಶ್ರೀ ಶಂಕರಾಚಾರ್ಯರಿಂದ ಶಿವದೀಕ್ಷೆ ಪಡೆದು ಯಶಃಕಾಯನಾದವನು ಶ್ರೀ ಮಾದಿರಾಜ. ಈತನ ಮನೋದುಗ್ಧಾಬ್ಧಿಚಂದ್ರನೂ ಶೈವಸುಭಗನೂ ಸಾಕಾರ ಸರ್ವೇಶ್ವರನೂ ಆದವನು ಹಂಪೆಯ ಮಾಯಿದೇವ. ಈತ ಹರಿಹರನ ಶ್ರೀಗುರು. ಈತನನ್ನು ಕವಿ ಶ್ರೀಗುರು, ಪರಮಗುರು, ಘನಮಹಿಮಾಗುರು, ವಿದ್ಯಾಗುರು ಮುಂತಾಗಿ ಸ್ತುತಿಸಿದ್ದಾನೆ. ಆತನನನ್ನು ಕುರಿತು ಹರಿಹರನು ಮಾತ್ರವೇ ಅಲ್ಲ; ಜಗತ್ತು ಕೂಡ

ಸದಮಳನೆಂಬುದುತ್ತಮ ಗುಣಾಶ್ರಯನೆಂಬುದು ಶೈವಸಿದ್ಧನೆಂ
ಬುದು ರವಿತೇಜನೆಂಬುದು ಕೃಪಾಂಬುಧಿಯೆಂಬುದು ಶಾಂತಮೂರ್ತಿಯೆಂ
ಬುದು ಪರಮಾಗಮಪ್ರಕರನೆಂಬುದು ಹಂಪೆಯ ಮಾಯಿದೇವನೆಂ
ಬುದು ಶಿವನೆಂಬುದಪ್ರತಿಮನೆಂಬುದು ಸದ್ಗುರುವೆಂಬುದೀ ಜಗಂ

ಮುಂತಾಗಿ ಕೊಂಡಾಡುತ್ತಿತ್ತು. ಆತನ ಕೃಪೆಗೆ ಪಾತ್ರನಾಗಿದ್ದವನು ಹರಿಹರ. ಇಲ್ಲಿ ಉಕ್ತವಾಗಿರುವ ಮಾಯಿದೇವ ಮತ್ತು ಸೋಮನಾಥಚರಿತ (ರಾಘವಾಂಕಕೃತ) ದಲ್ಲಿ ಉಕ್ತವಾಗಿರುವ ಮಹಾದೇವರು ಒಬ್ಬರೇ ಇರಬೇಕೆಂದು ಊಹಿಸಲಾಗಿದೆ.

ಹರಿಹರನ ಸಮಕಾಲೀನರಲ್ಲಿ ಅವನ ಸೋದರಳಿಯ ರಾಘವಾಂಕ ಮತ್ತು ದೋರಸಮುದ್ರ (ಹಳೇಬೀಡು)ದ ನರಸಿಂಹಬಲ್ಲಾಳನ ಮಂತ್ರಿ ಕೆರೆಯ ಪದ್ಮರಸರು ಮುಖ್ಯರು; ಏಕೆಂದರೆ ಹರಿಹರ ಅದೇ ರಾಜನ ಆಸ್ಥಾನದಲ್ಲಿ ಕರಣಿಕನಾಗಿ ಇದ್ದದ್ದು. ಆತ ತನ್ನ ಜೀವನದ ಬಹುಭಾಗವನ್ನು ಅಲ್ಲಿಯೇ ಕಳೆದ. ಆತನಿಗೆ ಹಂಪೆಯ ವಿರೂಪಾಕ್ಷಸ್ವಾಮಿ

ಯಲ್ಲಿದ್ದ ಭಕ್ತಿಪರವಶತೆಯನ್ನು ಗಮನಿಸಿದ ರಾಜ, ಆತನಿಗೆ ಹಂಪೆಯ ವಿರೂಪಾಕ್ಷ ಸ್ವಾಮಿಯ ಸನ್ನಿಧಿಯಲ್ಲಿದ್ದು ಸೇವೆಮಾಡಲು ಅನುಜ್ಞೆನೀಡಿ ಕಳುಹಿಸಿದ. ಅನಂತರ ಹರಿಹರ ತನ್ನ ಉಳಿದ ಜೀವನವನ್ನು ಹಂಪೆಯಲ್ಲಿಯೇ ಕಳೆದ.

ಹರಿಹರನು ದೋರಸಮುದ್ರದಿಂದ ಹಂಪೆಗೆ ಬಂದ ಕಾರಣವನ್ನು ಕುರಿತ ಐತಿಹ್ಯ ವೊಂದು ಹೀಗಿದೆ—

"ಹರಿಹರ ದೋರಸಮುದ್ರದ ಹೊಯ್ಸಳ ದೊರೆ ವೀರಬಲ್ಲಾಳನ ಆಸ್ಥಾನದಲ್ಲಿ ಕರಣಿಕನಾಗಿದ್ದ. ಒಂದು ದಿನ ಆತ ಇದ್ದಕ್ಕಿದ್ದಂತೆ ಗಾಬರಿಗೊಂಡು ತನ್ನ ಎರಡೂ ಕೈಗಳನ್ನು ಮೇಲೆತ್ತಿ ಉಜ್ಜ ತೊಡಗಿದ. ಎಲ್ಲರಿಗೂ ಸೋಜಿಗವಾಯಿತು. ವಿಚಾರಿಸಿ ದಾಗ. 'ಹಂಪೆಯ ವಿರೂಪಾಕ್ಷಸ್ವಾಮಿಯ ದೇವಾಲಯದಲ್ಲಿ ಮಧ್ಯಾಹ್ನದ ನೈವೇದ್ಯ ಕಾಲದಲ್ಲಿ ಆರತಿ ಜ್ವಾಲೆಯಿಂದ ಮೇಲ್ಕಟ್ಟು ಹೊತ್ತಿಕೊಂಡಿತು. ತಾನು ಅದನ್ನು ಉಜ್ಜಿ ಆರಿಸಿ'ದುದಾಗಿ ಹರಿಹರ ಉತ್ತರಿಸಿದ. ಆದರೆ ರಾಜ ಇದರ ನಿಜವನ್ನು ಶೋಧಿ ಸಲು ಹಂಪೆಗೆ ಆಳುಗಳನ್ನು ಕಳುಹಿಸಿ ಸುದ್ದಿ ತರಿಸಿದ. ವಿಷಯ ನಿಜವಾಗಿತ್ತು. ಹರಿಹರ ಮಹಾ ಶರಣನೆಂದು ಭಾವಿಸಿದ ರಾಜ ಅವನನ್ನು ಹಂಪೆಯಲ್ಲಿ ಸ್ವಾಮಿಯ ಸೇವೆಯಲ್ಲಿರು ವಂತೆ ಪ್ರಾರ್ಥಿಸಿ ಬೀಳ್ಕೊಟ್ಟ."

ಹರಿಹರ ಕರಣಿಕನಾಗಿದ್ದ ವೀರಬಲ್ಲಾಳನ ವಿಷಯದಲ್ಲಿ ವಿದ್ವಾಂಸರಲ್ಲಿ ಒಮ್ಮತ ವಿಲ್ಲ. ಏಕೆಂದರೆ ಹೊಯ್ಸಳ ದೊರೆಗಳಿಗೆಲ್ಲ "ಬಲ್ಲಾಳ"ರೆಂಬ ಹೆಸರಿದೆ. ಅವರಲ್ಲಿ ವೀರಬಲ್ಲಾಳರೆಂಬುವರು ನಾಲ್ವರು, ನರಸಿಂಹಬಲ್ಲಾಳರು ಮೂವರಿರುವುದಾಗಿ ಇತಿ ಹಾಸದಿಂದ ವೇದ್ಯವಾಗುತ್ತದೆ. ಹರಿಹರನು ಕರಣಿಕನಾಗಿದ್ದ ಹೊಯ್ಸಳ ದೊರೆ ಯಾರೆಂಬುದರಲ್ಲಿ ವಿವಿಧಾಭಿಪ್ರಾಯಗಳಿವೆ.

ಒಟ್ಟಿನಲ್ಲಿ ಹರಿಹರ, ಕೆರೆಯ ಪದ್ಮರಸ ಮೊದಲಾದವರು ನರಸಿಂಹಬಲ್ಲಾಳನ ಕಾಲದಲ್ಲಿದ್ದರೆಂದೂ ಆಗ ಬಿಟ್ಟಿದೇವನು ಯುವರಾಜ (ಪಟ್ಟಾನ್ವಿತ)ನಾಗಿದ್ದನೆಂದೂ ಪದ್ಮಣಾಂಕನು ತನ್ನ ಪದ್ಮರಾಜಪುರಾಣದಲ್ಲಿ ತಿಳಿಸಿದ್ದಾನೆ. ಈ ನರಸಿಂಹಬಲ್ಲಾಳನು ನರಸಿಂಹನ ಮಗ ಬಲ್ಲಾಳನೆಂದೂ, ಅವನಿಗೆ ಒಬ್ಬ ದೇವ ಅಥವಾ ವಿಷ್ಣುವರ್ಧನನೆಂಬ ಮಗನಿದ್ದನೆಂದೂ. ಆತ ಯುವರಾಜನಾಗಿದ್ದನೆಂದೂ ಊಹಿಸಲಾಗಿದೆ. ಮೊದಲನೆಯ ನರಸಿಂಹನ ಮಗ ವೀರಬಲ್ಲಾಳನಿಗೆ ಬಿಟ್ಟಿದೇವನೆಂಬ ಮಗನಿದ್ದನೆಂದೂ, ಅವನ ತರು ವಾಯ ರಾಜನಾದ ಎರಡನೆಯ ನರಸಿಂಹನಿಗೆ ವಿಷ್ಣುವರ್ಧನ ಅಥವಾ ಬಿಟ್ಟಿದೇವನೆಂಬ ಮತ್ತೊಂದು ಹೆಸರಿತ್ತೆಂದೂ ಶಾಸನಗಳಲ್ಲಿ ಬಂದಿದೆ.[1] ಈ ಯುವರಾಜ ನರಸಿಂಗದೇವನು ತಂದೆಯ ರಾಜ್ಯಾಡಳಿತದಲ್ಲಿ ಕ್ರಿ.ಶ. ೧೨೦೫ರಿಂದ ಭಾಗವಹಿಸುತ್ತಿದ್ದನು.[2] ಪದ್ಮ ಣಾಂಕನು ಹೇಳುವ ನರಸಿಂಹಬಲ್ಲಾಳನು ೨ನೆಯ ವೀರಬಲ್ಲಾಳ (ಕ್ರಿ.ಶ. ೧೧೭೩–

1. E. C. Vol. Arasikere 40 and 85. Annual Report of Indian Epigraphy, 1920, Inscription No. 408.
2. E. C. Vol. XI Cl 23. Introduction, p. 22.

೧೨೨೦)ನಿರಬೇಕು. ಹೊಯ್ಸಳರಲ್ಲಿ ವಿಷ್ಣುವರ್ಧನ (ಕ್ರಿ.ಶ. ೧೧೧೦-೧೧೪೨)ನ ತರು ವಾಯ ಅತಿ ಬಲಾಢ್ಯ ಮತ್ತು ಪ್ರಭಾವಿ ರಾಜ ಈ ವೀರಬಲ್ಲಾಳ. ಇವನ ಕಾಲದಲ್ಲಿ ಹೊಯ್ಸಳ ಸಾಮ್ರಾಜ್ಯ ಅಭ್ಯುದಯ ಶಿಖರಕ್ಕೆ ಮುಟ್ಟಿತ್ತು. ಈತ ಶೈವ-ವೈಷ್ಣವ ಧರ್ಮಗಳೆರಡನ್ನೂ ಪೋಷಿಸುತ್ತಿದ್ದನು.

ಈ ಕಾರಣಗಳಿಂದ ಹರಿಹರ ಹೊಯ್ಸಳ ಎರಡನೆಯ ವೀರಬಲ್ಲಾಳ (ಕ್ರಿ.ಶ. ೧೧೭೩-೧೨೨೦)ನು ರಾಜ್ಯವಾಳುವಾಗ ಆರಂಭಿಸಿ ಎರಡನೆಯ ನರಸಿಂಹ (ಕ್ರಿ.ಶ. ೧೨೨೦-೧೨೩೪)ನ ಆಳ್ವಿಕೆಯ ಕಡೆಯವರೆಗೆ ಮುಂದುವರಿದಿರಬೇಕು. ಎಂದರೆ ಕ್ರಿ.ಶ. ೧೨ನೆಯ ಶತಕದ ಕಡೆಯ ಭಾಗ ಮತ್ತು ಹದಿಮೂರನೆಯ ಶತಕದ ಮೊದಲಭಾಗದ ಅವಧಿಯು ಹರಿಹರಾದಿಗಳ ಜೀವಿತಕಾಲವೆಂದು ಸ್ಥೂಲವಾಗಿ ಊಹಿಸಬಹುದು.

## ೨. ಕಥಾಸಾರ

ಸುಖದ ನೆಲೆಯಾದ ಹಿಮಾಚಲ ಪ್ರದೇಶದ ರಾಜಧಾನಿ ಓಷಧಿಪ್ರಸ್ಥಪುರ. ಮಹಾ ಶಿವಭಕ್ತನೂ ತೇಜಸ್ವಿಯೂ ಧೀರನೂ ಆದ ಹಿಮವಂತ ಅಲ್ಲಿಯ ಅರಸ. ಆತನ ಪುಣ್ಯವಲ್ಲಭೆ ಮೇನಾದೇವಿ. ಶ್ರೇಷ್ಠಳಾದ ಒಬ್ಬಳು ಮಗಳನ್ನು ಬಯಸಿ ಮೇನಾದೇವಿ ತಪಸ್ಸು ಮಾಡಿದಳು. ದಾಕ್ಷಾಯಣಿಯಿಂದ ತಾನೇ ಮಗಳಾಗಿ ಬರುವೆನೆಂದು ವರ ಪಡೆದು ಸಂತುಷ್ಟಳಾದಳು. ಕಾಲಕ್ರಮದಲ್ಲಿ ಮೇನಾದೇವಿಗೆ ಶುಭಮುಹೂರ್ತದಲ್ಲಿ ಹೆಣ್ಣುಮಗು ಹುಟ್ಟಿತು. ಶಿವಲಿಂಗ ದರ್ಶನ ಮಾಡಿಯೇ ಕಣ್ಣು ತೆರೆದ ಮಗು 'ಗಿರಿಜಾತೆ'ಯು ಅಪ್ರತಿಮ ಶಿವಭಕ್ತೆಯಾಗಿ ಬೆಳೆದಳು. ಒಂದು ದಿನ ಮಹರ್ಷಿ ನಾರದರು ಬಂದು ಹಿಮವಂತ ಮೇನಾದೇವಿಯರಿಗೆ ಅವರ ಮಗಳ ಮಹಿಮೆಯನ್ನು ಬಣ್ಣಿಸಿದರು. ಅವಳು ಸಾಕ್ಷಾತ್ ಜಗನ್ಮಾತೆಯೇ ಎಂದೂ, ಕೂಡಲೇ ಹೇಮಕೂಟ ದಲ್ಲಿ ತಪೋಯೋಗದಲ್ಲಿರುವ ಶಿವನ ಬಳಿಗೆ ಅವಳನ್ನು ಕಳುಹಿಸಬೇಕೆಂದೂ ಉಪದೇಶಿ ಸಿದರು. ಜಯೆವಿಜಯೆ ಎಂಬ ಸಖಿಯರೊಂದಿಗೆ ಹೇಮಕೂಟಕ್ಕೆ ಬಂದು ಗಿರಿಜೆ ದಿನವೂ ಶಿವನ ಅರ್ಚನೆ ಮಾಡತೊಡಗಿದಳು.

ಇತ್ತ ತಾರಕಾಸುರನ ಉಪದ್ರವಕ್ಕೆ ತಲ್ಲಣಿಸಿ, ಬ್ರಹ್ಮನ ಸೂಚನೆಯಂತೆ ದೇವತೆಗಳು ಬೃಹಸ್ಪತಿಯ ಮೂಲಕ ಒಪ್ಪಿಸಿ ಮನ್ಮಥನನ್ನು ಶಿವನ ತಪೋಭಂಗಕ್ಕೆ ನಿಯೋಜಿಸಿ ಕಳುಹಿಸಿದರು. ಪಾರ್ವತಿಯ ಅಪ್ರತಿಮ ಸೌಂದರ್ಯದ ಮರೆಯಲ್ಲಿ ನಂದಿ ಕೇಶ್ವರನ ಕಣ್ಣು ತಪ್ಪಿಸಿ ಆಶ್ರಮದ ಒಳನುಗ್ಗಿದ ಮನ್ಮಥ ಶಿವನಮೇಲೆ ತನ್ನ ಪುಷ್ಪಾಸ್ತ್ರ ಗಳನ್ನು ಪ್ರಯೋಗಿಸಿದ. ಕುಪಿತನಾದ ಶಿವನು ಹಣೆಗಣ್ಣು ತೆರೆದು, ಕೆಂಗೆಂಡಗಳು ಹಾರಿ ಕಾಮನು ದಹಿಸಿ ಬೂದಿಯಾದ. ಶಿವನು ಅಂತರ್ಧಾನನಾಗಿಬಿಟ್ಟ. ಗಿರಿಜೆ ಯಾದರೋ ಉಗ್ರ ತಪಸ್ಸು ಕೈಕೊಂಡು ತಾನಿದ್ದಲ್ಲಿಗೇ ಶಿವನನ್ನು ಬರಿಸುತ್ತೇನೆ ಎಂದು ಹಟ ತೊಟ್ಟಳು.

ಗಿರಿಜೆಯ ತಪಸ್ಸಿಗೆ ಲೋಕ ತಲ್ಲಣಿಸಿತು. ಸುಡುವ ಬಿಸಿಲಲ್ಲಿ, ಸುರಿಯುವ ಮಳೆ

ಯಲ್ಲಿ, ಕೊರೆಯುವ ಶೀತದಲ್ಲಿ ಅವಳು ಉಗ್ರವಾದ ತಪಸ್ಸು ನಡೆಸಿದಳು. ಶಿವ ಮರುಗಿದ. ಅವಳನ್ನು ಪರೀಕ್ಷಿಸಲೆಂದು ವಟುವೇಷ ಧರಿಸಿ ಆಶ್ರಮಕ್ಕೆ ಬಂದ. ಸತ್ಕೃತನಾದ ಮೇಲೆ ಮಾತು ಬೆಳೆಸಿ ಗಿರಿಜೆಯ ಆರಾಧ್ಯ ದೈವವನ್ನು ತೆಗಳಿದ. ಶಿವನಿಂದೆ ಕೇಳಲಾಗದೆ ಭವಾನಿಯು ಭಸ್ಮದಿಂದ ಹೊಡೆಯಲು ವಟುವೇಷ ಜಾರಿ, ನಿಜವು ವ್ಯಕ್ತವಾಯಿತು. ಎದುರಿಗೆ ಶಿವನು ಪ್ರತ್ಯಕ್ಷನಾದುದನ್ನು ಕಂಡು ಗಿರಿಜೆ ಪುಳಕಿತಳಾದಳು. ಕಾಮನನ್ನು ಬದುಕಿಸು ಎಂದು ಬೇಡಿ ವರ ಪಡೆದಳು.

ಸಪ್ತರ್ಷಿಗಳು ಬಂದು ಹಿಮವಂತನನ್ನು ಶಿವನಿಗೆ ಮಗಳನ್ನು ಕೊಡು ಎಂದು ಕೇಳಿದರು. ವಿಶ್ವಕರ್ಮನೇ ವಿವಾಹಮಂಟಪವನ್ನು ರಚಿಸಿದ. ಮೂರು ಲೋಕದ ಅಚ್ಚರಿಯಾಗಿ ಪರಶಿವ–ಪಾರ್ವತಿಯರ ವಿವಾಹಮಂಗಳ ನಡೆಯಿತು.

## ೩. ಕಾವ್ಯಸಮೀಕ್ಷೆ

ಹರಿಹರನು ರಚಿಸಿರುವ ಗ್ರಂಥಗಳಲ್ಲಿ ರಗಳೆಗಳು ಮುಖ್ಯವಾದುವು. 'ರಘಟಾ' ಎಂಬ ಛಂದಸ್ಸಿನಿಂದ ರಚಿತವಾಗಿರುವ ಇವು ಒಂದು ನೂರಕ್ಕೂ ಮಿಕ್ಕಿವೆ. ಅವುಗಳಲ್ಲಿ ೧೨೦ ರಗಳೆಗಳು ಉಪಲಬ್ಧವಾಗಿವೆ. ಪ್ರಾಯಶಃ ಅವೆಲ್ಲವೂ ಮುದ್ರಿತವಾಗಿವೆ. ಇವುಗಳಲ್ಲಿ ಬಸವರಾಜದೇವರ ರಗಳೆ, ಅಕ್ಕಮಹಾದೇವಿಯ ರಗಳೆ, ನಂಬಿಯಣ್ಣನ ರಗಳೆ ಮುಂತಾದುವು ತುಂಬಾ ಜನಪ್ರಿಯವಾಗಿವೆ.

ಗಿರಿಜಾಕಲ್ಯಾಣದ ರಚನೆಯಿಂದ ಈತನಿಗಿರುವ 'ಮಹಾಕವಿ' ಎಂಬ ಪದವಿ ಅನ್ವರ್ಥಕವೆಂದು ವಿದ್ವಾಂಸರ ಅಭಿಪ್ರಾಯ. ಈತ ರಚಿಸಿರುವ 'ಪಂಪಾಶತಕ' ಪಂಪಾವಿರೂಪಾಕ್ಷನ ಸ್ತುತಿರೂಪ. ರಕ್ಷಾಶತಕ, ಶಿವಾಕ್ಷರಮಾಲೆ, ಮುಡಿಗೆಯಷ್ಟಕಗಳೂ ಶಿವಸ್ತುತಿಪರವಾದವುಗಳೇ.

ಗಿರಿಜಾಕಲ್ಯಾಣದ ಕಥೆ ರಾಮಾಯಣ, ಮಹಾಭಾರತ, ಶಿವ-ಸೌರ-ಮತ್ಸ್ಯ-ಬ್ರಹ್ಮ ಮತ್ತು ಸ್ಕಾಂದರ ಪುರಾಣಗಳಲ್ಲಿ ಬಂದಿದೆ. ಹರಿಹರನ ಗಿರಿಜಾಕಲ್ಯಾಣದಲ್ಲಿ ಕಥೆ ಪಾರ್ವತಿಯ ವಿವಾಹದವರೆಗಿದೆ. ತಾರಕನ ಉಪಟಳವನ್ನು ತಾಳಲಾರದೆ, ಅವನನ್ನು ಸಂಹರಿಸಲು ಸಮರ್ಥನಾದ ಶಿವಕುಮಾರನನ್ನು ಪಡೆಯಲು ಪಾರ್ವತೀ–ಪರಮೇಶ್ವರರ ವಿವಾಹಕ್ಕಾಗಿ ದೇವತೆಗಳು ಆತುರರಾಗಿದ್ದರು. ಪಾರ್ವತಿಯ ತಪಸ್ಸು ಅವರಿಗೆ ಅನುಕೂಲವಾಯಿತು. ಅವರ ಕಲ್ಯಾಣದ ತರುವಾಯ ಕವಿ ಉಳಿದ ಕಥೆಯನ್ನು ಕೈಬಿಟ್ಟ. ಕುಮಾರ ಜನನ, ತಾರಕ ವಧೆಗಳು ತಾನಾಗಿಯೇ ಆಗುವುದೆಂಬ ಭರವಸೆ ಅವನದು. ಪುರಾಣಗಳಲ್ಲಿ ಉಕ್ತವಾದ ಕಥೆಗೂ ಗಿರಿಜಾಕಲ್ಯಾಣದ ಕಥೆಗೂ ಅನೇಕ ವಿಷಯಗಳಲ್ಲಿ ಹೋಲಿಕೆಯುಂಟು. ಪರಮೇಶ್ವರನ ಇಪ್ಪತ್ತೈದು ಲೀಲೆಗಳಲ್ಲಿ "ವೈವಾಹಿಕ ಲೀಲೆ"ಯೂ ಒಂದು.

### ಕುಮಾರಸಂಭವ–ಗಿರಿಜಾಕಲ್ಯಾಣ

ಕವಿ ಕಾವ್ಯವಸ್ತುವನ್ನು ಇಂಥದೇ ಗ್ರಂಥದಿಂದ ತೆಗೆದುಕೊಂಡಿರುವನೆಂದು ಹೇಳ

ಬರುವುದಿಲ್ಲ. ಆತ ಪಾತ್ರಗಳ ಸೃಷ್ಟಿಯಲ್ಲಿ ತನ್ನ ಪ್ರತಿಭೆಯನ್ನು ಮೆರೆದಿದ್ದಾನೆ. ಅದು ಆಕರ್ಷಕವಾಗುನಂತೆ ಮಾಡಿದ್ದಾನೆ. ಕಾಳಿದಾಸನ ಕುಮಾರಸಂಭವದ ಹೋಲಿಕೆ ಅಲ್ಲಲ್ಲಿ ಕಂಡುಬಂದರೂ ಗಿರಿಜಾಕಲ್ಯಾಣದ ಕಥೆ ಅದಕ್ಕೂ ಭಿನ್ನವಾಗಿದೆ. ಪುತ್ರಿಯನ್ನು ಪಡೆಯಲು ಮೇನೆಯ ತಪಸ್ಸು, ಪಾರ್ವತಿಯ ಜನನ, ಶಿವಲಿಂಗದರ್ಶನ, ಬಾಲಲೀಲೆ ಗಳು, ನಾರದ ಕುವರಿಯಾದ ಅಗಜೆಗೆ ಪೊಡಮಟ್ಟುದು, ಸತೀದೇವಿಯೇ ಪಾರ್ವತಿಯಾಗಿ ಹುಟ್ಟಿ ಬಂದಿರುವಳೆಂದು ಎಚ್ಚರಿಸಿ ಅವಳನ್ನು ಹೇಮಕೂಟಕ್ಕೆ ಕಳುಹಿಸಲು ಸಲಹೆ ನೀಡು ವುದು, ಪರಶಿವ ರಜತಾದ್ರಿ ಬಿಟ್ಟು ಕನ್ನಡ ನಾಡಿನ ಹೇಮಕೂಟಕ್ಕೆ ಆಗಮಿಸುವುದು, ಹಿಮವಂತ ಸಖಿಯರೊಂದಿಗೆ ಮಗಳನ್ನು ವಿಮಾನದಲ್ಲಿ ಹೇಮಕೂಟಕ್ಕೆ ಕರೆತರುವುದು ಮುಂತಾದ ಘಟನೆಗಳು ಹರಿಹರನ ನವ್ಯಸೃಷ್ಟಿ. ಇವು ಕುಮಾರಸಂಭವದಲ್ಲಿಲ್ಲ. ಮನ್ಮಥ ದಹನ, ಪಾರ್ವತಿಯ ಉಗ್ರ ತಪಸ್ಸು, ಶಿವ ವಟುವೇಷದಿಂದ ಬಂದು ಅವಳನ್ನು ರೇಗಿಸು ವುದು, ಶಿವನಿಂದೆ ತಾಳಲಾರದೆ ಪಾರ್ವತಿ ವಿಭೂತಿ ಉಂಡೆ ಎಸೆದಾಗ ಅವನ ಕಪಟ ವೇಷ ತೊಲಗಿ ನಿಜರೂಪು ಬಯಲಾಗುವುದು ಮುಂತಾದುವು ಹಂಪೆಯಲ್ಲಿ ನಡೆದ ನೂತನ ವಿಷಯಗಳು. ಕುಮಾರಸಂಭವದ ಏಳು ಸರ್ಗಗಳಲ್ಲಿ ಕಾಳಿದಾಸ ವರ್ಣಿಸಿರುವ ಕಥಾಭಾಗ ಗಿರಿಜಾಕಲ್ಯಾಣದ ಹತ್ತು ಆಶ್ವಾಸಗಳಲ್ಲಿ ವರ್ಣಿತವಾಗಿದೆ. ಹರಿಹರನಿಗೆ ಮುಂದಿನ ಕಥೆಯು ಅಗತ್ಯ ಕಾಣಲಿಲ್ಲ. ಕಾಳಿದಾಸನಿಗೆ ತಾರಕನ ವಧೆಗಾಗಿ ಕುಮಾರ ಸಂಭವ ಆಗಬೇಕಾಗಿತ್ತು. ಹರಿಹರನ ದೃಷ್ಟಿಯಲ್ಲಿ ಅದು ತಾನಾಗಿಯೇ ಆಗುವುದೆಂಬ ಭರವಸೆ. ಮೇಲಾಗಿ ಹರಿಹರ ಕಾಳಿದಾಸನ ಕುಮಾರಸಂಭವದ ಎಂಟನೆಯ ಸರ್ಗದಲ್ಲಿ ವರ್ಣಿಸಿರುವ " ಜಗತ್ತಿನ ತಾಯಿತಂದೆಗಳೆನಿಸಿದ ಶಿವ–ಪಾರ್ವತಿಯರ ಕಾಮಕೇಳಿಯನ್ನು ವರ್ಣಿಸಿ ಲಾಕ್ಷಣಿಕರ ಆಕ್ಷೇಪಕ್ಕೆ ಒಳಗಾಗುವ ಅನೌಚಿತ್ಯವನ್ನು ಕೈಬಿಟ್ಟದ್ದೂ ಆತನ ಪ್ರತ್ಯುತ್ಪನ್ನಮತಿಗೆ ನಿದರ್ಶನ, ಮೇಲಾಗಿ ಜಗದಂಬೆ ಪಾರ್ವತಿಯ ಅಂಗಾಂಗಗಳನ್ನು ವರ್ಣಿಸುವ ಕಾಳಿದಾಸನ ಔಚಿತ್ಯಪ್ರಜ್ಞೆ ಹರಿಹರನಿಗೆ ಹಿಡಿಸಿದಂತಿಲ್ಲ. ಅದಕ್ಕಾಗಿಯೇ ಆತ ಅದನ್ನು ವಾತ್ಸಲ್ಯವುಳ್ಳ ತಂದೆ ಹಿಮವಂತನಿಂದ ಮಾಡಿಸಿ ಪಾರಾಗಿದ್ದಾನೆ.

ಕಾಳಿದಾಸ ತನ್ನ ಕಾವ್ಯದ ಮೊದಲನೆಯ ಸರ್ಗದಲ್ಲಿ ಸಂಗ್ರಹಿಸಿದ ಹಿಮಾಲಯ ವರ್ಣನೆ, ಹಿಮವಂತ ಮೇನೆಯರ ಮದುವೆ, ಮೈನಾಕನ ಜನನ, ಆತ ನಾಗಕನ್ಯೆಯನ್ನು ವರಿಸಿ ಸಮುದ್ರದಲ್ಲಿ ಅಡಗುವುದು, ಪಾರ್ವತಿಯ ಜನನ, ಶಿವನ ಉಗ್ರ ತಪಸ್ಸು, ಪಾರ್ವತಿಯು ಪ್ರತಿದಿನ ಮಾಡುವ ಶಿವಪೂಜೆ, ಇವೆಲ್ಲವುಗಳನ್ನೂ ಹರಿಹರ ನಾಲ್ಕು ಆಶ್ವಾಸಗಳಲ್ಲಿ ಸಂಗ್ರಹಿಸಿದ್ದಾನೆ.

ಕುಮಾರಸಂಭವದಲ್ಲಿ ಇಂದ್ರನೇ ಮೊದಲಾದ ದೇವತೆಗಳ ಪರವಾಗಿ ಬೃಹಸ್ಪತಿಯು ತಾರಕನ ಪೀಡೆಯಿಂದ ದೇವತೆಗಳಿಗೆ ಆದ ಕಷ್ಟನಷ್ಟಗಳನ್ನು ಬ್ರಹ್ಮನಲ್ಲಿ ವಿವರಿಸಿ ಅದನ್ನು ತಪ್ಪಿಸಬೇಕೆಂದು ಪ್ರಾರ್ಥಿಸುವನು. " ತನ್ನ ವರಪ್ರಭಾವದಿಂದ ತಾರಕ ಇಷ್ಟು ಬಲಿಷ್ಠ ನಾಗಿದ್ದಾನೆ, ಅವನ ಸಂಹಾರ ಶಿವಕುಮಾರನಿಂದಲೇ ಸಾಧ್ಯ, ಆದ್ದರಿಂದ ಶಿವ–ಪಾರ್ವತಿ ಯರ ವಿವಾಹವಾಗುವಂತೆ ಪ್ರಯತ್ನಿಸಿರಿ " ಎಂದು ಬ್ರಹ್ಮ ದೇವತೆಗಳಿಗೆ ಉಪದೇಶಿಸು

ತ್ತಾನೆ. ಈ ವಿಷಯ ಗಿರಿಜಾಕಲ್ಯಾಣದಲ್ಲಿ ಬಂದಿಲ್ಲ. ಗಿರಿಜಾಕಲ್ಯಾಣದ ಆರನೆಯ ಆಶ್ವಾಸದಲ್ಲಿ ದೇವತೆಗಳು ತಾರಕನೊಡನೆ ಯುದ್ಧ ಮಾಡಿ ಸೋತು, ಬ್ರಹ್ಮ-ವಿಷ್ಣು-ಇಂದ್ರ ಮೊದಲಾದವರು ಸೇರಿ ಉಪಾಯವನ್ನು ಹುಡುಕಿ, ಶಿವನೆಡೆಗೆ ಮನ್ಮಥನನ್ನು ಕಳುಹಿಸುವರು. ದೇವತೆಗಳ ಪರವಾಗಿ ಬೃಹಸ್ಪತಿ ರಾಯಭಾರ ವಹಿಸಿ ತಾರಕನೆಡೆಗೆ ಹೋಗಿ ನಿಷ್ಫಲನಾಗಿ ಬರುವನು. ಹೀಗೆ ಅನೇಕ ವಿಷಯಗಳಲ್ಲಿ ವ್ಯತ್ಯಾಸಗಳಿದ್ದರೂ ಹರಿಹರನ ಮೇಲೆ ಕಾಳಿದಾಸನ ಪ್ರಭಾವ ಬೀಳದೆ ಇಲ್ಲ. ಈ ಕೆಳಗೆ ಕಂಡ ಕೆಲವು ಪದ್ಯಗಳನ್ನು ನೋಡಿ—

ಅಸ್ತ್ಯುತ್ತರಸ್ಯಾಂ ದಿಶಿ ದೇವತಾತ್ಮಾ ಹಿಮಾಲಯೋ ನಾಮ ನಗಾಧಿರಾಜಃ ।
ಪೂರ್ವಾಪರೌ ತೋಯನಿಧೀ ವಗಾಹ್ಯ ಸ್ಥಿತಃ ಪೃಥಿವ್ಯಾ ಇವ ಮಾನದಂಡಃ ॥

(ಕು. ಸಂ. ೧-೧)

೧. " ಬೀಱುತೆ ಪೂರ್ವಪಶ್ಚಿಮಕೆ ಪರ್ವಿದ ಪರ್ವತರಾಜನೊಪ್ಪುಗುಂ "

(ಗಿ. ಕ. ೧-೫೦)

೨. " ಅವಿಸ್ತಾರ ಗಭೀರವಾರಿನಿಧಿಯಿಂದಂ ಪಶ್ಚಿಮಾಂಭೋಧಿಗಂ
ತೀವಿದೊಪ್ಪುವುದಾತ್ತಗಹ್ವರ ಗುಹಾಸಂತಾನಪರ್ಯಂತ ಗೋ
ತ್ರಾವಾಸೋಜ್ಜ್ವಲ ಗಂಡ ಶೈಲ ಶಿಖರ ಪ್ರೋದ್ಭೂತಭೂಜಾತಪ –
ತ್ರಾವೇಶೋನ್ನತ ಭೀಮರೂಪಧರ ದೇವಾಗಮ್ಯ ಹೈಮಾಚಳಂ "

(ಗಿ. ಕ. ೧-೪೮)

ಇತ್ಯಾದಿ.

ಗಿರಿಜಾಕಲ್ಯಾಣದ ಕಥೆ ಹಳೆಯದು. ಅದಹೂ ಕವಿ ಅದನ್ನು ತನ್ನ ಪ್ರತಿಭಾ ಕೌಶಲದಿಂದ ಕಥೆಯ ಮಾರ್ಪಾಟನಲ್ಲಿ, ಪಾತ್ರಸೃಷ್ಟಿಯಲ್ಲಿ, ಸನ್ನಿವೇಶ ಕಲ್ಪನೆಗಳಲ್ಲಿ, ಭಾವಬಂಧುರತೆಯಲ್ಲಿ, ರಸನಿರೂಪಣೆಯಲ್ಲಿ ಹೊಸ ಹೊಸ ಕಲ್ಪನೆಗಳನ್ನು ತಂದು ಕಾವ್ಯವು ನವ್ಯವಾಗುವಂತೆ ಚಿತ್ರಿಸಿದ್ದಾನೆ. ಅವನ ದೃಷ್ಟಿಯಲ್ಲಿ ತನ್ನ ಕೃತಿ

ಕಾವ್ಯಂ ತಾನಿದು ನವರಸ । ಸೇವ್ಯಂ ಗಿರಿಜಾಧಿನಾಥನುರುತರಕರ್ಣ ।
ಶಾ ವ್ಯಂ ವಸುಧಾತಳದೊಳ್ । ನವ್ಯಂ ಭೂತೇಶಭಕ್ತಜನತಾ ಭಾವ್ಯಂ ॥

(ಗಿ. ಕ. ೧-೧೪)

ಹರಿಹರನಿಗೆ ತನ್ನ ಕೃತಿ ಮಹಾಕಾವ್ಯವಾಗಬೇಕೆಂಬ ತವಕ. ಅದಕ್ಕಾಗಿ ಆತ ಮಹಾಕಾವ್ಯಲಕ್ಷಣಗಳನ್ನು ತನ್ನ ಕಾವ್ಯದಲ್ಲಿ ಸೇರ್ಪಡೆ ಮಾಡಲು ಪ್ರಯತ್ನಿಸಿರುವುದು ಕಂಡುಬರುತ್ತದೆ.

ಸಾಹಿತ್ಯದರ್ಪಣ, ಕಾವ್ಯಾದರ್ಶ, ಸೂಕ್ತಿಸುಧಾರ್ಣವ ಮುಂತಾದ ಲಕ್ಷಣ ಗ್ರಂಥಗಳಲ್ಲಿ ಮಹಾಕಾವ್ಯಲಕ್ಷಣಗಳು ಉಕ್ತವಾಗಿವೆ.

ವಾರಿಧಿ ಪರ್ವತಂ ಪುರಮಧೀಶ್ವರನುದ್ವಹಸಂ ಕುಮಾರಸಂ
ಭೋರುಹವೈರಿಮಿತ್ರರುದಯಂ ಋತುನಂದನಮಂಬುಸೀಧುಕಾಂ
ತಾರತಿ ಚಿಂತೆ ಮಂತ್ರ ಚರ ಯಾನ ವಿರೋಧಿಜಯಂಗಳೆಂಬಿವಂ
ಸೂರಿಗಳಂಗಮೆಂದು ಕೃತಿಯೊಳ್ ಪದಿನೆಂಟಮನೆಯ್ದೆ ಬಣ್ಣಿಪರ್ ॥

(ಸೂಕ್ತಿಸುಧಾರ್ಣವ, ಆಶ್ವಾಸ, ೧. ಪ. ೭೬)

ಗಿರಿಜಾಕಲ್ಯಾಣದಲ್ಲಿ ಮೇಲೆ ಹೇಳಿದ ಲಕ್ಷಣಗಳೆಲ್ಲವೂ ಕಂಡುಬರುತ್ತವೆ. ಇಲ್ಲಿ ಸರ್ಗ (ಆಶ್ವಾಸ) ಬಂಧವುಂಟು, ಕಥೆ ಐತಿಹಾಸಿಕ.* ಕಥಾನಾಯಕ ದೇವತಾಪುರುಷ. ಕಾವ್ಯದ ಅಂಗವಾಗಿ ಶೃಂಗಾರ, ವೀರ, ಶಾಂತರಸಗಳು ಅಭಿವ್ಯಕ್ತವಾಗಿವೆ. ಹರಿಹರ ಮಹಾ ಶಿವಭಕ್ತ. ಆದ್ದರಿಂದಲೇ ಆತನ ಕಾವ್ಯದಲ್ಲಿ ಭಕ್ತಿರಸ ತುಂಬಿಬಂದಿದೆ. ಮೊದಲನೆಯ ಆಶ್ವಾಸದಲ್ಲಿ ವಸ್ತುನಿರ್ದೇಶ, ಕುಕವಿ ನಿಂದೆ, ಗುರುಪ್ರಶಂಸೆ, ಹಿಮಾಚಲದ ವರ್ಣನೆಗಳು ಇವೆ. ಪ್ರತಿ ಆಶ್ವಾಸಗಳಲ್ಲಿಯೂ ವೃತ್ತಗಳ ವೈವಿಧ್ಯವುಂಟು. ಶೈಲಿ, ವನ, ಋತು, ಪ್ರಯಾಣ, ಮೃಗಯಾ ಮೊದಲಾದ ವರ್ಣನೆಗಳು ಹೃದಯಂಗಮವಾಗಿ ಚಿತ್ರಿತವಾಗಿವೆ. ಈ ಕಾರಣಗಳಿಂದ ಇದು ಶ್ರೇಷ್ಠವರ್ಗದ "ಮಹಾಕಾವ್ಯ" ಎಂಬ ವಿದ್ವಾಂಸರ ಮನ್ನಣೆಗೆ ಪಾತ್ರವಾಗಿದೆ.

ಗಿರಿಜಾಕಲ್ಯಾಣದ ನಾಲ್ಕನೆಯ ಆಶ್ವಾಸದಲ್ಲಿ ಹಿಮವಂತ ನಾರದನೊಡನೆ ಚಂದ್ರಿಕಾವಿಹಾರ ಹೊರಟು ವೇಶ್ಯಾವಾಟಿಗೆ ಬರುವ ಸನ್ನಿವೇಶ ಕವಿಕಲ್ಪಿತ. ಇದನ್ನು ಕವಿ ತನ್ನ ಕೃತಿ ಮಹಾಕಾವ್ಯಲಕ್ಷಣಗಳೆಲ್ಲವನ್ನೂ ಒಳಗೊಂಡಿರಬೇಕು ಎಂಬ ಉದ್ದೇಶವನ್ನು ಪೂರ್ಣಗೊಳಿಸಲು ಸೇರ್ಪಡೆ ಮಾಡಿದಂತೆ ತೋರುತ್ತದೆ. ಇಲ್ಲದಿದ್ದರೆ ಮಹಾ ವಿರಕ್ತನಾದ ಹರಿಹರ ಶೈವನಿಧಿ ನಾರದ ಮಹರ್ಷಿಯನ್ನು ವಿಷಯಾಸಕ್ತರಿಗೆ ಆಕರ್ಷಣೀಯವಾದ ಕಾಮುಕೇಳಿಯ ದೃಶ್ಯಗಳನ್ನು ನೋಡಲು ಒಯ್ಯುತ್ತಿರಲಿಲ್ಲ.

ಗಿರಿಜಾಕಲ್ಯಾಣ ಚಂಪೂಕಾವ್ಯ, ಇದು ಗದ್ಯಪದ್ಯಾತ್ಮಕ. ಸಂಸ್ಕೃತ ಶಬ್ದಗಳ ಪ್ರಾಚುರ್ಯ, ದೀರ್ಘ ಸಮಾಸಗಳ ಬಳಕೆ, ನಿಬಿಡವಾದ ವಾಕ್ಯರಚನೆ, ಹಳಗನ್ನಡ ಶಬ್ದಗಳ ಶುದ್ಧ ರೂಪಪ್ರಯೋಗ, ಶಾರ್ದೂಲ, ಮತ್ತೇಭ, ಸ್ರಗ್ಧರಾ ಮೊದಲಾದ ಗಂಭೀರ ವೃತ್ತಗಳ ವಿಪುಲ ಪ್ರಯೋಗ ಮುಂತಾದುವು ಚಂಪೂ ಕಾವ್ಯಗಳ ಸಾಮಾನ್ಯ ಲಕ್ಷಣ. ಆಗಿನ ಕಾಲದ ಜನಾಭಿರುಚಿಯನ್ನು ಅನುಸರಿಸಿ ಕವಿಗಳು ಚಂಪೂಕಾವ್ಯಗಳನ್ನು ಬರೆಯುತ್ತಿದ್ದರು. ಕವಿಗಳ ಯೋಗ್ಯತೆಯನ್ನು ಅವರು ಬರೆದ ಕಾವ್ಯಗಳ ಕ್ಲಿಷ್ಟತೆಯಿಂದಲೇ ಅಳೆಯುತ್ತಿದ್ದ ಪಂಡಿತಲೋಕವನ್ನು ತೃಪ್ತಿಪಡಿಸುವುದೇ ಆಗಿನ ಮಹಾಕಾವ್ಯಗಳ ದೃಷ್ಟಿಯಾಗಿತ್ತು. ಅವರಿಗೆ ಜನಸಾಮಾನ್ಯರ ಕಡೆ ದೃಷ್ಟಿ ಇರಲಿಲ್ಲವೆಂದು ಒಪ್ಪಿಕೊಳ್ಳಲೇಬೇಕು. ಗಿರಿಜಾಕಲ್ಯಾಣ ಮಹಾಕಾವ್ಯ ಹಿಂದಿನ ಕಾವ್ಯಗಳಷ್ಟು ಕಠಿನವಾದುದಲ್ಲ. ಸಂಸ್ಕೃತ ಪದಗಳನ್ನು ಹೆಚ್ಚಾಗಿ ಬಳಸಿದ್ದರೂ ಅವು ಸುಲಭವಾಗಿ ಕನ್ನಡ ಶಬ್ದಗಳೊಡನೆ

---

*ಪುರಾಣ, ಮಹಾಭಾರತ ಮತ್ತು ರಾಮಾಯಣಗಳು ಇತಿಹಾಸವೆನಿಸಿವೆ.

ಬೆರೆತುಕೊಂಡಿವೆ. ಅವುಗಳ ಉಪಯೋಗ ಸಮುಚಿತವಾಗಿದೆ. ಸಂಸ್ಕೃತ ಗಂಭೀರ ವೃತ್ತಗಳಿದ್ದರೂ ಕಂದಪದ್ಯಗಳು ಹೆಚ್ಚಾಗಿವೆ*. ದೀರ್ಘ ಸಮಾಸಗಳನ್ನು ಹೆಚ್ಚಾಗಿ ಬಳಸಿಲ್ಲ. ವಾಕ್ಯಗಳು ಬಿಡಿಬಿಡಿಯಾಗಿವೆ. ಅವು ಮಾತನಾಡುವ ಸರಣಿಯಲ್ಲಿವೆ. ವರ್ಣನೆಗಳು ಹೆಚ್ಚಾಗಿದ್ದರೂ ಅವು ಕಾವ್ಯದ ಆಕರ್ಷಕತೆಯನ್ನು ಕುಗ್ಗಿಸಿಲ್ಲ. ಈ ದೃಷ್ಟಿಯಲ್ಲಿ ಗಿರಿಜಾಕಲ್ಯಾಣ ಸಾಮಾನ್ಯ ಜನರಿಗೂ ಪ್ರಿಯವಾದ ಕಾವ್ಯ.

## ೪. ಪಾತ್ರಸೃಷ್ಟಿ

ಗಿರಿಜಾಕಲ್ಯಾಣ ಮಹಾಕಾವ್ಯದಲ್ಲಿ ಹರಿಹರನ ಪಾತ್ರಸೃಷ್ಟಿ ಸ್ವಾಭಾವಿಕವೂ ಆಕರ್ಷಕವೂ ಆಗಿದೆ. ಅದು ಆತನ ಕಲ್ಪನಾವಿಲಾಸಕ್ಕೆ ಪ್ರತಿಭಾವೈಭವಕ್ಕೆ ಸಾಕ್ಷಿಯಾಗಿದೆ. ಪಾತ್ರಗಳಲ್ಲಿ ಜೀವಕಳೆ ತುಂಬಿದೆ.

ಇಲ್ಲಿ ಬಂದಿರುವ ಪಾತ್ರಗಳಲ್ಲಿ ಪಾರ್ವತಿ, ಪರಮೇಶ್ವರ, ಹಿಮವಂತ, ಮೇನಾದೇವಿ, ಮದನ, ನಾರದ, ಬೃಹಸ್ಪತಿ, ತಾರಕ ಮತ್ತು ಜಯೆವಿಜಯೆಯರು ಮುಖ್ಯ. ಇವುಗಳಲ್ಲಿ ಪಾರ್ವತಿಯ ಪಾತ್ರ ಪ್ರಧಾನ.

ಪಾರ್ವತಿ ಕಥಾನಾಯಿಕೆ. ಮೇನೆಯ ಉಗ್ರ ತಪಸ್ಸಿನ ಫಲವಾಗಿ ಅಭವನಂಗವಧುವೆನಿಪ ಆಕೆ ಅವತರಿಸಿದಳು. ಜನನವಾದ ಕಾಲದಿಂದಲೇ ಆಕೆ 'ಶಿವಲಿಂಗೇಕ್ಷಣಲೋಲುಪೆ', 'ಶಿವಭಕ್ತಿ ಸಂಪನ್ನೆ', ಪುಣ್ಯದ ಜೀವದಂತೆ, ಶಿವಜ್ಞಾನದ ದೇಹದಂತೆ, ನಿರುಪಾಧಿಕ ಜ್ಯೋತಿಯಂತೆ ಜಗನ್ಮಾತೆ ಶೈಶವ ಲೀಲೆಗಳಿಂದ ಬೆಳಗುವಳು. ಹಗಲಿರುಳು ಅವಳು ಹಸಿವು ತೃಷೆಗಳನ್ನು ಮರೆತು ಶಿವಧ್ಯಾನದಲ್ಲಿ ತನ್ಮಯಳಾಗುವಳು. ಯೌವನೋದಯವಾದ ಮೇಲೆ ನಾರದಮುನಿಯಿಂದ ಪಾರ್ವತಿಯ ಪೂರ್ವೋತ್ತರಗಳನ್ನು ಅರಿತ ಹಿಮವಂತ, ಪಾರ್ವತಿಯು ಶಿವನ ಅರ್ಧಾಂಗಿಯೆಂದೂ ಅವಳು ದಕ್ಷಯಾಗದಲ್ಲಿ ದೇಹ ತೊರೆದು ತಮ್ಮ ಪುಣ್ಯದ ಫಲವಾಗಿ ಪುತ್ರಿಯಾಗಿ ಅವತರಿಸಿದಳೆಂದೂ ತಿಳಿದು, ಆತನ ಸೂಚನೆಯಂತೆ ಹೇಮಕೂಟದಲ್ಲಿ ಸಮಾಧಿಮಗ್ನನಾಗಿದ್ದ ಶಿವನಲ್ಲಿಗೆ ಕರೆತರುವನು.

ಜಯೆವಿಜಯೆಯರೊಂದಿಗೆ ಗಿರಿಜೆ ಪ್ರತಿದಿನವೂ ಭಕ್ತಿಯಿಂದ ಶಿವನ ಆರಾಧನೆಯಲ್ಲಿರುವಾಗ ಲೋಕಹಿತಕ್ಕಾಗಿ ಸಮಾಧಿಭಂಗ ಮಾಡಲು ಬಂದವನು ಮನ್ಮಥ. ಶಿವನ ಕ್ರೋಧಾಗ್ನಿಯಿಂದ ಆತ ಭಸ್ಮವಾದಮೇಲೆ ಪಾರ್ವತಿ ಗೋಳಾಡುತ್ತಿದ್ದ ರತಿಗೆ ಅಭಯವಿತ್ತು ಶಿವನನ್ನು ಭಕ್ತಿಭಾವದಿಂದ ಒಲಿಸಲು ಪಣತೊಟ್ಟಳು. ಅವಳ ತಪೋಜ್ವಾಲೆಯಿಂದ ಎಚ್ಚೆತ್ತ ಶಿವ ಅವಳನ್ನು ಮತ್ತೆ ಪರೀಕ್ಷಿಸಲು ವಟುವಾಗಿ ಬಂದು, ಶಿವನಿಂದೆ ಮಾಡಿ, ಅವಳಿಟ್ಟ ವಿಭೂತಿ ಪೆಟ್ಟಿಗೆ ಕಪಟ ರೂಪು ತೊರೆದು ನಿಜತೇಜ ಬೆಳಗಿದ.

ಪಾರ್ವತಿಯ ವ್ಯಕ್ತಿತ್ವವನ್ನು ರೂಪಿಸಲು ಕವಿ ತನ್ನ ಅಪ್ರತಿಮ ಪ್ರತಿಭೆ ತೋರಿ

* ಈ ಮಹಾಕಾವ್ಯದಲ್ಲಿರುವ ಒಟ್ಟು ೧೦೯೪ ಪದ್ಯಗಳಲ್ಲಿ ಕಂದ ೭೯೧, ಚಂಪಕ ೧೨೫, ಮತ್ತೇಭ ೫೬, ಮ. ಸ್ರ. ೫೩, ಉತ್ಪಲ ೪೩, ಸ್ರಗ್ಧರೆ ೧೬, ಶಾರ್ದೂಲ ೧೧ ಎಂಬು ಪರಿಗಣಿತವಾಗಿವೆ.

ದ್ದಾನೆ. ಆಕೆ ಜಗನ್ಮಾತೆ, ಶಿವನ ಅರ್ಧಾಂಗಿ ಎಂಬುದನ್ನು ಮತ್ತೆ ಮತ್ತೆ ದೃಢಪಡಿಸು ತ್ತಾನೆ. ಆಕೆಯ ತಪಸ್ಸು ವಿವಾಹಗಳೆಲ್ಲವೂ ಲೋಕಹಿತಕ್ಕಾಗಿಯೇ ಏರ್ಪಟ್ಟವು. ಕವಿ ತನ್ನ ಶ್ರದ್ಧೆ ಭಕ್ತಿ ಹಾಗೂ ಕವಿತಾ ಸಾಮರ್ಥ್ಯಗಳನ್ನೆಲ್ಲ ಅವಳ ಚಿತ್ರಣಕ್ಕಾಗಿ ಧಾರೆ ಎರೆದಿದ್ದಾನೆ. ಶಿವಪೂಜೆ, ಶಿವಧ್ಯಾನ, ಶಿವಸ್ತೋತ್ರಗಳೇ ಅವಳ ಜೀವನದ ಗುರಿ ಎಂಬುದು ಇಲ್ಲಿ ಸುಸ್ಪಷ್ಟವಾಗಿದೆ, ಗಿರಿಜೆಯ ಸ್ವಭಾವ ಕುಸುಮಕೋಮಲ; ಅದರೂ ಧೀರೋದಾತ್ತತೆಯಲ್ಲಿ ಅದು ವಜ್ರಕಠಿಣ. ಮದನನ ವಿಯೋಗದಿಂದ ಹತಾಶಳಾದ ರತಿ ಯನ್ನು ಕಂಡ ಅವಳ ಹೃದಯ ದ್ರವಿಸಿತು. ರತಿಗೆ ಅಭಯಪ್ರಧಾನ ಮಾಡಿದ ಆಕೆ, ತಾನು ಪ್ರೀತಿಯ ತಾಯಿ-ತಂದೆಗಳನ್ನು ತೊರೆದು ಬಂದು ಗಾಢ ಭಕ್ತಿಯಿಂದ ಆರಾಧಿ ಸಿದರೂ ತನ್ನ ಕಡೆ ತಿರುಗಿಯೂ ನೋಡದೆ, ಮಾತನಾಡಿಸದೆ ಪರಶಿವ ಮಾಯವಾದ. ಅಂಥ ಉಗ್ರನನ್ನು ಉಗ್ರತಪಸ್ಸಿನಿಂದಲೇ ತಾನಿದ್ದಲ್ಲಿಗೆ ಬರಮಾಡಿಕೊಳ್ಳುವೆನೆಂಬ ದೃಢ ನಿರ್ಧಾರವನ್ನು ಕೈಕೊಂಡುದು ಅವಳ ಚಿತ್ತಸ್ಥೈರ್ಯಕ್ಕೆ ತೋರುಬೆರಳು.

ಪಾರ್ವತಿ ಸ್ವಭಾವತಃ ಶಾಂತಳು, ಅದರೂ ಆಕೆ ವಟುವಿನ ಶಿವನಿಂದೆ ಕೇಳಿ ಕಿಡಿ ಕಿಡಿಯಾದಳು. ಅಷ್ಟುಮಾತ್ರವಲ್ಲ, ಅವನಮೇಲೆ ಸಿಕ್ಕಿದ ವಸ್ತುವನ್ನು ತೆಗೆದು ಎಸೆಯು ವಷ್ಟು ಅದು ಮುಂದುವರಿದಿತ್ತು, ಘನೀಭೂತವಾಗಿತ್ತು ಅವಳ ಆಗ್ರಹ. ಪುಣ್ಯವಶ ದಿಂದ ಸಿಕ್ಕಿದ ಆ ವಸ್ತು ವಿಭೂತಿ ಗಟ್ಟಿಯಾಗಿತ್ತು. ಕವಿ ಈ ನೆಪದಲ್ಲಿ "ಪುಸಿ·ದಿಟಕ್ಕೆ ನಿಲ್ವುದೆ ಜಗದೊಳ್" ಎಂಬ ನಿತ್ಯಸತ್ಯವನ್ನು ಎತ್ತಿ ಹಿಡಿದಿದ್ದಾನೆ.

ಅವಳ ದೃಢಭಕ್ತಿಗೆ ಒಲಿದ ಶಿವ ಅವಳಿಗೆ ಹಸ್ತಾವಲಂಬನವಿತ್ತು 'ಕೈಲಾಸಕ್ಕೆ ನಡೆ' ಎಂದಾಗ, ಪಾರ್ವತಿ "ದೇವ, ಗಿರೀಶ್ವರನಲ್ಲಿ ಎನ್ನನಾದರದೊಳಿ ಬೇಡಿಯೂರ್ಜಿತ ವಿವಾಹಮದಚ್ಚರಿಯಪ್ಪ ಮಾಳ್ಕೆಯಂ ಕರುಣಿಪುದು" ಎಂದು ಪ್ರಾರ್ಥಿಸಿದಳು. ಇಲ್ಲಿ ಕವಿ ಭಾರತೀಯ ಸಂಸ್ಕೃತಿಪು ಗಾರ್ಹಸ್ಥ್ಯ ಧರ್ಮದ ಶಾಲೀನತೆಯ ಆದರ್ಶವನ್ನು ಎತ್ತಿ ಹಿಡಿದಿದ್ದಾನೆ. ಗಿರಿಜೆ ಪರಶಿವನನ್ನು ಒಲಿಸಿಕೊಂಡದ್ದು ಕಾಮಿನಿಯಾಗಿ ಅಲ್ಲ, ಕಾಮಾರಿ ಪರಶಿವನನ್ನು ಅವಳು ಪರಿಶುದ್ಧ ಭಕ್ತಿಯ ಶಿವಕಾಮಿಯಾಗಿ ಒಲಿಸಿಕೊಂಡಳು.

ಕಾವ್ಯದ ಕಥಾನಾಯಕ ಹಂಪೆಯ ವಿರೂಪಾಕ್ಷ. ಆತ ಜಗಕ್ಕೊಡೆಯ; ಮಾತ್ರವಲ್ಲದೆ ಕಾವ್ಯಕ್ಕೆ ಆತನೇ ಅಧಿಪತಿ. ರಜತಗಿರಿವಾಸನಾದ ಪರಶಿವ ಕನ್ನಡನಾಡಿನ ಹೇಮಕೂಟಕ್ಕೆ ಚಿತ್ತೈಸಿ ತಪೋಮಗ್ನನಾದದ್ದು ಕವಿಯ ನಾಡಪ್ರೇಮದ ಕುರುಹು. ಆತ "ಚಂದ್ರಾಂಶುಪದವೋ, ಸೂರ್ಯಕೋಟಿ ರುಚಿರಪ್ರದ್ಯೋತವೋ" ಎಂಬಂತೆ ಪದ್ಮಾ ಸನಾಸೀನನಾಗಿದ್ದಾನೆ. ತನ್ನ ತೇಜದಲ್ಲಿ ಮನವನ್ನು ಮುಳುಗಿಸಿ ಅಚಲನಾಗಿದ್ದಾನೆ. ಅಭವ, ಅದ್ವಯ, ಸದಮಳ, ಪರತತ್ತ್ವನಿಧಾನ, ಆನಂದಮಯ, ಎಷ್ಟೋ ವರ್ಷಗಳು ತಪೋಮಗ್ನರಾದ ಮುನಿಮುನಿಗಳಿಗೆ ನಿಲುಕದವ. ವೇದಗಳಿಗೂ ಅವೇದ್ಯ. ಕವಿ ದೃಷ್ಟಿ ಯಲ್ಲಿ ಆತ ಸಕಳನಿಷ್ಕಳನಾದರೂ ಗಿರಿಜೆಗೆ ಕಾಣಿಸಿಕೊಂಡುದು ಸಕಳನಾಗಿ.

ವೈರಾಗ್ಯನಿಧಿ, ಭಸಿತಕಾಯ, ತಪೋಮಯ, ಸೌಂದರ್ಯರೂಪ, ಜ್ಞಾನಪ್ರದೀಪ, ಸ್ವಯಂಪ್ರಕಾಶ, ಭಕ್ತಾಮರ ಕಲ್ಪತರು, ಅಕ್ಷಮಾಲೆಯನ್ನು ಅಂಗುಲಿಯಲ್ಲಿ ಧರಿಸಿದವ;

ಬೆರೆತುಕೊಂಡಿವೆ. ಅವುಗಳ ಉಪಯೋಗ ಸಮುಚಿತವಾಗಿದೆ. ಸಂಸ್ಕೃತ ಗಂಭೀರ ವೃತ್ತಗಳಿದ್ದರೂ ಕಂದಪದ್ಯಗಳು ಹೆಚ್ಚಾಗಿವೆ*. ದೀರ್ಘ ಸಮಾಸಗಳನ್ನು ಹೆಚ್ಚಾಗಿ ಬಳಸಿಲ್ಲ. ವಾಕ್ಯಗಳು ಬಿಡಿಬಿಡಿಯಾಗಿವೆ. ಅವು ಮಾತನಾಡುವ ಸರಣಿಯಲ್ಲಿವೆ. ವರ್ಣನೆಗಳು ಹೆಚ್ಚಾಗಿದ್ದರೂ ಅವು ಕಾವ್ಯದ ಆಕರ್ಷಕತೆಯನ್ನು ಕುಗ್ಗಿಸಿಲ್ಲ. ಈ ದೃಷ್ಟಿಯಲ್ಲಿ ಗಿರಿಜಾಕಲ್ಯಾಣ ಸಾಮಾನ್ಯ ಜನರಿಗೂ ಪ್ರಿಯವಾದ ಕಾವ್ಯ.

## ೪. ಪಾತ್ರಸೃಷ್ಟಿ

ಗಿರಿಜಾಕಲ್ಯಾಣ ಮಹಾಕಾವ್ಯದಲ್ಲಿ ಹರಿಹರನ ಪಾತ್ರಸೃಷ್ಟಿ ಸ್ವಾಭಾವಿಕವೂ ಆಕರ್ಷಕವೂ ಆಗಿದೆ. ಅದು ಆತನ ಕಲ್ಪನಾವಿಲಾಸಕ್ಕೆ ಪ್ರತಿಭಾವೈಭವಕ್ಕೆ ಸಾಕ್ಷಿಯಾಗಿದೆ. ಪಾತ್ರಗಳಲ್ಲಿ ಜೀವಕಳೆ ತುಂಬಿದೆ.

ಇಲ್ಲಿ ಬಂದಿರುವ ಪಾತ್ರಗಳಲ್ಲಿ ಪಾರ್ವತಿ, ಪರಮೇಶ್ವರ, ಹಿಮವಂತ, ಮೇನಾದೇವಿ, ಮದನ, ನಾರದ, ಬೃಹಸ್ಪತಿ, ತಾರಕ ಮತ್ತು ಜಯೆವಿಜಯೆಯರು ಮುಖ್ಯ. ಇವುಗಳಲ್ಲಿ ಪಾರ್ವತಿಯ ಪಾತ್ರ ಪ್ರಧಾನ.

ಪಾರ್ವತಿ ಕಥಾನಾಯಿಕೆ. ಮೇನೆಯ ಉಗ್ರ ತಪಸ್ಸಿನ ಫಲವಾಗಿ ಅಭವನಂಗವಧುವೆನಿಪ ಆಕೆ ಅವತರಿಸಿದಳು. ಜನನವಾದ ಕಾಲದಿಂದಲೇ ಆಕೆ 'ಶಿವಲಿಂಗೇಕ್ಷಣ ಲೋಲುಪೆ', 'ಶಿವಭಕ್ತಿ ಸಂಪನ್ನೆ', ಪುಣ್ಯದ ಜೀವದಂತೆ, ಶಿವಜ್ಞಾನದ ದೇಹದಂತೆ, ನಿರುಪಾಧಿಕ ಜ್ಯೋತಿಯಂತೆ ಜಗನ್ಮಾತೆ ಶೈಶವ ಲೀಲೆಗಳಿಂದ ಬೆಳಗುವಳು. ಹಗಲಿರುಳು ಅವಳು ಹಸಿವು ತೃಷೆಗಳನ್ನು ಮರೆತು ಶಿವಧ್ಯಾನದಲ್ಲಿ ತನ್ಮಯಳಾಗುವಳು. ಯೌವನೋದಯವಾದ ಮೇಲೆ ನಾರದಮುನಿಯಿಂದ ಪಾರ್ವತಿಯ ಪೂರ್ವೋತ್ತರಗಳನ್ನು ಅರಿತ ಹಿಮವಂತ, ಪಾರ್ವತಿಯು ಶಿವನ ಅರ್ಧಾಂಗಿಯೆಂದೂ ಅವಳು ದಕ್ಷಯಾಗದಲ್ಲಿ ದೇಹ ತೊರೆದು ತಮ್ಮ ಪುಣ್ಯದ ಫಲವಾಗಿ ಪುತ್ರಿಯಾಗಿ ಅವತರಿಸಿದಳೆಂದೂ ತಿಳಿದು, ಆತನ ಸೂಚನೆಯಂತೆ ಹೇಮಕೂಟದಲ್ಲಿ ಸಮಾಧಿಮಗ್ನನಾಗಿದ್ದ ಶಿವನಲ್ಲಿಗೆ ಕರೆತರುವನು.

ಜಯೆವಿಜಯೆಯರೊಂದಿಗೆ ಗಿರಿಜೆ ಪ್ರತಿದಿನವೂ ಭಕ್ತಿಯಿಂದ ಶಿವನ ಆರಾಧನೆಯಲ್ಲಿರುವಾಗ ಲೋಕಹಿತಕ್ಕಾಗಿ ಸಮಾಧಿಭಂಗ ಮಾಡಲು ಬಂದವನು ಮನ್ಮಥ. ಶಿವನ ಕ್ರೋಧಾಗ್ನಿಯಿಂದ ಆತ ಭಸ್ಮವಾದಮೇಲೆ ಪಾರ್ವತಿ ಗೋಳಾಡುತ್ತಿದ್ದ ರತಿಗೆ ಅಭಯವಿತ್ತು ಶಿವನನ್ನು ಭಕ್ತಿಭಾವದಿಂದ ಒಲಿಸಲು ಪಣತೊಟ್ಟಳು. ಅವಳ ತಪೋಜ್ವಾಲೆಯಿಂದ ಎಚ್ಚೆತ್ತ ಶಿವ ಅವಳನ್ನು ಮತ್ತೆ ಪರೀಕ್ಷಿಸಲು ವಟುವಾಗಿ ಬಂದು, ಶಿವನಿಂದೆ ಮಾಡಿ, ಅವಳಿಟ್ಟ ವಿಭೂತಿ ಪೆಟ್ಟಿಗೆ ಕಪಟ ರೂಪು ತೊರೆದು ನಿಜತೇಜ ಬೆಳಗಿದ.

ಪಾರ್ವತಿಯ ವ್ಯಕ್ತಿತ್ವವನ್ನು ರೂಪಿಸಲು ಕವಿ ತನ್ನ ಅಪ್ರತಿಮ ಪ್ರತಿಭೆ ತೋರಿ

---

* ಈ ಮಹಾಕಾವ್ಯದಲ್ಲಿರುವ ಒಟ್ಟು ೧೦೯೪ ಪದ್ಯಗಳಲ್ಲಿ ಕಂದ ೭೯೧, ಚಂಪಕ ೧೨೫, ಮತ್ತೇಭ ೫೬, ಮ. ಸ್ರ. ೫೩, ಉತ್ಪಲ ೪೩, ಸ್ರಗ್ಧರೆ ೧೬, ಶಾರ್ದೂಲ ೧೧ ಎಂದು ಪರಿಗಣಿತವಾಗಿವೆ.

ದ್ದಾನೆ. ಆಕೆ ಜಗನ್ಮಾತೆ, ಶಿವನ ಅರ್ಧಾಂಗಿ ಎಂಬುದನ್ನು ಮತ್ತೆ ಮತ್ತೆ ದೃಢಪಡಿಸುತ್ತಾನೆ. ಆಕೆಯ ತಪಸ್ಸು ವಿವಾಹಗಳೆಲ್ಲವೂ ಲೋಕಹಿತಕ್ಕಾಗಿಯೇ ಏರ್ಪಟ್ಟವು. ಕವಿ ತನ್ನ ಶ್ರದ್ಧೆ ಭಕ್ತಿ ಹಾಗೂ ಕವಿತಾ ಸಾಮರ್ಥ್ಯಗಳನ್ನೆಲ್ಲ ಅವಳ ಚಿತ್ರಣಕ್ಕಾಗಿ ಧಾರೆ ಎರೆದಿದ್ದಾನೆ. ಶಿವಪೂಜೆ, ಶಿವಧ್ಯಾನ, ಶಿವಸ್ತೋತ್ರಗಳೇ ಅವಳ ಜೀವನದ ಗುರಿ ಎಂಬುದು ಇಲ್ಲಿ ಸುಸ್ಪಷ್ಟವಾಗಿದೆ, ಗಿರಿಜೆಯ ಸ್ವಭಾವ ಕುಸುಮಕೋಮಲ; ಆದರೂ ಧೀರೋದಾತ್ತತೆಯಲ್ಲಿ ಅದು ವಜ್ರಕಠಿನ. ಮದನನ ವಿಯೋಗದಿಂದ ಹತಾಶಳಾದ ರತಿಯನ್ನು ಕಂಡ ಅವಳ ಹೃದಯ ದ್ರವಿಸಿತು. ರತಿಗೆ ಅಭಯಪ್ರದಾನ ಮಾಡಿದ ಆಕೆ, ತಾನು ಪ್ರೀತಿಯ ತಾಯಿ-ತಂದೆಗಳನ್ನು ತೊರೆದು ಬಂದು ಗಾಢ ಭಕ್ತಿಯಿಂದ ಆರಾಧಿಸಿದರೂ ತನ್ನ ಕಡೆ ತಿರುಗಿಯೂ ನೋಡದೆ, ಮಾತನಾಡಿಸದೆ ಪರಶಿವ ಮಾಯವಾದ. ಅಂಥ ಉಗ್ರನನ್ನು ಉಗ್ರತಪಸ್ಸಿನಿಂದಲೇ ತಾನಿದ್ದಲ್ಲಿಗೆ ಬರಮಾಡಿಕೊಳ್ಳುವೆನೆಂಬ ದೃಢ ನಿರ್ಧಾರವನ್ನು ಕೈಕೊಂಡುದು ಅವಳ ಚಿತ್ತಸ್ಥೈರ್ಯಕ್ಕೆ ತೋರುಬೆರಳು.

ಪಾರ್ವತಿ ಸ್ವಭಾವತಃ ಶಾಂತಳು, ಆದರೂ ಆಕೆ ವಟುವಿನ ಶಿವನಿಂದೆ ಕೇಳಿ ಕಿಡಿಕಿಡಿಯಾದಳು. ಅಷ್ಟುಮಾತ್ರವಲ್ಲ, ಅವನಮೇಲೆ ಸಿಕ್ಕಿದ ವಸ್ತುವನ್ನು ತೆಗೆದು ಎಸೆಯುವಷ್ಟು ಅದು ಮುಂದುವರಿದಿತ್ತು, ಘನೀಭೂತವಾಗಿತ್ತು ಅವಳ ಆಗ್ರಹ. ಪುಣ್ಯವಶದಿಂದ ಸಿಕ್ಕಿದ ಆ ವಸ್ತು ವಿಭೂತಿ ಗಟ್ಟಿಯಾಗಿತ್ತು. ಕವಿ ಈ ನೆಪದಲ್ಲಿ "ಪುಸಿ·ದಿಟಕ್ಕೆ ನಿಲ್ವುದೆ ಜಗದೊಳ್" ಎಂಬ ನಿತ್ಯಸತ್ಯವನ್ನು ಎತ್ತಿ ಹಿಡಿದಿದ್ದಾನೆ.

ಅವಳ ದೃಢಭಕ್ತಿಗೆ ಒಲಿದ ಶಿವ ಅವಳಿಗೆ ಹಸ್ತಾವಲಂಬನವಿತ್ತು 'ಕೈಲಾಸಕ್ಕೆ ನಡೆ' ಎಂದಾಗ, ಪಾರ್ವತಿ "ದೇವ, ಗಿರೀಶ್ವರನಲ್ಲಿ ಎನ್ನನಾದರದೊಳೆ ಬೇಡಿಯೂರ್ಜಿತ ವಿವಾಹಮುದಚ್ಚರಿಯಪ್ಪ ಮಾಳ್ಕೆಯಂ ಕರುಣಿಪುದು" ಎಂದು ಪ್ರಾರ್ಥಿಸಿದಳು. ಇಲ್ಲಿ ಕವಿ ಭಾರತೀಯ ಸಂಸ್ಕೃತಿಯ ಗಾರ್ಹಸ್ಥ್ಯ ಧರ್ಮದ ಶಾಲೀನತೆಯ ಆದರ್ಶವನ್ನು ಎತ್ತಿ ಹಿಡಿದಿದ್ದಾನೆ. ಗಿರಿಜೆ ಪರಶಿವನನ್ನು ಒಲಿಸಿಕೊಂಡದ್ದು ಕಾಮಿನಿಯಾಗಿ ಅಲ್ಲ, ಕಾಮಾರಿ ಪರಶಿವನನ್ನು ಅವಳು ಪರಿಶುದ್ಧ ಭಕ್ತಿಯ ಶಿವಕಾಮಿಯಾಗಿ ಒಲಿಸಿಕೊಂಡಳು.

ಕಾವ್ಯದ ಕಥಾನಾಯಕ ಹಂಪೆಯ ವಿರೂಪಾಕ್ಷ. ಆತ ಜಗಕ್ಕೊಡೆಯ; ಮಾತ್ರವಲ್ಲದೆ ಕಾವ್ಯಕ್ಕೆ ಆತನೇ ಅಧಿಪತಿ. ರಜತಗಿರಿವಾಸನಾದ ಪರಶಿವ ಕನ್ನಡನಾಡಿನ ಹೇಮಕೂಟಕ್ಕೆ ಚಿತ್ತೈಸಿ ತಪೋಮಗ್ನನಾದದ್ದು ಕವಿಯ ನಾಡಪ್ರೇಮದ ಕುರುಹು. ಆತ "ಚಂದ್ರಾಂಶುಪದವೋ, ಸೂರ್ಯಕೋಟಿ ರುಚಿರಪ್ರದ್ಯೋತವೋ" ಎಂಬಂತೆ ಪದ್ಮಾಸನಾಸೀನನಾಗಿದ್ದಾನೆ. ತನ್ನ ತೇಜದಲ್ಲಿ ಮನವನ್ನು ಮುಳುಗಿಸಿ ಅಚಲನಾಗಿದ್ದಾನೆ. ಅಭವ, ಅದ್ವಯ, ಸದಮಳ, ಪರತತ್ತ್ವನಿಧಾನ, ಆನಂದಮಯ, ಎಷ್ಟೋ ವರ್ಷಗಳು ತಪೋಮಗ್ನರಾದ ಮನುಮುನಿಗಳಿಗೆ ನಿಲುಕದವ. ವೇದಗಳಿಗೂ ಅವೇದ್ಯ. ಕವಿ ದೃಷ್ಟಿಯಲ್ಲಿ ಆತ ಸಕಳನಿಷ್ಕಳನಾದರೂ ಗಿರಿಜೆಗೆ ಕಾಣಿಸಿಕೊಂಡುದು ಸಕಳನಾಗಿ.

ವೈರಾಗ್ಯನಿಧಿ, ಭಸಿತಕಾಯ, ತಪೋಮಯ, ಸೌಂದರ್ಯರೂಪ, ಜ್ಞಾನಪ್ರದೀಪ, ಸ್ವಯಂಪ್ರಕಾಶ, ಭಕ್ತಾಮರ ಕಲ್ಪತರು, ಅಕ್ಷಮಾಲೆಯನ್ನು ಅಂಗುಲಿಯಲ್ಲಿ ಧರಿಸಿದವ;

ಸಿದ್ಧರಗಂಡ, ಮುಕುಳಿತ ನಯನ, ಪಿಂಗಲ ಜಟಾಜೂಟ–ಎಷ್ಟು ವರ್ಣಿಸಿದರೂ ಕವಿಗೆ ತೃಪ್ತಿಯಿಲ್ಲ. ಅಂಥವನನ್ನು ಸಾತ್ವಿಕ ಭಕ್ತಿಯಿಂದ ಒಲಿಸಿಕೊಳ್ಳಬೇಕೆಂಬ ಹಿರಿಯಾಸೆ ಗಿರಿಜೆಗೆ. ಆದರೆ ಅವಳ ಇಷ್ಟ ಅಷ್ಟು ಸುಲಭವಾಗಿ ಈಡೇರತಕ್ಕುದಲ್ಲ. ಆತ ತಪೋ ಭಂಗಕ್ಕೆ ಕಾರಣನಾದ ಮನ್ಮಥನನ್ನು ದಹಿಸಿ, ಸುಳಿದು, ತುಳಿದು, ಸ್ಮರಭಸ್ಮನಯನ ವಾಗಿ ಉಗ್ರನಾಗಿ ಮೈಗರೆದ. ಪಾರ್ವತಿಯನ್ನು ಕಡೆಗಾಣಿಸಿದ. ಅವಳ ಕಡೆ ತಿರು ಗಿಯೂ ನೋಡದೆ, ನುಡಿಸದೆ ಮಾಯವಾದ. ಆದರೆ ಮುಂದೆ ಪಾರ್ವತಿ ಛಲದಿಂದ ಕೈಗೊಂಡ ಸಾತ್ವಿಕ ತಪಸ್ಸಿಗೆ ಸೋತು ವಟುವೇಷದಿಂದ ಕಾಣಿಸಿದ; ಒರೆ ಹಚ್ಚಿ ನೋಡಿದ. ಶಿವನಿಂದೆ ಮಾಡಿ ಏಟು ತಿಂದು ನಿಜರೂಪು ತೋರಿದ.

ಪರಶಿವನ ಪಾತ್ರಸೃಷ್ಟಿಯಲ್ಲಿ ಕವಿಯ ಅಮಿತ ಶ್ರದ್ಧೆ ಎದ್ದು ಕಾಣುತ್ತದೆ. ವಟು ವಿನ ವಾದಸರಣಿಯಲ್ಲಿ ಕಾಣುವ ಶಿವನಿಂದೆ ಸ್ತುತಿ ಪರ ಅದು ದಿಟವೂ ಮಾರ್ಮಿಕವೂ ಆಕರ್ಷಕವೂ ಆಗಿದೆ. ವಟುವನ್ನು ಕಂಡ ಪಾರ್ವತಿಗೆ ಸಂದೇಹವಾದದ್ದು ಸಹಜ. "ಕಣ್ಣರಿಯದುದಂ ಕರುಳರಿದುದು" ಎಂಬ ಕನ್ನಡ ಜಾಣ್ಣುಡಿ ಇದಕ್ಕಾಗಿ ಹುಟ್ಟಿದ್ದು, ಮಹಾಕವಿ ಕಾಳಿದಾಸನ "ಸತಾಂ ಹಿ ಸಂದೇಹ ಪದೇಷು ವಸ್ತುಷು ಪ್ರಮಾಣಮಂತಃ ಕರಣ ಪ್ರವೃತ್ತಯಃ" ಎಂಬ ಉಕ್ತಿ ಇಲ್ಲಿ ಕವಿಗೆ ಸ್ಫುರಿಸದೆ ಇರದು. ಆಗ ಅವಳ ಮೈ ಬೆವೆತು ರೋಮಾಂಚಿತವೂ ಆಯಿತು. ಚಿತ್ತ ಪ್ರಸನ್ನವಾಯಿತು. ಚಂದ್ರನಿಗೆ ಮೇಘ ಮರೆಯಾದರೂ ಅದು ಲೋಕಕ್ಕೆ ತಂಪನ್ನು ಕೊಡದಿರುವುದೆ? ಶಿವನಿಗೂ ಗಿರಿಜೆಯ ಮಧುರದೃಷ್ಟಿ ತಾಗಿ ಆತ ತಬ್ಬಿಬ್ಬಾದ! ಪುಳಕಿತನಾದ! ಇಲ್ಲಿ ರಸಿಕಚಕ್ರಿ ಕವಿಯ ಸಾತ್ವಿಕ ಶೃಂಗಾರರಸ ತಾನೇತಾನಾಗಿ ಹರಿದಿದೆ. ಈ ದಿಸೆಯಲ್ಲಿ ಪರಶಿವನ ವ್ಯಕ್ತಿ ಚಿತ್ರಣವು ಸಹಜವೂ ಆಕರ್ಷಕವೂ ಆಗಿದೆ.

ಹರಿಹರನ ಹಿಮವಂತ "ಪರಮೇಶ್ವರಾಂಘ್ರಿ ಸರಸಿಜ ಮಧುವ್ರತ ದಿಗಂತ ಕೀರ್ತಿ ಯುತ, ಜಗದ್ದೀಪಕ, ಅತ್ಯುದಾರಿ, ಮಹಿಮಾಂಬುರಾಶಿ, ಪ್ರಚಂಡಭುಜ. ಅವನ ಸಭೆಯಲ್ಲಿದ್ದ ಸಾಮಂತ ರಾಜರು ಕವಿಯ ಕಾಲದಲ್ಲಿ ಪ್ರಸಿದ್ಧರಾಗಿದ್ದ ಆಂಧ್ರ, ಕಳಿಂಗ, ವಂಗ, ಕೇರಳ, ಚೋಳ, ಲಾಳ, ಮಗಧ, ಪಾಂಡ್ಯ, ಮಾಳವ, ಗೌಡ ಮುಂತಾದ ದೇಶ ಗಳವರೆ!"

ಸ್ನಾನಮಾಡಿ, ಭಸ್ಮರುದ್ರಾಕ್ಷಿಗಳನ್ನು ಧರಿಸಿ, ಸ್ಥಿರಚಿತ್ತದಿಂದ ಲಿಂಗಾರ್ಚನೆ ಮಾಡಿ ಶಿವಪ್ರಸಾದ ಸೇವಿಸುವುದು ಹಿಮವಂತನ ದಿನಚರಿ. ಆತನ ಚಿತ್ತವಲ್ಲಭೆ ಮೇನಾ ದೇವಿ. ಪುತ್ರಿಯನ್ನು ಪಡೆವ ತನ್ನ ಬಯಕೆಯನ್ನು ಆಕೆ ನಿವೇದಿಸಿದಾಗ ಹಿಮವಂತನು ಅವಳನ್ನು ಸಂತೈಸಿ, ಅವಳ ತಪಸ್ಸಿಗೆ ತಕ್ಕ ಅನುಕೂಲಗಳನ್ನು ಏರ್ಪಡಿಸಿದ. ಅವಳ ಪುಣ್ಯ ಗರ್ಭದಲ್ಲಿ ಜನಿಸಿದ ಅಗಜೆ ಕಣ್ಣು ಮುಚ್ಚಿಕೊಂಡಿದ್ದಾಗ ಕುಲಗುರು ಶೈವಾಚಾರ್ಯರ ಸೂಚನೆಯಂತೆ ಶಿಶುವಿಗೆ ಶಿವಲಿಂಗದರ್ಶನ ಮಾಡಿಸಿ ಅವಳನ್ನು ಅಕ್ಕರೆಯಿಂದ ಸಲಹಿದ. ಮುಂದೆ ಆತ ನಾರದನ ಮುಖದಿಂದ ಗಿರಿಜೆ ಶಿವನ ಅರ್ಧಾಂಗಿನಿ ಎಂಬುದನ್ನು ಅರಿತು, ಅವರ ಸಲಹೆಯಂತೆ ಅವಳನ್ನು ಸಖಿಯರೊಂದಿಗೆ ಹೇಮಕೂಟಕ್ಕೆ ಬಿಟ್ಟು ಬಂದ. ಮಗ

ಳನ್ನು ಅಗಲಿ ಬರುವಾಗ ಆದ ಕಳವಳ ಆತನಿಗಿದ್ದ ಪುತ್ರೀವ್ಯಾಮೋಹದ ಕುರುಹು. ಮುಂದೆ ಋಷಿಗಳು ಬಂದು ಶಿವನಿಗಾಗಿ ಮಗಳನ್ನು ಕೇಳಿದಾಗ ಹರ್ಷದ ಕಡಲಲ್ಲಿ ಮುಳುಗಿದ ಹಿಮವಂತ "ಸುರುಚಿಯಂ ಸಾಂಗೀಕಾರದಿಂ ಕಾಮದಿಂ ಪ್ರೇಮದಿಂ ನಿಷ್ಠೆಯಿಂ ನೆಟ್ಟನೆ ಕೊಟ್ಟೆಂಕೊಟ್ಟೆನೆರಡಿಲ್ಲ!" ಎಂದು ಮಹೋತ್ಸಾಹದಿಂದ ಸಮ್ಮತಿಸಿ ವೈಭವದಿಂದ ಕನ್ಯಾದಾನ ಮಾಡಿದ ಆದರ್ಶ ಗೃಹಸ್ಥ.

ಹುಟ್ಟಿದ ಮಕ್ಕಳಲ್ಲಿ ಒಬ್ಬಳಾದರೂ ಮಗಳಿರಬೇಕೆಂಬ ತಾಯ್ತನದ ಹಂಬಲಕ್ಕೆ ಮೇನಾದೇವಿ ನಿದರ್ಶನ. ಅವಳಿಗೆ ಮೈನಾಕನೆಂಬ ಮಗನಿದ್ದನಾದರೂ ಮಗಳಿಗಾಗಿ ಹಂಬಲಿಸಿತು ಅವಳ ಹೆಂಗರುಳು. ಅವಳು ಜಗದಂಬೆಯನ್ನು ಕುರಿತು ತಪಸ್ಸು ಮಾಡಿದಳು; ಆಕೆ ಪಿತೃಮನೋಭವೆ, ಸಕಲಗುಣಗಣಾಲಂಕೃತೆ. ಸಾಕ್ಷಾತ್ ದಾಕ್ಷಾಯಿಣಿಯೇ ತನ್ನ ತಪಸ್ಸಿನ ಫಲವಾಗಿ ಲಭಿಸಿದ್ದರಿಂದ ಅವಳಿಗೆ ಅವಳಲ್ಲಿ ಅಮಿತ ವಾತ್ಸಲ್ಯ. ಶಿವನ ಅರ್ಧಾಂಗಿನಿಯೇ ಮಗಳಾಗಿರುವಳೆಂಬುದನ್ನು ಮರೆತು, ಅವಳು ಯೌವನ ತಳೆದಾಗ ತಾಯಿ–ತಂದೆಗಳು ವರನ ಚಿಂತೆಗೊಳಗಾದರು. ಮಗಳು ಹೇಮಕೂಟಕ್ಕೆ ತೆರಳಿದಾಗ ಕಾಡಿನಲ್ಲಿ ಅವಳು ಹೇಗಿರುವಳೋ ಎಂಬ ಮರುಕ ಮೇನೆಗೆ. ಅವಳು ಆದರ್ಶ ಪತ್ನಿ, ಸಾತ್ವಿಕ ಸತಿ, ತಪಸ್ವಿನಿ, ಮಮತೆಯ ಮಡು; ಪರ್ವತರಾಜನ ಸಂಸಾರ ಅವಳಿಂದ ಹಗುರವೆನಿಸಿತ್ತು.

ಹರಿಹರನ ನಾರದ ಸ್ವಯಂ ಕವಿಯ ಗುರು ಶಂಕರಮೂರ್ತಿಯೇ! ಶೈವನಿಧಿ. ಹಿಮವಂತನ ಸಮ್ಮುಖದಲ್ಲಿ ಕುವರಿ ಗಿರಿಜೆಯನ್ನು ಕಂಡೊಡನೆಯೇ ಆತ 'ಜಗದಂಬೆ' ಎಂದು ಸಿಂಹವಿಷ್ಟರದಿಂದ ಎದ್ದು ಪೊಡಮಡುತ್ತಾನೆ. 'ನವರತ್ನಕ್ಕೆ ಅಬ್ಧಿ, ಚಿಂತಾಮಣಿಗೆ ಮರಡಿ, ಮುತ್ತಿಂಗೆ ಸಿಂಪಿ ಕಾರಣವಾದಂತೆ ನೀವು ಮಹಾದೇವಿಯ ಜನನಕ್ಕೆ ಕಾರಣರೆಂದು ಎಚ್ಚರಿಸುತ್ತಾನೆ. ಲೋಕಹಿತಕ್ಕಾಗಿ ಪಾರ್ವತಿ–ಪರಮೇಶ್ವರರ ವಿವಾಹ ಮಾಡಿಸುವ ಉದ್ದೇಶ ಅವನದು. ಅದಕ್ಕಾಗಿಯೇ ಅವನು ಗಿರಿಜೆಯನ್ನು ಶಿವನಿದ್ದಲ್ಲಿಗೆ ಕಳುಹಿಸುವ ಸಲಹೆ ಮಾಡಿದ್ದು. ಗಿರಿಜಾಕಲ್ಯಾಣದ ನಾರದ ಸಾಹಿತ್ಯದಲ್ಲಿ ಇತರತ್ರ ಬರುವ ನಾರದನಂತೆ 'ಕಲಹಪ್ರಿಯನಲ್ಲ'. ಆತ ಶಿವೋಪಾಸಕ, ಲೋಕಹಿತಸಾಧಕ.

ಗಿರಿಜಾಕಲ್ಯಾಣದಲ್ಲಿ ಚಿತ್ರಿತನಾಗಿರುವ ಮನ್ಮಥ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಚಿತ್ರಿತನಾಗಿರುವ ವಿಲಾಸದ ಅಧಿದೇವತೆ ಕಾಮದೇವನಲ್ಲ, ಆತ ಲೋಕಹಿತಕ್ಕಾಗಿ ಆತ್ಮಬಲಿದಾನವೆಸಗಿದ ಮಹಾತ್ಯಾಗಿ. ತಾರಕನ ಉಪಟಳದಿಂದ ಬಸವಳಿದು, ಅವನೊಡನೆ ಏರ್ಪಟ್ಟ ಯುದ್ಧದಲ್ಲಿ ಪರಾಭವವನ್ನು ಹೊಂದಿ, ಗಿರಿ ಗುಹೆಗಳಲ್ಲಿ ತಲೆಮರಸಿಕೊಂಡಿದ್ದ ಹರಿ-ವಿರಿಂಚಿ-ಪುರಂದರ ಮುಂತಾದ ದೇವತೆಗಳು ಒಂದೆಡೆ ಕಲೆತು ತಾರಕನ ಅಳಿವಿಗಾಗಿ ಯೋಚಿಸಿದರು. ಶಿವಸುತನ ಹೊರತು ತಾರಕನು ನಾಶವಾಗುವುದಿಲ್ಲ ಎಂದು ತಿಳಿದ ದೇವತೆಗಳು ಶಿವ–ಪಾರ್ವತಿಯರ ವಿವಾಹವನ್ನು ಅಚಿರದಲ್ಲಿ ಏರ್ಪಡಿಸಲು ನಿರ್ಧರಿಸಿದರು. ಪರಮೇಶ್ವರನ ಸಮಾಧಿಭಂಗ ಮಾಡುವ ದಾರುಣ ಕಾರ್ಯ ಮದನನಿಂದಲ್ಲದೆ ಸಿದ್ಧಿಸುವಂತಿರಲಿಲ್ಲ. ಬೃಹಸ್ಪತಿಯ ಮೂಲಕ ದೇವಸಂದೇಶವನ್ನು ಅರಿತ ಮದನ ದೇವಸಭೆಗೆ

ಆಗಮಿಸಿದ. ಕುಶಲಪ್ರಶ್ನೆಯ ಬಳಿಕ ಗೋವಿಂದನು "ಅತ್ಯಧಿಕ ತಪಸ್ಸಿನಲ್ಲಿರುವ ಹರನ ಸಮಾಧಿಯನ್ನು ಚಲಿಸಿ ಗಿರಿಸುತೆಯಲ್ಲಿ ನೆರಪುವ ಈ ಕಾರ್ಯ ಸಾಧಿಸಲು ನೀನೇ ಸಮರ್ಥ!" ಎಂದಾಗ ಮದನ "ಅದು ನನ್ನಿಂದಾಗದು, ಹರನು ಸಾಮಾನ್ಯನೇ? ಶೂಲಿಯ ತಪಸ್ಸನ್ನು ಕೆಡಿಸುವುದರಿಂದ ನನಗೆ ಗಂಡಾಂತರ ತಪ್ಪಿದ್ದಲ್ಲ; ಸೂರ್ಯನ ಮುಂದೆ ಕತ್ತಲೆಯನ್ನು, ಸಿಂಹದ ಮುಂದೆ ಆನೆಯನ್ನು, ಸಿಡಿಲಿನ ಮುಂದೆ ಸರ್ಪವನ್ನು ಅಟ್ಟುವಂತೆ ನೀವು ನನ್ನನ್ನು ಹರನಲ್ಲಿಗೆ ಕಳಿಸುವಿರಿ" ಎಂದು ಆತ ದೈನ್ಯದಿಂದ ಬೇಡಿಕೊಂಡ. ಆದರೆ ಮುಂದುವರಿದ ಮುಕುಂದ "ಬಹಳ ಮಾತುಗಳಿಂದೇನು ಪ್ರಯೋಜನ? ನಿನ್ನಿಂದ ಸಕಲ ಜಗವು ಸುಖದಿಂದಿರುವುದಾದರೆ ನಿನ್ನೊಬ್ಬನ ಜೀವವನ್ನು ಲೆಕ್ಕಿಸುವುದೆ?" ಎಂದು ಭುಜ ತಟ್ಟಿದ. ಅದರಿಂದ ಉತ್ಸಾಹಗೊಂಡ ಮನ್ಮಥ "ಸಕಲ ಭುವನವೂ ನನ್ನಿಂದಾಗಿ ಪರಮ ಸುಖದಿಂದ ಇರುವುದಾದರೆ ನನ್ನ ಜೀವವನ್ನು ಅರ್ಪಿಸಲು ನಾನು ಸಿದ್ಧ? ನಾನೆಷ್ಟರವನು? ನನಗೆ ಇಂದೇ ನೂರು ವರ್ಷ ತುಂಬಿತೆಂದು ಭಾವಿಸುವೆನು!" ಎಂದು ಮನ್ಮಥ ಸಂತೋಷದಿಂದ ಒಪ್ಪಿಗೆಯಿತ್ತು ಕಾರ್ಯೋನ್ಮುಖನಾದ. ಆತ ಪಾರ್ವತಿಯ ನೆರವು ಪಡೆದು ಶಿವಸಮಾಧಿಯನ್ನು ಭಂಗಮಾಡಿ, ಹರನ ಹಣೆಗಣ್ಣುರಿಗೆ ತುತ್ತಾದ. ಪ್ರಾಣವನ್ನು ತೆತ್ತಾದರೂ ಲೋಕಹಿತ ಸಾಧಿಸುವ ಅವನ ಉದಾತ್ತ ಆದರ್ಶ ಇಲ್ಲಿ ಗಮನಿಸತಕ್ಕುದು. ಹರಿಹರನ ಮದನ ಆತ್ಮವಿಶ್ವಾಸಿ, ಸುಖಲೋಲುಪನಾದರೂ ಹಿರಿಯರ ಆಜ್ಞೆಯನ್ನು ಗೌರವಿಸುವವನು. ವಿಧಿಯಿಲ್ಲದೆ ಇಂಥ ಮಹಾತ್ಮನಿಗಾದ ದುರಂತವನ್ನು ಕಂಡ ಮೂರು ಲೋಕಗಳೂ ಮರುಗಿದವು.

ಮನ್ಮಥನ ಆದರ್ಶ ಪತ್ನಿ ರತೀದೇವಿ. ಆಕೆ ಪತಿಭಕ್ತಿಪರಾಯಣೆ. ಪತಿಯ ವಿಯೋಗದಿಂದ ಅವಳಿಗಾದ ದುಃಖ ಅಪಾರ. ಅಲ್ಲಿ ಕರುಣಾರಸ ಮಡುಗಟ್ಟಿ ನಿಂತಿದೆ. ಇಲ್ಲಿ ಕವಿಯ ಶಕ್ತಿ ಕಾಳಿದಾಸನ ರತಿಪ್ರಲಾಪಕ್ಕೆ ಹೊಯ್ಕಯ್ಯಾಗಿದೆ. ಲೋಕಹಿತ ಕಾರ್ಯದಲ್ಲಿ ಪತಿ ತನ್ನನ್ನು ಒಪ್ಪಿಸಿಕೊಳ್ಳಲು ನಿರ್ಧರಿಸಿದಾಗ ಅವಳ ಎದೆ ಅಳುಕಲಿಲ್ಲ. ಪತಿಯನ್ನು ತಡೆಯಲಿಲ್ಲ. ಆಕೆಯ ಲೋಕಹಿತ ಕಾರುಣ್ಯ, ತ್ಯಾಗ ಅಜೇಯ. ಗಿರಿಜೆಯ ಕರುಣೆಯಿಂದ ರತಿ ಮತ್ತೆ ಪತಿಯನ್ನು ಅನಂಗನಾಗಿ ಪಡೆದ ಆದರ್ಶ ಪತ್ನಿ, ಮಹಿಳಾರತ್ನ ಅವಳು.

ಈ ಕಾವ್ಯದಲ್ಲಿ ಬಂದಿರುವ ಬೃಹಸ್ಪತಿ ಮೇಧಾವಿ; ನೀತಿಶಾಸ್ತ್ರವಿಶಾರದ. ದೇವಹಿತಕ್ಕಾಗಿ ತಾರಕನಲ್ಲಿ ರಾಯಭಾರಕ್ಕಾಗಿ ಹೋಗಿ ವಿಫಲನಾಗಿ ಹಿಂದಿರುಗಿದ. ಮನ್ಮಥನಲ್ಲಿಗೂ ಹೋಗಿ ಬಂದ. ಮದನನ ಆಸ್ಥಾನದಲ್ಲಿದ್ದ ಲಲನೆಯರ ಸೌಂದರ್ಯ ಸೌಕುಮಾರ್ಯಗಳಿಗೆ ಆತ ಅಳುಕಿದ. "ಮನದೊಳ್ ಅಳಿಪುತ್ತಾ, ಬುದ್ಧಿಯೊಳ್ ಬೆವರುತ್ತಾ, ಚಿತ್ತದೊಳ್ ಕಾತರಂಬಡುತ್ತಾ ಇದ್ದ"ನೆಂದು ವರ್ಣಿಸಹೊರಟ ಕವಿಗೆ "ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿ ಕರ್ಷತಿ" (ಮಹಾಭಾರತ) ಎಂಬ ನುಡಿ ನೆನಪಾಗಿರಲಿಲ್ಲವೆಂದು ಹೇಳಲು ಸಾಧ್ಯವೆ?

ತಪೋಬಲದಿಂದ ಬ್ರಹ್ಮನನ್ನು ಮೆಚ್ಚಿಸಿ ಅತುಲ ಸಾಮರ್ಥ್ಯವನ್ನು ಪಡೆದ ತಾರಕ

ಲೋಕಕಂಟಕನಾದದ್ದು "ವಿನಾಶಕಾಲೇ ವಿಪರೀತ ಬುದ್ಧಿಃ" ಎಂಬ ನಾಣ್ಣುಡಿಗೆ ಅನುಗುಣವಾಗಿತ್ತು. ಆದ್ದರಿಂದಲೇ ಅವನು ಬೃಹಸ್ಪತಿಯ ಬುದ್ಧಿವಾದವನ್ನು ಮೀರಿದದ್ದು. ಆತ ಆತ್ಮವಿಶ್ವಾಸಿ; ಶಿವಕುಮಾರನಿಂದಲ್ಲದೆ ಅವನ ಅಳಿವಿಲ್ಲವೆಂದು ದೇವತೆಗಳು ನಿರ್ಧರಿಸಿ ಗಿರಿಜೆಯ ಕಲ್ಯಾಣಕ್ಕಾಗಿ ಪ್ರಯತ್ನಿಸಬೇಕಾಯಿತು. ಹರಿಹರನ ತಾರಕ ಧೀರ, ವೀರ, ಜೊತೆಗೆ ಹಠವಾದಿ.

ಜಯೆವಿಜಯೆಯರು ಪಾರ್ವತಿಯ ಗೆಳತಿಯರು. ನೆರಳಿನಂತೆ ಅವರು ಆಗಜೆಯನ್ನು ಅನುಸರಿಸಿದರು. ಪಾರ್ವತಿಯ ಪೂಜೆಗೆ ಹೂವು ಹಣ್ಣು ಬಿಡಿಸಿ ತರುವುದು, ಮಾಲೆ ಕಟ್ಟುವುದು ಮುಂತಾಗಿ ಅವಳಿಗೆ ಎಲ್ಲ ಹಂತಗಳಲ್ಲಿಯೂ ನೆರವಾಗುತ್ತಿದ್ದರು. ಅವಳು ಕಠೋರ ತಪಸ್ಸಿಗೆ ತೊಡಗಿದಾಗ, ವಟು ಆಗಮಿಸಿದಾಗ ಅವನನ್ನು ಸತ್ಕರಿಸಿ, ಸಂಭಾಷಿಸಿದರು. ಇವರು ಗಿರಿಜೆಯ, ಸೇವಕಿಯರೂ, ಆಪ್ತರೂ ಆಗಿದ್ದರು.

## ೫. ಶೈಲಿ

ಕಾವ್ಯವಸ್ತುವನ್ನು ಹೃದಯಂಗಮವಾಗಿ ಹೇಳುವ ರೀತಿಗೆ ಶೈಲಿ ಎಂದು ಹೆಸರು. ರೀತಿ ಎಂಬುದು ಇದಕ್ಕೆ ಬೇರೆ ಹೆಸರು. ಲಾಕ್ಷಣಿಕರಲ್ಲಿ ಒಬ್ಬನಾದ ವಾಮನ "ರೀತಿಯು ಕಾವ್ಯದ ಆತ್ಮ" ಎಂದಿದ್ದಾನೆ. ಕಾವ್ಯ ಬರೆಯುವಾಗ ಕವಿಯಲ್ಲಿ ಯಾವ ಬಗೆಯ ಭಾವ ಮೂಡುವುದೋ ಅದನ್ನು ಓದುವವರೂ ಕೇಳುವವರೂ ಅನುಭವಿಸಿ ತನ್ಮಯತೆಯನ್ನು ಹೊಂದಿದರೆ ಅದೇ ಉತ್ತಮ ಕಾವ್ಯ. ಅಂಥ ಕಾವ್ಯದ ಪ್ರತಿ ಶಬ್ದವೂ ಜೀವಕಳೆಯಿಂದ ತುಂಬಿರುತ್ತದೆ, ಇಂಥ ಶಬ್ದಗಳ ಸಮುಚಿತ ಪ್ರಯೋಗವೇ ಶೈಲಿ, ರಸಪುಷ್ಟಿ ಮಾತ್ರವೆ ಅಲ್ಲ, ಅದೊಂದು ನವ್ಯಸೃಷ್ಟಿ!

ಉತ್ತಮ ಶೈಲಿಯ ಎಲ್ಲ ಗುಣಗಳೂ ಹರಿಹರನಲ್ಲಿವೆ. ಪ್ರತಿಯೊಬ್ಬ ಕವಿಗೂ ತನ್ನದೇ ಆದ ವಿಶಿಷ್ಟ ಶೈಲಿಯುಂಟು. ಈ ದಿಶೆಯಲ್ಲಿ ಹರಿಹರನದೂ ಒಂದು ವಿಶಿಷ್ಟ ನವ್ಯ ಶೈಲಿ. ಆತ ಘನ ವಿದ್ವಾಂಸ. ಸಂಸ್ಕೃತ ಕನ್ನಡ ಭಾಷೆಗಳ ಮೇಲೆ ಅವನ ಪ್ರಭುತ್ವವುಂಟು. ತಮಿಳು ತೆಲುಗು ಭಾಷೆಗಳ ಪರಿಚಯವೂ ಆತನಿಗಿತ್ತು, ಸರಿಯಾದ ಅರ್ಥಭಾವಗಳನ್ನು ಅನುಸರಿಸಿ, ಶಬ್ದಗಳು ಉತ್ತಮ ಶಯ್ಯೆಯಲ್ಲಿ ಹೊಂದಿಕೊಂಡು ಗಂಭೀರ ಪ್ರವಾಹದಂತೆ ಅಡೆತಡೆಯಿಲ್ಲದೆ ಸಾಗುವುದು ಅವನ ವೈಶಿಷ್ಟ್ಯ. ಅವು ಪ್ರೌಢವೂ, ಗಂಭೀರವೂ ಆಗಿ ಅರ್ಥಭಾವಗಳನ್ನು ಪೋಷಿಸುವುದಲ್ಲದೆ ನಿರರ್ಗಳವಾಗಿ ಓಡುವುವು. ಅಲ್ಲಲ್ಲಿ ಶಬ್ದ–ಅರ್ಥಾಲಂಕಾರಗಳನ್ನು ಹಿತಮಿತವಾಗಿ ಬಳಸಲಾಗಿದೆ. ಯಮಕ, ಪ್ರಾಸ, ಶ್ಲೇಷ, ಉಪಮಾ, ರೂಪಕ, ಸ್ವಭಾವೋಕ್ತಿ, ವಕ್ರೋಕ್ತಿ, ಅರ್ಥಾಂತರನ್ಯಾಸ ಮೊದಲಾದುವು ಸಹಜಸುಂದರವಾಗಿ ಪ್ರಯುಕ್ತವಾಗಿವೆ. ಅವನೇ ಹೇಳುವಂತೆ

ಅತುಳಪದಾರ್ಥಮರ್ಥದನುವೃತ್ತಿ ಪದಂ ಪದದಿಚ್ಛೆಬಂಧಮೂ
ರ್ಜಿತಪದಬಂಧಸಂಧಿನವರೀತಿ ಸುರೀತಿ ಗುಣಂ ಸದೃಕ್ಷಲಂ

ಕೃತಿ ಸದಲಂಕೃತಿಪ್ರತಿಮಮೊಪ್ಪುವ ಭಾವಮನೂನಭಾವದು
ನ್ನತರಸವೆಂದು ಸತ್ಕವಿಗಳಾಲಿಸೆ ಪೇಳ್ದಪೆನೀ ಪ್ರಬಂಧಮಂ ॥

(ಗಿ. ಕ. ೧–೧೧)

ಇಲ್ಲಿ ಹೇಳಿರುವ ಎಲ್ಲ ಗುಣಗಳೂ ಗಿರಿಜಾಕಲ್ಯಾಣದಲ್ಲಿವೆ, ಎಂದು ಆತನ ಆಶಯ. ತನ್ನ ಕಾವ್ಯ ಅಖಿಳ ಜನಸೇವ್ಯವಾಗಿದೆ ಎಂಬುದು ಆತನ ವಿಶ್ವಾಸ. ಹಿಮವತ್ಪರ್ವತದ ತಪ್ಪಲಿನಲ್ಲಿರುವ ತಪೋವನ, ತಪಸ್ವಿಗಳ ಜೀವನ, ಬೇಟೆ, ಶಬರ–ಶಬರಿಯರು, ಹಂಪೆ, ಹೇಮಕೂಟ, ವಿರೂಪಾಕ್ಷನ ಪೂಜೆ, ಚಳಿ, ಮಳೆ, ಬೇಸಗೆ, ಪಾರ್ವತಿಯ ಕಠೋರ ತಪಸ್ಸು, ಮುಂತಾದ ವರ್ಣನೆಗಳಲ್ಲಿ ಕವಿಪ್ರತಿಭೆ ಬೆಳಗಿದೆ. ರಸೋತ್ಕರ್ಷವನ್ನು ಸೂಚಿಸುವ ಪದ ಛಂದಸ್ಸುಗಳಿಗೆ ಈ ಕೆಳಗಿನ ಪದ್ಯಗಳನ್ನು ಉದಹರಿಸಬಹುದು.

**ಕಾಡುಹಂದಿ**

ಧೀರಂ ಪಿಂಗಳಲೋಚನಂ ನಿಶಿತದಂಷ್ಟ್ರಂ ಭೀಷ್ಮವಕ್ತ್ರಂ ಘನ
ಕ್ರೂರಂ ವಜ್ರಸಮಾನರೋಮನಿಚಯಂ ಸಂಪೂರ್ಣಕಾಯಂ ಸ್ಥಿರಂ
ಶೂರಂ ರೌದ್ರಗಭೀರಚಿತ್ತನತಿಮಾನಿ ಸ್ವಲ್ಪಪುಚ್ಛಾನ್ವಿತಂ
ಘೋರಾರಣ್ಯಚರಂ ವಿರಾಜಿಸಿಮದುದ್ಯದ್ಧೀಕರಂ ಸೂಕರಂ (೧-೧೦೦)

**ಮಾವಿನ ಹಣ್ಣು ಸವಿಯುವ ಗಿಳಿ**

ಬಿಗಿಯಪ್ಪಿ ಮೊಗಮನಿಟ್ಟಾ
ಲಿಗಳವು ನಸುಮುಚ್ಚಿ ಪಕ್ಷಯುಗಮೆಳಲೆ ರಸಂ
ದೆಗೆವ ದನಿ ನಿಮಿರೆ ನಾಲಗೆ
ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ ॥ (೨-೩೯)

**ಮಲ್ಲಿಗೆಯ ಮಕರಂದ ಹೀರುವ ದುಂಬಿ**

ಬಿಗಿಯಪ್ಪಿ ಪುಷ್ಪರಸಮಂ
ತೆಗೆದೀಂಟಿ ತುಳುಂಕಿ ತೂಱಿ ತೇಂಕಾಡಿ ಮನಂ ।
ಮಿಗೆ ಸೊರ್ಕಿ ಜಿನುಗಿ ಜೀವಿಸಿ
ಮುಗಮುಗಿಸುತ್ತೊಂದು ಮಧುಕರಂ ಮಲ್ಲಿಗೆಯೊಳ್ ॥ (೨-೬೩)

**ಶುನಕನಟ್ಟಿದ–ಶಶಕ**

ನಡೆನಡೆದು ನಸುಬಳುಂಕು
ತ್ತೆಡಬಲನಂ ನೋಡಿ ಕೂಡೆಯಾಘ್ರಾಣಿಸುತುಂ ।
ಗಿಡುವಿನ ಸರುವಿನ ದಡುವಿನ
ಮಡುವಿನ ಬಳಿಗೊಂಡು ಶುನಕನಟ್ಟಿತು ಮೊಲನಂ ॥

ಅಟ್ಟಿದೊಡೆ ತಿರುಗಿ ಮುರಿಮುರಿ
ದೊಟ್ಟೈಸುತೆ ಕೊಂಕಿ ಪರಿಯುತೆಡನಂ ಬಲನಂ
ತುಟ್ಟಿಸುತೆ ನಿಂದು ನಿಲ್ಲದೆ
ನಿಟ್ಟೋಟದೊಳೋಡಿತೆಸೆವ ಮುಸಕದ ಶಶಕಂ ॥ (೧-೮೫, ೮೬)

ಮುಂತಾದುವು.

ಕಾವ್ಯದಲ್ಲಿ ಶೃಂಗಾರ, ವೀರ, ರೌದ್ರ, ಹಾಸ್ಯ ಮುಂತಾದ ರಸಗಳು ಅಭಿವ್ಯಕ್ತವಾಗಿವೆ. ಕವಿಯ ಶಿವಭಕ್ತಿ ಪರಾಕಾಷ್ಠತೆಯನ್ನು ಹೊಂದಿದೆ. ಭಕ್ತಿಯ ಆವೇಶದಲ್ಲಿ ಕವಿ ತನ್ಮಯನಾಗುತ್ತಾನೆ. ಅಲ್ಲಿ ಪ್ರಸನ್ನತೆ, ಮಾಧುರ್ಯ, ಓಜಸ್ಸುಗಳು ಮೆರೆದಿವೆ. ಶೃಂಗಾರವು ಕಾವ್ಯದ ಬಹು ಭಾಗವನ್ನು ಆಕ್ರಮಿಸಿದೆ. ವರ್ಣನೆಗಳಲ್ಲಿ ಹರಿಹರ ಬಾಣನನ್ನು ನೆನಪಿಸುವನು.

## ೬. ಹರಿಹರನ ವೈಶಿಷ್ಟ್ಯ

ಕಾವ್ಯರಚನೆಯಲ್ಲಿ ಪೂರ್ವದ ಮಹಾಕಾವ್ಯಗಳ ಧಾಟಿಯನ್ನು ಮೀರಿ ನವ್ಯ ಮಾರ್ಗವನ್ನು ನಿರ್ಮಿಸಿದ ಕೀರ್ತಿ ಹರಿಹರನಿಗೆ ಮೀಸಲು. ಕವಿಗಳು ಸಾಮಾನ್ಯವಾಗಿ ತಮಗೆ ಆಶ್ರಯ ನೀಡಿದ ರಾಜರನ್ನು ಕುರಿತು ಅವರನ್ನು ತಮ್ಮ ಕೃತಿಯ ಮಹಾನಾಯಕರಿಗೆ ಹೋಲಿಸಿ ಅವರನ್ನು ಹೊಗಳುತ್ತಿದ್ದುದಕ್ಕೆ ಪಂಪ, ರನ್ನರ ಕೃತಿಗಳೇ ನಿದರ್ಶನ, ಆದರೆ ಶಿವಶರಣರು ಅದಕ್ಕೆ ಅಪವಾದ. ನರಸ್ತುತಿಮಾಡದೆ ಇವರು ತಮ್ಮ ಇಷ್ಟದೈವವಾದ ಶಿವನನ್ನೂ ಅವನ ಭಕ್ತರನ್ನೂ ಕುರಿತು ಕಾವ್ಯಗಳನ್ನು ರಚಿಸಬೇಕು ಎಂಬ ಹೆದ್ದಾರಿ ಹಾಕಿಕೊಟ್ಟವರಲ್ಲಿ ಮೊದಲಿಗ ಹರಿಹರ. ಈ ದೃಷ್ಟಿಯಿಂದಲೇ ಅವನು ದೋರಸಮುದ್ರದ ರಾಜಾಸ್ಥಾನವನ್ನು ತೊರೆದು ಹಂಪೆಗೆ ಬಂದದ್ದು, ಶಿವನ ಮತ್ತು ಶಿವಭಕ್ತರ ಸ್ತುತಿರೂಪ ಚರಿತ್ರೆಗಳನ್ನು ಹಾಡತೊಡಗಿದ್ದು. 'ಹರಿಹರನ ಪುತ್ರ'ನೆಂಬ ಬಿರುದಾಂತ ರಾಘವಾಂಕ ಕವಿ 'ಹರಿಶ್ಚಂದ್ರಕಾವ್ಯ' ರಚಿಸಿದ್ದೂ ಸಹ ಅವನಿಗೆ ಸೇರಲಿಲ್ಲ.

ಹರಿಹರ ಶಿವಾನುಭಾವಿ. ಆತ ವಿರೂಪಾಕ್ಷನ ಸಾನ್ನಿಧ್ಯದಲ್ಲಿ ಹಲವು ಕಾಲ ತಪಸ್ಸು ಮಾಡಿ ಶಿವಸಾಕ್ಷಾತ್ಕಾರ ಪಡೆದವನು. ಆತನ ತಪಸ್ಸಾಧನೆಯ ಫಲ ಅವನ ಕೃತಿಗಳು. ಕವಿಯ ದೃಷ್ಟಿಯಲ್ಲಿ ಈ ಸೃಷ್ಟಿಯೆಲ್ಲವೂ ಶಿವಮಯ. ಅವನ ಕೃತಿಗಳಲ್ಲಿ ಈ ಭಾವ ವ್ಯಕ್ತವಾಗಿದೆ. ಪಂಪಾಶತಕದ ಪದ್ಯಗಳಲ್ಲಿ, ಗಿರಿಜಾಕಲ್ಯಾಣದ ವಿರೂಪಾಕ್ಷ ಪೂಜೆಯಲ್ಲಿ, ರಗಳೆಗಳ ಕಥಾನಾಯಕರ ಚರಿತ್ರೆಗಳಲ್ಲಿ ಅದು ಪ್ರತಿಬಿಂಬಿತವಾಗಿದೆ. ಹಂಪೆಯ ವಿರೂಪಾಕ್ಷನ ಸಾನ್ನಿಧ್ಯದಲ್ಲಿ ಕವಿ ತನ್ನ ದೈನಂದಿನ ಕ್ರಮವನ್ನು ಹೇಗೆ ನಡೆಸುತ್ತಿದ್ದನೆಂಬುದು ಬಸವರಾಜದೇವರ ರಗಳೆಯುಲ್ಲಿ ಬರುವ ಬಸವಣ್ಣನವರ ದಿನಚರಿಯಲ್ಲಿ ಕಂಡಿದೆ. 'ನಸುಕು ಹರಿಯುವುದಕ್ಕೆ ಮುನ್ನವೇ ಎದ್ದು, ಇಷ್ಟದೈವ ವಿರೂಪಾಕ್ಷನನ್ನು ಸ್ಮರಿಸಿ, ಶಿವಾರ್ಚನೆಗಾಗಿ ಪತ್ರಪುಷ್ಪಗಳನ್ನು ತಂದು ಮಾಲೆ ಮಾಡಿ, ಹೊಳೆಯಲ್ಲಿ ಮಿಂದು, ವಿರೂಪಾಕ್ಷನ ಸನ್ನಿಧಿಗೆ ಬಂದು ಭಕ್ತಿಭರದಿಂದ ಪೂಜಿಸಿ, ಪತ್ರಪುಷ್ಪಗಳಿಂದ ಅಲಂಕರಿಸಿ

ಶಿವನ ಹಾಗೂ ಶಿವಶರಣರ ಮಹಿಮೆಗಳನ್ನು ಹಾಡುವುದರಲ್ಲಿಯೇ ತನ್ಮಯನಾಗುತ್ತಿದ್ದುದು ಲಿಂಗಾರ್ಚನೆಯ ರಗಳೆಯಲ್ಲಿ ಸ್ಪಷ್ಟವಾಗಿದೆ. ಆತನ ಜೀವನ ಶುದ್ಧ, ಪುನೀತ, ಲೌಕಿಕ ವ್ಯವಹಾರನಿವೃತ್ತ. ತಿರುನೀಲಕಂಠ, ನಂಬಿಯಣ್ಣ ಮೊದಲಾದವರ ರಗಳೆಗಳಲ್ಲಿ ಲೌಕಿಕರಿಂದ ಶಿವಶರಣರಿಗಾಗುತ್ತಿದ್ದ ತೊಂದರೆಗಳನ್ನು ಉಲ್ಲೇಖಿಸಲಾಗಿದೆ.

ಹರಿಹರ ಆಶಾವಾದಿ, ಆತ ಕಾಳಿದಾಸನಂತೆ 'ನಾನು ವಿದ್ವಾಂಸರು ಒಪ್ಪುವಂತೆ ಕೃತಿ ರಚಿಸಲು ಅಸಮರ್ಥ' (ಆ ಪರಿತೋಷಾದ್ವಿದುಷಾಂ ನ ಸಾಧು ಮನ್ಯೇ ಪ್ರಯೋಗ ವಿಜ್ಞಾನಂ) "ಅಲ್ಪಮತಿಯುಳ್ಳ ನಾನೆತ್ತ ; ಸೂರ್ಯನಿಂದ ಹುಟ್ಟಿದ ರಘುವಂಶವೆತ್ತ !" (ಕ್ವಸೂರ್ಯ ಪ್ರಭವೋ ವಂಶಃ, ಕ್ವ ಚಾಲ್ಪವಿಷಯಾ ಮತಿಃ) ಮುಂತಾಗಿ ದೈನ್ಯವನ್ನು ಹೇಳಿಕೊಳ್ಳುವುದು ಅವನಿಗೆ ಹಿಡಿಸುವುದಿಲ್ಲ ; ಬದಲಾಗಿ "ತನ್ನ ಕಾವ್ಯವನ್ನು ಪರೀಕ್ಷಿಸುವವನಿಗೆ ಎಂಟೆದೆ ಬೇಕು" ಎಂಬ ತನ್ನ ಮತ್ತು "ವಾಗ್ದೇವಿ ತನಗೆ ಮರುಳಾಗಿ ಬೆನ್ನು ಹತ್ತಿರುವಳು (ಯಂ ಬ್ರಹ್ಮಾಣಮಿಯಂ ದೇವೀ ವಾಗ್ವಶ್ಯೇವಾನುವರ್ತತೇ" ಎಂಬ ಭವಭೂತಿಗಳಂತೆ "ತನ್ನಲ್ಲಿ ಕಾವ್ಯ ರಚಿಸುವ ಶಕ್ತಿಯಿದೆ ; ತನ್ನ ಕಾವ್ಯ ಜಗನ್ಮಾನ್ಯ" ಎಂಬ ಆತ್ಮವಿಶ್ವಾಸವುಳ್ಳವನು. ರಸಾವೇಶ ಮತ್ತು ಪದಬಂಧಗಳಲ್ಲಿ ಸಂಸ್ಕೃತದಲ್ಲಿ "ಭವಭೂತಿಗೆ" ಇರುವ 'ವಶ್ಯವಾಕ್' ಎಂಬ ಪ್ರಶಸ್ತಿ ಕನ್ನಡದಲ್ಲಿ ಹರಿಹರನಿಗೆ ಒಪ್ಪುತ್ತದೆ. ಹರಿಹರನ ಕಾವ್ಯ

ಸುರತರುವಿನಂತೆ ಸುಜನರ
ಸಿರಿಯಂತೆ ಸರೋಜದಂತೆ ಸುಧೆಯಂತೆ ಸುಧಾ ।
ಕರಕಿರಣದಂತೆ ಹಂಪೆಯ
ಹರಿದೇವನ ಕಾವ್ಯಮಖಿಳಜನಸೇವ್ಯಂ ॥ (ಗಿ. ಕ. ೧-೧೭)

ಅಷ್ಟೇ ಅಲ್ಲ ; ಅವನ ಕಾವ್ಯ

ಪ್ರಿಯವಚನದಂತೆ ಪುಣ್ಯತತಿಯಂತೆ ಸುಧಾಕರನಂತೆ ಕೀರ್ತಿಮು
ಗ್ದೆಯ ಕಡುನೇಹದಂತಮೃತದಂತೆ ವಸಂತಕನಂತೆ ಪುಷ್ಪಮಾ–
ಲೆಯ ಪೊಸಗಂಪಿನಂತೆ ಮಲಯಾನಿಲನಂತೆ ಮರಾಳನಂತೆ ಹಂ–
ಪೆಯ ಹರಿದೇವಸುನ್ನತ ಕೃತಿಪ್ರಸರಂ ಭುವನೈಕ ಭಾಸುರಂ ॥

ಆದ್ದರಿಂದಲೇ ಅದು—

ಸೇವ್ಯಂ ಸೌಖ್ಯಂ ಪ್ರಸನ್ನಂ ನವರಸಭರಿತಂ ಪುಣ್ಯಪುಂಜಂ ವಾ
ಗ್ದೇವ್ಯಾವಾಸಂ ವಿವೇಕೋನ್ನತಜಲನಿಧಿ ಸಂಸಾರವಿಶ್ರಾಮದೇಶಂ
ದಿವ್ಯಜ್ಞಾನೋಕ್ತಿಮಾರ್ಗಂ ನಿರತಿಶಯಪದಂ ಕೀರ್ತಿಪೇಳ್ವೆತ್ತಿಯಿಂಪಂ
ಕಾವ್ಯಂ ಕಲ್ಪಾಂತಸ್ಥಾಯಿಯೆನಿಪ ನುಡಿ ಸತ್ಯಂ ಕವೀಶಾಧಿಪತ್ಯಂ ॥

ಇಂಥ ಮಹಾಕಾವ್ಯದ ಸವಿಯನ್ನು ಸಹೃದಯರು ಅನುಭವಿಸಿ ಆನಂದಿಸಲಿ.

# ಕಥಾಗರ್ಭಂ

ಸ್ವಸ್ತಿ ಸಮಸ್ತ ಸಮುದ್ರ ಮುದ್ರಿತ ಧರಣೀಕಾಂತಾನಾಭೀಕಮಲ ಮಧ್ಯಸ್ಥಿತ ಕರ್ಣಿಕೆಯಂತಿರ್ಪ ಮೇರುವಿನ ದಕ್ಷಿಣ ದಿಕ್ಕಿನಲ್ಲಿ ಮೂಡಣ ಜಲಧಿಯಿಂ ಪಶ್ಚಿಮವಾರ್ಧಿ ಪರ್ಯಂತಂ ಪರ್ವಿದ ಪರ್ವತಾಧೀಶಂ ಗಿರಿರಾಜನೆಂಬ ನಾಮದಿಂದೋಷಧಿಪ್ರಸ್ಥಮೆಂಬ ಪುರದೊಳಿರ್ದು ಪಿತೃಗಳ ಮನದೊಳ್‌ಪುಟ್ಟಿದ ಮೇನಾದೇವಿಯಂ ವಿವಾಹಮಾಗಿ ಮೈನಾಕನೆಂಬ ಪುತ್ರನಂ ಪಡೆದು, ಪಲವು ದಿನಂ ಸುಖದೊಳಿರುತ್ತುಂ ; ದಾಕ್ಷಾಯಿಣಿ ತನ್ನ ಬಸಿಱೊಳ್ ಬರ್ಪ ವರಮಂ ಬಯಸಿ ಮೇನೆ ತಪದೊಳಿರಲ್ ಇತ್ತಲ್ ದಾಕ್ಷಾಯಿಣಿ ದಕ್ಷಯಾಗಕ್ಕೆ ಬಿಜಯಂಗೆಯ್ದು ನಿಜೇಶನ ನಿಂದೆಯಂ ಕೇಳಲಾಱದೆ ನಿಜಯೋಗದೊಳ್ ಸಂದು ಮೇನೆಯ ಪುಣ್ಯೋದರದೊಳ್‌ಪೊಕ್ಕು ಕರುಣದಿಂ ಬಂದಪೆನೆಂದು ಬೆಸಸೆ, ಮೇನೆಯಱಿದು ಪರಮಹರ್ಷದಿಂ ತಿರಿಗಿ ಪುರಮಂ ಪೊಕ್ಕು ಗಿರಿರಾಜನ ಸಂಗಸುಖಮಂ ಸಾರ್ದು ಮಂಗಳಾಕರೆಯಾಗಿರೆ ; ಕೆಲವು ದಿನಕ್ಕೆ ಗರ್ಭಮುದಯಿಸಿ ನವಮಾಸಂ ತೀವಿ ಕನ್ಯಾರತ್ನಮಂ ಪಡೆದು, ಜಾತಕರ್ಮಮನನುಕರಿಸಿ, ಪಾರ್ವತಿಯೆಂದು ನಾಮಕರಣಮಂ ಮಾಡಿ, ಪರಮಕಾರುಣಿಕೆಯೆಂದರಿಯದೆ ಪುತ್ರಿಯೆಂಬ ಪ್ರೇಮದಿಂ ಮಂನವಾಳತನದಿಂ ಸಲವುತ್ತಿರೆ, ಬಾಲಲೀಲೆಯಂ ಕಳೆದು ದಿವ್ಯ ಕನ್ನಿಕೆಯಾಗಿರ್ಪಲ್ಲಿ ಗಿರಿರಾಜಂ ಹರನರಸಿಯೆಂಬುದಂ

ಮಂಗಳಕರವಾದ ಮಹೋನ್ನತ ಮೇರುಪರ್ವತ. ಅದು ಭೂರಮೆಯ ನಾಭೀಕಮಲದ ಮಧ್ಯ ಕರ್ಣಿಕೆಯಂತೆ ಕಂಗೊಳಿಸುತ್ತಿದೆ. ಮೇರುವಿನ ದಕ್ಷಿಣಕ್ಕೆ ಮೂಡಣ –ಪಡುವಣ ಕಡಲುಗಳವರೆಗೆ ಹಬ್ಬಿದ ನಗಾಧಿರಾಜನು ಗಿರಿರಾಜನೆಂದು ಹೆಸರಾಂತಿದ್ದಾನೆ. ರಾಜಧಾನಿ ಓಷಧಿಪ್ರಸ್ಥಪುರ. ಆತನ ಮಡದಿ ಪಿತೃಮಾನಸಪುತ್ರಿ ಮೇನೆ ಎಂಬುವಳು. ಮಗ ಒಬ್ಬನೇ ಮೈನಾಕ. ಕೆಲದಿನಗಳ ಮೇಲೆ ಆಕೆಗೆ ದಾಕ್ಷಾಯಿಣಿ ಗೌರಿಯನ್ನೇ ಮಗಳಾಗಿ ಪಡೆವ ಬಯಕೆಯಾಯಿತು. ಅದಕ್ಕಾಗಿ ಆಕೆ ಜಗನ್ಮಾತೆಯನ್ನು ಕುರಿತು ಉಗ್ರ ತಪಸ್ಸನ್ನು ಕೈಗೊಂಡಳು.

ಮೇನೆಯ ಮನೋರಥಕ್ಕೆ ಜಗದಂಬೆ ಮಣಿದಳು. ದಕ್ಷನು ನಡೆಸಿದ ಯಾಗಕ್ಕೆ ಹೋದ ದಾಕ್ಷಾಯಿಣಿಯು ಅಲ್ಲಿ ತನ್ನ ಪತಿನಿಂದೆಯನ್ನು ಕೇಳಲಾರದೆ ಯೋಗಾಗ್ನಿಗೆ ದೇಹವಿತ್ತಳು. ಈಗ ತಪೋಜ್ವಲೆಯಾದ ಮೇನೆಗೆ ಕಾಣಿಸಿಕೊಂಡು ಅವಳ ಮನೋರಥದಂತೆ ಅವಳ ಪುಣ್ಯೋದರದಲ್ಲಿ ಮೂಡುವ ವರ ಕರುಣಿಸಿದಳು. ತಪಸ್ಸಿದ್ಧಿಯಿಂದ ಹರ್ಷಪುಳಕಿತೆಯಾಗಿ ಮೇನೆ ಹಿಂದಿರುಗಿದಳು. ಅರಸ ಆನಂದಿಸಿದ. ಕುಲಕೋಟಿ ನಲಿಯಿತು.

ಕೆಲದಿನಕ್ಕೆ ಮೇನೆಗೆ ಬಸುರುನಿಂದು ನವಮಾಸ ತುಂಬಿ ಸುದಿನದಲ್ಲಿ ಅವಳು ಕನ್ಯಾರತ್ನಕ್ಕೆ ತಾಯಿಯಾದಳು. ಜಾತಕರ್ಮಾದಿ ಸಂಸ್ಕಾರಗಳನ್ನು ಪಡೆದ ಶಿಶು ಉಮೆ, ಪಾರ್ವತಿ ಎಂಬ ಹೆಸರಿನಿಂದ ಪ್ರಸಿದ್ಧಳಾದಳು. ಅವಳ ಬಾಲಲೀಲೆಗಳಲ್ಲಿ ತನ್ಮಯರಾದ ಅವರಿಗೆ ಆವರು ಪರಮಕಾರುಣಿಕೆ ಜಗದಂಬೆ ಎಂಬುದು ಮರೆಯಿತು. ಯುಕ್ತವಯಸ್ಕ

ಮಱೆದು ಪುತ್ರೀವಿವಾಹಸದೃಶವರಾಪೇಕ್ಷಚಿತ್ತನಾಗಿರ್ಪ ಸಮಯದೊಳ್ ದೇವಲೋಕದಿಂ ನಾರದ ಮಹಾಮುನಿಯಿೞಿತಂದು ಗಿರಿಜಾತೆಯಂ ಕಂಡು ಚರಣಕ್ಕೆಱಗಿ—ಈ ಮಹಾಮಹಿಮನಿಧಿಯಪ್ಪ ಪಾರ್ವತಿಯಂ ನಿಮ್ಮ ಮಗಳೆಂಬುದಾಸೀನಂ ಬಡಬೇಡ ; ವಿರೂಪಾಕ್ಷನರ್ಧಾಂಗಿ ಸರ್ವಕಾರಣದಿಂ ಮೇನೆಯ ತಪಸ್ಸಿಗೆ ಕರುಣಿಸಿ ನಿಮ್ಮುದರದೊಳ್ ಬಂದಳ್. ಈ ಹೈಮವತಿಯಂ ಹೇಮಕೂಟದೊಳ್ ನಿಜಾವಲೋಕನ–ಸಮಾಧಿಸ್ಥನಾಗಿರುತಿರ್ಪ ಸರ್ಪಾಭರಣನಲ್ಲಿಗೆ ಕಳಿಪುವುದೆಂದು ನಾರದ ಮುನಿ ಪೇೞ್ದು ಪೋಗೆ ; ನಗಾಧೀಶಂ ಮಿಗೆ ವಿಸ್ಮಿತನಾಗಿ ಪಾರ್ವತಿಯಂ ಪುಷ್ಪಕಮನೇಱಿಸಿ ಜಯೆ ವಿಜಯೆಯೆಂಬ ವಿಳಾಸಿನಿಯರ್ ಸಹಿತಂ ಗಗನಮಾರ್ಗದೊಳೈತಂದು ಹೇಮಕೂಟದೊಳಿೞಿದು ಹರನಂ ತೋಱಿ ಗಿರಿರಾಜಂ ಮರಳ್ದು ಪೋಗೆ ; ನಿತ್ಯಪೂಜಾಸಕ್ತೆಯಾಗಿ ಗಿರಿಜೆ ಶಿವಪ್ರಸಾದಮಂ ಬಯಸಿ ಭಕ್ತಿಯಿಂದರ್ಚಿಸುತ್ತುಮಿರಲಿತ್ತಲ್ ತಾರಕಾಸುರನ ಬಾಧೆಗಾಱದೆ ಹರಿಬ್ರಹ್ಮೇಂದ್ರಾದಿ ದೇವರ್ಕಳ್ ಕಾದಿ ಸೋಲ್ತು ಮಂತ್ರಾಳೋಚನೆಯೊಳಿರ್ದು ಸುರಗುರುವಂ ಕಳಿಪಿ ಕಾಮನಂ ಕರೆಯಿಸಿ ಹರನ ಚಿತ್ತಮಂ ಚಲಿಯಿಸಿ ಕಡುತಪಮಂ ಕಿಡಿಸೆಂದು ಪೇೞೆ, ಹಸಾದಮೆಂದು ತನ್ನ ಚತುರಂಗಬಲಂ ಬೆರಸು ಬಂದು ಹೇಮಕೂಟಮಂ ಸುತ್ತಿ ಮತ್ತೆ ಸಂದೀಶ್ವರನ ನಸುಗೋಪದಿಂ ಬಲಮೆಲ್ಲಂ ಮಾಯಮಾಗೆ, ನಿತ್ಯಪೂಜೆಗೆ ಬರ್ಪ ಪಾರ್ವತೀದೇವಿಯರನುಮತಿಯಿಂ ಪುಷ್ಪಕದ

ಳಾದ ಮಗಳನ್ನು ಕಂಡ ತಂದೆಗೆ ಅನುರೂಪ ವರನನ್ನು ಅರಸುವ ತವಕ. ಅದನ್ನರಿತ ದೇವರ್ಷಿ ಅಲ್ಲಿಗೆ ಬಂದು ಗಿರಿರಾಜನಿಂದ ಸತ್ಕೃತನಾದ ನಾರದ ಅರಸನನ್ನು ಎಚ್ಚರಿಸಿ, ಹೇಮಕೂಟದಲ್ಲಿ ಸಮಾಧಿಸ್ಥನಾಗಿ ನಿಜಾವಲೋಕನಮಗ್ನನಾಗಿರುವ ಪರಶಿವನ ಸೇವೆಗೆ ಮಗಳನ್ನು ಕಳುಹಲು ಹೇಳಿಹೋದ. ಆದರಂತೆ ಗಿರಿರಾಜ ಮಗಳನ್ನು ಪುಷ್ಪಕವಿಮಾನದಲ್ಲಿ ಹೇಮಕೂಟಕ್ಕೆ ಕರೆತಂದು ಜಯೆ ಮತ್ತು ವಿಜಯೆ ಎಂಬ ಸಖಿಯರೊಂದಿಗೆ ಅವಳನ್ನು ಹರಸೇವೆಗೆ ಬೆಸಸಿ ಹಿಂದಿರುಗಿದ. ಶಿವಾನುಗ್ರಹವನ್ನು ಬಯಸಿ ಗಿರಿಜೆ ಶಿವಾರಾಧನೆಯಲ್ಲಿ ನಿರತೆಯಾದಳು.

ಈಕಡೆ ತಾರಕಾಸುರನ ಹಾವಳಿಯಿಂದ ಜಗತ್ತು ತಲ್ಲಣಗೊಂಡಿತ್ತು. ಅವನನ್ನು ಎದುರಿಸಿದ ಹರಿಬ್ರಹ್ಮಮಹೇಂದ್ರಾದಿಗಳು ಸೋತರು. ಎಲ್ಲ ಲೋಕದ ಜನ ಒಂದೆಡೆ ಸೇರಿ ಯೋಚಿಸಿದರು. ದೇವಗುರುವನ್ನು ಕಳಿಸಿ, ಕಾಮನನ್ನು ಕರೆಸಿ ಹರನ ದೃಢಚಿತ್ತವನ್ನು ಚಲಿಯಿಸಿ ಗಿರಿಜೆಯನ್ನು ಒಲಿಸುವಂತೆ ಮಾಡುವ ಹೊಣೆಯನ್ನು ಹೊರಿಸಿದರು.

ಹರಚಿತ್ತವನ್ನು ಕೆಣಕುವ ಮಣಿಹ ಹಗುರವಾದುದೇನಲ್ಲ. ಆದರೂ ಮದನ ಲೋಕಹಿತಕ್ಕಾಗಿ ತನ್ನನ್ನು ಒಪ್ಪಿಸಿಕೊಳ್ಳಲು ಸಿದ್ಧನಾದ. ಆತ ತನ್ನ ಬಳಗದೊಂದಿಗೆ ಹೇಮಕೂಟಕ್ಕೆ ಆಗಮಿಸಿದ. ಆದರೇನು ! ತಪೋಮಗ್ನನಾದ ಪರಶಿವನ ಅಂಗರಕ್ಷಕ ನಂದಿಕೇಶ್ವರ, ಅವನ ನಸುಮುನಿಸಿಗೇ ಮನ್ಮಥನ ಸೇನೆ ದಿಕ್ಕುಪಾಲಾಯಿತು. ಶಿವನನ್ನು ಎದುರಿಸುವ ಸಮಯನಿರೀಕ್ಷೆಯಲ್ಲಿದ್ದ ಮದನನಿಗೆ ಗಿರಿಜೆಯ ಮೇನೆ ಬರುತ್ತಿದ್ದುದು ಕಾಣಿ

ನೆೞಲೊಳಡಂಗುತ್ತೊಳಗಂ ಪೊಕ್ಕು ಮತಂಗಪರ್ವತಮನೇಱಿ ಪಂಚಮುಖನಂ ಪಂಚಬಾಣದಿಂದಿಸಲೊಡಂ ವಿಷಧರನೆಟ್ಟೆತ್ತು ಕಣ್ದೆರೆದು ಮುಂದಿರ್ದ ಪಾರ್ವತಿಯಂ ಕಂಡು ಕೌತುಕಂಗೊಂಡು ತಿರುಗಿನೋಡಿ ಕಾಮಂಗೆ ಕೋಪಿಸುವಲ್ಲಿಂ ಮುನ್ನ ಫಾಳಲೋಚನಾಗ್ನಿಯಿಂ ಪಂಚಶರನುರಿದು ನೆಲೆ ಪರಿತಂದು ಪದತಳದಿಂ ತುೞಿದು ಸ್ಮರಭಸ್ಮಾವಯವನಾಗಿ ದೇವಿಯರಿರವಂ ನೋಡದೆ ಕಂತುಹರಂ ಅಂತರ್ಧಾನಕ್ಕೆ ಸಂದುದಂ ಗಿರಿಜೆಯಱಿದು ಶೋಕಿಸುವ ರತಿಗಭಯಮನಿತ್ತು ಭರ್ಗನರಸಿಯುಗ್ರತಪದೊಳ್ ದಿವ್ಯ ಸಹಸ್ರಾಬ್ದಮಿರೆ ತಪಸ್ತೇಜಂ ಕಪರ್ದಿಯಂ ಮುಟ್ಟೆ ಶಂಕರನಱಿದು ಭೋಂಕನೆಬಂದು ಗಿರಿಜೆಯ ಚಿತ್ತಮಂ ಪರೀಕ್ಷಿಸಿ ನಿಜರೂಪಮಂ ತೋಱಿ ರತಿದೇವಿಗೆ ಕಾಮನನನಂಗನಂ ಮಾಡಿಕೊಟ್ಟು ಪಾರ್ವತಿಯಂ ಗಿರಿರಾಜನಲ್ಲಿಗೆ ಕಳಿಪಿ ಕೈಲಾಸಕ್ಕೆ ಬಂದು ಹರಿಬ್ರಹ್ಮೇಂದ್ರಾದಿ ದೇವಗಣಂಗಳಂ ಸಕಲಋಷಿಯರಂ ಕೂಡಿಕೊಂಡು ಶೂಲಧರಂ ಶೈಲರಾಜನಲ್ಲಿಗೆ ವಂದು ಪಾರ್ವತಿಯಂ ಮಹೋತ್ಸಾಹದಿಂ ವಿವಾಹಮಾಗಿ ಕೈಲಾಸಕ್ಕೆ ನಡೆತಂದು ಸುಖದೊಳಿರ್ದು ಪುಟ್ಟಿದ ಷಡಾನನನಿಂ ತಾರಕಾಸುರನಂ ತೀರ್ಚಿಸಿ ಸಕಲಲೋಕಕ್ಕೆ ಸಂತಸಮನೊಡರ್ಚಿಸಿ ಕಂತುಮರ್ದನಂ ಪಂಪಾವಿರೂಪಾಕ್ಷಂ ಸುಖಸಂಕಥಾವಿನೋದದಿಂ ಸಕಲಭಕ್ತರ್ಗೆ ವರಮಂ ಕರುಣಿಸು

ಸಿತು. ತುಸು ಧೈರ್ಯ ತಳೆದ ಮನ್ಮಥ ಅಗಜೆಯ ಅನುಮತಿ ಪಡೆದು, ಮೇನೆಯ ಮರೆಯಲ್ಲಿ ತಪೋವನವನ್ನು ಹೊಕ್ಕು ಮತಂಗಪರ್ವತವನ್ನೇರಿದ. ಅಲ್ಲಿ ತನ್ನ ಸುಮಶರವನ್ನು ಶಿವನಿಗೆ ಗುರಿಯಿಟ್ಟ. ಶಿವನ ಪರಿಚರ್ಯೆಯಲ್ಲಿ ಗಿರಿಜೆ ಮರುಳಾಗಿದ್ದಳು. ಕಾಮಶರಕ್ಕೆ ಅಳುಕಿದ ಹರನ ಮನ ಕಣ್ದೆರೆಯಿಸಿತು. ಎದುರಿಗೆ ಗಿರಿಸುತೆಯ ಅಸೀಮ ಸೌಂದರ್ಯರಾಶಿ! ಕೌತುಕಗೊಂಡ ಶಿವನ ಕಣ್ಣು ತಪೋಭಂಗಕಾರಣವನ್ನು ಅರಸುತ್ತಿತ್ತು. ಎದುರಿಗೆ ಮನ್ಮಥ ಶರಸಂಧಾನದಲ್ಲಿ ತೊಡಗಿದ್ದ. ಶಿವನ ಮುನಿಸು ಮುಂಗುಡಿಯಿಡುವ ಮೊದಲೆ ಮದನ ಕಾಡ್ಗಿಚ್ಚಿಗೆ ಸಿಕ್ಕ ಹುಲ್ಲು ಮೆದೆಯಂತೆ ಹರನ ಹಣೆಗಣ್ಣ ಬೆಂಕಿಗೆ ಬಲಿಯಾಗಿದ್ದ. ಹರ ಸ್ಮರಭಸ್ಮವನ್ನು ಮೈಗೆ ಲೇಪಿಸಿಕೊಂಡು ಮರೆಯಾದ. ಅರೆಕ್ಷಣದಲ್ಲಿ ಆಗಿಹೋದ ಆಕಸ್ಮಿಕಕ್ಕೆ ಗಿರಿಜೆ ಮರುಗಿದಳು. ರತಿಯನ್ನು ಸಂತೈಸಿ ಅವಳಿಗೆ ಅಭಯವನ್ನಿತ್ತಳು. ತನ್ನ ಭೌತಿಕ ಸೌಂದರ್ಯಕ್ಕೆ ಹೇಸಿದಳು. ಶಿವಕೃಪೆಗೆ ಯೋಗ್ಯವಾದ ನಿಯಮ ತಳೆದಳು. ಉಗ್ರ ತಪೋಮಗ್ನೆಯಾದಳು.

ಗಿರಿಜೆಯ ತಪೋಜ್ವಾಲೆಗೆ ಶಿವ ಮಣಿದ. ಅವಳನ್ನು ಪರೀಕ್ಷಿಸಿ ಹರಸಲು ನಿರ್ಧರಿಸಿದ. ವಟುವಾಗಿ ಬಂದು ಅವಳನ್ನು ಬಗೆಬಗೆಯಾಗಿ ಪರೀಕ್ಷಿಸಿದ. ಅವಳ ಅಚಲಭಕ್ತಿಗೆ ಒಲಿದು ಶಿವ ಅವಳನ್ನು ತಕ್ಕೈಸಿ ಹರಸಿದ. ಕಾಮನನ್ನು ಅನಂಗನಾಗಿ ಜೀವಿಸುವಂತೆ ವರವಿತ್ತು ರತಿಯನ್ನು ಸಂತೈಸಿದ, ಪಾರ್ವತಿಯನ್ನು ಗಿರಿರಾಜನ ಬಳಿಗೆ ಕಳಿಸಿಕೊಟ್ಟ.

ಸುದ್ದಿ ತಿಳಿದ ಪರ್ವತರಾಜದಂಪತಿಗಳು ಹರ್ಷಿಸಿದರು. ಪರಮಶಿವ ಋಷಿಗಣ, ಪ್ರಮಥತಿಂಥಿಣಿ, ದೇವಗಣದೊಂದಿಗೆ ಶೈಲರಾಜನಲ್ಲಿಗೆ ಬಂದು ಗಿರಿಜೆಯ ಕೈಹಿಡಿದ.

ತಿರ್ದನೆಂಬ ಗಿರಿರಾಜಕಲ್ಯಾಣ ಕಥಾಕಾವ್ಯಮಂ ಹಂಪೆಯ ಮಾದರಸರ ಕಾರುಣ್ಯದ ಶಿಶುವಪ್ಪ ಹಂಪೆಯ ಹರಿಹರಂ ಬಿನ್ನಪಂಗೈದಂ.

ಈ ಪ್ರಬಂಧಮಂ ಸಕಲ ಭಕ್ತರ್ ಸುಚಿತ್ತದಿಂದವಧರಿರ್ಪುದೆಂತೆಂದೊಡೆ—

ಗಿರಿಜಾಕಲ್ಯಾಣ ಲೋಕಕಲ್ಯಾಣಕ್ಕೆ ಹಿನ್ನೆಲೆಯಾಯಿತು. ಶಿವಕುಮಾರ ಕಾರ್ತಿಕೇಯನಿಂದ ತಾರಕವಧೆಯಾಗಿ ಲೋಕ ನೆಮ್ಮದಿಯಿಂದ ನಲಿಯಿತು.

ಈ ಗಿರಿಜಾಕಲ್ಯಾಣ ಕಥಾಕಾವ್ಯವನ್ನು ಬರೆದ ಕವಿ ಹಂಪೆಯ ಮಾದರಸರ ಕಾರುಣ್ಯದ ಶಿಶುವಾದ ಹರಿಹರ. ಭಕ್ತಜನ ಇದನ್ನು ಸುಚಿತ್ತದಿಂದ ಓದಿ ಆನಂದಿಸಲಿ.

# ಪ್ರಥಮಾಶ್ವಾಸಂ

## ಹೈಮಾಚಲವರ್ಣನಂ

ಶ್ರೀಮಚ್ಛೈಲೇಂದ್ರಪುತ್ರೀ ಗುರುತರಹೃದಯಕ್ಷೀರವಾರಾಶಿಚಂದ್ರಂ
ವ್ಯೋಮಾರ್ಕೇಂದುಕ್ಷಮಾತ್ಮಾನಲಜಲತಪಮಾನಾಷ್ಟಮೂರ್ತಿಪ್ರಸಿದ್ಧಂ ।
ಪ್ರೇಮಂಬೆತ್ತೀಗೆ ಸದ್ಭಕ್ತಿಯನಮಗಮರಾನೀಕಮಾಣಿಕ್ಯಮೌಳಿ
ಸ್ತೋಮಾಂಘ್ರಿದ್ಯೋತಿ ಪಂಪಾಪುರದರಸ ವಿರೂಪಾಕ್ಷನಾನಂದದಿಂದಂ ॥ ೧

ಗೌರೀ ಪಾದಾಂಗುಲೀಕೋರಕಮೆಸೆವ ಕರಂ ಪಲ್ಲವಂ ಪುಷ್ಪವೃಂತಾ
ಕಾರಂ ಮಂದಸ್ಮಿತಂ, ಶಾಖೆಗಳಮರ್ದಭುಜಾನೀಕಮಾಸ್ಯಂಫಲಂ ಶ್ರೀ ।
ಸಾರಂ ತಾನಾದ ಪಂಪಾಪುರದರಸ ವಿರೂಪಾಕ್ಷ ಕಲ್ಪಾಂಘ್ರಿಪಂ ವಿ
ಸ್ತಾರಂ ಬೆತ್ತೀಗೆ ಸದ್ಭಕ್ತಿಯನೆಮಗಮೃತಪ್ರಾಯೆಯಂ ಪ್ರೀತಿಯಿಂದಂ ॥ ೨

ಶ್ರೀ ಹೇಮಾದ್ರೀಂದ್ರ ಚೂಡಸ್ಥಿರಕರಣಸಮಾರೂಢ ಪದ್ಮಾಸನಸ್ಥಂ
ಕೋಽಹಂ ಸೋಽಹಂಗಳೆಂಬಾ ಗಜಿಬಜಿ ಪುಗದಾನಂದಸಂವಿತ್ತು ಕಂದ ।
ರ್ಪಾಹಂಕಾರಪ್ರವಿಧ್ವಂಸನಕರನಿಟಲಾಕ್ಷಂ ಶಿವಂ ಪಾರ್ವತೀಶಂ
ನೇಹಂ ಕೈಮುಕ್ಕು ಪಂಪಾಪುರಪತಿದಯೆಯಿಂ ನೋಡಿ ರಕ್ಷಿಕ್ಕೆ ನಮ್ಮಂ ॥ ೩

೧. ಹೈಮವತಿಯ ಪ್ರೇಮಲಹೃದಯವೆಂಬ ಹಾಲ್ಗಡಲಿಗೆ ಚಂದ್ರನೂ, ನೆಲ-ನೀರು-ಬೆಂಕಿ-ಗಾಳಿ-ಬಯಲು-ರವಿ-ಶಶಿ ಮತ್ತು ಒಡೆಯರೆಂಬ ಎಂಟು ತನು ಮೂರ್ತಿಗಳಿಂದ ಪ್ರಸಿದ್ಧ ಸ್ವರೂಪನೂ, ಸಕಲ ದೇವತೆಗಳ ಮಣಿಮಯಕಿರೀಟಗಳ ಕಾಂತಿಗಳಿಂದ ಬೆಳಗುವ ಪಾದಕಮಲವುಳ್ಳವನೂ ಆದ ಪಂಪಾಪುರದರಸ ಶ್ರೀ ವಿರೂಪಾಕ್ಷಸ್ವಾಮಿಯು ಎಲ್ಲರಿಗೂ ಒಲಿದು ಸದ್ಭಕ್ತಿಯನ್ನು ಕರುಣಿಸಲಿ. ೨. ಈ ವಿರೂಪಾಕ್ಷ ಕಲ್ಪ ಕುಜಕ್ಕೆ ಗೌರೀದೇವಿಯ ಪಾದಾಂಗುಲಿಗಳೇ ಮೊಗ್ಗು, ಹೊಳೆವ ಕರಗಳೇ ಚಿಗುರು, ಮಂದಸ್ಮಿತ ಹೂ-ಗೊಂಚಲು, ದಶಭುಜ ಶಾಖೆಗಳು, ಮುಖಕಮಲವೇ ಶ್ರೀಫಲ, ಆದ್ದರಿಂದ ಅಂತಹ ಸಂಪತ್ಕರವಾದ ಸೌಭಾಗ್ಯವೇ ತಾನಾಗಿರುವ, ಹಂಪೆಯ ವಿರೂಪಾಕ್ಷಸ್ವಾಮಿಯೆಂಬ, ಕಲ್ಪಕುಜವು ಅಮೃತಕ್ಕೆ ಸಮವಾದ ವಿಪುಲ ಸದ್ಭಕ್ತಿಯನ್ನು ಕರುಣಿಸಲಿ. ೩. ಹಿಮವತ್ಪರ್ವತದ ಗೌರೀಶಂಕರ ಶಿಖರ ಶ್ರೀಮತ್ಕೈಲಾಸದಲ್ಲಿ ಪದ್ಮಾಸೀನನೂ, 'ನಾನು ಯಾರು' 'ಅವನೇ ನಾನು' ಎಂಬ ವಾದಗಳಿಗೆ ದೂರನಾಗಿ ಕೇವಲಾನಂದಸ್ವರೂಪನೂ, ಮನ್ಮಥನನ್ನು ದಹಿಸಿದ ಹಣೆಗಣ್ಣುಳ್ಳವನೂ ಆದ ಪಾರ್ವತೀಪತಿ

ಮಂಗಳಮೂರ್ತಿ ಮಾನಿನಿ ಮಹೋಜ್ವಳೆ ಮಾನ್ಯೆ ಮಹಾಮಹೇಶನ
ರ್ಧಾಂಗಿ ಮಹೋವಿರಾಜಿತೆ ಮಹಾಶಿವಭಕ್ತೆ ಮಹಾ ಪತಿವ್ರತೋ ।
ತ್ತುಂಗೆ ಮಹಾತ್ರಿಲೋಚನೆ ಮಹಾನಿಧಿ ತನ್ನ ವಿವಾಹವರ್ಣನಾ
ಸಂಗತಿಯೆಂದು ಮತ್ಕೃತಿಗೆ ಪಾರ್ವತಿ ಮಾಟ್ಕೆ ಮಹೋತ್ಸವಂಗಳಂ ॥ ೪

ಎನ್ನೀ ಕಾವ್ಯಕ್ಕೆ ನಿರ್ವಿಘ್ನದಿನತುಳನವೀನಾರ್ಥವಾಕ್ಯಪ್ರಸನ್ನೋ
ತ್ಪನ್ನಾಲಂಕಾರಮಂ ಕೂಡುಗೆ ವಿಪುಳಕಪೋಳಸ್ಥಳಾಂತಸ್ಥಳೀ ಸಂ ।
ಭಿನ್ನೋದ್ಯದ್ದಾನಧಾರಾಪ್ರಬಳಪರಿಮಳಾಸಕ್ತಭೃಂಗಾವಳೀ ಸಂ
ಪನ್ನ ಪ್ರೋದ್ಭೂತಝುಂಕಾರಿತರವಮುದಿತಾನಂದವೇಶಂ ಗಣೇಶಂ ॥ ೫

ಪುಳಕಮನೆಟ್ಟಿಸುತ್ತೆ ಹರನಂ ಪರಿದಪ್ಪುತೆ ಸಂತಸಂಗಳಂ
ಬಳೆಯಿಸುತುಂ ಭವಾನಿಯ ಪಯೋಧರಮಂ ನಲಿದುಂಡು ವಕ್ತ್ರಮಂ ।
ಡಳಮನಲರ್ಚುತುಂ ನಗುವ ಹೊಂಗುವ ಹಿಗ್ಗುವ ಪೊಣ್ಮುವುಣ್ಮುವ
ಗ್ಗಳಿಸುವ ಕಾಡುವಾಡುವ ಷಡಾನನನೀಕೃತಿಗೀಗೆ ರಾಗಮಂ ॥ ೬

ಶಿವನ ಮನೋಹರಂ ಶಿವನ ಪುಣ್ಯಫಲಂ ಶಿವನಾಪ್ತ ಸಂಕುಳಂ
ಶಿವನ ವಿಲೋಚನಂ ಶಿವನ ಗೋತ್ರಬಲಂ ಶಿವನೂರ್ಜಿತೋಜ್ವಲಂ ।
ಶಿವನ ಸುಖಂ ಸದಾಶಿವನ ಸರ್ವಮುಖಂ ಶಿವಭಕ್ತರೆನ್ನ ಕಾ
ವ್ಯವನತಿಸಮ್ಮದಂ ಬೆರಸಿ ಪೊರ್ದುಗೆ ತಿರ್ದುಗೆ ತಾಟ್ದಿದಟ್ಕಳಿಂ ॥ ೭

ಯಾದ ಪಂಪಾಪತಿಯು ಕೃಪೆಯಿಟ್ಟು ನನ್ನನ್ನು ರಕ್ಷಿಸಲಿ. ೪. ಮಂಗಳಕರ ಸ್ವರೂಪವುಳ್ಳವಳು, ಮಾನಶೀಲೆ, ಮಹಾತೇಜಸ್ವಿನಿ, ಸರ್ವಮಾನ್ಯೆ, ಮಹಾದೇವನ ಅರ್ಧಾಂಗಿ, ಮಹಾ ಶಿವಭಕ್ತೆ, ಮಹಾ ಪತಿವ್ರತಾಶಿರೋಮಣಿ, ತ್ರಿಲೋಚನೆ, ಮಂಗಳಗಳಿಗೆ ಮಹಾನಿಧಿಯಾದ ಪಾರ್ವತೀದೇವಿಯು ತನ್ನ ವಿವಾಹವರ್ಣನೆಯ ಪ್ರಸಂಗವೆಂದು ನನ್ನ ಕೃತಿಗೆ ಉತ್ಕರ್ಷವನ್ನು ದಯೆಗೈಯ್ಯಲಿ. ೫. ತನ್ನ ವಿಶಾಲವಾದ ಕಪೋಲಗಳು, ಅಲ್ಲಿ ಉಕ್ಕಿ ಬರುತ್ತಿರುವ ಮದೋದಕ ಧಾರೆಗಳು, ಅವುಗಳ ಸುಗಂಧಕ್ಕೆ ಅರಸಿ ಬಂದ ದುಂಬಿಗಳು, ಅವುಗಳ ಝೇಂಕಾರಕ್ಕೆ ಒಲಿದು ಆನಂದತುಂದಿಲನಾಗಿರುವ ಗಣಪತಿಯು ಈ ಕಾವ್ಯಕ್ಕೆ ನಿರ್ವಿಘ್ನತೆ, ನವೀನಾರ್ಥವಾಕ್ಯ ಪ್ರಸನ್ನತೆಯಿಂದ ಕೂಡಿದ ಕಾವ್ಯಾಲಂಕಾರ ಸೌಭಾಗ್ಯವನ್ನು ಕರುಣಿಸಲಿ. ೬. ತನ್ನ ಆಲಿಂಗನದಿಂದ ಪರಮೇಶ್ವರನಿಗೆ ರೋಮಾಂಚವನ್ನು ಉಂಟುಮಾಡಿ ಸಂತೋಷಗೊಳಿಸುತ್ತ, ಗಿರಿಜೆಯ ಮೊಲೆಯುಂಡು ಪ್ರಸನ್ನ ಮುಖಮಂಡಲವನ್ನು ಅರಳಿಸಿ ಹಸನ್ಮುಖನಾಗಿ ಉಬ್ಬಿ ಹಿಗ್ಗಿ ನಲಿದು ನರ್ತಿಸಿ ಹಾಡಿ ಆನಂದಮೂರ್ತಿಯಾಗಿರುವ ಷಣ್ಮುಖಸ್ವಾಮಿಯು ಈ ಕೃತಿಗೆ ಶ್ರೇಯಸ್ಸನ್ನುಂಟುಮಾಡಲಿ. ೭. ತಮ್ಮ ನಿರ್ಮಲವಾದ ಭಕ್ತಿಯಿಂದ ಶಿವನ ಮನಸ್ಸನ್ನು ಸೂರೆಗೊಂಡವರೂ, ತಮ್ಮ ಸತ್ಕರ್ಮಗಳಿಂದ ಶಿವನ ಪುಣ್ಯಫಲದಂತೆ ಪ್ರಕಾಶಿಸುವವರೂ, ಶಿವನಿಗೆ ಆಪ್ತರೂ, ಶಿವನಿಗೆ

ಘನಕವಿತಾವಿಳಾಸದೊಳೆ ಸಂದ ಮಯೂರನ ರೇಖೆ ಕಾಳಿದಾ
ಸನ ರಸವೃತ್ತಿ ಬಾಣನ ಮೃದೂಕ್ತಿ ಹಲಾಯುಧನಾಶು ಕೇಶಿರಾ ।
ಜನ ಬಗೆಯುದ್ಧಟಯ್ಯನ ಗಭೀರತೆ ಮಲ್ಹಣನೇಳ್ಗೆ ಭೋಜರಾ
ಜನ ಜಸಮೆನ್ನಕಾವ್ಯರಸದೊಳ್ ನಲಿವಿಂ ನೆಲಸಿರ್ಕೆ ಸಂತತಂ ॥ ೮

ಚತುರ ಚತುರ್ಮುಖನೆಲ್ಲಾ
ಶ್ರುತಿಗಳನೊಲವಿಂದೆ ಕಲ್ತ ಶಿವನ ವಿವಾಹೋ ।
ನ್ನತಿಯಾ ಕೃತಿಯೆಂದೆನೆ ಭಾ
ರತಿಯೆನಗನುಕೂಲೆಯಾಗದಿರಲಣ್ಮುವಳೇ ॥ ೯

ಕೊಂಡಾಡುಗೆ ಕಲ್ತೋದುಗೆ
ಮುಂಡಾಡುಗೆ ಮುದ್ದಿಸುಗೆ ಮರಲ್ದಪ್ಪುಗೆ ಕೈ ।
ಕೊಂಡೀಕಾವ್ಯಮನಗಜೆಯ
ಗಂಡನಲಂಪಿಂದೆ ಹಂಪೆಯ ವಿರೂಪಾಕ್ಷಂ ॥ ೧೦

ವ ॥ ಎಂದಿಂತು ಬೇಡಿಕೊಳ್ವಲ್ಲಿ

ಅತುಳತರಾರ್ಥಮರ್ಥದನುವೃತ್ತಿಪದಂ ಪದದಿಚ್ಛೆಬಂಧಮೂ
ರ್ಜಿತಪದಬಂಧ ಸಂಧಿ ನವರೀತಿ ಸುರೀತಿ ಗುಣಂ ಸವೃಕ್ಕಲಂ ।
ಕೃತಿ ಸದಲಂಕೃತಿಪ್ರತಿಮಮೊಪ್ಪುವ ಭಾವಮನೂನ ಭಾವದು
ನ್ನತರಸಮೆಂದು ಸತ್ಕವಿಗಳಾಲಿಸೆ ಪೇಳ್ವಪೆನೀಪ್ರಬಂಧಮಂ ॥ ೧೧

ಕಣ್ಣಾಗಿರುವವರೂ, ಶಿವಕುಲಕ್ಕೆ ಸೇರಿದವರೂ, ಶಿವಾವೇಶದಿಂದ ಉಜ್ವಲರೂ, ಶಿವಸುಖ ಸ್ವರೂಪರಾಗಿ, ಸದಾಶಿವನ ಸರ್ವಸ್ವವೂ ಆಗಿರುವ ಶಿವಭಕ್ತರು ನನ್ನ ಕಾವ್ಯವನ್ನು ಆದರ ದಿಂದ ಓದಿ, ತಿದ್ದಿ, ಆತ್ಮೀಯತೆಯಿಂದ ತಮ್ಮದನ್ನಾಗಿಸಿಕೊಳ್ಳಲಿ. ೮. ಶ್ರೇಷ್ಠವಾದ ಕವಿತಾವಿಲಾಸವನ್ನು ಮೈಗೂಡಿಸಿಕೊಂಡಿರುವ ಮಯೂರ ಕವಿಯ ಕಾವ್ಯಪದ್ಧತಿ, ಕಾಳಿ ದಾಸನ ರಸೋತ್ಕರ್ಷ ಅಥವಾ ರಸಾಭಿವ್ಯಕ್ತಿ, ಬಾಣಕವಿಯ ಮೃದು ನುಡಿಗಳು, ಹಲಾ ಯುಧ ಕವಿಯ ಪ್ರತ್ಯುತ್ಪನ್ನಮತಿ, ಕೇಶಿರಾಜನ ರೀತಿ, ಉದ್ಭಟ ಕವಿಯ ಗಾಂಭೀರ್ಯ, ಮಲ್ಹಣ ಕವಿಯ ವೈಶಿಷ್ಟ್ಯ ಭೋಜರಾಜನ ಯಶಸ್ಸುಗಳೆಲ್ಲವೂ ನನ್ನ ರಸಕಾವ್ಯವಾಹಿನಿ ಯಲ್ಲಿ ಯಾವಾಗಲೂ ನೆಲೆಸಿರಲಿ. ೯. ಚತುರಮತಿ ಚತುರ್ಮುಖಬ್ರಹ್ಮನು ಪರಶಿವ ನಿಂದ ಎಲ್ಲ ಶ್ರುತಿಗಳನ್ನೂ ಭಕ್ತಿಯಿಂದ ಕಲಿತ. ಅಂಥ ಶಿವನ ವಿವಾಹಮಹೋತ್ಸವವನ್ನು ಕುರಿತ ಕೃತಿ ಇದು, ಅಂದಮೇಲೆ ಆ ಬ್ರಹ್ಮನ ಸತಿ ವಾಗ್ದೇವಿಯು ನನಗೆ ಅನುಕೂಲ ವಾಗದಿರುವಳೆ? ೧೦. ಅಗಜೆಯ ಗಂಡನಾದ ಹಂಪೆಯ ವಿರೂಪಾಕ್ಷನು ಈ ಕಾವ್ಯ ವನ್ನು ಪ್ರೀತಿಯಿಂದ ಕೈಗೆತ್ತಿಕೊಂಡು ಕೊಂಡಾಡಲಿ, ಕಲಿತೋದಲಿ, ಮುಂಡಾಡಲಿ, ಮುದ್ದಿಸಲಿ, ಮತ್ತೆ ಮತ್ತೆ ಅಪ್ಪಿಕೊಳ್ಳಲಿ. ೧೧. ಈ ಕಾವ್ಯದಲ್ಲಿ ಅನುಪಮವಾದ

ಕಂದಂಗಳಮೃತ ಲತಿಕಾ
ಕಂದಂಗಳನೂನವಾಕ್ಯಫಲ ವಿಲಸನ್ಮಾ।
ಕಂದಂಗಳ್ ತನಿರಸದು
ಕ್ಕಂದಂಗಳ್ ಸೊಗಯಿಸಿರ್ಪುವೀ ನುತಕೃತಿಯೊಳ್ ॥ ೧೨

ಪದ್ಯಂಗಳ್ ನವರಸ ನಿರ
ವದ್ಯಂಗಳ್ ಸುಜನಸಂಕುಳಕ್ಕೆ ನಿತಾಂತಂ।
ಹೃದ್ಯಂಗಳ್ ಧಾರಿಣಿಗತಿ
ಚೋದ್ಯಂಗಳ್ ಮೆಱೆಯುತಿರ್ಪುವೀ ಸತ್ಕೃತಿಯೊಳ್ ॥ ೧೩

ಕಾವ್ಯಂ ತಾನಿದು ನವರಸ
ಸೇವ್ಯಂ ಗಿರಿಜಾಧಿನಾಥನುರುತರಕರ್ಣಾ।
ಶ್ರಾವ್ಯಂ ವಸುಧಾತಳದೊಳ್
ನವ್ಯಂ ಭೂತೇಶ ಭಕ್ತಜನತಾ ಭಾವ್ಯಂ ॥ ೧೪

ಪ್ರೊಸತಿದು ಪಾವನಮಿದು ರಂ
ಜಿಸುವ ಮಹಾನರ್ಘ್ಯಮಿಂತಿದೆಂಬೀ ಜಸದಿಂ।
ರಸವತ್ಕಾವ್ಯಂ ತಾಂ ರಾ
ಜಸಭೆ ಬ್ರಹ್ಮಸಭೆ ದೇವಸಭೆಗೆಸೆದಿರ್ಕುಂ ॥ ೧೫

ಅರ್ಥ, ಆ ಅರ್ಥಕ್ಕೆ ಹೊಂದಿಕೆಯಾದ ಪದ, ಪದದ ಇಚ್ಛೆಗೆ ಅನುಗುಣವಾದ ಬಂಧ, ಆ ಶ್ರೇಷ್ಠ ಪದಬಂಧಕ್ಕೆ ಸಂಬಂಧಿಸಿದ ನೂತನ ರೀತಿ, ಒಳ್ಳೆಯ ರೀತಿಗೆ ಅನುಗುಣವಾದ ಅಲಂಕಾರಗಳು, ಆ ಅಲಂಕಾರಗಳಿಗೆ ಒಪ್ಪುವ ಭಾವ, ಆ ಭಾವದ ಉನ್ನತ ರಸ ಹೀಗೆ ಹೊಂದಿಕೊಂಡಿವೆ. ಸತ್ಕವಿಗಳು ಇಂಥ ಈ ಕಾವ್ಯವನ್ನು ಅಕ್ಕರೆಯಿಂದ ಕೇಳುವಂತೆ ಹೇಳುತ್ತೇನೆ. ೧೨. ಇಲ್ಲಿರುವ ಕಂದ ಪದ್ಯಗಳು ಅಮೃತಲತೆಯ ಮೂಲ ಕಂದಗಳು, ಶ್ರೇಷ್ಠ ವಾಕ್ಯಫಲ ವಿಲಾಸದ ಮಾವಿನ ಫಲಗಳು, ಅವು ಹೊಸ ಹೊಸ ರಸದ ಉತ್ಕರ್ಷ ವನ್ನು ಉಕ್ಕಿಸಿ ಬೆಳಗುತ್ತಿವೆ. ೧೩. ಈ ಸತ್ಕೃತಿಯಲ್ಲಿರುವ ಪದ್ಯಗಳು ನವರಸಗಳನ್ನು ಉಕ್ಕಿಸುವಲ್ಲಿ ಸಮರ್ಥವಾದವುಗಳು. ಸಹೃದಯರಿಗೆ ಅತ್ಯಂತ ಪ್ರಿಯವಾದವುಗಳು. ಲೋಕವೃತ್ತವನ್ನು ಚಮತ್ಕಾರವಾಗಿ ವ್ಯಕ್ತಗೊಳಿಸತಕ್ಕವುಗಳು. ೧೪. ನವರಸ ರುಚಿರವಾದ ಈ ಕಾವ್ಯವು ಸಹೃದಯರು ತಪ್ಪದೇ ಓದಿ ಅನುಸರಿಸತಕ್ಕದ್ದು, ಗಿರಿಜಾಧನ ನಾದ ಪರಶಿವನ ಲೀಲಾವಿಲಾಸದಿಂದ ಕೂಡಿರುವ ಈ ನೂತನ ಕೃತಿ ವಿಶ್ವದಲ್ಲಿನ ಸಮಸ್ತ ಶಿವಭಕ್ತರೂ ಪಠಿಸಿ ನಲಿಯತಕ್ಕದ್ದು. ೧೫. ಇದು ಹೊಸತು ಪರಶಿವನ ಲೀಲಾ ವರ್ಣನವಾದ್ದರಿಂದ ಪವಿತ್ರ, ಆದ್ದರಿಂದಲೇ ಅಮೂಲ್ಯವಾದದ್ದು. ಈ ಎಲ್ಲ ಕಾರಣಗಳಿಂದ

ವ॥ ಅದು ಕಾರಣದಿಂ

ಸೇವ್ಯಂ ಸೌಖ್ಯಂ ಪ್ರಸನ್ನಂ ನವರಸವಿಭವಂ ಪುಣ್ಯಪುಂಜಂ ಶುಭಂ ವಾ
ಗ್ದೇವ್ಯಾವಾಸಂ ವಿವೇಕೋನ್ನತಜಲನಿಧಿ ಸಂಸಾರ ವಿಶ್ರಾಮದೇಶಂ।
ದಿವ್ಯಜ್ಞಾನೋಕ್ತಿಮಾರ್ಗಂ ನಿರತಿಶಯಪದಂ ಕೂರ್ತುಪೇಳ್ವಲ್ತಿಯಿಂದಂ
ಕಾವ್ಯಂ ಕಲ್ಪಾಂತರ ಸ್ಥಾಯಿಯೆನಿಪ ನುಡಿ ಸತ್ಯಂ ಕವೀಶಾಧಿಪತ್ಯಂ॥ ೧೬

ಸುರತರುವಿನಂತೆ ಸುಜನರ
ಸಿರಿಯಂತೆ ಸರೋಜದಂತೆ ಸುಧೆಯಂತೆ ಸುಧಾ।
ಕರ ಕಿರಣದಂತೆ ಹಂಪೆಯ
ಹರಿದೇವನ ಕಾವ್ಯಮಖಿಳ ಸೇವ್ಯಂ ನವ್ಯಂ॥ ೧೭

ಪ್ರಿಯವಚದಂತೆ ಪುಣ್ಯತತಿಯಂತೆ ಸುಧಾಕರನಂತೆ ಕೂರ್ತ ಮು
ಗ್ಧೆಯ ಕಡುನೇಹದಂತಮೃತದಂತೆ ವಸಂತಕನಂತೆ ಪುಷ್ಪಮಾ।
ಲೆಯ ಪೊಸಗಂಪಿನಂತೆ ಮಲಯಾನಿಲನಂತೆ ಮರಾಳನಂತೆ ಹಂ
ಪೆಯ ಹರಿದೇವನೊಪ್ಪಿರೆ ನಿಮಿರ್ಚಿದ ಕಾವ್ಯಮಿಳಾಜನೋತ್ಸವಂ॥ ೧೮

ನೆರೆಯೆ ಕುತರ್ಕದಿಂದರೆದು ಸಣ್ಣಿಸಿ ನುಣ್ಣಿಸಿಯಂತದಿಂದು ಪೋ
ದರ ಕೃತಿಯೊಳ್ಳಿತನ್ಯಕೃತಿ ಪೊಲ್ಲದಿದೆಣ್ಣೆಗೆ ಬೆಣ್ಣೆ ಸಣ್ಣನೆಂ।
ಬರ ನುಡಿಬೇಡ ಪೇಳ್ವೆನತಿ ಭಾವರಸಾರ್ಥದೊಳಾತ್ತಛಂದಮಂ
ಪರಸುಖವೃಂದಮಂ ಸೊಗಯಿಪಂದಮನೀ ಸುಕರಪ್ರಬಂಧಮಂ॥ ೧೯

ರಸೋಜ್ವಲವಾದ ಈ ಕಾವ್ಯವು ರಾಜಸಭೆ, ಬ್ರಹ್ಮಸಭೆ ಹಾಗೂ ದೇವಸಭೆಗಳಲ್ಲಿಯೂ ಕೂಡ ಗೌರವಾರ್ಹವಾಗಿದೆ. ೧೬. ಪ್ರಸಾದಗುಣದಿಂದ ಲಲಿತಮಧುರವೂ ನವರಸವೈಭವಯುತವೂ ಪುಣ್ಯಕರವೂ ಆದ ಈ ಶುಭಕಾವ್ಯವು ಶಾರದೆಯ ನಿವಾಸಸ್ಥಾನ; ವಿವೇಕ–ಔಚಿತ್ಯಗಳ ಕಡಲು, ಸಂಸಾರಕ್ಕೆ ವಿಶ್ರಾಂತಿಸ್ಥಾನ, ದಿವ್ಯಜ್ಞಾನದ ಉಪದೇಶಪಥ; ಆದ್ದರಿಂದಲೇ ನಿರತಿಶಯವಾದ ಕವಿ ಕರ್ನುವೆನಿಸಿರುವ ಈ ಕಾವ್ಯವನ್ನು ಪ್ರೀತಿಯಿಂದ ಪಠಿಸುವುದರಿಂದ "ಕಾವ್ಯಂ ಕಲ್ಪಾಂತರಸ್ಥಾಯಿ" ಎಂಬ ನುಡಿ ದಿಟವಾಗಿದೆ. ೧೭. ಕಲ್ಪವೃಕ್ಷದಂತೆ ಇಷ್ಟಾರ್ಥವನ್ನು ಕೊಡುವ, ಸತ್ಪುರುಷರ ಸಂಪತ್ತಿನಂತೆ ಎಲ್ಲರಿಗೂ ಆನಂದಕರವಾದ, ಕಮಲದಂತೆ ಆಹ್ಲಾದಕವಾದ, ಅಮೃತದಂತೆ ಮಧುರವಾದ, ಚಂದ್ರಚಂದ್ರಿಕೆಯಂತೆ ಹೃದಯಂಗಮವಾದ ಹಂಪೆಯ ಹರಿಹರನ ಈ ನೂತನ ಕಾವ್ಯವು ಎಲ್ಲ ಸಹೃದಯರೂ ಸೇವಿಸಲು ಯೋಗ್ಯವಾದದ್ದು. ೧೮. ಹಂಪೆಯ ಹರೀಶ್ವರ ರಚಿಸಿರುವ ಪವಿತ್ರ ಕಾವ್ಯವು ಹಿತವಚನದಂತೆ, ಪುಣ್ಯಪುಂಜದಂತೆ, ಚಂದ್ರಮನಂತೆ, ಒಲಿದುಬಂದ ಮುಗ್ಧೆಯ ನಲ್ಮೆಯಂತೆ, ವಸಂತ ಋತುವಿನಂತೆ, ಸುಮಮಾಲೆಯ ನವಸೌರಭದಂತೆ, ಮಂದಮಾರುತದಂತೆ, ಅರಸಂಚೆಯಂತೆ ಮನೋಹರವಾದದ್ದು. ಆದ್ದರಿಂದಲೇ ಇದು ಇಳೆಯ ಜನೋತ್ಸವಕ್ಕೆ ಪಾತ್ರವಾಗಿದೆ. ೧೯. ಏನೋ ಕುತರ್ಕಮಾಡಿ ಸಂಗ್ರಹಿಸಿ, ಹೋದವರ ಕೃತಿ

ನವರಸಮತಿಭಾವಾರ್ಥಂ
ನವೀನಪದಭರಿತಮಿಂತಿದೆನೆ ಸತ್ಕೃತಿಯುಂ ।
ತವೆಪೇಟ್ವುದು ಪೇಟಿದೊಡೇಂ
ಕವರ್ವರೆ ಕೋಪಿಪರೆ ನಿಂದಿಪರೆ ದಂಡಿಪರೇ ॥ ೨೦

ಕೇಳಲೊಡಂ ಕಿವಿ ಸವಿಯೊಳ
ಗಾಟದೊಡಂ ತನ್ಮನಂ ಮುಟುಂಗದೊಡಂ ಸೌ ।
ಖ್ಯಾಲಂಬಿಯೆನಿಪ ಚಿತ್ತಂ
ಲೀಲೆಯೊಳವಗಾಹಮಿರದೊಡದು ಸತ್ಕೃತಿಯೇ ॥ ೨೧

ವ॥ ಅಂತುಮಲ್ಲದೆಯುಂ

ಓದಿದೊಡೆ ಕಲ್ಲಮಾಲೆಯ
ನಾದಂ ಕರ್ಬೊನ್ನ ಕಡಲೆ ವಾದಿಸೆ ರಸಮಂ ।
ಸೋನಸೆಯುರ್ಕಿನ ಪುಡಿಯೆನಿ
ಪಾ ದುಷ್ಕವಿತೆಗಳನೆಣಿಸಲೇಕೀ ಕೃತಿಯೊಳ್ ॥ ೨೨

ಹಱಿಗವಿಗಳ ಕಬ್ಬಂಗಳ
ಹೊಱಗಱಿಯಕ್ಕರದ ಹೊಲಿಗೆ ಬಿರ್ಚಿದೊಡೆಲ್ಲಂ ।
ಬಱಿತಾಱಿಗಬೀಱಿಗ ತಿ
ತ್ತಿಱಿ ತತ್ತಱಿ ತಿಕ್ಕಸಕ್ಕಮಸ್ತವ್ಯಸ್ತಂ ॥ ೨೩

ಒಳ್ಳೆಯದು, ಇಂದಿನವರ ಕೃತಿ ಸಲ್ಲದು! ಎಣ್ಣೆಗಿಂತ ಬೆಣ್ಣೆ ಸಣ್ಣದೆಂಬಂತೆ ಉತ್ತಮ ಕೃತಿಯನ್ನು ಹೀಗಳೆದು ಕನಿಷ್ಠ ಕೃತಿಯನ್ನು ಎತ್ತಿ ಹಿಡಿವವರ ಮಾತು ಬೇಡ! ಪ್ರಕೃತ ಸುಕರಪ್ರಬಂಧವು ಶ್ರೇಷ್ಠ ರಸಭಾವ, ಛಂದಸ್ಸುಳ್ಳದ್ದು, ಅಲೌಕಿಕಾನಂದವನ್ನು ಉಂಟು ಮಾಡುವ ಈ ಪ್ರಬಂಧವನ್ನು ಆದರದಿಂದ ಆಲಿಸಬೇಕು. ೨೦. ಈ ಕಾವ್ಯವು ನವರಸ ಭರಿತವಾದದ್ದು, ಅತಿ ಭಾವಾರ್ಥಗರ್ಭಿತವಾದದ್ದು, ನೂತನ ಪದಗುಂಫಿತವಾದದ್ದು ಎಂದಮೇಲೆ ಇಂಥ ಸತ್ಕೃತಿಯನ್ನು ಹೇಳಬೇಕು. ಹಾಗೆ ಹೇಳಿದ ಪಕ್ಷದಲ್ಲಿ ಕೊಂಕು ನುಡಿಯುವರೆ, ಕೋಪಗೊಳ್ಳುವರೆ, ನಿಂದಿಸುವರೆ ಅಥವಾ ದಂಡಿಸುವರೇ! ೨೧. ಕೇಳಿದೊಡನೆಯೇ ಕಿವಿ ಸವಿಯೊಳಗೆ ಓಲಾಡಬೇಕು. ಮನಸ್ಸು ಆನಂದದ ಮಡುವಿನಲ್ಲಿ ಮುಳುಗಬೇಕು. ಸುಖವನ್ನು ಅವಲಂಬಿಸಿರುವ ಚಿತ್ತವು ಲೀಲಾವಿಲಾಸದಲ್ಲಿ ತೇಲಾಡಬೇಕು. ಹಾಗಿಲ್ಲದ ಕಾವ್ಯವು ಸತ್ಕೃತಿಯಾಗಬಲ್ಲುದೆ? ೨೨. ಓದತೊಡಗಿದರೆ ಕಲ್ಲ ಮಾಲೆಯ ನಾದದಂತೆ ಕರ್ಕಶ, ಅರ್ಥಮಾಡಹೊರಟರೆ ಕಬ್ಬಿಣದ ಕಡಲೆ, ರಸವನ್ನು ಶೋಧಿಸಿ ತೆಗೆಯೋಣವೆಂದರೆ ಉಕ್ಕಿನ ಪುಡಿ. ಹೀಗಿರುವ ಕೆಳದರ್ಜೆಯ ಕವಿತೆಯನ್ನು ಇಲ್ಲಿ ಪ್ರಸ್ತಾಪಿಸುವುದೇ ಬೇಡ. ೨೩. ಅಳಿಗವಿಗಳ ಕಾವ್ಯಗಳ ಹೊರವನ್ನು ಮಾತ್ರ

ಪೆಟವನ ಕಣ್ಗಳಂಧಕನ ಕಾಲ್ಗಳವಿಂತೊಡಗೂಡಿ ಗಾವುದಂ
ದಳದೊಡೆ ಬಲ್ಲಿದಂ ನಡೆದಮಾಟ್ಕೆಯೆನಿಪ್ಪುದೆ ಜೇಡಮಾಣೆಲೇ।
ಅೞಿಗವಿ ನಿನ್ನ ತನ್ನೆರವಿನೋದಿನ ಕಬ್ಬಮನೋದಿದರ್ ಸುಧಾ
ನಿಳಯದ ಮುಂದೆ ಸತ್ಕೃತಿಯ ಮುಂದೆ ಸುಖಾಬ್ಧಿಯ ಮುಂದದೊರ್ವೆಯಂ ೨೪

ಅದು ಘೂಕಂ ದಿವದೊಳ್ ಕಾ
ಣದು ನಿಶ್ಚಯಮಂತೆ ದುರ್ಜನಂ ಕಾಣಂ ಕಾ।
ವ್ಯದೊಳತಿ ರಸಮನಸೂಯಾ
ಸದನಂ ಸುಖದೂರನವನಮಾತೇಕಿದೞೊಳ್ ॥ ೨೫

ಕ್ಷುದ್ರಂಗೆ ಸಕಲಸುಜನೋ
ಪದ್ರವರೂಪಂಗೆ ಪರರ ಕಾವ್ಯಾರ್ಥಮಂ।
ಛಿದ್ರಿಸುವಂಗತಿಶಬ್ದದ
ರಿದ್ರಂಗಕ್ಕುಮೆ ನವೀನಕಾವ್ಯಾರಂಭಂ ॥ ೨೬

ಒಳಗೞಿಯದೆ ಸತ್ಕಾವ್ಯದ
ಕಳೆಯುೞಿಯದೆ ಲಘುತರತ್ವದಿಂ ನಾಲ್ಕೆರಡಾ।
ಯ್ಕುಳಿ ಮಾತನಾಡಿಯುೞಿ ಹೆ
ಕ್ಕಳಮಿಕ್ಕಿದೊಡೊಲ್ವರೇ ಕವೀಂದ್ರಾಭರಣರ್ ॥ ೨೭

ನೋಡಿ ಸಮಾಧಾನಪಟ್ಟುಕೊಳ್ಳಬೇಕು. ಹಾಗಿಲ್ಲದೆ ಆ ಕಾವ್ಯದ ಅರ್ಥಪರಿಶೀಲನೆಗೆ ಹೊರಟರೆ ಅಲ್ಲಿ ಏನಿದೆ ? ಬರಿ ಟೊಳ್ಳು, ಶುಷ್ಕ, ಒಂದಕ್ಕೊಂದು ಸಂಬಂಧವಿಲ್ಲ. ಎಲ್ಲ ಅಸ್ತವ್ಯಸ್ತ. ೨೪. ಹೆಳವನಿಗೆ ಕಾಲು ಇಲ್ಲ, ಕಣ್ಣುಗಳಿವೆ; ಅದರಂತೆ ಕುರುಡನಿಗೆ ಕಣ್ಣಿಲ್ಲ, ಕಾಲು ಉಂಟು. ಈ ಇಬ್ಬರೂ ಸೇರಿ ಎಂದರೆ ಕುರುಡನ ಹೆಗಲಮೇಲೆ ಹೆಳವ ಕುಳಿತು ಒಂದು ಗಾವುದ ದೂರ ನಡೆದ ಮಾತ್ರಕ್ಕೆ ಅದು ಒಬ್ಬ ಬಲಿಷ್ಠನು ದಾರಿ ನಡೆದಂತೆ ಆದೀತೆ ? ಹಾಗೆ ಎಲೆ ಅಳಿಗವಿ ! ನಿನ್ನ ಕಲಾಕೃತಿಯ ಆ ಓದು ! ಆ ಕವಿತ್ವಗಳನ್ನು ಅಮೃತನಿಲಯದ ಮುಂದೆ, ಒಳ್ಳೆಯ ಕಾವ್ಯದ ಮುಂದೆ, ಸುಖಸಾಗರದ ಮುಂದೆ ಒಮ್ಮೆಯಾದರೂ ಓದಲು ಸಾಧ್ಯವೆ ? ೨೫. ಗೂಬೆ ಹಗಲಿನಲ್ಲಿ ಕಾಣದಿರುವುದು ದಿಟ. ಅದರಂತೆ ಅಸೂಯೆಗೆ ತವರ್ಮನೆಯಾದವನೂ, ಸುಖದೂರನೂ ಆದ ಅರಸಿಕನು ಕಾವ್ಯದಲ್ಲಿ ರಸೋತ್ಕರ್ಷವನ್ನು ಕಾಣಲಾರ; ಎಂದಮೇಲೆ ಸಹೃದಯರು ಮೆಚ್ಚಿ ಆನಂದಿಸುವ ಈ ಕಾವ್ಯದಲ್ಲಿ ಅವನ ಮಾತು ಏಕೆ ? ೨೬. ಸುಜನರಿಗೆ ತೊಂದರೆ ಕೊಡುವ ಅಲ್ಪನಿಗೆ, ಇತರರ ಕಾವ್ಯಾರ್ಥವನ್ನು ಕದಿಯುವ ಶಬ್ದದರಿದ್ರನಿಗೆ, ನವ್ಯಾರ್ಥಶೋಭಿತವಾದ ಈ ಕಾವ್ಯವು ರುಚಿಸುವುದೆ ? ೨೭. ಸತ್ಕಾವ್ಯದ ತಿರುಳನ್ನು ಅರಿಯದೆ, ಅದರ ರಸ–ಭಾವ–ಅಲಂಕಾರಾದಿಗಳ ಉಜ್ವಲತೆಯನ್ನು ಪರಿಶೀಲಿಸದೆ, ಹಗುರವಾಗಿ ನಾಲ್ಕು ಮಾತುಗಳ

ಬರೆದಾಹ ! ಬರೆದೆ ಭಾಪುರೆ !
ಬರೆದಕ್ಕಟ ! ಬರೆದೆ ಲೇಸು ! ಬರೆದೆಯೆನುತ್ತುಂ ।
ಬಱಿದೆ ತಲೆದೂಗುವುದಱಿಂ
ಬಱಿದಪ್ಪುದು ಕಾವ್ಯಮಱಿಯದರ ಜಾಣಿಂದಂ ॥ ೨೮

ತನಗೆ ಕವಿತ್ವಮಿಲ್ಲ ಪೆಱರಂ ಪಟಿದಲ್ಲದೆ ನಿಲ್ಲನಾತನೊಳ್
ಮುನಿವುದನೀತಿ ಪಂದಿ ಡುಱುಕೆಂದೊಡೆ ತಾಂ ಡುಱುಕೆಂಬುದೇ ಮಹಾ ।
ವನಕರಿಯಂ ವಿದಾರಿಸುವ ಸಿಂಹಮದಂತತಿದೋಷಿಯಪ್ಪ ದು
ರ್ಜನರ ಕಟೂಕ್ತಿಗಂಜದೆ ಲಸತ್ಕೃತಿಯಂ ಸಲೆಮಾಟ್ಕಿಸಜ್ಜನರ್ ॥ ೨೯

ಗೌರೀವರಕರ್ಣಾಂಲಂ
ಕಾರಂ ರಸಪೂರಮತಿಗಭೀರಂ ಕಾವ್ಯಂ ।
ನೀರಸರಱಿವಂತೇನಿದು
ತಾರೆಲೆಯೋ ಬೀದಿವಾಡೆ ನೆರವಿಯ ತುಮುಕೇ ॥ ೩೦

ರಸಮಿದು ಭಾವಮಿದರ್ಥಮಿ
ದು ಸಮಾಸಮಿದುಚಿತಪದಮಿದುತ್ಪ್ರೇಕ್ಷೆಯಿದೆಂ ।
ದು ಸವಿದು ಸವಿದು ಕರಂ ನವ
ರಸದೊಳಗಾಟುತ್ತುಮಿರ್ಪ ರಸಿಕರ್ ಬಲ್ಲರ್ ॥ ೩೧

ನ್ನಾಡಿದರೆ ಸಹೃದಯರಾದ ಕವಿಗಳು ಮೆಚ್ಚುವರೆ ? ೨೮. ಪ್ರತಿಭೆಯಿಲ್ಲದೆ ತಾವೂ ಕವಿಯಾಗಬೇಕೆಂದು ಬಯಸುವ ಅಳಿಗವಿಗಳು "ಓಹೊ, ಬರೆದೆವು ! ಬರೆದೆವು, ಭೇಷ್! ಆಹಾ, ಬರೆದೆನು ! ಭೇಷ್ ಭೇಷ್ ಬರೆದೇಬಿಟ್ಟೆ !" ಎಂದು ಸುಮ್ಮನೆ ತಮಗೆ ತಾವೇ ತಲೆದೂಗುವುದರಿಂದ ; ಕಾವ್ಯ ಹೃದಯವನ್ನು ಅರಿಯದವರ ಇಂತಹ ಜಾಣ್ಮೆಯಿಂದ ಅಂಥ ಕಾವ್ಯವು ಕೇವಲ ಅಳಿಕಬ್ಬವೇ ಆಗುತ್ತದೆ. ೨೯. "ತನಗೆ ಕವಿತ್ವ ಭಾಗ್ಯವಿಲ್ಲ ; ಹೆರವನ್ನು ನಿಂದಿಸಿದಲ್ಲದೆ ತನಗೆ ಉಳಿಗಾಲವಿಲ್ಲ" ಎಂದು ಭಾವಿಸುವವನನ್ನು ನಾವು ಏಕೆ ನಿಂದಿಸಬೇಕು ? ಹಂದಿಯು ಗುರುಗುಟ್ಟಿದ ಮಾತ್ರಕ್ಕೆ ಮಹಾಗಜವನ್ನು ಶೀಳುವ ಬಲಿಷ್ಠವಾದ ಸಿಂಹವು ಪ್ರತಿಯಾಗಿ ಗುರುಗುಟ್ಟುವುದೆ ? ಅದರಂತೆ ದುರ್ಜನರು ನಿಂದಿಸಿದ ಮಾತ್ರಕ್ಕೆ ಸಜ್ಜನರು ಅದಕ್ಕೆ ಹೆದರಿ ತಮ್ಮ ಕಾವ್ಯರಚನೆಯನ್ನು ಕೈಬಿಡುತ್ತಾರೆಯೆ ? ೩೦. ಕಾವ್ಯವು ಗೌರೀಪತಿ ಪರಶಿವನು ಕೇಳಿ ಆನಂದಿಸುವ ರಸಭರಿತವೂ ಅತಿ ಗಂಭೀರವೂ ಆದದ್ದು. ಹಾಗಲ್ಲದೆ ಈ ಕಾವ್ಯವು ಗ್ರಾಮೀಣರು ತಿಳಿದುಕೊಂಡಿರುವಂತೆ ತರಗೆಲೆಯೋ, ಬೀದಿಯ ಮಾತೆ, ಗುಂಪಿನ ತಂತೀವಾದ್ಯವೆ ? ೩೧. ಇದು ರಸ, ಇದು ಭಾವ, ಇದು ಸಮಾಸ, ಇದು ಉಚಿತವಾದ ಪದ, ಇದು ಉತ್ಪ್ರೇಕ್ಷೆ ಎಂದು ರಸಾನು

ನೋಡುವೊಡೊಂದಕ್ಕರಮದು
ಮೂಡುವೊಡುಚ್ಚರಣೆಗರಿದು ಮೂಱುಂ ತೆಱನಂ।
ಕೂಡೆ ಕವಿತತಿ ವಿಚಾರಿಸ
ಬೇಡದಱಿಂ ಱಟಿಕುಳಕ್ಷಳಂಗಳನಿದಱೊಳ್ ॥ ೩೨

ಗಿರಿಜಾಕಲ್ಯಾಣಮಿಂತೀನುತಕೃತಿಯ ಪೆಸರ್ ಭಾಪುರೇ ! ಕಾವ್ಯನಾಥಂ
ಗಿರಿಜಾನಾಥಂ ಕಥಾಸಂಗತಿ ವರಗಿರಿಜೋದ್ವಾಹಮೀಕಾವ್ಯಮಂ ಬ।
ತ್ತರದಿಂ ತಾನೊಲ್ದು ಪೇಳ್ದಂ ಶಿವಕವಿ ಪರಿದೇವಂ ಮಹೋತ್ಸಾಹದಿಂದಂ
ಪರಮಾನಂದಾಬ್ಧಿ ಪಂಪಾಪುರದರಸ ವಿರೂಪಾಕ್ಷ ಸಾಕ್ಷಾತ್ಸುಪುತ್ರಂ ॥ ೩೩

ಆತನ ಗುರುಕುಲಮತಿ ವಿ
ಖ್ಯಾತಂ ಘನಪೂತಮಿಂದುಧರ ಸಂಭೂತಂ।
ನೂತನ ಪುಣ್ಯವ್ರಾತಂ
ಪ್ರೀತಿಕರಂ ಭೂತಳಾತಿಶಯ ಸುಖಜಾತಂ ॥ ೩೪

ಸುರುಚಿರಮೂರ್ತಿ ಸತ್ಯತರಮೂರ್ತಿ ಕೃಪಾಕರಮೂರ್ತಿ ಪುಣ್ಯವಿ
ಸ್ತರಗುರುಮೂರ್ತಿ ಶಾಂತಿಮಯಮೂರ್ತಿ ಸುಧಾಕರಮೂರ್ತಿಯುತ್ತರೋ।
ತ್ತರಪರಮೂರ್ತಿ ಮುಕ್ತಿಸುಖಮೂರ್ತಿ ಮನೋಹರಮೂರ್ತಿ ಚಂದ್ರಶೇ
ಖರ ಗುರುಮೂರ್ತಿ ಕೀರ್ತಿಪತಿ ಪಂಪೆಯ ಶಂಕರದೇವರೊಪ್ಪುವರ್ ॥ ೩೫

ಗುಣವಾಗಿ ವಿನ್ಯಸ್ತವಾಗಿರುವ ರಸಮಯ ಕಾವ್ಯವನ್ನು ಆಸ್ವಾದಿಸಿ ತನ್ಮಯರಾಗಿರುವ ಸಹೃದಯರು ಮಾತ್ರ ಕಾವ್ಯಹೃದಯವನ್ನು ಅರಿಯಬಲ್ಲರು. ೩೨. ಹಳಗನ್ನಡದಲ್ಲಿ ಬಳಕೆಯಲ್ಲಿರುವ ಱ ಟಿ–ಕುಳ ಮತ್ತು ಕ್ಷಳ ಎಂಬ ಅಕ್ಷರಗಳು ನೋಡುವುದಕ್ಕೆ ಒಂದೇ ಅಕ್ಷರ, ಆದರೆ ಅದನ್ನು ಉಚ್ಚರಿಸುವುದು ತುಂಬಾ ಕಷ್ಟ. ಆದ್ದರಿಂದ ಕವಿಗಳು ಈ ತೆರನಾದ ಅಕ್ಷರ ವಿಂಗಡಣೆಗೆ ಇಲ್ಲಿ ಕೈಹಾಕುವುದೇ ಬೇಡ. ೩೩. ಶ್ರೇಷ್ಠವಾದ ಈ ಕೃತಿಯ ಹೆಸರು ಗಿರಿಜಾಕಲ್ಯಾಣ. ಕಾವ್ಯಕರ್ತ ಗಿರಿಜಾಧವ. ಕಾವ್ಯವಸ್ತು ಗಿರಿಜಾವಿವಾಹ! ಇಂತಹ ಈ ಮಹಾಕಾವ್ಯವನ್ನು ಪರಮಾನಂದಕ್ಕೆ ಸಮುದ್ರದಂತಿರುವ ಪಂಪಾವಿರೂಪಾಕ್ಷಸ್ವಾಮಿಯ ಕೃಪೆಗೆ ಪಾತ್ರನಾದ ಶಿವಕವಿ ಹರಿಹರನು ಮಹೋತ್ಸಾಹದಿಂದ ರಚಿಸಿದ್ದಾನೆ. ೩೪. ಆ ಕವಿಯ ಗುರುವಂಶವು ಬಹು ಪ್ರಸಿದ್ಧವಾದದ್ದು, ಅತ್ಯಂತ ಪವಿತ್ರವಾದದ್ದು, ಇಂದುಧರನಾದ ಪರಶಿವನಿಂದ ಬಂದುದು ; ಪುಣ್ಯಕರವೂ ಪ್ರೀತಿಕರವೂ ಆಗಿ ನಾಡಿನಲ್ಲಿ ಸುಖಸಂತೋಷಗಳಿಂದ ಬಾಳಿ ಏಳ್ಗೆವೆತ್ತುದು. ೩೫. ಕಾವ್ಯಕರ್ತೃ ಹರಿಹರದೇವನ ಗುರು ಹಂಪೆಯ ಶಂಕರದೇವರು. ಅವರ ವ್ಯಕ್ತಿತ್ವವನ್ನು ಕವಿ ಹೀಗೆ ವರ್ಣಿಸಿದ್ದಾನೆ–ರಮ್ಯ ವ್ಯಕ್ತಿತ್ವ, ಸತ್ಯಸಂಧತೆ, ಕಾರುಣ್ಯ, ಪುಣ್ಯನಿಧಿ, ಶಾಂತಸ್ವಭಾವ, ಮನಂಬುಗುವ ನಿಲವು, ನಿತ್ಯಾನಂದ, ಮನಃ ಪ್ರಸನ್ನತೆ ಮುಂತಾದ ಸದ್ಗುಣಗಳಿಂದ ಅವರು ಮೂರ್ತಿ

ಆಶೈವಾಗಮಸಿದ್ಧರಪ್ಪ ಪರಮ ಶ್ರೀ ಶಂಕರಾಚಾರ್ಯರಿಂ
ಪಾಶಚ್ಛೇದಮನಿಂಬುಗೊಂಡು ಮೆಱೆದಂ ಶ್ರೀ ಶುದ್ಧ ಪಂಚಾಕ್ಷರೀ ।
ವೇಶಾನಂದರಸಾರ್ದ್ರಚಿತ್ತಯುತಹೃದ್ರಾಜೀವ ಸಂಪೂರ್ಣ ಸಂ
ಕಾಶಪ್ರಜ್ವಲಮೂರ್ತಿ ಕೀರ್ತಿಭರಿತಂ ಶ್ರೀ ಮಾದಿರಾಜಾಹ್ವಯಂ ॥ ೩೬

ಇಂತಿಂತೊಪ್ಪುವ ಮಾದಿರಾಜನ ಮನೋದುಗ್ಧಾಬ್ಧಿಚಂದ್ರಂ ಶಿವಂ
ಶಾಂತಂ ಶಾಶ್ವತಮೂರ್ತಿ ಶೈವಸುಭಗಂ ಸಾಕಾರಸರ್ವೇಶ್ವರಂ ।
ಸಂತೋಷಾಭರಣಂ ಪ್ರಸನ್ನಕರಣಂ ಪ್ರತ್ಯಕ್ಷಪಂಚಾನನಂ
ಸಂತಂ ಹಂಪೆಯ ಮಾಯಿದೇವನೆಸೆದಿರ್ಪಂ ಶೈವಸಾರೋದಯಂ ॥ ೩೭

ಶ್ರೀಗುರು ಪರಗುರು ಘನಮಹಿ
ಮಾಗುರು ಮಾಧುರ್ಯಗುರು ಮಹಾಗುರು ವರವಿ ।
ದ್ಯಾಗುರು ಸುಖೈಕಗುರು ವಸು
ಧಾಗುರು ಶೈವಗುರು ಶಾಂತಗುರು ಮಾಯ್ದೇವಂ ॥ ೩೮

ಸದಮಳನೆಂಬುದುತ್ತಮ ಗುಣಾಶ್ರಯನೆಂಬುದು ಶೈವಸಿದ್ಧನೆಂ
ಬುದು ರವಿತೇಜನೆಂಬುದು ಕೃಪಾಂಬುಧಿಯೆಂಬುದು ಶಾಂತಮೂರ್ತಿಯೆಂ ।
ಬುದು ಪರಮಾಗಮಪ್ರಕರನೆಂಬುದು ಹಂಪೆಯ ಮಾಯಿದೇವನೆಂ
ಬುದು ಶಿವನೆಂಬುದಪ್ರತಿಮನೆಂಬುದು ಸದ್ಗುರುವೆಂಬುದೀಜಗಂ ॥ ೩೯

ವೆತ್ತ ಚಂದ್ರಶೇಖರನಂತೆ ವಿಖ್ಯಾತರಾದನರು. ೩೬. ವೇದವೇದಾಂತಾಗಮ ಪಾರಂಗತರಾದವರು ಈ ಶಂಕರಾಚಾರ್ಯರು. ಅಂಥ ಆಚಾರ್ಯರಿಂದ ಪಾಶವಿಚ್ಛೇದರೂಪವಾದ ಶಿವದೀಕ್ಷೆಯನ್ನು ಪಡೆದು, ಶುದ್ಧ ಪಂಚಾಕ್ಷರೀ ಮಹಾಮಂತ್ರೋಪದೇಶವನ್ನು ಪಡೆದು, ಶ್ರೀ ಮಾದಿರಾಜ ಎಂಬುವನು ಆನಂದ ರಸಾರ್ದ್ರಚಿತ್ತನೆನಿಸಿ ಉಜ್ವಲ ಕೀರ್ತಿಶಾಲಿಯಾಗಿದ್ದನು. ೩೭. ಹೀಗೆ ಆ ಮಾದಿರಾಜನ ಮನಸ್ಸಿಗೆ ನೆಮ್ಮದಿಯನ್ನು ಉಂಟುಮಾಡುವ ಮಹಾ ಸಂತನೇ ಹಂಪೆಯ ಮಾಯಿದೇವ ಆಚಾರ್ಯ. ಆತನ ರಮ್ಯ ವ್ಯಕ್ತಿತ್ವ—ಶಿವವೂ ಶಾಂತವೂ ಶಾಶ್ವತ ಶೈವ ಚಿಹ್ನೆಗಳಿಂದ ಮನೋಹರವೂ ಆದದ್ದು. ಆದ್ದರಿಂದ ಆತ ಸಾಕಾರ ಸರ್ವೇಶ್ವರ. ಸಂತೋಷಕ್ಕೇ ಆಭರಣವೆನಿಸಿದ್ದ. ಪ್ರಸನ್ನಚಿತ್ತನಾಗಿ ಪ್ರತ್ಯಕ್ಷ ಪರಶಿವನಂತಿದ್ದ. ೩೮. ಶೈವಗುರು ಪದವಿಯನ್ನು ಅಲಂಕರಿಸಿದ ಮಾಯಿದೇವರು ಪರಮಗುರು ಘನಮಹಿಮಾನ್ವಿತನಾಗಿದ್ದ. ಭಕ್ತರಿಗೆ ಧರ್ಮೋಪದೇಶಮಾಡಿ ಮಾಧುರ್ಯಗುರು, ಮಹಾಗುರು ವಿದ್ಯಾಗುರುವೆನಿಸಿದ್ದ ಆತ ನಿತ್ಯಾನಂದ ಜಗದ್ಗುರುವೆನಿಸಿದ್ದ. ೩೯. ಸದ್ಗುರು ಮಾಯಿದೇವ ಆಚಾರ್ಯರಲ್ಲಿದ್ದ ಅನೇಕ ಕಲ್ಯಾಣ ಗುಣಾವಳಿಯನ್ನು ಮನಗಂಡ ಜನ—ನಿರ್ಮಲವಾದ ಮನಸ್ಸು, ಉತ್ತಮ ಗುಣಗಳಿಗೆ ಗಣಿ, ಶೈವಸಿದ್ಧ, ರವಿಯಂತೆ ತೇಜಸ್ವಿ, ಕೃಪಾಸಾಗರ, ಶಾಂತಮೂರ್ತಿ, ಪರಮಾಗಮವಿಶಾರದ, ಅಪ್ರತಿಮ,

ಧರೆಯೊಳಗಾಮಾಯ್ದೇವರ
ವರಕರುಣಂ ಬಡೆದು ಮೆಱೆವನುನ್ನತತೇಜಂ ।
ಗುರುಪದಭಕ್ತಂ ಹಂಪೆಯ
ಹರಿದೇವಂ ದೇವಕವಿ ಕಳಾವಿದರರಸಂ ॥ ೪೦

ಜಾಣಂ ರಸಿಕಂ ಸುಜನ
ಪ್ರಾಣಂ ಕವಿತಾನಿಧಾನನಧಿಕಂ ಪುಣ್ಯಾ ।
ಕ್ಷೂಣಂ ವರಗಿರಿಜಾ ಕ
ಲ್ಯಾಣಮನೊರೆದಂ ವಿವೇಕಿ ಹರಿಹರದೇವಂ ॥ ೪೧

ಎಂದಿಂತೆಲ್ಲಾ ಕವೀಂದ್ರರ್ ಪೊಗೞೆ ಪರಸೆ ಭಕ್ತವ್ರಜಂ ಸಜ್ಜನರ್ ಸಾ
ನಂದಂ ಮಜ್ಜುಯ್ಯ ಭಾಪುನ್ನತಕೃತಿ ಭಲರೇ ಚಿತ್ರಮಾಹಾ ಎನುತ್ತುಂ ।
ಳ್ಪಿಂದಂ ಕೊಂಡಾಡೆ ಲೋಕಂ ಸ್ತುತಿಯಿಸೆ ಪದೆಪಿಂ ಪೇೞ್ದಪೆಂ ರೀತಿಭಾವಂ
ಛಂದೋಲಂಕಾರಸಾರಂ ಪುದಿದಿರೆ ಗಿರಿಜೋದ್ವಾಹಮಂ ಪ್ರೀತಿಯಿಂದಂ ॥ ೪೨

ಗಿರಿಜಾಕಲ್ಯಾಣಮನೊ
ಲ್ದೊರೆವೆಂ ಗುರುಕರುಣದಿಂದೆ ರಸಿಕರ್ ಕವಿಗಳ್ ।
ಪಿರಿಯರ್ ಸುಜನರ್ ಭಕ್ತರ್
ಪರಮಾರ್ಥದೆ ಕೇಳ್ವುದೀ ಪ್ರಬಂಧೋನ್ನತಿಯಂ ॥ ೪೩

ಶಿವಸ್ವರೂಪ, ಸದ್ಗುರು ಎಂದು ಮುಂತಾಗಿ ಆತನನ್ನು ಹೊಗಳುತ್ತಿತ್ತು. ೪೦. ಧರೆಯಲ್ಲಿ ಆ ಮಾಯಿದೇವ ಆಚಾರ್ಯರ ಕೃಪೆಗೆ ಪಾತ್ರನಾದವನು ಹರಿಹರಕವಿ. ಗುರುಪದ ಭಕ್ತನೂ ಕಲಾಪ್ರವೀಣನೂ ಆದ ದೇವಕವಿ ಹಂಪೆಯ ಹರಿದೇವನು ಕೀರ್ತಿಶಾಲಿಯಾಗಿದ್ದಾನೆ. ೪೧. ಆತ ಜಾಣ, ರಸಿಕ, ಸುಜನರಿಗೆ ಪ್ರಾಣ, ಕವಿತೆಗೆ ನಿಧಾನ, ಅಧಿಕ ಪುಣ್ಯಶಾಲಿ, ವಿವೇಕಿ. ಇಂತಹ ಹರಿಹರದೇವನು ಗಿರಿಜಾಕಲ್ಯಾಣವನ್ನು ರಚಿಸಿದ. ೪೨. ಎಂದು ಮುಂತಾಗಿ ಎಲ್ಲ ಕವೀಂದ್ರರು ಆತನನ್ನು ಹೊಗಳಿದರು. ಸದ್ಭಕ್ತರು ಹರಸಿದರು. ಸಹೃದಯರು ಹರ್ಷಿಸಿ ಮಜ್ಜುಯ್ಯ! ಭಾಪು! ಭೇಷ್ ಇದು ಎಂತಹ ಉನ್ನತ ಕೃತಿ! ಎಂದು ಕೊಂಡಾಡಿದರು. ಲೋಕವು ಪ್ರೀತಿಯಿಂದ ಹೊಗಳಿತು. ಇದರಿಂದ ಸ್ಫೂರ್ತಿಗೊಂಡವನಾಗಿ ರೀತಿ–ಭಾವ–ಛಂದಸ್ಸು ಮತ್ತು ಅಲಂಕಾರಸಾರ ಪೂರ್ಣವಾದ ಗಿರಿಜಾಕಲ್ಯಾಣ ಮಹಾಕಾವ್ಯವನ್ನು ಪ್ರೀತಿಯಿಂದ ಹೇಳುವೆನು. ೪೩. ಗುರುವಿನ ಕೃಪೆಯಿಂದ ಗಿರಿಜಾಕಲ್ಯಾಣವನ್ನು ಒಲ್ದು ಒರೆವೆನು. ಈ ಉನ್ನತ ಪ್ರಬಂಧವನ್ನು ರಸಿ

ಎಂತೆನೆ ವಿಶಾಲಧಾತ್ರೀ
ಕಾಂತಾನಾಭೀಸರೋಜಸುರುಚಿರವರ ಮ ।
ಧ್ಯಾಂತಸ್ಥಿತನುತ ಕರ್ಣಿಕೆ
ಯಂತಿರ್ಪುದು ಮೇರುವದಱ ಮೂಡಣದೆಸೆಯೊಳ್ ॥ ೪೪

ಶಿವ ಶಿವ! ಪಂಚಾಶತ್ಕೋ
ಟಿ ವಿಸ್ತೃತಾವನಿಗೆ ನೀಲಮೇಖಲೆಯಂತೊ ।
ಪ್ಪುವುದಾತ್ತ ಲೋಲಕಲ್ಲೋ
ಲ ವಿವಿಧ ಸಲಿಲಚರಪೂರ ಪಾರಾವಾರಂ ॥ ೪೫

ವ ॥ ಅದೆಂತೆಂದೊಡೆ

ವಿಳಸತ್ಕಲ್ಲೋಲಮಾಲಾಪ್ರತಿಹತವಿತತ ಪ್ರೋಚ್ಚಲಚ್ಛೈಲ ಕೋಳಾ
ಹಳಿತೋದ್ಯತ್ಫೇನ ನಾನಾಕರಿಮಕರವಿಪುಚ್ಛಪ್ರಹಾರಪ್ರತಾಪೋ ।
ದ್ಗಳಿತಾನಂತಪ್ರರತ್ನಪ್ರಬಲಜಲಚರಾನೀಕ ಗಂಭೀರಭೀಮೋ
ಜ್ಜ್ವಳರಾವಪ್ರಾದ್ಭುತಪ್ರೋನ್ಮಿಳಿತ ಘುಳು ಘುಳುಧ್ವಾನಮಂಭೋನಿಧಾನಂ ॥ ೪೬

ವ ॥ ಮತ್ತಮಲ್ಲದೆ

ನೊರೆಯಿಂ ಬುದ್ಬುದದಿಂ ಕಣಾವಳಿಗಳಿಂದಾವರ್ತದಿಂ ತುಂತುಱಿಂ
ತೆರೆಯಿಂ ಪೆರ್ದೆರೆಯಿಂ ತಿಮಿಂಗಿಲಗಿಲಸ್ತೋಮಂಗಳಿಂ ಕಚ್ಛಪೋ ।
ತ್ಕರದಿಂ ನಕ್ರ ನಿಕಾಯದಿಂ ಮಕರದಿಂ ನೀರಾನೆಯಿಂ ಕಂಬುವಿಂ
ವರರತ್ನವ್ರಜದಿಂ ಪ್ರವಾಳ ಲತೆಯಿಂದೊಪ್ಪಿತ್ತು ನೀರಾಕರಂ ॥ ೪೭

ಕರು ಕವಿಗಳು ಹಿರಿಯರು ಸುಜನರು ಭಕ್ತರು ಆದರದಿಂದ ಕೇಳಬೇಕು. ೪೪. ಮುಂದೆ ಕಾಣುವುದೆ ಮೇರು ಪರ್ವತ! ಅದು ವಿಶಾಲವಾದ ಭೂಮಿ ಎಂಬ ಕಾಂತೆಯ, ನಾಭಿ ಎಂಬ ಕಮಲದ ಮಧ್ಯದಲ್ಲಿ ಮನೋಹರವಾಗಿರುವ ಕರ್ಣಿಕೆ (ಬೀಜಕೋಶ)ಯಂತೆ ಬೆಳಗುತ್ತಿದೆ, ಅದರ ಪೂರ್ವದಿಕ್ಕಿನಲ್ಲಿ ೪೫. ಓಹೊ! ಆ ನೆಲದ ವಿಸ್ತಾರವೊ ಐವತ್ತು ಕೋಟಿ! ಆ ನೆಲವೆಂಬ ರಮಣಿಗೆ ನೀಲಮೇಖಲೆ (ಒಡ್ಯಾಣ)ಯೊ ಎಂಬಂತೆ ಒಪ್ಪುವ ಕಡಲು! ಅದು ಉನ್ನತವಾದ ಚಂಚಲವೂ ಆದ ಅಲೆಗಳಿಂದಲೂ ವಿವಿಧ ಜಲಚರ (ನೀರ ಜೀವಿ)ಗಳಿಂದಲೂ ತುಂಬಿ ದಡವೇ ಕಾಣದಷ್ಟು ದೂರ ಹಬ್ಬಿದೆ! ೪೬. ಬೆಳಗುವ ಅಲೆಗಳ ಮಾಲೆ; ಆ ಅಲೆಗಳು ಮಗ್ಗುಲಲ್ಲಿದ್ದ ಶೈಲಗಳಿಗೆ ಹೊಡೆದು ಮೇಲಕ್ಕೆ ಸಿಡಿವ ಕೋಲಾಹಲ! ಮುದ್ದೆ ಕಟ್ಟುತ್ತಿರುವ ನೊರೆಯ ನೆರೆ, ನಾನಾ ಬಗೆಯ ಕರಿ (ನೀರಾನೆ) ಮೊಸಳೆ ಹಾಗೂ ವಿಪುಚ್ಛಗಳ ಪ್ರಹಾರ (ಹೊಡೆತ), ಅದರಿಂದ ಕಳಚಿದ ಅನಂತ ರತ್ನಗಳುಳ್ಳ ಪ್ರಬಲ ಜಲಚರಗಳು, ಅವುಗಳ ಗಂಭೀರವೂ ಭಯಂಕರವೂ ಉದ್ದಾಮವೂ ಆದ ಶಬ್ದ, ಅದರಿಂದ ಹುಟ್ಟುವ ಘುಳು ಘುಳು ಧ್ವನಿ ಇವುಗಳಿಂದ ಆ ಅಂಭೋಧಿಯು ರುದ್ರರಮಣೀಯವಾಗಿದೆ. ೪೭. ಆ ನೀರಾಕಾರ (ಕಡಲು)ವು ನೊರೆ, ಬುದ್ಬುದ,

ಶಾ ॥ ಆ ವಿಸ್ತಾರಗಭೀರವಾರಿನಿಧಿಯಿಂದಂ ಪಶ್ಚಿಮಾಂಬೋಧಿಗಂ
ತೀವಿದರ್ೊಪ್ಪುವುದಾತ್ತಗಹ್ವರ ಗುಹಾಸಂತಾನಪರ್ಯಂತ ಗೋ ।
ತ್ರಾವಾಸೋಜ್ಜ್ವಲ ಗಂಡಶೈಲಶಿಖರ ಪ್ರೋದ್ಭೂತಭೂಜಾತಪ
ತ್ರಾವೇಶೋನ್ನತ ಭೀಮರೂಪಧರದೇವಾಗಮ್ಯ ಹೈಮಾಚಳಂ ॥ ೪೮

ಸ್ರ ॥ ಆ ರಾಜತ್ಕೌಮುದೀಸಂಗತಶಿಶಿರಶಿಲಾನೀಕನಿರ್ಯದ್ಧಿಮಂ ಸ
ಸ್ಮೇರಾಬ್ಜಾಕ್ಷೀ ಕರೋತ್ಪಲ್ಲವ ನಖಕುಸುಮವ್ರಾತ ಚಂಚದ್ವಸಂತಂ ।
ಸೂರಾಂಶುಸ್ಪರ್ಶತೀವ್ರಾನಳಕರರವಿಕಾಂತಾತಪೋದ್ಯನ್ನಿದಾಘಂ
ಕ್ರೂರಾಭೀಳದ್ವಿಪಪ್ರೋಚ್ಚಳಿತಮದ ಜಲಾಸಾರಸಾಂದ್ರಂ ನಗೇಂದ್ರಂ ॥ ೪೯

ವ ॥ ಅಂತುಮಲ್ಲದೆಯುಂ

ಉ ॥ ಪಾಱುವಸೋಗೆ ಸೀಗುರಿ ಚಲಚ್ಚಮರೀಮೃಗವೀಥಿ ಚಾಮರಂ
ಮಾಱಿ ನಿಮಿರ್ಕೆವೆತ್ತ ಕುಜಮೆತ್ತಿದ ಸತ್ತಿಗೆ ಸಿಂಹವಿಷ್ಟರಂ ।
ತೋಱುವ ಚಂದ್ರಕಾಂತಶಿಲೆಯಾಗೆ ಸಮುನ್ನತರಾಜಲೀಲೆಯಂ
ಬೀಱುತೆ ಪೂರ್ವಪಶ್ಚಿಮಕೆ ಪರ್ವಿದ ಪರ್ವತರಾಜನೊಪ್ಪುಗುಂ ॥ ೫೦

ಹನಿಗಳು, ತುಂತುರುಗಳು, ಸುಳಿಗಳು, ಸಣ್ಣ ಅಲೆಗಳು, ದೊಡ್ಡ ತೆರೆಗಳಿಂದಲೂ, ದೊಡ್ಡ ಮೀನು, (ತಿಮಿಂಗಿಲ) ಅವುಗಳನ್ನು ನುಂಗುವ ದೊಡ್ಡ ತಿಮಿಂಗಿಲ (ತಿಮಿಂಗಲಗಿಲ) ಗಳ ಸಮೂಹ, ಆಮೆಗಳ ಗುಂಪು, ಮೊಸಳೆಯ ಮೊತ್ತ, ಮಕರ (ಒಂದು ಬಗೆಯ ಮೀನು) ನೀರಾನೆ, ಶಂಖ, ಶ್ರೇಷ್ಠರತ್ನ ಸಮೂಹ, ಹವಳದಬಳ್ಳಿ, ಮುಂತಾದವುಗಳಿಂದ ಕಂಗೊಳಿಸುತ್ತಿತ್ತು. ೪೮. ಮೇಲೆ ಹೇಳಿದ ಪೂರ್ವಸಮುದ್ರ ಮತ್ತು ಪಶ್ಚಿಮ ಸಮುದ್ರ ಗಳವರೆಗೆ ಹಬ್ಬಿದ (ಪೂರ್ವಾಪರೌತೋಯನಿಧೀವಗಾಹ್ಯ-"ಕುಮಾರ ಸಂಭವ") ಹಿಮಾಲಯ ಪರ್ವತವು ತಪೋಯೋಗ್ಯವಾದ ಅನೇಕ ಏಕಾಂತ ಗುಹೆಗಳು, ಪಕ್ಕದಲ್ಲಿರುವ ಬೆಟ್ಟಗಳು, ಆವಾಸಯೋಗ್ಯವಾದ ದೊಡ್ಡ ಬಂಡೆಗಳು, ಶಿಖರಗಳು, ಅಲ್ಲಿ ಹುಟ್ಟಿರುವ ಮರಗಳೆಂಬ ಕೊಡೆಗಳು ಅವುಗಳಿಂದ ಉನ್ನತವೂ, ಭೀಮವೂ ಆಗಿರುವುದರಿಂದ, ಅದು ದೇವತೆಗಳಿಗೂ ಅಗಮ್ಯ (ಸಂಚಾರಕ್ಕೆ ಕಷ್ಟವಾಗಿ) ವಾಗಿ ಪ್ರಕಾಶಿಸುತ್ತಿದೆ. ೪೯. ಅಲ್ಲಿ ಚಂದ್ರಕಾಂತಶಿಲೆಗಳು ಹೇರಳವಾಗಿವೆ. ಅವುಗಳ ಮೇಲೆ ಬೆಳದಿಂಗಳು ಬಿದ್ದು ಆ ಶಿಲೆ ಗಳಿಂದ ಹಿಮವು ಒಸರುತ್ತಿದೆ; ಅಲ್ಲಲ್ಲಿ ವಿಹರಿಸುವ ತಾವರೆಗಣ್ಣಿನೀರೆಯರು, ಅವರ ಚಿಗುರ್ಗೈಗಳ ನಖಗಳಂತಿರುವ ಕುಸುಮ ಸಮೂಹದಿಂದ ಪ್ರಕಾಶಿಸುವ ವಸಂತ; ರವಿ ಕಿರಣಗಳು ಸೋಂಕಿ ಉರಿಯುತ್ತಿರುವ ಸೂರ್ಯಕಾಂತ ಶಿಲೆಗಳು, ಅವುಗಳ ತಾಪದಿಂದ ತೀಪ್ರವಾದ ಬೇಸಗೆ; ಕ್ರೂರವೂ ಭಯಂಕರವೂ ಆದ ಕಾಡಾನೆಗಳು ಚಿಮ್ಮುತ್ತಿರುವ ಮದಜಲಧಾರೆಗಳ ಜಡಿಮಳೆಯಿಂದ ದಟ್ಟವಾದ ಆ ನಗರಾಜನು ಬೆಳಗುತ್ತಿದ್ದಾನೆ. ೫೦. ಪೂರ್ವ ಪಶ್ಚಿಮ ಸಮುದ್ರಗಳವರೆಗೆ ಹಬ್ಬಿದ ಆ ಪರ್ವತರಾಜನಿಗೆ ರಾಜೋಪಚಾರ

ಚಂ ॥ ಗಿರಿಶಿಖರಂ ಮುಖಂ ಮರದೊಳೊಪ್ಪುವ ಬೀಳಿಲೆ ತಜ್ಜಟಾಳಿ ವಿ
ಸ್ತರವರಗಂಡ ಶೈಲಮೆ ವಿಕೀರ್ಣಭುಜಾವಳಿ ವಾದ್ಯಸಂಕುಲಂ ।
ಕರಿಕುಳ ಬೃಂಹಿತಂ ನೆಗಬ್ದಿ ಸಿಂಹರವಂ ಗಳವಾಗೆ ಸಂತತಂ
ಸ್ಮರರಿಪು ನಾಟ್ಯದೊಳ್ ನೆಲಸಿ ನಿಂದವೊಲೊಪ್ಪಿತು ಭೂರಿಭೂಧರಂ ॥ ೫೧

ನಳನಳಿಸುತ್ತೆ ಸುತ್ತಿಡಿದುತೋರ್ಪ ಕದಂಬಕದಂಬದಿಂ ಚಳ
ಜ್ಜಲದಮನೊತ್ತರಿಪ್ಪ ಘನದೀರ್ಘಕೋಮಳ ವಂಶವಂಶದಿಂ ।
ಬಳಸಿಗಮೆತ್ತಲುಂ ತುಱುಗಿ ಪರ್ವಿದಗುರ್ವಿನ ಬಿಂಬ ಬಿಂಬದಿಂ
ದಿಳೆಯೊಳಗೊಪ್ಪುತಿರ್ಪುದು ಹಿಮಾಚಳಮಾಶ್ರಿತಗೋತ್ರಗೋತ್ರದಿಂ ॥ ೫೨

ವ ॥ ಮತ್ತಮಲ್ಲದೆ

ಕಂ ॥ ಉರವಣಿಸಿ ನಡೆತರುತ್ತುಂ
ಗಿರಿಶಿಖರಮನೇಱಲಾಱದೆರಡುಂ ದೆಸೆಯೊಳ್ ।
ಬರಲನುವಂ ಕಂಡು ದಿವಾ
ಕರನಂದಿಂ ದಕ್ಷಿಣೋತ್ತರಾಯಣನಾದಂ ॥ ೫೩

ಹರಹರ ! ಗಿರಿಯುದ್ದಮನಾ
ರೊರೆದಪರಗ ಚೂಡದಲ್ಲಿ ನಿಂದಿರ್ದು ಸಮಂ ।
ತಿರೆ ತಾರಗೆಯುಂ ವಿದ್ಯಾ
ಧರಿಯರ್ ಮುತ್ತೆಂದು ತೆಗೆದು ತುಡಲಪ್ಪಳಿಪರ್ ॥ ೫೪

ನಡೆದಿದೆ. ಹಾರುವ ನವಿಲು ಪಿಂಛಗಳೇ ಒಂದು ಬಗೆಯ ಛತ್ರ, ಸಂಚರಿಸುವ ಚಮರೀ ಮೃಗ ವೀಥಿಯೇ ಚಾಮರಸೇವೆ, ಎತ್ತರಕ್ಕೆ ಬೆಳೆದು ಹರಡಿರುವ ಮರಗಳೇ ಎತ್ತಿದ ಕೊಡೆಗಳು, ತೋರುವ ಚಂದ್ರಕಾಂತ ಶಿಲೆಯೇ ಎತ್ತರವಾದ ಸಿಂಹಾಸನ, ಹೀಗೆ ರಾಜಲೀಲೆಯಿಂದ ಆ ಗಿರಿರಾಜನು ಒಪ್ಪಿದ್ದಾನೆ. ೫೧. ಗಿರಿಶಿಖರವೆ ಮುಖ, ಮರದ ಬಿಳಲುಗಳೆ ಅವನ ಜಡೆಗಳು, ವಿಸ್ತಾರವಾದ ದೊಡ್ಡಗಂಡಶೈಲವೆ ಹರಡಿದ ಭುಜಗಳು, ಆನೆಗಳ ಬೃಂಹಿತ ಮತ್ತು ಸಿಂಹ ಗರ್ಜನೆಗಳೆ ವಾದ್ಯವಿಶೇಷ; ಹೀಗಿರುವ ಆ ಪರ್ವತವು ಪರಶಿವನ ನಟರಾಜಲೀಲೆಯಂತೆ ಒಪ್ಪಿತ್ತು. ೫೨. ನಳನಳಿಸಿ ಬೆಳೆದು ಸುತ್ತುವರಿದಿರುವ ಕಡಹ (ನೀಪ)ದ ಮರಗಳ ಸಮೂಹ, ಚಲಿಸುತ್ತಿರುವ ಕಾರ್ಮುಗಿಲುಗಳನ್ನು ಒತ್ತರಿಸುತ್ತಿರುವ (ಬಹು) ಎತ್ತರಕ್ಕೆ ಬೆಳೆದಿರುವ ಕೋಮಲ ಬಿದಿರು ಮೆಳೆಗಳು, ಎಲ್ಲೆಲ್ಲಿಯೂ ಬಳಸಿ ದಟ್ಟವಾಗಿ ಹಬ್ಬಿರುವ ತೊಂಡೆಹಣ್ಣಿನ ಬಳ್ಳಿಗಳು, ಹೀಗೆ ಹಿಮಾಚಲ ಪರ್ವತವು ತನ್ನನ್ನು ಆಶ್ರಯಿಸಿರುವ ಅನೇಕ ಬೆಟ್ಟಗಳ ಸಮೂಹದಿಂದ ಕೂಡಿ ಭುವಿಯಲ್ಲಿ ಬೆಳಗುತ್ತಿದೆ. ೫೩. ಅವಸರಸರದಿಂದ ನಡೆತರುವಾಗ ಈ ಗಿರಿಶಿಖರವನ್ನು ಏರಲಾರದೆ ಸೂರ್ಯನು ಇದರ ಎರಡೂ ಪಕ್ಕಗಳಲ್ಲಿ ಬರಲು ಸಿದ್ಧನಾದನು; ಈ ಕಾರಣದಿಂದ ಅಂದಿನಿಂದ ದಕ್ಷಿಣಾಯನ ಮತ್ತು ಉತ್ತರಾಯಣ ಎರಡು ಆಯನಗಳು ಏರ್ಪಟ್ಟುದು. ೫೪. ಓಹೋ !

ಕಂ ॥ ಗಿರಿಯುದ್ದಮನೇನಂ ಬಿ
ತ್ತರಿಪೆನದಂ ಖೇಚರರ್ ಬಿಸಿಲ್ಗಂಜುತ್ತುಂ ।
ಭರದೊಳ್ ಬಟಲ್ದು ಬಂದಾ
ಗಿರಿಶಿಖರದ ಮರದ ತುದಿಯ ನೆಟಲಂ ಸಾರ್ವರ್ ॥ ೫೫

ಕರಮೆಸೆದುದು ಗಿರಿಶಿಖರಂ
ಪರಮ ಸ್ವಚ್ಛಂದಲೀಲೆ ಪರ್ಚಿದ ಗಂಧ।
ರ್ವರ ಗರುಡರ ಸಿದ್ಧರ ಖೇ-
ಚರರ ಮುನೀಶ್ವರರ ಸುರರ ನೆರವಿಗಳಿಂದಂ ॥ ೫೬

ಧರೆಯಱಿಯೆ ಹೊನ್ನಮೆಯ್ಯಂ
ತಿರುತಿರ್ದುಂ ಲಜ್ಜೆಯಿಲ್ಲ ತನಗೆಂದು ಕರಂ ।
ಸುರುಚಿರಧವಳಿಮದಿಂ ಸುರ
ಗಿರಿಯ ಹಿಮನಗದ ಚೆಲ್ವು ನಗದೇಕಿರ್ಕುಂ ॥ ೫೭

ಇಂತಿಂತು ಮೆಱೆಯುತಿರ್ಪುವ
ನಂತಂ ಘನತೇಜದಿಂದಯೋಗ್ರಾಹ್ಯತೆಯುಂ ।
ದಂ ತಣ್ಪಿಂದಾಹಾ ! ರವಿ
ಕಾಂತ ಮಯಸ್ಕಾಂತಮಿಂದು ಕಾಂತಂ ನಗದೊಳ್ ॥ ೫೮

ಶಿವಶಿವ ! ಆ ಗಿರಿಯ ಉದ್ದವನ್ನು ಯಾರು ತಾನೆ ಹೇಳಲು ಸಾಧ್ಯ ! ವಿದ್ಯಾಧರಿಯರು ಈ ಗಿರಿಶಿಖರದಲ್ಲಿ ನಿಂತುಕೊಂಡು ತಾರೆಗಳನ್ನು ಮುತ್ತು ಎಂದು ಭ್ರಮಿಸಿ ಅವುಗಳನ್ನು ತೆಗೆದುಕೊಡ (ಮುಡಿಯ)ಲು ಆತುರಪಡುತ್ತಿದ್ದಾರೆ. ೫೫. ಆ ಗಿರಿಯ ಎತ್ತರವನ್ನು ಏನೆಂದು ತಾನೆ ವರ್ಣಿಸಲು ಸಾಧ್ಯ ! ಏಕೆಂದರೆ ಅಲ್ಲಿ ಸಂಚರಿಸುವ ಖೇಚರರು ಬಿಸಿಲಿಗೆ ಹೆದರಿ ಬಳಲಿ, ಆತುರದಿಂದ ಬಂದು ಆ ಗಿರಿಶಿಖರದ ತುದಿಯಲ್ಲಿರುವ ಮರದ ನೆಳಲನ್ನು ಸಾರುತ್ತಿದ್ದಾರೆ ! ೫೬. ಅತ್ಯಂತ ಲೀಲಾ ವಿನೋದಿಗಳಾದ ಗಂಧರ್ವರು, ಗರುಡರು, ಸಿದ್ಧರು, ಗಗನಚರರು, ಮುನೀಶ್ವರರು ಮತ್ತು ವಿವಿಧದೇವತಾ ವಿಶೇಷಗಳಿಂದ ಆ ಗಿರಿಯ ಶಿಖರಗಳು ಬೆಳಗುತ್ತಿವೆ. ೫೭. ಎಲ್ಲರೂ ತಿಳಿದಿರುವಂತೆ ತಾನು ಹೊನ್ನಮೈ ತಳೆದಿದ್ದರೂ ಮೇರುವು ಶುಭ್ರತೆಯಿಲ್ಲದೆ ಲಜ್ಜೆಗೆಟ್ಟಿದೆ. ಇದರಿಂದಾಗಿ ಹಿಮಗಿರಿಯು ಧಾವಳ್ಯ ದಿಂದ ಕೂಡಿ ತಾನು (ಹಿಮಗಿರಿಯು)ಸುರಗಿರಿಯನ್ನು ಗೇಲಿ ಮಾಡುವಂತಿದೆ. ೫೮. ಹೀಗೆ ಮೆಱೆಯುತ್ತಿರುವ ಅನಂತ ಘನತೇಜಸ್ಸುಗಳು, ಕಬ್ಬಿಣವನ್ನು ಆಕರ್ಷಿಸುವುವಿಕೆ, ಮತ್ತು ಶೈತ್ಯ ಇವುಗಳಿಗೆ ಕ್ರಮವಾಗಿ ಕಾರಣವಾದ ಸೂರ್ಯಕಾಂತ ಶಿಲೆಗಳು, ಅಯಸ್ಕಾಂತ

ಉ ॥ ಆ ನಗದಲ್ಲಿ ಪುಣ್ಯತತಿಯೊ ಪ್ರಭೆಯೊರ್ಬುಳಿಯೋ ಮಹೇಶ್ವರ
ಶ್ರೀನಿಧಿಯೋ ಸುಧಾಕರನೊ ಸತ್ಯಮೋ ನಿತ್ಯಮೊ ಶೈವಪೂರಿತ ।
ಸ್ಥಾನನೊ ಶಾಂತಿಯೊ ದಯೆಯೊ ಧರ್ಮಮೊ ನಿರ್ಮಳನೀತಿಯೊ ಶಿವ
ಜ್ಞಾನಮೊ ಮುಕ್ತಿಸಂಕುಳನೊ ಪೇಳೆನೆ ತಾಪಸವೀಧಿಯೊಪ್ಪುಗುಂ ॥ ೫೯

ಕಂ ॥ ಗುಹೆ ಗುಹೆಗಳೊಳಗೆ ಬಳಸಿದ
ಬಹುಗಹ್ವರ ಗಹ್ವರಂಗಳೊಳ್ ಪರಸೌಖ್ಯಾ ।
ವಹನಿರ್ಝರ ನಿರ್ಝರದೊಳ
ಗಹರಹ ಮೊಪ್ಪಿರ್ಪುದಧಿಕ ಮನು ಮುನಿವೃಂದಂ ॥ ೬೦

ಯಮ ನಿಯಮ ನಿತ್ಯಕರ್ಮಂ
ಸಮನಿಸೆ ವನಲತೆಯ ಗುಲ್ಮವೃಕ್ಷಾವಳಿಯಾ ।
ವಿಮಳವ್ರತಿಗಳ್ ಸಲೆ ಕಂ
ದ ಮೂಲಫಲದಿಂದೆ ತಣಿದು ಪರಿಣಮಿಸಿರ್ಪರ್ ॥ ೬೧

ಭಾಸ್ಕರಕರಸಮ ವಿಮಳಮ
ನಸ್ಕರತಿ ವ್ರತಿಗಳಗ್ರಗಣ್ಯರ್ ಶಮೆಯಿಂ ।
ತಸ್ಕರರತಿಮುದದಿಂದೆ ನ
ಮಸ್ಕರಿಸುವ ಮುನಿಗಳನಘರಿರ್ಪರ್ ನಗದೊಳ್ ॥ ೬೨

ಶಿಲೆಗಳು ಮತ್ತು ಚಂದ್ರಕಾಂತ ಶಿಲೆಗಳು ಆ ಪರ್ವತದಲ್ಲಿ ಹೇರಳವಾಗಿವೆ. ೫೯. ಆ ಪರ್ವತದಲ್ಲಿ ಪುಣ್ಯಪುಂಜವೊ, ಬೆಳಗುಗಳ ಬಳಗವೊ, ಮಾಹೇಶ್ವರ ಸಂಪತ್ತಿನ ಗಣಿಯೊ, ಸುಧೆಯೊ, ಸತ್ಯವೊ, ನಿತ್ಯವೊ, ಶಿವಮಯನೆಲೆಯೊ, ಶಾಂತಿಯೊ, ದಯೆಯೊ, ಧರ್ಮವೊ, ನಿರ್ಮಳನೀತಿಯೊ, ಶಿವಜ್ಞಾನವೊ, ಮುಕ್ತಿಯ ಮೊತ್ತವೊ ಎಂಬಂತೆ ತಾಪಸರ ನೆರವಿ ಒಪ್ಪುತ್ತಿದೆ. ೬೦. ಆ ಗಿರಿಯಲ್ಲಿರುವ ಗುಹೆಗಳು, ಅವುಗಳನ್ನು ಬಳಸಿರುವ ಅನೇಕ ದೊಡ್ಡ ದೊಡ್ಡ ಗುಹೆ (ಗಹ್ವರ)ಗಳು, ಅವುಗಳಲ್ಲಿ ಹರಿಯುವ ಪರಮಸುಖಕರವಾದ ನಿರ್ಝರ (ಗಿರಿನದಿ)ಗಳು, ಅವುಗಳಲ್ಲಿ ದಿನ ದಿನ ಒಪ್ಪಿರುವ ಅನೇಕ ಮನು ಮುನಿ ಸಮೂಹವು ಅಲ್ಲಿ ವಾಸವಾಗಿದೆ. ೬೧. ಯಮ (ಅಂತರಿಂದ್ರಿಯನಿಗ್ರಹ) ನಿಯಮ (ಬಹಿರಿಂದ್ರಿಯನಿಗ್ರಹ) ನಿತ್ಯಕರ್ಮಾನುಷ್ಠಾನ ಪರರಾದ ಮುನಿಗಳು ವನಲತೆ, ಗುಲ್ಮ (ಪೊದೆ) ವೃಕ್ಷಾವಳಿಯ ವ್ರತಶೀಲರಾಗಿ ಅಲ್ಲಿಯ ಕಂದ ಮೂಲಫಲಗಳಿಂದ ತೃಪ್ತರಾಗಿ ಪರಿಣಾಮಗೊಂಡಿದ್ದಾರೆ. ೬೨. ರವಿ ಕಿರಣಗಳಿಗೆ ಸಮವಾದ ನಿರ್ಮಲ ಮನಸ್ಸುಳ್ಳವರೂ, ಅತ್ಯಂತ ವ್ರತಶೀಲರಲ್ಲಿ ಮೊದಲಿಗರೂ, ಶಮೆ (ಕ್ಷಮೆ) ಗುಣರು ಎಂದರೆ ಎಂತಹ

ಕಂ॥ ಗಣ್ಯಾತೀತರ್ ಶಿವಲಾ
ವಣ್ಯದೆ ಸರ್ವಾಂಗಭಸಿತದಿಂ ನೆರೆಯಿಂ ಕಾ ।
ರುಣ್ಯದಿನತಿಧವಳತೆಯಿಂ
ಪುಣ್ಯಂ ಪಣ್ಣಾದ ತೆಱದೆ ತಾಪಸರಿರ್ಪರ್ ॥ ೬೩

ವ॥ ಅಂತುಮಲ್ಲದೆ

ಚಂ॥ ಭಸಿತಮನೊಪ್ಪೆ ಪೂಸುವ ಶಿವಾಗಮವೋದುವ ಶಾಸ್ತ್ರಮಂ ವಿಚಾ
ರಿಸುವ ವಿನೂತನಾಕ್ಷಮಣಿಯಂ ಸರವೇಱಿಪ ನಾರಸೀರೆಯಂ ।
ಪಸರಿಪ ಕಂದಮೂಲಫಲಮಂ ತರೆ ಪೋಪಲಸನ್ಮೃಗಾಜಿನ
ಪ್ರಸರಮನೆಯ್ದೆ ಪೊಲ್ವ ಮುನಿಮುಖ್ಯಕುಮಾರಸಮೂಹಮೊಪ್ಪುಗುಂ ॥ ೬೪

ವ॥ ಅಂತವರ ಶಾಂತಿಮಯ ಶೈವತೇಜಸ್ಸಾಮರ್ಥ್ಯಮೆಂತೆಂದೊಡೆ—

ಕಂ॥ ಮೈಗರೆದು ಮೆಲ್ಲ ಮೆಲ್ಲನೆ
ಕೈಗೊಟ್ಟೊಡನೈದಿ ಮತ್ತೆ ತಂದಿರಿಸಿ ಪಗಲ್ ।
ಬೈಗಿರುಳೆನ್ನದೆ ಸಲೆಬೆಸ
ಕೈಗುಂ ಮುನಿಗಳ್ಗೆ ನಗದ ಮರ್ಕಟನಿಕರಂ ॥ ೬೫

ಓಸರಿಸಿ ಬಿರ್ಚಿ ಪಕ್ಕಮ
ನೋಸರಿಸದೆ ಮುನಿಗಳೊಡನೆ ಪೋಮಸ್ಥಳದೊಳ್ ।

ಕಳ್ಳರೂ ಕೂಡ ಶರಣಾಗುವ ಮುನಿಶ್ರೇಷ್ಠರು ಆ ಗಿರಿಯಲ್ಲಿದ್ದರು. ೬೩. ಅಲ್ಲಿರುವ ತಾಪಸರೂ ಅಸಂಖ್ಯಾತರು ; ಅವರು ಶಿವಲಾವಣ್ಯವುಳ್ಳವರು, ಸರ್ವಾಂಗದಲ್ಲಿ ಧರಿಸಿರುವ ಭಸ್ಮಭೂಷಿತರು, ಜ್ಞಾನ–ವಯೋವೃದ್ಧರು, ಕಾರುಣ್ಯದಿಂದಲೂ, ಅತಿ ಶುಭ್ರತೆಯಿಂದಲೂ ಪುಣ್ಯವೇ ಹಣ್ಣಾದಂತೆ ಪ್ರಕಾಶಿಸುತ್ತಿದ್ದಾರೆ. ೬೪. ಅಲ್ಲಿ ಋಷ್ಯಾಶ್ರಮಗಳಲ್ಲಿರುವ ಮುನಿಕುಮಾರಕರು ಒಂದೊಂದು ಆಶ್ರಮ ಕೆಲಸಗಳಲ್ಲಿ ತೊಡಗಿದ್ದಾರೆ. ಅವರಲ್ಲಿ ಕೆಲವರು ಭಸ್ಮಧಾರಣದಲ್ಲಿ ತೊಡಗಿದ್ದಾರೆ. ಕೆಲವರು ಶಿವಾಗಮಪಠಣ ಮಾಡುತ್ತಿದ್ದಾರೆ. ಕೆಲವರು ಶಾಸ್ತ್ರವಿಚಾರದಲ್ಲಿ ತೊಡಗಿದ್ದಾರೆ. ಕೆಲವರು ಹೊಸ ಮಣಿಮಾಲೆಯನ್ನು ಪೋಣಿಸುತ್ತಿದ್ದಾರೆ. ಮತ್ತೆ ಕೆಲವರು ಮಡಿಮಾಡಿದ ನಾರು ಮಡಿಗಳನ್ನು ಹರಡುತ್ತಿದ್ದಾರೆ. ಕೆಲವರು ಕಂದ ಮೂಲಫಲಗಳನ್ನು ತರಲು ಹೋಗುತ್ತಿದ್ದಾರೆ. ಕೆಲವರು ಮೃಗಾಜಿನವನ್ನು ಹಾಕುತ್ತಿದ್ದಾರೆ. ೬೫. ಆ ಗಿರಿಯಲ್ಲಿರುವ ಕಪಿಗಳು ಮುನಿಗಳ ಸೇವೆಯಲ್ಲಿ ನಿರತವಾಗಿದ್ದವು. ಅವು ರೂಪಾಂತರ ಹೊಂದಿ (ಮೈಗರೆದು) ಮೆಲ್ಲ ಮೆಲ್ಲನೆ ಅವರ ಕೈ ಹಿಡಿದು ಜೊತೆಗೇ ಬಂದು ಅವರನ್ನು ನೆಲೆಸೇರಿಸಿ, ಹಗಲು–ಸಂಜೆ–ಇರುಳು ಎನ್ನದೆ ಮುನಿಗಳ ಸೇವೆ ಮಾಡುತ್ತಿದ್ದವು. ೬೬. ಅಲ್ಲಿರುವ ನವಿಲುಗಳು ಮುನಿಗಳ

ಭಾಸಿಪವೊಲಂತುಮಿಂತುಂ
ಬೀಸುತ್ತೆಟ್ಟರಿಸಿ ಕುಡುವುದಾಶಿಖಿ ಶಿಖಿಯಂ ॥ ೩೬

ವ ॥ ಅಂತೆಟ್ಟಿಱಿಸಿ ಕುಡುತ್ತಿರ್ಪನ್ನೆಗಮಲ್ಲಿ—

ಮ ॥ ಸ್ರ ॥ ಇದು ಭೂಮಿಸ್ಥಾನದಿಂ ಮುತ್ತಿಗೆ ನಡೆಯಿಪ ನೀಲಾಶ್ಮಸೋಪಾನಮಾಹಾ
ಇದು ಸಂಸಾರಾತಪಶ್ರಾಂತರೊಳತಿ ಸುಖಮಿವಂಬುದಶ್ರೇಣಿ ಮೇಣಿಂ ।
ತಿದು ದುಷ್ಕರ್ಮಾಬ್ಜ ಷಂಡಂಗಳನುಱೆ ಕೊರಗಿಪ್ಪೊಂದು ನೀಹಾರಮೆಂಬಂ
ದದೆ ಹೋಮಸ್ತೋಮಧೂಮಂ ನೆಗೆದುದು ಮುನಿಗಳ್ ಬೇಳ್ವ
ಮಂತ್ರಾಗ್ನಿಯಿಂದಂ ॥ ೩೭

ವ ॥ ಮತ್ತಮೊಂದೆಡೆಯೊಳ್

ಮ ॥ ಸುಲಿಪಲ್ ಕೆಂಜೆಡೆ ನಾರಸೀರೆಯಜಿನಂ ಯಜ್ಞೋಪವೀತಂ ಕಮಂ
ಡುಲುವಾಧಾರಕಮಕ್ಷಮಾಲೆಭಸಿತಂ ಸ್ಮೇರಾನನಂ ಕರ್ಣಕುಂ ।
ಡಲಮೊಪ್ಪುತ್ತಿರೆ ಪುಣ್ಯದಂತೆ ಶುಭದಂತಾನಂದದಂತಚ್ಛ ನಿ
ರ್ಮಳದಂತುಜ್ಜ್ವಳ ತೇಜದಂತೆ ಸುಟಿವರ್ ತಚ್ಛೈಲದೊಳ್ ತಾಪಸರ್ ॥ ೩೮

ವ ॥ ಅಂತವರ ಶಾಂತ್ಯಾಚರಣ ಶೈವತೇಜಃ ಪ್ರತಾಪದಿಂದೋರಂತೆ ಕ್ರೂರಮೃಗಂಗಳ್ ನಿಜ ವೈರಮಂ ಬಿಟ್ಟಿರ್ಪುವದೆಂತೆಂದೊಡ

ಪಕ್ಕದಲ್ಲಿದ್ದುಕೊಂಡು ತಮ್ಮ ಬರ್ಹ (ಪಿಂಛ)ವನ್ನು ಅರಳಿಸಿ, ಆ ಹೋಮಸ್ಥಳಗಳಲ್ಲಿ ತೂಗಿ ಗಾಳಿ ಬೀಸುತ್ತ ಹೋಮಾಗ್ನಿಯನ್ನು ಪ್ರಜ್ವಲನಗೊಳಿಸುತ್ತಿದ್ದವು. ೩೭. ಅಲ್ಲಿಯ ಋಷ್ಯಾಶ್ರಮಗಳಲ್ಲಿ ಮುನಿಗಳು ವೇದ ಮಂತ್ರಪೂರ್ವಕವಾಗಿ ಅಗ್ನಿಹೋತ್ರವನ್ನು ಎಸಗುತ್ತಿದ್ದಾರೆ. ಹೋಮಧೂಮವು ದಟ್ಟವಾಗಿ ಗಗನಕ್ಕೆ ಏರುತ್ತಿದೆ. ಅದನ್ನು ನೋಡಿದರೆ ಭೂಲೋಕದಿಂದ ಮುಕ್ತಿಗೆ ನಡೆಯಿಸಲು ಏರ್ಪಟ್ಟ ಕಪ್ಪುಶಿಲೆಯ ಸೋಪಾನವೋ! ಅಥವಾ ಸಂಸಾರ ತಾಪದಿಂದ ಬಳಲಿದವರನ್ನು ತಣಿಸಿ ಅತಿ ಸುಖವನ್ನು ಕೊಡುವ ಮೇಘ ಮಂಡಲವೋ! ಇಲ್ಲವೆ ದುಷ್ಕರ್ಮ ಎಂಬ ಕಮಲಗಳ ಗುಂಪನ್ನು ಕೆಡಿಸುವ ಮಂಜೋ! ಎಂಬಂತೆ ಇದೆ. ೩೮. ಹಸನಾದ ಹಲ್ಲು, ಕೆಂಜೆಡೆ, ನಾರಸೀರೆ, ಮೃಗಚರ್ಮ, ಜನಿವಾರ, ಕಮಂಡಲು, ಮುಖ್ಯ ಆಧಾರವೆನಿಸಿರುವ ಅಕ್ಷ (ಜಪ) ಮಾಲೆ, ಭಸ್ಮ, ನಗೆಮೊಗ, ಕರ್ಣ ಕುಂಡಲಗಳು ಒಪ್ಪಿರಲು ಆ ಶೈಲ (ಪರ್ವತ)ದಲ್ಲಿರುವ ತಪಸ್ವಿಗಳು ಶುಭದಂತೆಯೂ, ಆನಂದದಂತೆಯೂ, ನಿರ್ಮಲತೆಯಂತೆಯೂ, ಬ್ರಹ್ಮತೇಜಸ್ಸಿನಂತೆಯೂ ಅಲ್ಲಿ ಸುಳಿದಾಡುತ್ತಿದ್ದರು. ವ ॥ ಆ ತಪಸ್ವಿಗಳ ಶಾಂತಿ, ಅವರ ನಡೆ ಹಾಗೂ ತೇಜಸ್ಸುಗಳ ಪ್ರಭಾವದಿಂದ ಅಲ್ಲಿಯ ಕ್ರೂರ ಮೃಗಗಳು ತಮ್ಮ ಜಾತಿ ವೈರವನ್ನು ಸಂಪೂರ್ಣತೊರೆದು ಮೈತ್ರಿ

ಉ॥ ಪುಲ್ಲೆಯ ಕೋಡಮೇಲೆ ಪುಲಿಗಳ್ ತಲೆಯಿಟ್ಟು ಕುರಂಗ ಸಂಕುಳಂ
ಭಿಲ್ಲರ ಬಿಲ್ಲಮೇಲೆ ಮೊಗವಿಟ್ಟು ನವಿಲ್ಗಳಮೇಲೆ ಭೀತಿ ತಾ।
ನಿಲ್ಲದೆ ಸರ್ಪವೀಧಿ ಪೆಡೆಯಿಟ್ಟು ಗಜಂ ಶಿರಮಿಟ್ಟು ಸಿಂಗದೊಳ್
ನಿಲ್ಲದೆ ನೋಡುತಿರ್ಪುವು ನಗೇಂದ್ರ ಮುನೀಂದ್ರರ ಶಾಂತ ಮೂರ್ತಿಯಂ॥ ೬೯

ವ॥ ಮತ್ತಮಾತಪಸ್ವಿಗಳ್ ರುದ್ರನಂತೆ ಜಟಾಜೂಟರಂಜಿತಾಬ್ಜರುಂ, ದುರ್ಯೋಧನಾಸ್ಥಾನದಂತೆ ಕರ್ಣಾಲಂಕಾರಶೋಭಿತರುಂ, ಕುಬೇರನಂತೆ ವಿಭೂತಿವಿಲಸಿತಗಾತ್ರರುಂ, ಪುಣ್ಯವೃಕ್ಷದಂತೆ ಶಾಖಾವಲಂಬಿತ ಕರ್ಮನಿಷ್ಠರುಂ, ವಲ್ಕಲಾಂತರ್ವಾಸರುಂ, ಕಮಲಕ್ಷೇತ್ರದಂತೆ ಪಂಕಜಗುಣೋಪವೀತರುಂ, ಭೂಮಿಜೆಯಂತೆ ಕುಶಲವಾಧಿಷ್ಠಿತರುಂ, ನವಗ್ರಹದಂತೆ ರವಿ–ರಾಜ–ವಕ್ರ–ಸೌಮ್ಯ-ಜೀವ-ಕಾವ್ಯಶ್ರೇಷ್ಠರುಂ, ನಕ್ಷತ್ರಮಂಡಲದಂತೆ ಪುಣ್ಯ-ಶ್ರವಣ ಚಿತ್ರಾನಂದ ಹೃದಯರುಂ ಮೂಲಹಸ್ತಸಂಯುಕ್ತರುಂ, ವಾರಾಣಸಿಯಂತೆ ದಿವ್ಯ ಕ್ಷೇತ್ರವಾಸಿಗಳುಮೆನಿಸಿರ್ದರ್ ಅಂತುಮಲ್ಲದೆಯುಂ

ಯಿಂದ ಇದ್ದವು. ಅದು ಹೇಗೆಂದರೆ—೬೯. ಚಿಗರಿಯ ಕೊಂಬಿನಮೇಲೆ ಹುಲಿಗಳು ತಲೆಯಿಟ್ಟು ಮಲಗಿವೆ, ಜಿಂಕೆಯ ಗುಂಪುಗಳು ಬೇಡರ ಬಿಲ್ಲುಗಳ ಮೇಲೆ ಮುಖವಿಟ್ಟು ನೋಡುತ್ತಿವೆ, ನವಿಲುಗಳ ಮೇಲೆ ಭಯವಿಲ್ಲದೆ ಹಾವುಗಳು ಹೆಡೆಯೆತ್ತಿ ಆಡುತ್ತಿವೆ, ಆನೆಯು ಸಿಂಹದ ಮೇಲೆ ಮುಂಡೆಯನಿಟ್ಟು ಆ ತಾಪಸರ ಶಾಂತಮೂರ್ತಿಯನ್ನು ನೋಡುತ್ತಿದೆ; ವ॥ ಅಲ್ಲಿರುವ ಮುನಿಗಳು ರುದ್ರನಂತೆ ಜಡೆಗಳನ್ನು ಬೆಳೆಸಿ ಪ್ರಕಾಶಿಸುತ್ತಿದ್ದರು, ಕರ್ಣ (ಕುಂತೀದೇವಿಯಲ್ಲಿ ರವಿಯ ಕೃಪೆಯಿಂದ ಹುಟ್ಟಿದವ) ನಿಂದ ಅಲಂಕೃತವಾದ ದುರ್ಯೋಧನನ ಆಸ್ಥಾನದಂತೆ ತಪಸ್ವಿಗಳು ಕಿವಿಗೆ ತೊಡವನ್ನಿಟ್ಟಿದ್ದರು, ನವನಿಧಿ (ವಿಭೂತಿ)ಗಳಿಂದ ಶೋಭಿಸುವ ಕುಬೇರನಂತೆ ಅವರು ಅಂಗಾಂಗಗಳಲ್ಲಿ ಭಸ್ಮಧಾರಣಮಾಡಿದ್ದರು, ಕೊಂಬೆಗಳಿಗೆ ಒಣಗಿಸಲು ಹರವಿರುವ ನಾರಮುಡಿಗಳಿರುವ ಪುಣ್ಯತರುಗಳಂತೆ ಆಯಾ ವೇದಶಾಖೆಯನ್ನು ಅನುಸರಿಸಿ ಕರ್ಮಾನುಷ್ಠಾನ ಮಾಡುತ್ತಿದ್ದರಲ್ಲದೆ, ನಾರಮುಡಿಗಳನ್ನು ಉಟ್ಟಿದ್ದರು, ಪಂಕ (ಕೆಸರು)ದಲ್ಲಿ ಹುಟ್ಟಿದ ಗುಣವನ್ನು ತಳೆದ ಕಮಲ (ತಾವರೆ) ಪ್ರದೇಶದಂತೆ ಅವರು ಕಮಲದ ದಂಟಿನಲ್ಲಿನ ಎಳೆಗಳಿಂದ ಮಾಡಿದ ಜನಿವಾರ ಧರಿಸಿದ್ದರು, ಕುಶ–ಲವ ಎಂಬ ಮಕ್ಕಳಿಂದ ಕೂಡಿದ ಸೀತೆಯಂತೆ ಕುಶ (ದರ್ಭೆ) ಲವ-ಚಾಪೆಗಳನ್ನು ಹಾಸಿ ಕುಳಿತಿದ್ದರು. ಸೂರ್ಯ-ಚಂದ್ರ–ವಕ್ರ (ಮಂಗಳ) ಬುಧ, ಬೃಹಸ್ಪತಿ ಮತ್ತು ಶುಕ್ರ ಮುಂತಾದ ನವಗ್ರಹದಂತೆ ಇವರು ಓಜಸ್ಸು, ಆಹ್ಲಾದ, ವಕ್ರೋಕ್ತಿ, ಸರಳತೆ, ರಸ ಮತ್ತು ಕಾವ್ಯ ಜೀವರೂಪಾದ ರೀತಿ ರಸಜ್ಞರು, ಕೈಯಲ್ಲಿ ಬೇರು ಹಿಡಿದವರು ಪುಣ್ಯಕರವಾದ ಶ್ರವಣ-ಚಿತ್ತೆಗಳು ಹಾಗೂ ನಕ್ಷತ್ರ ಮಂಡಲದಂತೆ ತಾಪಸರು ಪುಣ್ಯಕತೆಗಳನ್ನು ಕೇಳುವುದರಿಂದ ವಿವಿಧ ಆನಂದಹೃದಯರು, ಆಧಾರಾದಿ ಆರು ಚಕ್ರಗಳಲ್ಲಿ ಮನಸ್ಸನ್ನಿಟ್ಟು ಯೋಗಸಾಧನ ಮಾಡುತ್ತಿದ್ದರು. ದಿವ್ಯಕ್ಷೇತ್ರವೆನಿಸಿರುವ ಕಾಶಿಯಂತೆ ಪವಿತ್ರ ಕ್ಷೇತ್ರ

ಚಂ ॥ ತರತರದಿಂದೆ ತೋರ್ಪ ಸರಿಯಿಂದರಿಯಿಂ ಪರಿವೊಜ್ಜರಂಗಳಿಂ
ತರುಕುಲದಿಂ ಲತಾವಿಸರದಿಂ ಮಡುವಿಂ ಗಿಡುವಿಂ ಗುಹಾಳಿಯಿಂ ।
ಸರಸಿಗಳಿಂದೆ ಪೆರ್ಮೆಳೆಗಳಿಂ ಕೆರೆಯಿಂ ತೊಱೆಯಿಂ ನದಂಗಳಿಂ
ಪರಿವೊನಲಿಂ ಬಿಲಂಗಳಿನರಣ್ಯದಿನಲ್ಲಿಯ ತಳ್ಪಲೊಪ್ಪುಗುಂ ॥ ೭೦

ವ ॥ ಆ ಶೈಲನಿತಂಬಮಂ ಸುತ್ತಿ ಮುತ್ತಿ ಘೋರ ಗಭೀರ ಕಾಂತಾರಮಿರ್ಪ್ಪುದು ಅದೆಂತೆಂದೊಡೆ

ಕಂ ॥ ಎಳಸಿ ಗಿರಿಯುಟ್ಟ ಪಟ್ಟಾ
ವಳಿಯೆನಿಕುಂ ತದ್ವನಂ ಲತಾವಳಿ ಪತ್ರಾ ।
ವಳಿ ಪುಷ್ಪಾವಳಿ ಹಂಸಾ
ವಳಿ ಸಿಂಹಾವಳಿ ಮೃಗಾವಳಿಯ ಪಜ್ಜೆಗಳಿಂ ॥ ೭೧

ವ ॥ ಮತ್ತಮಲ್ಲದೆ

ಮ ॥ ಸ್ರ ॥ ಅರಸೇಱಿಲ್ತಾಱಿ ತುಂಬುರ್ತದುಕಳಿಲೆ ಲವಂ ನೆಲ್ಲಿ ಬಿಲ್ವಾರ್ಜುನಂ ಕ
ಮ್ಮರನಾಲಂ ಜಾಲ ಬೇಲಂ ಬಿಳಿಲರಳಿಯೆರಂ ಕಕ್ಕೆ ಹೂರಂಬೆಳಲ್ಮಾ ।
ವರುಟಾಳಂ ಹಾರಿವಾಳಂ ತುಡು ತಡಸೊಡವಂ ಲೊಕ್ಕೆಗೊಟ್ಟಕ್ಕಿ ದಿಂಡಂ
ಚಿರಚಲ್ವಂ ಬ್ರಹ್ಮವೃಕ್ಷಂ ಕಱಿಕೆ ತಱಿಯದಿಂದೊಪ್ಪುತಿರ್ದತ್ತರಣ್ಯಂ ॥ ೭೨

ವಾಸಿಗಳು ಆಗಿದ್ದರು. ಮೇಲಾಗಿ—೭೦. ವಿಧ ವಿಧವಾಗಿ ತೋರುವ ಮಳೆನೀರಿನ ಪ್ರವಾಹ; ಹರಿಯುವ ಗಿರಿನದಿಗಳು, ಮರಗಳು, ಬಳ್ಳಿಗಳು, ಮಡುಗಳು, ಗಿಡಗಳು, ಗವಿಗಳು, ಸರೋವರಗಳು, ಬಿದಿರಿನ ದೊಡ್ಡಮೆಳೆಗಳು, ಕೆರೆಗಳು, ತೊಱೆಗಳು ನದಿ (ಪಶ್ಚಿಮದಿಂದ ಪೂರ್ವಕ್ಕೆ ಹರಿಯುವ ನದಿ) ಹರಿಯುತ್ತಿರುವ ಪ್ರವಾಹಗಳು ಬಿಲಗಳಿಂದ ಆ ಕಾಡಿನ ತಪ್ಪಲು ಒಪ್ಪಿತ್ತು. ವ ॥ ಆ ಪರ್ವತದ ತಪ್ಪಲು ಪ್ರದೇಶವನ್ನು ಭಯಂಕರವಾದ ಕಾಡು ಬಳಸಿದೆ. ಎಂದರೆ—೭೧. ಆ ಕಾಡು ವಿವಿಧ ಬಳ್ಳಿಗಳು, ಎಲೆಗಳು, ಹೂವುಗಳು, ಹಂಸೆಗಳು, ಸಿಂಹಗಳು ಮತ್ತು ಮೃಗಾವಳಿಯ ಅಂಚಿನ ಸಾಲುಗಳಿಂದ ಶೋಭಿಸುವ ರೇಷ್ಮೆಯ ಸೀರೆಯನ್ನು ಆ ಗಿರಿಯು ಬಯಸಿ ಉಟ್ಟಿದೆಯೋ ಎಂಬಂತೆ ಇತ್ತು. ೭೨. ಆ ಕಾಡು ಜಂಬುನೇರಳೆ, ತಾರೆಮರ, ತೂಬರೆಮರ, ತುದುಕು, ಅಳಲೆ, ನೆಲ್ಲಿ, ಬಿಲ್ವ, ಅರ್ಜುನ, ಕಮ್ಮರಿ, ಆಲ,-ಜಾಲ, ಬೇಲ, ಬಿಳಿಲು ಬಿಡುವ ಬಿಳಿಲು ಅರಳಿ, ಯಲಚಿ, ಕಕ್ಕೆ, ಬೂರುಗ, ಬೆಳವಲಿ, ಮಾವು, ಅರವಾಳ (ಅಂಟುವಾಳ) ಹಾರಿವಾಳ, ತುಡು, ತಡಸು, ಒಡವ, ಲೊಕ್ಕೆ, ಗೊಟ್ಟಕ್ಕಿ, ದಿಂಡಲು, ಚಿರಚಿಲ್ವ, ಬ್ರಹ್ಮ

ಚಂ || ನರಿ ಶಶಕಂ ವೃಕಂ ಸರಟನೆಯ್ಯಮಿಗಂ ಮರೆವಿಂಡು ಬೆಕ್ಕು ಮುಂ
ಗುರಿ ಮುಸಲಿವ್ರಜಂ ಕರಡಿ ಮೆಂಪಲಿ ಪೆರ್ಬುಲಿ ಮರ್ಕಟಾಳಿ ಸೂ |
ಕರನಿಕರಂ ಕುರಗತತಿಯುಷ್ಟ್ರಚಯಂ ಘನಖಡ್ಗಿ ಸೈರಿಭಂ
ಪುರುಷಮೃಗಂ ಗಜಂ ಶರಭ ಸಿಂಹದಿನೊಪ್ಪುವುದಲ್ಲಿ ಕಾನನಂ || ೭೩

ಅರಗಿಳಿ ಪಾರಿವಂ ಕುರರಿ ಲಾವಗೆಯನ್ಯಭೃತಂ ಶರಾರಿ ಹೊಂ
ಗುರು ಚರಣಾಯುಧಂ ಶಕುನಿ, ಚಂದನವಕ್ಕಿ ಚಕೋರಿ, ಟಿಟ್ಟಿಭಂ |
ಹರಡೆ ಗವುಂಜು ಚಾದಕೆ ಬಕಂ ಶಿಖಿ ವಾಯಸಹಂಚೆ ಕೊಂಚೆ ತಿ
ತ್ತಿರಿ ಗಿಡುಗಂಗಳೆಂಬ ಖಗವೃಂದದಿನಲ್ಲಿಯರಣ್ಯಮೊಪ್ಪುಗುಂ || ೭೪

ಮ || ಸ್ರ || ಅತಿಘೋರಂ ಧ್ವಾಂತಪೂರಂ ಬಹುತರು ಕುಲಸಾರಂ ಸಮುದ್ಯದ್ಗಭೀರಂ
ಪ್ರತಿಶೂನ್ಯಂ ದಾವಮಾನ್ಯಂ ಮೃಗವಿತತಿಗನನ್ಯಂ ನದೀವ್ರಾತಧನ್ಯಂ |
ನುತ ಚೋದ್ಯಂ ವ್ಯಾಧವೇದ್ಯಂ ದಿನಕರ ಕಿರಣಾಭೇದ್ಯಮಾಭೂಮಿಗಾದ್ಯಂ
ನುತಪುಣ್ಯಂ ತಾನಗಣ್ಯಂ ಕಠಿನವಿಷಯಗುಣ್ಯಂ ವಿರಾಜಿಪ್ಪರಣ್ಯಂ || ೭೫

ಮ || ಹರಿಯಂತಿಂದುವಿನಂತೆ ಕೃಷ್ಣಮೃಗಸಂಶ್ಲೇಷಂ ಸುರಾವಾಸದಂ
ತುರಗಾಧೀಶ್ವರನಂತೆ ಕೌಶಿಕವಿಭೋಗಂ ಕಾಮನಂತಬ್ಧಿಯಂ |

ವೃಕ್ಷ, ಗರಿಕೆ, ತರಿಯದಮರ, ಮುಂತಾದ ಗಿಡಮರಗಳಿಂದ ಶೋಭಿಸುತ್ತಿತ್ತು. ೭೩. ಆ ಕಾಡಿನಲ್ಲಿ ನರಿ, ಮೊಲ, ತೋಳ, ಸರಟ, ಎಯ್ಯುಮಿಗ, ಮುಳ್ಳುಹಂದಿ, ಬೆಕ್ಕು, ಮುಂಗುಸಿ ಸೊಂಡಿಲಿ, ಕರಡಿ, ಹೆಬ್ಬುಲಿ, ಕೋತಿಗಳು, ಕಾಡಹಂದಿಗಳು, ಜಿಂಕೆಗಳು, ಒಂಟೆಗಳು, ಖಡ್ಗಮೃಗ, ಸೈರಿಭಪುರುಷಮೃಗ, ಆನೆ, ಶರಭ ಮತ್ತು ಸಿಂಹಗಳಿಂದ ಒಪ್ಪಿತ್ತು. ೭೪. ಆ ಅರಣ್ಯವು ಅರಗಿಳಿ, ಪಾರಿವಾಳ, ಕುರರಿ, ಲಾವಗೆ, ಕೋಗಿಲೆ, ಶರಾರಿ, ಪಕ್ಷಿ ವಿಶೇಷ ಹೊಂಗುರು ; ಕೋಳಿ, ಶಕುನದಹಕ್ಕಿ, ಚಂದನವಕ್ಕಿ, ಚಕೋರಿ, ಟಿಟ್ಟಿಭ, ಹರಡೆ, ಗವುಂಜು, ಚಾತಕ, ಕೊಕ್ಕರೆ, ನವಿಲು, ಕಾಗೆ, ಹಂಸ, ಕೊಂಚೆ, ತಿತ್ತಿರಿ ಮತ್ತು ಗಿಡುಗ ಮುಂತಾದ ಪಕ್ಷಿಗಳಿಂದ ಶೋಭಿಸುತ್ತಿತ್ತು. ೭೫. ಆ ಕಾಡು ಭಯಂಕರವಾದ ಕಗ್ಗತ್ತಲು, ವಿವಿಧ ಮರಗಿಡಗಳಿಂದ ನಿಬಿಡವಾಗಿ ಅತ್ಯಂತ ಗಂಭೀರವಾಗಿದೆ ; ಈ ಕಾಡಿಗೆ ಸಮವಾದುದು ಇನ್ನೊಂದಿಲ್ಲ, ಎಲ್ಲೆಲ್ಲೂ ಕಾಡ್ಗಿಚ್ಚು ಖಗ (ಹಕ್ಕಿ) ಮೃಗಗಳಿಗೆ, ಅದು ಅತ್ಯಗತ್ಯ, ಅನೇಕ ನದಿಗಳಿಂದ ಕೂಡಿದ ಧನ್ಯತೆ ಅದಕ್ಕಿದೆ, ಅತ್ಯಾಶ್ಚರ್ಯಕರವಾಗಿರುವುದರಿಂದ ಕಾಡುಬೇಡರಿಗೆ ಮಾತ್ರ ಅಲ್ಲಿಯ ವಿಷಯಗೊತ್ತು, ರವಿಕಿರಣಗಳು ಅಲ್ಲಿ ಪ್ರವೇಶಿಸುವುದು ಕಷ್ಟವೇ ! ಹೀಗೆ ಅನಾದಿಕಾಲದಿಂದಲೂ ಅತಿಪುಣ್ಯಕರವೂ ಅನುಪಮವೂ ಕಠಿನ ವಿಷಯ ಗುಣಗಳುಳ್ಳುದೂ ಆದ ಅರಣ್ಯವು ಅಲ್ಲಿ ವಿರಾಜಿಸುತ್ತಿದೆ. ೭೬. ರೌದ್ರಾನನ-

ತಿರೆ ಚಂಚದ್ರತಿಸಂಯುತಾನಿಮಿಷವೃಂದಂ ವ್ಯೋಮದಂತಬ್ಜ್ಞವಿ
ಷ್ಟರನಂತುಜ್ಜ್ವಳ ರಾಜಹಂಸವಿಭವಂ ರೌದ್ರಾನನಂ ಕಾನನಂ ॥ ೭೬

ಕಂ ॥ ಅದು ಸರುವ ದರುವಿನಾಗರ
ಮದು ಭೂಪ್ರಜದ ತಾಣಮದು ಮೃಗಸಂತಾ ।
ನದ ನೆಲೆಯದು ಶಬರಾನೀ
ಕದ ಜನ್ಮಸ್ಥಲಮೆನಿಪ್ಪುದೊಪ್ಪುವರಣ್ಯಂ ॥ ೭೭

ಮ ॥ ಅದಱೊಳ್ ಭೀಕರಕಾಲಕಿಂಕರನಿಭಂ ಭೀಷ್ಮಾನನಂ ರೌದ್ರಸಂ
ಮದನೇತ್ರಂ ಘನಕೃಷ್ಣಕಾಯನಿಕರಂ ಕಾಠಿನ್ಯಧರ್ಮಾಂ ಭಯ ।
ಪ್ರದಬಾಣಾವಳಿ ನಿಷ್ಠುರಧ್ವನಿಚಯಂ ನಾನಾಮೃಗಾಯುಷ್ಯದಾ
ಪದಲಂಕಾರದಿನೊಪ್ಪಿ ಲುಬ್ಧಕ ಕುಲಂ ತೀವಿರ್ಪುದಂತಾವಗಂ ॥ ೭೮

ವ ॥ ಅಂತಿರ್ದ ಪುಳಿಂದಬಲಂ ಬೇಂಟೆಗೆಂದೊರ್ಬುಳಿಗೊಂಡು ಮುರ್ಬು ಮಸಗಿದಂತೆ ಸಡಗರಿಸಿ ಸಮಕಟ್ಟಿ ಸನ್ನದ್ಧೋಜಿ–

ಭಯಂಕರವಾದ ಆ ಕಾನನ (ಕಾಡು)ವು ಶ್ರೀಕೃಷ್ಣನ ಲೀಲಾವಿಶೇಷವುಳ್ಳ ವಿಷ್ಣುವಿನಂತೆಯೂ, ಮೃಗ (ಜಿಂಕೆ) ದಂತಿರುವ ಕಪ್ಪುಕಲೆಯುಳ್ಳ ಚಂದ್ರನಂತೆಯೂ ಕೃಷ್ಣಮೃಗ (ಚಿಗರಿ)ಗಳ ಸಂಬಂಧವುಳ್ಳದ್ದು. ಕೌಶಿಕ (ವಿಶ್ವಾಮಿತ್ರ)ನ ಸಂಬಂಧವುಳ್ಳ (ಸುರಾವಾಸ) ದೇವ ಲೋಕದಂತೆಯೂ ವಿಭೋಗ-ವಿಶಿಷ್ಟ (ಸರ್ಪ) ಶರೀರವುಳ್ಳ ಸರ್ಪರಾಜನಂತೆಯೂ ಕೌಶಿಕ ವಿಭೋಗಂ (ಗೂಬೆ)ಗಳಿಗೆ ವಿಹಾರಸ್ಥಾನವಾಗಿತ್ತು. ಮನೋಹರಳಾದ ರತೀದೇವಿಯಿಂದ ಕೂಡಿದ ಮನ್ಮಥನಂತೆಯೂ, ಅಂದವಾದ ಪ್ರೇಮವಿಲಾಸಗಳಿಂದ ಕೂಡಿದ ಅನಿಮಿಷ–ಮೀನುಗಳಿರುವಂತೆ ಸಮುದ್ರದ ಪ್ರೇಮವಿಲಾಸಗಳಿಂದ ಕೂಡಿರುವ ಅನಿಮಿಷ–ದೇವತಾವಿಶೇಷಗಳಿಂದ ಕಂಗೊಳಿಸಿತ್ತು. ರಾಜ–ಪೂರ್ಣಚಂದ್ರನಿಂದ ಕೂಡಿದ ಗಗನದಂತೆಯೂ ಹಂಸಾರೂಢನಾದ ಕಮಲಾಸನ-ಚತುರ್ಮುಖ ಬ್ರಹ್ಮನಂತೆಯೂ ರಾಜಹಂಸಗಳಿಂದ ವಿರಾಜಮಾನವಾಗಿತ್ತು. ೭೭. ಆ ಅರಣ್ಯವು ಎಲ್ಲ ದರಿ–ಗುಹೆಗಳಿಗೆ ಆಕರ, ಎಲ್ಲ ಬಗೆಯ ಕುಜ (ಭೂಜ) ಮರಗಳ ನೆಲೆ, ಮೃಗಸಮೂಹದ ನಿಲ್ದಾಣ, ಬೇಡರಹುಟ್ಟು ನೆಲವೊ ಎಂಬಂತೆ ಇತ್ತು. ೭೮. ಆ ಕಾಡಿನಲ್ಲಿ ಯಾವಾಗಲೂ ಬೇಡರ ಪಡೆ ತುಂಬಿರುತ್ತಿತ್ತು. ಅವರ ಸ್ವರೂಪವನ್ನು ಹೀಗೆ ವರ್ಣಿಸಲಾಗಿದೆ–ಅವರು ಭಯಂಕರವಾದ ಯಮದೂತರಂತೆ ಇದ್ದರು; ಅವರ ಭೀಕರವಾದ ಮುಖ, ರೌದ್ರಸ್ವಭಾವದಿಂದ ಮದಿಸಿರುವ ಕಣ್ಣುಗಳು, ಕಡುಕಪ್ಪುದೇಹಗಳು, ಕಠಿನಸ್ವಭಾವ ಅಥವಾ ಬಿಲ್ಲುಗಳು, ಭಯಂಕರವಾದ ಅಂಬುಗಳು, ನಿಷ್ಠುರವಾದ ಕೂಗಾಟಗಳು, ನಾನಾ ವಿಧವಾದ ಮೃಗಗಳ ಆಯುಷ್ಯಕ್ಕೆ ಆಪತ್ತನ್ನು ಒಡ್ಡುವುದೇ ಅವರ ಕುಲವೃತ್ತಿ; ಇಂತಹ ಬೇಡಪಡೆಗಳು ಅಲ್ಲಿ ನಿರಂತರ ನೆಲೆಸಿದ್ದವು. ವ ॥ ಹೀಗಿರುವ ಆ ಬೇಡಪಡೆ ಮೃಗಯಾ (ಬೇಟೆ) ವಿಹಾರಕ್ಕಾಗಿ ಒಟ್ಟಿಗೆ

ಮ ॥ ಸ್ರ ॥ ಬಡಿಕೋಲ್ ಕಿರ್ಗಟ್ಟು ಪಾಸಂ ಶುನಕವಿತತಿ ಪೇರಿಟ್ಟಕೂರಂಬುಗಳ್ಕೈ
ಪೊಡೆ ಬಿಲ್ಪುಲ್ದಂಡೆ ಬೆಳ್ಳಾರ್ಪಟಮೆರೆಬಲೆಗಳ್ ಸಾಳುವಂ ಕೂಳೆಗಾಳಂ ।
ಗಿಡುಗಂ ಬಲ್ಪಂಡಿಯೊಳ್ ದೀಪದ ಪುಲಿ ನಿಶಿತಾಸ್ತ್ರಂಗಳುಗ್ರತ್ವಮಂ ಸಂ
ಗಡಿಸುತ್ತಿರ್ದೊಪ್ಪೆ ವಿಂಧ್ಯಾಟವಿಗೆ ನಡೆದುದುದ್ವೃತ್ತಕಿರಾತಪ್ರಜಾತಂ ॥ ೭೯

ಕಂ ॥ ತಡಿಕೆವಲೆ ಕಣ್ಣವಲೆ ನಿ
ಟ್ಟಡುಕಿಲ್ವಲೆ ಗೂಂಟವಲೆ ಪೊಣರ್ಚುವ ಬಲೆ ಮುಂ ।
ಬಿಡುವಲೆ ನಡುವಲೆ ತಡೆವಲೆ
ಪಿಡಿವಲೆ ನಿಡುವಲೆಗಳೊಪ್ಪಿದುವು ಲುಬ್ಧಕರೊಳ್ ॥ ೮೦

ವ ॥ ಆಗಳ್

ಚಂ ॥ ಹರಿಣನಬೇಂಟೆ ಪೆರ್ಬುಲಿಯಬೇಂಟೆ ವರಾಹನ ವೀರಬೇಂಟೆ ಪೇ
ರ್ಗುರಡಿಯಬೇಂಟೆ ಪೆಮ್ಮರೆಯಬೇಂಟೆ ವಿಹಂಗದವೊತ್ತವೇಂಟೆತ ।
ತ್ಕರಿಗಳಬೇಂಟೆ ಸಿಂಹ ಶರಭಂಗಳ ಬೇಂಟೆಗಳಾಯಾದಿಯಾದಭೀ
ಕರಮೃಗಸಂಘ ಸಂಹನನಮುಣ್ಮಿತು ಪರ್ವಿದರಣ್ಯ ಮಧ್ಯದೊಳ್ ॥ ೮೧

ಮ ॥ ನಡೆಯೆಂಬಬ್ಬರಿಸೆಂಬ ಪರ್ವಿಪರಿಯೆಂಬಾರೆಂಬ ಸಾರೆಂಬ ಸಂ
ಗಡಿಸೆಂಬಡ್ಡವಿರೆಂಬ ಸಾರ್ದು ಸರುವಂ ಕಟ್ಟೆಂಬ ಮುಟ್ಟೆಂಬ ಪಿಂ ।
ದಡಸೆಂಬೊತ್ತರಿಸೆಂಬ ಸುತ್ತಿನಿಲಿಸೆಂಬೈಯ್ದೆಂಬ ಮೆಯ್ದೋಱುತುಂ
ಪೊಡೆಯೆಂಬೊಂದು ಪುಳಿಂದವೃಂದ ನಿನದಂ ಪೊಣ್ಮಿತ್ತು ಕಾಂತಾರದೊಳ್ ॥ ೮೨

ನುಗ್ಗಿದಾಗ ಕತ್ತಲು ಕವಿದಂತೆ ಸಡಗರದಿಂದ ಸನ್ನುಕಟ್ಟಿ ಸ್ಥಿತುಮಾಡಿ– ೭೯. ಆ ಕಿರಾತರ ಗುಂಪು ಬಡಿಕೋಲು, ಕಿರ್ಗಟ್ಟು, ಹಾಸು (ಕಣ್ಣಿ), ನಾಯಿಗಳು, ಸೇರಿಸಿದ ಕ್ರೂರವಾದ ಬಾಣಗಳು, ಕೈಪೊಡೆ, ಬಿಲ್ಲು, ಹುಲ್ಲುಮೆಡೆ, ಬಿಳಿ ಬಟ್ಟೆಯ–ಬಲೆಗಳು ಬೇಟೆಯಲ್ಲಿ, ಉಪಯೋಗಿಸುವ ಹದ್ದು, ಗಿಡುಗ, ಸಾಕಿದ ಹುಲಿ,– ತೀಕ್ಷ್ಣವಾದ ಅಸ್ತ್ರಗಳು, ಜೊತೆಗೆ ಉಗ್ರತ್ವವೂ ಒಪ್ಪಿರಲು ವಿಂಧ್ಯಾಟವಿಗೆ ನಡೆದುದು ೮೦. ತಡಿಕೆಯಬಲೆ,ಕಣ್ಣಿಯ ಬಲೆ, ಉದ್ದವಾಗಿ ಸೇರಿಸಿದ ಬಲೆ, ಅಂಟುಹಚ್ಚಿದ ಗೂಟದ ಬಲೆ, ಪೊಣರ್ಚುವ ಬಲೆ ಮುಂತಾದ ಬಗೆ ಬಗೆಯ ಬಲೆಗಳು ಅವರಲ್ಲಿದ್ದವು. ವ ॥ ಆಗ—೮೧ ಹಬ್ಬಿರುವ ಅರಣ್ಯದ ಮಧ್ಯದಲ್ಲಿ ಜಿಗರಿಗಳ ಬೇಟೆ, ಹೆಬ್ಬುಲಿಯ ಬೇಟೆ, ಕಾಡುಹಂದಿಗಳ ವೀರಬೇಟೆ, ದೊಡ್ಡ ಕರಡಿಯ ಬೇಟೆ, ಒಂದು ಬಗೆಯ ಜಿಂಕೆ (ದೊಡ್ಡ ಜಿಂಕೆ) ಹಕ್ಕಿಗಳ ಗುಂಪು ಗುಂಪುಗಳ ಬೇಟೆ, ಮದ್ದಾನೆಗಳ ಬೇಟೆ, ಸಿಂಹ, ಶರಭಗಳ ಬೇಟೆ, ಇವೇ ಮೊದಲಾದ ಭಯಂಕರ ಮೃಗಸಂಘಗಳ ಸಂಹಾರವೇ ಏರ್ಪಟ್ಟಿತ್ತು. ೮೨. ನಡೆ ನಡೆ! ಅಬ್ಬರಿಸು! ಬೇಗ ಓಡು! ಬಾ! ಹೋಗು! ಜೊತೆಗೆ ಹೋಗು! ಅಡ್ಡನಿಲ್ಲು! ಸರಿದ ಸರುವ ಕಟ್ಟು!

ಚಂ॥ ಇಡುಮೊಲನಂ ತೆರಳ್ಚದಿಸು ಪುಲ್ಲೆಗಳಂ ಬಲೆಯೊಡ್ಡಿ ಖಡ್ಗಿಯಂ
ಪಿಡಿ ಮರೆವಿಂಡನೆಟ್ಟು ಪುಲಿಯಂ ಛಲದಿಂದಿರಿ ಪಂದಿಯೊತ್ತುಗೊಂ।
ಡೊಡೆ ಬಿಡುನಾಯ್ಗಳಂ ಸಮೆದ ಪೆರ್ಗುಳಿಯೊಳ್ ಕರಿಪೋತಕಂಗಳಂ
ಕೆಡೆಪು ಮರಳ್ಚು ಸಿಂಹಮನೆನಿಪ್ಪ ಘನಧ್ವನಿಯಾಯ್ತರಣ್ಯದೊಳ್॥ ೬೩

ಕಂ॥ ನಡುಗಿತು ವಿಹಗತತಿಯು
ಕ್ಕುಡುಗಿತ್ತು ಮೃಗಾಳಿ ತಮ್ಮ ನಿಜಪೋತಕಮಂ।
ಮಡಗಿತ್ತು ಗೂಡು ಗುಪೆಯೊಳ್
ತೊಡಗಿತ್ತು ಕಿರಾತಭೀಕರಧ್ವನಿ ವನದೊಳ್॥ ೬೪

ವ॥ ಆ ಸಂಭ್ರಮದೊಳೊರ್ವಪುಳಿಂದಂ ತನ್ನ ನಚ್ಚಿನನಾಯಂ ಮೊಲನ ಸರುವಂ ತೋಱಿ ಕೀಱಿಟ್ಟಾಗಳ್

ಕಂ॥ ನಡೆನಡೆದು ನಸುಬಳುಂಕು
ತ್ತೆಡಬಲನಂ ನೋಡಿ ಕೂಡೆಯಾಘ್ರಾಣಿಸುತಂ।
ಗಿಡುವಿನ ಸರುವಿನ ದರುವಿನ
ಮಡುವಿನ ಬೞಿಗೊಂಡು ಶುನಕನಟ್ಟಿತು ಮೊಲನಂ॥ ೬೫

ಅಟ್ಟಿದೊಡೆ ತಿರುಗಿ ಮುರಿ ಮುರಿ
ದೊಟ್ಟೈಸುತೆ ಕೊಂಕಿ ಪರಿಯುತೆಡನಂ ಬಲನಂ।
ದಿಟ್ಟಿಸುತೆ ನಿಂದು ನಿಲ್ಲದೆ
ನಿಟ್ಟೋಟದೊಳೋಡಿತೆಸೆವ ಮುಸಕದ ಶಶಕಂ॥ ೬೬

ಅದನ್ನು ಮುಟ್ಟು! ಹಿಂದೆ ಸರಿ! ಒತ್ತರಿಸು! ಸುತ್ತಿ ನಿಲ್ಲಿಸು! ಹೋಗು! ಮೈದೋರಿ ಪೊಡೆ! ಹೀಗೆ ಆ ಪುಳಿಂದರ ಕಲಕಲನಿನದ ಆ ಕಾಡಿನಲ್ಲಿ ಹಬ್ಬಿತ್ತು. ೬೩. ಮೊಲವನ್ನು ಹೊಡೆ! ಹುಲ್ಲೆಗಳನ್ನು ಹೋಗಗೊಡದೆ ಬಾಣಬಿಡು! ಬಲೆಯೊಡ್ಡಿ ಖಡ್ಗಮೃಗವನ್ನು ಹಿಡಿ! ಮರೆಯಾಗಿದ್ದು ಹುಲಿಯನ್ನು ಛಲದಿಂದ ಇರಿ! ಹಂದಿಗಳು ಒಟ್ಟಾದರೆ ನಾಯಿಗಳನ್ನು ಬಿಡು! ಸಿದ್ಧಪಡಿಸಿದ ದೊಡ್ಡಗುಳಿಗಳಲ್ಲಿ ಆನೆಮರಿಗಳನ್ನು ಕೆಡಹು! ಸಿಂಹನನ್ನು ಹಿಂದಿರುಗುವಂತೆಮಾಡು! ಎಂಬ ಭೀಕರಧ್ವನಿಗಳು ಅಲ್ಲಿಮೊಳಗಿದವು. ೬೪. ಆ ಕಾಡಿನಲ್ಲಿ ಮೊಳಗಿದ ಕಿರಾತರ ಭೀಕರಧ್ವನಿಗೆ ಹಕ್ಕಿ ಬಳಗ ನಡುಗಿತು, ಮೃಗಗಳ ಸೊಕ್ಕು ಅಡಗಿತ್ತು, ಅವು ತಮ್ಮ ಮಕ್ಕಳು ಮರಿಗಳನ್ನು ಗೂಡುಗಳಲ್ಲಿ, ಗುಹೆಗಳಲ್ಲಿ ಬಚ್ಚಿಟ್ಟವು. ವ॥ ಆ ಸಡಗರದಲ್ಲಿ ಒಬ್ಬ ಬೇಡ ತನ್ನ ನಚ್ಚಿನ ನಾಯಿಯನ್ನು ಮೊಲದಮೇಲೆ ಚೂಬಿಟ್ಟು ಕಿರುಚಿಕೊಂಡನು; ಆಗ– ೬೫. ಆ ಶುನಕವು ನಡೆನಡೆದು ಕೊಂಚ ಬಳುಕುತ್ತ ಎಡಬಲಗಳನ್ನು ನೋಡಿ ಮೂಸಿ ನೋಡುತ್ತಾ ಗಿಡ, ಸರು, ದರು, ಮಡುಗಳನ್ನು ಬಳಸಿ ಮೊಲನನ್ನು ಬೆನ್ನಟ್ಟಿತು. ೬೬. ಹಾಗೆ ಬೆನ್ನಟ್ಟಿದರೂ ಆ ಮೊಲವು ತಿರುಗಿ

ಕಂ ॥ ಬಿಡದೋಡೆ ಕಂಡು ಶಬರಂ
ಕಡುಮುಳಿದಟ್ಟೆಯಟ್ಟಿ ತಿರುಗೆ ತಿರುಗುತ್ತಂ ಸಂ ।
ಗಡಿಸಿ ಪರಿದು ಬುಬೆನುತ್ತುಂ
ಬಡಿಗೋಲಿಂದಿಟ್ಟನಧಿಕ ಬಲಸಂ ಮೊಲನಂ ॥ ೮೭

ಸ್ರ ॥ ಇಡೆ ತಿರುಗುತ್ತೆ ಬರ್ಪ ಬಡಿಕೋಲೊಳೆ ಸಿಲ್ಕುತೆ ಸಿಲ್ಕದಾ ಮೊಲಂ
ಗಿಡುಗಳೊಳೋಡಿ ಪೊಕ್ಕಪದದೊಳ್ ಘನರಾಹುವ ಕೋಟ್ಗೆ ಭೀತಿಗೊಂ ।
ಡುಡುಪತಿ ಬಿಂಬದಿಂದೆ ಸರಿದೋಡಿ ಮುಗಿಲ್ಗಳೊಳೆಯ್ದಿ ಪೊಕ್ಕ ಗಂ
ಡುಡುಗಿ ಸುರುಳ್ದ ತಚ್ಛಶಕಂ ನೆರೆಪೋಲ್ತುದು ಕಾಡ ಪೆರ್ಮೊಲಂ ॥ ೮೮

ವ ॥ ಮತ್ತೊಂದೆಡೆಯಲ್ಲಿ

ಮ ॥ ಪಸರಂಬೆತ್ತೆಡೆಯಾದ ನೀಡಡಿ ಪೊದಟ್ದಾಕರ್ಣವಾಕುಂಚ ತಾ
ಸ್ತ್ರಸಮೇತೋಚ್ಚಕರಾಗ್ರವಸ್ಖಲಿತ ಚಿತ್ತಂ ಸಂಸ್ಫುಟಾಲೋಕನಂ ।
ಕುಸಿದಂಗಂ ಮಿಗೆ ದೃಷ್ಟಿ ಮುಷ್ಟಿಶರ ಸಂಧಾನಂಗಳೊಂದಾಗೆ ತಾ
ನಿಸಲೊಂದೊಂದು ಕುರಂಗಮಂ ಶಬರನೊಪ್ಪಿರ್ದಂ ಮಹಾರಣ್ಯದೊಳ್ ॥ ೮೯

ಕಂ ॥ ಕಂಡುದು ಮೃಗಮಲ್ಲಿ ಭಯಂ
ಗೊಂಡುದು ಪೆಪ್ಪಳಿಸುತದಿರು ತೋಡಲ್ಕೆ ಕರಂ ।
ದುಂಡಿಸುತಿರ್ದಪುದೆಂದುರು
ಚಂಡಾಸ್ತ್ರದಿನಚಲ ಸಬರನಿಸೆ ಕಾನನದೊಳ್ ॥ ೯೦

ಮುರಿಮುರಿದು ರಾಶಿ ಹಾಕಿ ಕೊಂಕಿ ಸುಸುಳಿ ಎಡಬಲಗಳನ್ನು ದಿಟ್ಟಿಸಿ ನಿಂದೂನಿಲ್ಲದೆ ನಿಟ್ಟೋಟದಲ್ಲಿ ಓಡಿಹೋಯಿತು. ೮೭. ಆ ಮೊಲವು ಬಿಡದೆ ಓಡುತ್ತಿರುವುದನ್ನು ಕಂಡು ಶಬರನು ಕಡುಕೋಪಗೊಂಡು ಬೆನ್ನಟ್ಟಿಹೋಗಿ ಅದು ತಿರುಗಲು ತಾನೂ ತಿರುಗಿ, ಸಂಗಡಹೋಗಿ, ಸರಿದು ಉಬು! ಉಬು! ಎನ್ನುತ್ತ ಬಡಿಗೋಲಿನಿಂದ ಆ ಬಲಿಷ್ಠವಾದ ಮೊಲವನ್ನು ಹೊಡೆದನು. ೮೮. ಹೀಗೆ ಶಬರನು ಬಡಿಕೋಲಿನಿಂದ ಹೊಡೆಯಲು, ತಿರುಗುತ್ತ ಬರುತ್ತಿರುವ ಆ ಬಡಿ ಕೋಲಿಗೆ ಸಿಕ್ಕಿಯೂ ಸಿಕ್ಕದಂತೆ ಆ ಮೊಲವು ಗಿಡಗಳಲ್ಲಿ ಹೊಕ್ಕು ಓಡುತ್ತಿದ್ದುದು ರಾಹುವಿನ ಹಿಡಿತಕ್ಕೆ ಹೆದರಿ ಚಂದ್ರ ಬಿಂಬದಿಂದ ಅಗಲಿ ಓಡಿ ಮುಗಿಲುಗಳನ್ನು ಹೊಕ್ಕ ಚಂದ್ರನಲ್ಲಿನ ಎದೆಗುಂದಿದ ಮೊಲದಂತೆ ಇತ್ತು. ವ ॥ ಮತ್ತೊಂದು ಕಡೆ ೮೯. ಆ ಮಹಾರಣ್ಯದಲ್ಲಿ ಒಬ್ಬ ಶಬರ; ಅವನು ಶರಸಂಧಾನವನ್ನು ಮಾಡಿ ಒಂದೊಂದೇ ಏಟಿಗೆ ಒಂದೊಂದು ಕುರಂಗವನ್ನು ಹೊಡೆದು ಕೆಡಹುತ್ತಿದ್ದಾನೆ. ಆತನ ಶರಸಂಧಾನಕ್ರಮ ಹೀಗೆ—ಎಡಗಾಲನ್ನು ದೂರಕ್ಕೆ ಚಾಚಿ, ಅಂಬಿಗೆ ಬಾಣವನ್ನು ಏರಿಸಿ, ಶಿಂಜಿನಿಯನ್ನು ಕಿವಿಯವರೆಗೆ ಎಳೆದು, ಅಸ್ಖಲಿತ ಚಿತ್ತನಾಗಿ, ದೃಷ್ಟಿಯನ್ನು ಗುರಿಯಲ್ಲಿ ನೆಲೆಗೊಳಿಸಿ ಅಂಗವನ್ನು ಕುಗ್ಗಿಸಿ, ದೃಷ್ಟಿ—ಮುಷ್ಟಿ ಮತ್ತು ಶರಸಂಧಾನಗಳನ್ನು ಒಂದುಮಾಡಿ ಬಾಣಪ್ರಯೋಗ ಮಾಡುತ್ತಿದ್ದಾನೆ. ೯೦–೯೧.

ಕಂ ॥ ತಿರುಗುವ ತನು ಬೆರ್ಚುವ ಕಣ್
ಪರಿವ ಮನಂ ನಟ್ಟಕಿವಿಯಡಂಗುವ ಸುಯ್ಯಿಂ।
ಸರಳಂ ಮಿಱುತೆ ಹರಿಣಂ
ಸರಳಸಿತ್ತೈದಾಱನೇಳನೆಂಟೊಂಬತ್ತಂ ೯೧

ವ ॥ ಆ ಸಮಯದೊಳ್

ಕಂ ॥ ಕುನಿಕುನಿದು ವನದ ಗಿಡುಗಿಡು
ವಿನ ಮಱೆ ಮಱೆಯಲ್ಲಿ ಸುೞಿದು ಸುೞಿದೋಡುವ ಟ।
ಕ್ಕಿನ ಹರಿಣಸತಿ ಭರದಿಂ
ತನತನಗೆ ಪುಳಿಂದರಟ್ಟಿಮುಟ್ಟುತ್ತೆಚ್ಚರ್ ೯೨

ಸಿಲ್ಕಿ ಶಬರಾಳಿಯೆಚ್ಚಸ
ರಲ್ಕಿಕ್ಕಿಱಿಗಿಱಿದು ನಟ್ಟು ಗಱಿದೋಱುತ್ತಂ।
ನಾಲ್ಕುಂ ಮೆಯ್ಯೊಳ್ ತೀವಿರೆ
ಸಿಲ್ಕಿದ ಮೃಗಮೆಯ್ಯಮಿಗದ ತಱಿನಾಯ್ತಾಗಳ್ ೯೩

ವ ॥ ಮತ್ತಂ ಪೆಱತೊಂದೆಡೆಯೊರ್ವ ಕಿರಾತನಾಥನಳನಿಯೊಳೋಡುತ್ತಿರ್ಪ ಮೃಗ ಸಮೂಹಮಂ ಕಂಡು

ಕಂ ॥ ಬಂಡಿಯ ಪುಲಿಯುಂ ಮೆಲ್ಲನೆ
ಕೊಂಡಿಳಿಪುತೆ ಸರಿದು ಕೊರಲ ಪಾಸದ ನೇಣಂ।
ಕಂಡಳವಿಗೆ ಸಿಲ್ಕಿದ ಮೃಗ
ಮಂಡಲಮನದರ್ಕೆ ತೋಱೆ ಶಬರಾಧೀಶಂ ೯೪

ತಿರುಗುವ ಶರೀರ, ಬೆಚ್ಚಿದಕಣ್ಣು, ಓಡುಮನಸ್ಸು, ನಿಮಿರಿದ ಕಿವಿ, ತಡೆ ತಡೆದು ಅಡಗುವ ನಿಟ್ಟುಸಿರುಬಿಡುತ್ತಾ ಒಂದು ಜಿಂಕೆಯು ಶಬರನು ಬಿಟ್ಟ ಸರಳನ್ನು ತಪ್ಪಿಸಿ ತಪ್ಪಿಸಿ ಓಡುತ್ತಾ ಐದು ಆರು ಏಳು ಎಂಟು ಒಂಬತ್ತು ಬಾಣಗಳಿಗೂ ಕೂಡ ತಪ್ಪಿಸಿಕೊಂಡು ಓಡಿಹೋಯಿತು! ೯೨. ಅವುಗಳಲ್ಲಿ ಒಂದು ಠಕ್ಕಿನ ಹರಿಣ. ಅದು ಕುಣಿಕುಣಿಯುತ್ತಾ ಆ ಕಾಡಿನ ಗಿಡಗಿಡಗಳ ಮರೆಯಲ್ಲಿ ಸುಳಿದು ಓಡುತ್ತಿತ್ತು. ಅದನ್ನು ಕಂಡ ಶಬರರು ಆ ಬೇಟೆ ತನಗೆಬೇಕು ನನಗೆಬೇಕು ಎಂದು ರಭಸದಿಂದ ಅದನ್ನು ಬೆನ್ನಟ್ಟಿ ಹೊಡೆದರು. ೯೩. ಶಬರರು ಬಿಟ್ಟ ಬಾಣಗಳು ಮೈಯಲ್ಲಿ ಒತ್ತಾಗಿ ಚುಚ್ಚಿಕೊಂಡಿರಲು ಅವುಗಳ ಗರಿಗಳು ತುಂಬಿರುವ ಮೃಗವು ಮುಳ್ಳು ಹಂದಿಯಂತೆ ಕಾಣಿಸುತ್ತಿತ್ತು. ವ ॥ ಮತ್ತೊಂದು ಕಡೆ ಒಬ್ಬ ಕಿರಾತರ ಒಡೆಯ ಕಾಡಿನಲ್ಲಿ ಓಡುತ್ತಿರುವ ಚಿಗರಿ ಹಿಂಡನ್ನು ನೋಡಿ– ೯೪. ಬಂಡಿಯ ಮೇಲೆ ತಂದ ದೀಹದ ಬೇಟೆಗಾಗಿ ಪಳಗಿಸಿದ ಹುಲಿಯನ್ನು ಮೆಲ್ಲನೆ

ಮ ॥ ಸ್ರ ॥ ನಿಮಿರ್ದಂಗಂ ನೀಳ್ದ ಮುಂಗಾಲುಡುಗಿ ನಡೆವ ಪಿಂಗಾಲ್ ಚಲದ್ವಾಲದಂಡಂ
ವಿಮಲೋಚ್ಚಂಡಾಕ್ಷಿ ಸೂಕ್ಷ್ಮಶ್ವಸಿತವದನ ಸಮತ್ಯೇಕಚಿತ್ರಂ ನಿರಸ್ತ ।
ಕ್ರಮಗಾಥಂ ಕೂಡೆ ತಸ್ರೊಳ್ ಬಗೆದಳವಿಗೆ ಮುಂಕೊಂಡು ಧೀಂಕಿಟ್ಟು ಪಾಯು
ತ್ತಮರುತ್ತೋದುತ್ತಪೀಱುತ್ತದಸಿ ಕಿಡಪಿತೊಂದೇಣಸಂ ಚಿತ್ರಕಾಯಂ ॥ ೯೫

ಕಂ ॥ ಪೊದಱೊಳಗತ್ಯುನ್ನತ ತರ
ಮದಾಂಧತಾಸಂತಬಲ ವಿಭೂಷಣನಷ್ಟ
ಗ್ಗದ ಪೆರ್ಬುಲಿಯಿರೆ ಶಬರರ್
ಮುದದಿಂದಂ ನೋಡಿ ಕಂಡು ಮತ್ತೊಂದೆಡೆಯೊಳ್ ॥ ೯೬

ವ ॥ ಇನ್ನೊಂದುಕಡೆ

ಚಂ ॥ ಮೆಳೆಯೊಳಗಿರ್ದ ಪೆರ್ಬುಲಿಯನಾರ್ದುಪಳಿಂದ ನಿಕಾಯಮೆಳ್ಚೆ ಪಿಂ
ಗಳತರಲೋಚನಂ ಬಹಳಸಂಹನನಂ ಪ್ರಥುಳಾಸ್ಯಗಹ್ವರಂ ।
ಗಳಿತನಿಶಾತದಂಷ್ಟ್ರನತಿತೋಪಮಸಂ ಘನಚಿತ್ರಕಾಯನು
ಜ್ವಲ ಚರಣಂ ವಿಘೂರ್ಣಿತಗಳಂ ಪೊಱಮಟ್ಟುದುದಗ್ರವೃತ್ತಿಯಿಂ ॥ ೯೭

ಪೊಱಮಡೆ ಕಂಡು ಗಂಡುಮಿಗೆ ದಂಡೆಯನಿತ್ತು ಕುಱುತ್ತು ಪತ್ತೆ ಸಾ
ರ್ದುಱದೆ ನಿಲುತ್ತೆ ಸುತ್ತಿದ ಕಿರಾತಕುಲಂ ಮಝುಭಾಪೆಸುತ್ತೆ ಜೊ ।
ಬ್ಬೞಿಯೆ ಕುಸುಂಗಿ ಕುಕ್ಕುಱಿಸಿ ಸಣ್ಣನೆ ಕಿಳ್ತಲಗಿಂ ಕಡಂಗಿ ಕಾ
ಯ್ದುಱಿದನದೊರ್ವ ಲುಬ್ಧಕನಗುರ್ವಿನ ಪೆರ್ಬುಲಿಯಂ ವನಾಂತದೊಳ್ ॥ ೯೮

ಕೊಂಡೊಯ್ದು ಇಳಿಸಿ ಕೊರಳಿಗೆ ಬಿಗಿದ ಹಗ್ಗದ ಕಣ್ಣಿಯನ್ನು ಬಿಚ್ಚಿದಾಗ ಹುಲಿಯ ಆಟೋಪವನ್ನು ಕಂಡು ಮೃಗಸಮೂಹವನ್ನು ಅದಕ್ಕೆ ತೋರಿದನು. ೯೫. ನಿಮಿರಿದ ಅಂಗ, ನೀಳವಾಗಿ ಚಾಚಿದ ಮುಂಗಾಲು,ಕುಗ್ಗಿಸಿದ ಹಿಂಗಾಲು, ಚಲಿಸುವ ಬಾಲ, ನಿರ್ಮಲವಾದ ಉಜ್ವಲನೇತ್ರ, ನವಿರಾದ ನಿಟ್ಟುಸಿರು, ಏಕಾಗ್ರತೆಯಿಂದ ಶಕ್ತಿಮೀರಿ ಕುಪ್ಪಳಿಸಿ, ಗರ್ಜಿಸಿ, ಓಡಿಹೋಗಿ ಜಿಂಕೆಯೊಂದನ್ನು ಕೆಡವಿ ಅದರ ರಕ್ತವನ್ನು ಹೀರಿತು ಆ ಹೆಬ್ಬುಲಿ! ೯೬. ಒಂದು ಪೊದೆಯಲ್ಲಿ ಅತ್ಯಂತ ಮದಿಸಿದ ಬಲಿಷ್ಠವಾದ ಹೆಬ್ಬುಲಿಯೊಂದಿತ್ತು. ಅದನ್ನು ಕಂಡು ಶಬರರು ಹರ್ಷಗೊಂಡರು. ಇನ್ನೊಂದು ಕಡೆ– ೯೭. ಒಂದು ಮೆಳೆಯಲ್ಲಿ ಅಡಗಿದ್ದ ಹೆಬ್ಬುಲಿಯನ್ನು ಬೇಡರು ಬೆದರಿಸಿ ಎಬ್ಬಿಸಿದರು. ಅದು ಕಣ್ಣುಕೆಂಪಗೆಮಾಡಿ ಭಯಂಕರ ವದನವುಳ್ಳುದಾಗಿ, ತೀಕ್ಷ್ಣವಾದ ಕೋರೆದಾಡೆಗಳಿಂದ ಕೂಡಿದ ಆ ಹೆಬ್ಬುಲಿ ಉಗ್ರವಾಗಿ ಅಲ್ಲಿಂದ ಹೊರಬಿತ್ತು. ೯೮. ಹುಲಿ ಮೆಳೆಯಿಂದ ಹೊರಬಿದ್ದುದನ್ನು ಕಂಡ ಕಿರಾತರು ಧೈರ್ಯದಿಂದ ಅದನ್ನು ಮುತ್ತಿದರು. ಅವರು ಮಝು, ಭಾಪು ಎಂದು ಅಬ್ಬರಿ ಸುತ್ತಿರುವಾಗ, ಬಗ್ಗಿ ಕುಳಿತು ಕೋಪಗೊಂಡ ಒಬ್ಬ ಬೇಡನು ಕೊಬ್ಬಿದ ಆ ಹೆಬ್ಬುಲಿ

ವ॥ ಮತ್ತಮೊಂದೆಡೆಯೊಳ್ ಪುಳಿಂದನಾಥರೊಂದಾಗಿ

ಕಂ॥ ತನತನಗೆ ಹಂದಿವೇಂಟೆಗೆ
ವನಚರರೆಯ್ತಂದು ನಿಂದು ನೀರ್ದಾಣದೊಳೊ।
ಗ್ಗಿನ ಮರದ ಮಱೆಯೊಳಿರೆ ಮೆ
ಲ್ಲನೆ ಬಂದತ್ತೊಂದು ಸೊರ್ಕಿದೆಕ್ಕಲನಾಗಳ್॥ ೯೯

ಶಾ॥ ಧೀರಂ ಪಿಂಗಳಲೋಚನಂ ನಿಶಿತ ದಂಷ್ಟ್ರಂ ಭೀಷ್ಮವಕ್ತ್ರಂ ಘನ
ಕ್ರೂರಂ ವಜ್ರಸಮಾನ ರೋಮನಿಚಯಂ ಸಂಪೂರ್ಣಕಾಯಂ ಸ್ಥಿರಂ।
ಶೂರಂ ರೌದ್ರಗಭೀರಚಿತ್ತನತಿಮಾನಿ ಸ್ವಲ್ಪಪುಚ್ಛಾನ್ವಿತಂ
ಘೋರಾರಣ್ಯಚರಂ ವಿರಾಜಿಸಿದುದುದ್ಯದ್ಭೀಕರಂ ಸೂಕರಂ॥ ೧೦೦

ಮ॥ ಸ್ರ॥ ಬರೆಕಾಣುತ್ತಲ್ಲಿ ಭಿಲ್ಲಪ್ರಕರಮದಸಿ ಕೂರ್ನಾಯ್ಗಳಂ ಬಿಟ್ಟು ಬೊಬ್ಬಿ
ಟ್ಟರರೇ ಕೆಯ್ಕೊಂಡು ನಾಲ್ಕುಂದೆಸೆಗೆ ಮಸಗಿ ಕಂಡೆಕ್ಕಲಂ ದಾಡೆಗುಟ್ಟು।
ತ್ತೆರಡುಂ ಕಣ್ಣಿಂ ಸ್ಫುಲಿಂಗಂ ಸುರಿದಪ್ಪವೆನೆ ನೋಡುತ್ತೆ ತೀಡುತ್ತೆ ಕಲ್ಲಿಂ
ದುಱದಂಷ್ಟ್ರಾಗ್ರಂಗಳಿಂ ಭೂಮಿಯನುಱದೆ ಪೇಱಟುತ್ತೆ ಮುಂಗಾಲ್ಗಳಿಂದಂ॥ ೧೦೧

ಕಂ॥ ನಟ್ಟಡವಿಯೊಳಗೆ ಮುಳಿಸಿಂ
ಮುಟ್ಟುವ ನಾಯ್ಗಳನೆ ತುಂಡಿಸಲ್ಕೆಂದುಱಿ ಕಿ।
ರ್ಗುಟ್ಟುತೆ ಮುಂದಟ್ಟ ಪೆಡಂ
ಮುಟ್ಟುತೆ ಸೂಕರನಡರ್ದು ಸಾರ್ದುದು ಮೆಳೆಯಂ॥ ೧೦೨

ಯನ್ನು ಒಂದು ಹರಿತವಾದ ಅಲಗಿನಿಂದ ಇರಿದನು. ವ॥ ಮತ್ತೊಂದುಕಡೆ ಬೇಡರೊಡೆಯರೆಲ್ಲರೂ ಒಂದಾಗಿ—೯೯. ವನಚರರು ತಾವು ತಾವಾಗಿಯೇ ಹಂದಿಬೇಟೆಗೆ ಸಿದ್ಧರಾದರು. ಒಂದು ನೀರ್ದಾಣದಲ್ಲಿ ಮರದ ಮರೆಯಲ್ಲಿ ನಿಂತು ನಿರೀಕ್ಷಿಸುತ್ತಿರುವಾಗ ಒಂದು ಸೊಕ್ಕಿದ ಹಂದಿ ಬಂದಿತು. ೧೦೦. ಧೈರ್ಯಶಾಲಿ, ಕೆಂಪುಕಣ್ಣು, ಹರಿತವಾದ ಕೋರೆದಾಡೆ, ಭಯಂಕರ ಮುಖ, ಕ್ರೂರಿ, ವಜ್ರದಂತೆ ಕಠಿನವಾದ ಮೈಗೂದಲು, ನೀಳಕಾಯ, ರುದ್ರ ಗಂಭೀರವಾದ ಚಿತ್ತ, ಅಭಿಮಾನಶಾಲಿ, ಮೋಟುಬಾಲ, ಹೀಗೆ ಘೋರಾರಣ್ಯ ಸಂಚಾರಿಯಾದ ಭೀಕರವೂ ಆದ ಕಾಡುಹಂದಿಯೊಂದು ಅಲ್ಲಿ ಕಾಣಿಸಿಕೊಂಡಿತು. ೧೦೧. ಹಂದಿಯು ಬಂದೊಡನೆಯೇ ಅದನ್ನು ಕಂಡ ಭಿಲ್ಲರು ಕ್ರೂರನಾಯಿಗಳನ್ನು ಅದರ ಮೇಲೆ ಛೂಬಿಟ್ಟು ಬೊಬ್ಬಿಟ್ಟರು. ಅದನ್ನು ಕಂಡ ಹಂದಿಯು ನಾಲ್ಕು ದಿಕ್ಕುಗಳಿಗೂ ನೋಡಿ ಎರಡೂ ಕಣ್ಣುಗಳಿಂದ ಕಿಡಿಯುದುರುತ್ತಿರುವವೊ ಎಂಬಂತೆ ಕೋರೆದಾಡೆಗಳನ್ನು ಕಲ್ಲಿಗೆ ತೀಡುತ್ತ ಉರದಿಂದ ಕೋರೆದಾಡೆಗಳಿಂದ ಭೂಮಿಯನ್ನು ತಿವಿಯುತ್ತ, ಮುಂಗಾಲುಗಳಿಂದ ಭೂಮಿಯನ್ನು ಕೆರೆಯತೊಡಗಿತು. ೧೦೨. ಆ ನಡು

ಕಂ॥ ಕುಪ್ಪಳಿಸಿ ತುರುಗಿ ಪರ್ವಿದ
ಜಿೊಪ್ಪವನಿರದಂಡುಗೊಂಡು ಪಂದಿಯ ಬಳಿಯೊಳ್ ।
ನೊಪ್ಪುನೆಗೆದುರ್ಬಿ ಪಾಯುತೆ
ಚಪ್ಪರಿಸುತ್ತುಗಿದು ಬಗಿದು ತೆಗೆದುವು ನಾಯ್ಗಳ್ ॥ ೧೦೩

ವ॥ ಮತ್ತಮವಜಿೊಳಗೊಂದು ಜಾತಿಜಾಯಲಂ ಪೋಗದೆನಿಂದು

ಕಂ॥ ಮುಳಿದಟ್ಟಿ ತಿರುಗಿ ನೋಡು
ತ್ತೊಳಪೊಕ್ಕು ಮರಳ್ದು ಮತ್ತೆ ಬೆನ್ನಟ್ಟಿ ಕರಂ ।
ಕಳಿದು ಪೆಡಂಬಾಯ್ದಳಲಿಂ
ಬಳಸುತ್ತಿರೆ ನಿಂದ ಪಂದಿಯಂ ತುನಕೇಂದ್ರಂ ॥ ೧೦೪

ಮಿಕ್ಕುಪುಗಲತ್ತು ಕಿರ್ಗ
ಣ್ಚಿಕ್ಕುತ್ತೊಳಪೊಕ್ಕು ಜಾಯಿಲನ ಬಡನಡುವಂ ।
ಚಕ್ಕನೆ ತುಂಡಿಸಿ ಮಲೆಯುತೆ
ಧಿಕ್ಕರಿಸುತ್ತತುಳ ಕೋಪನೀಡಂ ಕ್ರೋಡಂ ॥ ೧೦೫

ವ॥ ಆಗಳ್

ಅಳ್ಕಿ ಪುಳಿಂದಂ ಕಾಣುತೆ
ತಳ್ಕೈಸಿಯೆ ಕೊಂಡು ಶುನಕವೆರಡುಂ ಕಡಿಯಂ ।
ಕಾಳ್ಕಿರ್ಚು ತಗುಳ್ದ ತೆಱದಿಂ
ನಿಳ್ಕೈಸದೆ ನೊಂದು ಬೆಂದು ಬಳಲುತ್ತೆಂದಂ ॥ . ೧೦೬

ಕಾಡಿನಲ್ಲಿ ಕೋಪದಿಂದ ಮೇಲೆ ಹಾಯ್ದು ಬರುವ ನಾಯಿಗಳನ್ನು ತುಂಡರಿಸಲೆಂದು ಕಿರ್ಗುಟ್ಟುತ್ತ ಮುಂದಡಿಯಿಟ್ಟು ಹಿಮ್ಮೆಟ್ಟಿದ ಆ ಹಂದಿಯು ಮತ್ತೆ ಮೆಳೆಯನ್ನು ಸೇರಿತು. ೧೦೩. ಆಗ ನಾಯಿಗಳು ಪೊದೆಗೆ ನುಗ್ಗಿ ಅದನ್ನು ಹಿಂಬಾಲಿಸಿ ಹಂದಿಯ ಬಳಿಯಲ್ಲಿ ನೆಗೆದು ಮೇಲೆಬಿದ್ದು ಅದನ್ನು ಬಗೆದು ತೆಗೆದವು. ೧೦೪. ಮತ್ತೊಂದು ಜಾತಿಯ ನಾಯಿಯು ಕೋಪಗೊಂಡು, ತಿರುಗಿನೋಡಿ, ಒಳಹೊಕ್ಕು, ಮರಳಿ, ಬೆನ್ನಟ್ಟಿ ಬಳಲಿದ್ದ ಹಂದಿಯನ್ನು ನೋಡಿ ೧೦೫. ಇಣಕಿನೋಡಿ ಮೆಳೆಯೊಳಗೆ ನುಗ್ಗಿದ ಆ ನಾಯಿಯ ಬಡನಡುವನ್ನು ಹಂದಿಯು ಚಕ್ಕನೆ ತುಂಡರಿಸಿ ಮಲೆದು ಧಿಕ್ಕರಿಸುತ್ತ ಅಧಿಕ ಕೋಪದಿಂದ ಗುರುಗುಟ್ಟಿತು. ೧೦೬. ನಾಯಿಗೆ ಆದ ಗತಿಯನ್ನು ಕಂಡ ಪುಳಿಂದನು ಮನನೊಂದು ಆ ನಾಯಿಯ ಎರಡೂ ತುಂಡುಗಳನ್ನು ತಕ್ಕೈಸಿ, ಕಾಳ್ಕಿಚ್ಚು ತಗುಲಿತೊ ಎಂಬಂತೆ ಸಹಿಸ

ಉ॥ ಪಾಸಿನ ಮೇಲೆ ಪಟ್ಟಿರಿಸಿ ಪಾಲೆಱೆದೆನ್ನೊಡಗೂಡಿ ಬಾಲಿಕಾ
ಭ್ಯಾಸದಿನೆತ್ತಿ ಸತ್ತಿಗೆಯ ತಣ್ಣೆಳಲೊಳ್ ಬಳೆವಂತು ಮಾಡಿಯು ।
ಚ್ಚಾಸನದಲ್ಲಿ ಕುಳ್ಳಿರಿಸಿಯೋವಿದ ಕುನ್ನಿಯನೀವರಾಹ ನೀ
ಸಾಸಿಗನೀಕಠೋರಮನನೆನ್ನಯೆ ಮುಂದೆ ಸಮಂತು ಕೊಲ್ವುದೇ ॥ ೧೦೭

ಕ॥ ಒಡಗೂಡುತ್ತೊಡವೆಳಸು
ತ್ತೊಡನಾಡಿಸಿದೆನ್ನ ಚೆನ್ನ ಕುನ್ನಿಯನೀ ಕ ।
ಕ್ಕಡವಂದಿ ಕೊಂದುದಿನ್ನಿದ
ಜೊಡನಳಿವೆಂ ಕೊಲ್ಲದುಳಿಯೆನೀ ಸೂಕರನಂ ॥ ೧೦೮

ಉ॥ ಎಂದು ಪುಳಿಂದನಾಥನುಳಿದಾರುತೆ ಕೂರಲಗಿಂ ಕಱುತ್ತುಪೆ
ರ್ಬಂದಿಯನೆಯ್ದೆ ತಳ್ತಿಱಿದೊಡುಂಗುಟದಿಂದೆ ಶಿರಂಬರಂ ವರಾ ।
ಹಂ ದಿಟಮೆತ್ತೆಮತ್ತಿಱಿಯೆ ಮತ್ತೆರಕಂ ಸೆಳೆದೆತ್ತೆ ನೊಂದು ತಾ
ನೊಂದೆಸೆಯೊಳ್ ವರಾಹಪತಿಯೊಂದೆಸೆಯೊಳ್ ಕೆಡೆದತ್ತರಣ್ಯದೊಳ್ ॥ ೧೦೯

ಕ॥ ಕೆಡೆದಿರ್ದ ಶಬರನಂ ಕ
ಕ್ಕಡವಂದಿಯನೀಕ್ಷಿಸುತ್ತೆ ಶಬರಸಮೂಹಂ ।
ಬಿಡೆ ಕೊಂಡು ಕೊನೆದು ಬಲ್ಪಂ
ನುಡಿಯುತ್ತಿರ್ಪನ್ನಮಿತ್ತ ಮತ್ತೊಂದೆಡೆಯೊಳ್ ॥ ೧೧೦

ಲಾರದೆ ಬಹುವಾಗಿ ನೊಂದು ಹೀಗೆಂದನು. ೧೦೭. ಅಯ್ಯೋ ! ಇದನ್ನು ಎಳೆತನದಿಂದಲೂ ನಾನು ಹಾಸಿಗೆಯ ಮೇಲೆ ಮಲಗಿಸಿ, ಹಾಲೆರೆದು, ಎತ್ತಿ ಕೊಡೆಯ ನೆಳಲಲ್ಲಿ ಬೆಳೆಸಿದೆ. ಇದನ್ನು ಎತ್ತರವಾದ ಪೀಠದಲ್ಲಿ ಕೂಡಿಸಿ, ಕಾಪಾಡಿದೆ; ಅಂತಹ ಈ ಕುನ್ನಿಯನ್ನು ಸಾಹಸಿಗನಾದ ಈ ಹಂದಿಯು ಕಠೋರ ಮನಸ್ಕನಾದ ನನ್ನ ಮುಂದೆಯೇ ಕೊಂದಿತಲ್ಲಾ ! ಎಂದು ಆ ಪುಳಿಂದನು ಬಿಸುಸುಯ್ದನು. ೧೦೮. ನನ್ನ ಜೊತೆಯಲ್ಲಿ ಆಹಾರವನ್ನುಣಿಸಿ, ಬೆಳೆಸಿ, ಆಡಿಸಿದ ನನ್ನ ಈ ಒಳ್ಳೆಯ ಕುನ್ನಿಯನ್ನು ಈ ನಿಷ್ಠುರ ಹಂದಿಯು ಕೊಂದಿತು. ಇದಕ್ಕಾಗಿ ಈ ಸೂಕರನನ್ನು ಕೊಂದು ಇದರೊಡನೆ ಅಸುನೀಗುವೆನು ಎಂದು ಆತ ಪಣ ತೊಟ್ಟನು. ೧೦೯. ಹೀಗೆಂದ ಆ ಪುಳಿಂದನು ಕೋಪಗೊಂಡು ಕ್ರೂರವಾದ ಅಲಗಿನಿಂದ ಆ ಹೆಬ್ಬಂದಿಯನ್ನು ಇರಿದನು. ಮತ್ತೆ ಅದು ತಲೆಯೆತ್ತಲು ಮತ್ತೆ ಅದನ್ನಿರಿದು ತಾನೂ ಇರಿದುಕೊಂಡನು. ಹಂದಿಯೊಂದುಕಡೆ ಬಿತ್ತು, ತಾನು ಇನ್ನೊಂದೆಡೆ ಮಡಿದನು. ೧೧೦. ಹೀಗೆ ಬಿದ್ದಿದ್ದ ಶಬರ ಮತ್ತು ಕ್ರೂರ ಹಂದಿಗಳನ್ನು ನೋಡಿದ ಶಬರರು ವೀರಾಲಾಪ

ಕಂ॥ ಪ್ರಕುಪಿತದಿಂ ತೆಗೆದಿಸೆ ಮ
ಸ್ತಕಮಂ ಕರಿನೊಂದು ತಿರುಗೆ ಪರಿವ ಶರಂ ಪೇ ।
ಚಕದಿಂದುರ್ಚಿ ಕರಂ ಲು
ಬ್ಧಕನಂ ತಾಗಿತ್ತು ಮಗುಳ್ದು ವನದೊಳ್ ಚಿತ್ರಂ ॥ ೧೧೧

ಮ॥ ಸ್ರ॥ ದರಿಯಂ ದಂತಾಗ್ರದಿಂದೀಡಿಱಿದು ಕೆಡುಪುತುಂ ಗುಲ್ಮವೃಕ್ಷಂಗಳಂ ತತ್
ಕರದಿಂದಂ ಸುತ್ತಿ ಕಿಳ್ತೆತ್ತುತೆ ನಿಜವಿಪುಳಚ್ಛಾಯೆಯಂ ಕುಂಭಿಗೆತ್ತು ।
ದ್ಧುರಕೋಪಾಟೋಪದಿಂ ಕಂಡೆಱಗುತೆ ಮದಸೌರಭ್ಯಲೋಲುಪ್ತಭೃಂಗೋ
ತ್ಕರಮಂ ಕರ್ಣಾಗ್ರದಿಂ ಸೋವುತೆ ಕರಿಯಿರೆ ನಿಂದುದೊಂದಭ್ರಾಭ್ರಕಾಯಂ ॥ ೧೧೨

ಉ॥ ಕಂಡು ಕಿರಾತನೊರ್ವನಿಭಮಸ್ತಕ ಮೌಕ್ತಿಕ ಲೋಭದಿಂದೆ ಕೋ
ದಂಡಮನಾರ್ಪಿನಿಂ ತೆಗೆದು ಕೂರ್ಪಿನ ಬಾಣದಿನೆಚ್ಚೊಡುರ್ಚಿಪೇ ।
ದಂಡಲಲಾಟದಿಂ ಪೆಱಗೆ ಪೇಚಕದೊಳ್ ಮಿಗೆ ಮೂಡೆ ತಲ್ಲಣಂ
ಗೊಂಡುದು ಕುರ್ಗಿ ಕುಕ್ಕುಱಿಸಿ ಘೀಳಿಡುತಿರ್ದುದು ಬಿಳ್ದು ಭೂಮಿಯೊಳ್ ॥ ೧೧೩

ಕಂ॥ ಬೀಳೆ ಪರಿತಂದು ಶಬರಂ
ಸೀಳುತ್ತಂ ಕುಂಭದೊಳಗಣಲ್ಲಿಯ ಮುಕ್ತಾ ।

ಗಳನ್ನು ಮಾಡುತ್ತಿರುವಾಗ ಇನ್ನೊಂದೆಡೆ– ೧೧೧. ಶಬರನೊಬ್ಬನು ಕೋಪಗೊಂಡು ಆನೆಗೆ ಗುರಿಯಿಟ್ಟು ಬಾಣ ಪ್ರಯೋಗಮಾಡಿದನು. ಅದು ಅದರ ಮಸ್ತಕಕ್ಕೆ ತಾಗಿತು. ಕೂಡಲೆ ನೊಂದ ಆ ಕರಿಯು ಹಿಂದಿರುಗಿತು. ಅವನು ಬಿಟ್ಟಬಾಣವು ಕರಿಯ ಮಲದ್ವಾರದಿಂದ ಹೊರಟು ಮತ್ತೆ ಅದನ್ನು ಪ್ರಯೋಗಿಸಿದ ಶಬರನಿಗೆ ತಗುಲಿತು ಎಂಬುದು ಸೋಜಿಗವಲ್ಲವೆ? ೧೧೨. ಅಲ್ಲೊಂದು ಮದ್ದಾನೆ, ಅದು ದಂತದ ತುದಿಯಿಂದ ಕಂದರವನ್ನು ಇರಿದು ಕೆಡವಿ, ಪೊದೆಗಳನ್ನು ಮರಗಳನ್ನು ಸೊಂಡಲಿನಿಂದ ಕಿತ್ತು ಮೇಲೆತ್ತಿ, ತನ್ನ ನೆರಳನ್ನೇ ಬೇರೆ ಆನೆಯೆಂದು ಭ್ರಮಿಸಿ ಕೋಪಾಟೋಪದಿಂದ ಅದರ ಮೇಲೆ ಎರಗಿ, ಮದೋದಕದ ವಾಸನೆಗೆ ಮುತ್ತಿಬರುತ್ತಿರುವ ದುಂಬಿವಿಂಡನ್ನು ಕಿವಿಗಳಿಂದ ಸೋವುತ್ತ ನಿಂತಿತು. ೧೧೩. ಅದನ್ನು ಕಂಡ ಒಬ್ಬ ಶಬರ. ಅವನಿಗೆ ಆ ಆನೆಯ ಮಸ್ತಕದಲ್ಲಿರುವ ಮುತ್ತುಗಳನ್ನು ಪಡೆವ ಆಸೆ; ಆತ ಬಾಣವೊಂದನ್ನು ಬಿಲ್ಲಿಗೇರಿಸಿ, ಬಲವಾಗಿ ಎಳೆದು ಮಸ್ತಕಕ್ಕೆ ಗುರಿಯಿಟ್ಟ; ಆ ತೀಕ್ಷ್ಣವಾದ ಬಾಣ ಅಲ್ಲಿಂದ ಒಳಹೊಕ್ಕು ಮಲದ್ವಾರದಲ್ಲಿ ಮೂಡಿತು. ಅದರಿಂದ ತಲ್ಲಣಿಸಿದ ಆ ಗಜ ನೆಲಕ್ಕೆ ಕುಕ್ಕರಿಸಿ, ಘೀಳಿಟ್ಟು ಭೂಮಿಗೆ ಉರುಳಿತು. ೧೧೪. ಆನೆಯು ಕೆಳಕ್ಕೆ ಬೀಳಲು ಶಬರ ಅಲ್ಲಿಗೆ ಬಂದು, ಮಸ್ತಕವನ್ನು ಸೀಳಿದ;

ಜಾಳಕಮನೆ ಕೊಂಡು ಸುಖಿಂ
ದಾಳುತ್ತುಂ ಬಂದನಬಲೆಗೀವತಿಭರದಿಂ ॥ ೧೧೪

ವ॥ ಅಂತು ಬಂದು

ಕಂ॥ ಮತ್ತಗಜ ಮಸ್ತಕದ ಪೊಸ
ಮುತ್ತುಂ ಬಲ್ಪಿಂದೆ ತಂದೆನೆಂದೊಲವಿಂದಂ ।
ವೃತ್ತೋತ್ತುಂಗ ಪಯೋಧರಿ
ಗಿತ್ತುಂ ಮತ್ತೋರ್ವ ಶಬರಿಮಿಗೆ ನಗೆ ವನದೊಳ್ ॥ ೧೧೫

ವ॥ ಮತ್ತಮೊಂದೆಡೆಯಲ್ಲಿ

ಮತ್ತಮದಲ್ಲದೆ ಘನಸುಖ
ಚಿತ್ತಂ ಚಿತ್ತಜನ ಪೋಲೆ ಮನ್ಮಥರಾಗೋ ।
ನ್ಮತ್ತನದೊರ್ವಂ ಲುಬ್ಧಕ
ನತ್ತಿತ್ತುಂ ಶಬರಿಯಿಲ್ಲದೊಂದಡಿಯನಿಡಂ ॥ ೧೧೬

ಕೆಲದೊಳ್ ಪುಳಿಂದಿಯಿರೆ ಪೆ
ರ್ಬುಲಿ ಬಂದೊಡಮಂಜನಳ್ಕನೋಡಂ ನೊಡಂ ।
ಚಲದಿಂ ಕಾಡಂ ಕಾಡಂ
ಸಲೆ ಪಸಿವಂ ಮಱೆದು ತಣಿದು ಬೇಡಂ ಬೇಡಂ ॥ ೧೧೭

ಪೆಱತೊಂದೆಡೆಯೊಳ್ ಮುತ್ತಿಂ
ತುಱುಗಿದ ಮಂಡನ ಚಯಂಗಳಂ ತೊಟ್ಟೊಲವಿಂ ।

ಅಲ್ಲಿದ್ದ ಮುತ್ತುಗಳನ್ನು ಆರಿಸಿಕೊಂಡು ಮನೆಗೆ ಬಂದು ತನ್ನ ಪ್ರಿಯೆಗೆ ಅವುಗಳನ್ನು ಕೊಟ್ಟು ಸಂತೋಷಗೊಂಡ. ೧೧೫. “ಮತ್ತಗಜದ ಮಸ್ತಕದಲ್ಲಿದ್ದ ಮುತ್ತುಗಳನ್ನು ತನ್ನ ಭುಜಬಲದಿಂದ ತಂದೆ” ಎಂದು ಆ ಶಬರನು ತನ್ನ ಬಲ್ಮೊಲೆಯ ಶಬರಿಗೆ ಕೊಟ್ಟ. ಇದನ್ನು ನೋಡಿದ ಮತ್ತೊಬ್ಬ ಶಬರಿಯ ಮುಖ ಅರಳಿತು. ೧೧೬. ಇಷ್ಟೇ ಅಲ್ಲದೆ-ಅಲ್ಲಿ ಮತ್ತೊಬ್ಬ ಶಬರ; ಅವನಿಗೆ ಘನಸುಖದಲ್ಲಿ ಇಚ್ಛೆ, ಮನ್ಮಥನ ಹೋಲಿಕೆ ಅವನದು; ಆತ ಕಾಮರಾಗೋನ್ಮತ್ತ; ಅವನು ಶಬರಿ ಇಲ್ಲದಿದ್ದರೆ ಒಂದು ಹೆಜ್ಜೆಯನ್ನೂ ಮುಂದೆ ಇಡುತ್ತಿರಲಿಲ್ಲ. ೧೧೭. ಆತ ಮಗ್ಗುಲಲ್ಲಿ ತನ್ನ ಪ್ರಿಯೆ ಶಬರಿಯಿದ್ದ ಪಕ್ಷದಲ್ಲಿ ಹೆಬ್ಬುಲಿ ಹತ್ತಿರ ಬಂದರೂ ಅಂಜುವುದಿಲ್ಲ. ಅಳುಕುವುದಿಲ್ಲ, ಅದನ್ನು ಕಣ್ಣೆತ್ತಿಯೂ ನೋಡುತ್ತಿರಲಿಲ್ಲ. ಚಲದಿಂದ ಅದನ್ನು ಕಾಡುತ್ತಲೂ ಇರಲಿಲ್ಲ; ಆತ ಹಸಿವನ್ನೂ ಮರೆತು ಸಂತೃಪ್ತನಾಗಿರುತ್ತಿದ್ದುದರಿಂದ ಏನನ್ನೂ ಬೇಡುತ್ತಲೂ ಇರಲಿಲ್ಲ. ೧೧೮. ಮತ್ತೊಂದು ಎಡೆಯಲ್ಲಿ

ದೆಱಗಿ ಕುಣಿದಾಡಿಸುತ್ತುಂ
ಮೆಱೆವ ಪುಳಿಂದಿಯರ ನಿಂದ ವೊತ್ತದೊಳೊರ್ವಳ್ ॥ ೧೧೮

ಎಳನವಿಲ ಕಲಾಪಂಗಳ
ನಳವಡೆ ತಳೆದುಂ ಮದೇಭಮಸ್ತಕ ಮುಕ್ತಾ।
ಫಳವಿಳಸಿತ ಸಾಪತ್ನೀ
ಕುಳದೊಳ್ ಗರ್ವಿಸುವ ಶಬರಿಯಿರವತಿ ಚಿತ್ರಂ ॥ ೧೧೯

ನಡೆದು ಗಳ ಗಳನೆ ಮತ್ತೊಂ
ದೆಡೆಯೊಳ್ ಗಜಮೆಯ್ದೆ ಪೊಕ್ಕು ನದಿಯೊಳ್ ಕಡುನೀ।
ರಡಸಿ ತೆಗೆದೀಂಟಿ ಜಲಮಂ
ಬಿಡೆ ತಮ್ಮೊಳ್ ತೀವಿಕೊಂಡು ಚೆಲ್ಲುವ ಪದದೊಳ್ ॥ ೧೨೦

ಇಳೆಯೊಳ್ ತಮ್ಮಂ ಕಾದಾ
ಪುಳಿಂದ ನಾಯಕಿಯ ಯೌವನಕ್ಕರ್ಘ್ಯಮುಮಂ।
ತಳವಡೆ ಕುಡುವಂತಿರ್ದುದು
ಜಳ ಪೂರಿತ ಹಸ್ತದಿಂದ ಹಸ್ತಿಕದಂಬಂ ॥ ೧೨೧

ವಿಲಸನ್ಮತ್ತಗಜೇಂದ್ರೋ
ಜ್ವಲ ನಿರ್ಮಳದಂತ ಮುಸಲ ಹಸ್ತಸಮೇತಂ।
ನಲಿ ನಲಿದು ಕಿರಾತಸ್ತ್ರೀ
ಕುಲವೊರ್ಬುಳಿಗೊಂಡು ನಿಂದು ಮತ್ತೊಂದೆಡೆಯೊಳ್ ॥ ೧೨೨

ಪುಳಿಂದಿಯರು ಮುತ್ತುಗಳನ್ನು ದಟ್ಟವಾಗಿ ಧರಿಸಿ, ಒಡವೆಗಳನ್ನು ತೊಟ್ಟು, ಸಂತೋಷ ದಿಂದ ನರ್ತಿಸುತ್ತಿದ್ದಾರೆ; ಅವರಲ್ಲಿ ಒಬ್ಬಳು— ೧೧೯. ಎಳೆನವಿಲಿನ ಗರಿಗಳನ್ನು ಅಂಗಾಂಗ ಗಳಲ್ಲಿ ಅಳವಡಿಸಿಕೊಂಡಿದ್ದಾಳೆ. ಅವಳು ಮದ್ದಾನೆಯ ಮಸ್ತಕದ ಮುಕ್ತಾಫಲಗಳನ್ನು ಅಲಂಕರಿಸಿಕೊಂಡು ತನ್ನ ಇತರ ಸವತಿಯರ ಮಧ್ಯದಲ್ಲಿ ಗರ್ವಿಸುವ ಬೆಡಗು ಬಹು ಸೋಜಿಗ! ೧೨೦. ಮತ್ತೊಂದು ಕಡೆ ಆನೆಯೊಂದು ಗಳಗಳನೆ ನಡೆದು ನದಿಯನ್ನು ಹೊಕ್ಕು, ಬಾಯಾರಿದ್ದುದರಿಂದ ಜಲವನ್ನು ಸಾಕಷ್ಟು ಕುಡಿಯಿತು. ಅದು ಜಲವನ್ನು ಸೊಂಡಲಿನಲ್ಲಿ ತುಂಬಿಕೊಂಡು ಚೆಲ್ಲುತ್ತಿತ್ತು. ೧೨೧. ಇಳೆಯಲ್ಲಿ ತಮ್ಮನ್ನು ಕಾಡುವ ಪುಳಿಂದನಾಯಕಿಯ ಯೌವನಕ್ಕೆ ಅರ್ಘ್ಯವನ್ನು ಕೊಡಲೋ ಎಂಬಂತೆ ಆನೆಗಳ ಗುಂಪು ಸೊಂಡಲಿನಿಂದ ನೀರನ್ನು ತುಂಬಿಕೊಂಡಿತ್ತು. ೧೨೨. ಮತ್ತೊಂದು ಕಡೆ ಮದಗಜಗಳ ಒನಕೆಯಂತಿರುವ ದಂತ ಮತ್ತು ಹಸ್ತಗಳಿಂದ ಕೂಡಿದ ಕಿರಾತಸ್ತ್ರೀಯರು ನಲಿನಲಿದು

ಚಂ॥ ತಳಿರ್ಗಳ ಸೀರೆಯುಟ್ಟು ಗುರುಗುಂಜಿಯ ಹಾರಮನಾಂತು ಮುಂದೆ ಶೀ
ತಳ ಶಶಿಕಾಂತದಿಂ ಸಮೆದೊರಲ್ಗಳೊಳಂ ಬಿದಿರಕ್ಕಿಯಿಕ್ಕಿ ನಿ ।
ಚ್ಚಳಮನ ಸುವ್ವಿ ಕಾಡೊಡೆಯ ಸುವ್ವಿ ಮನೋಹರಸುವ್ವಿಸುವ್ವಿಯಂ
ದಳವಡೆರಾಗದಿಂ ತಳಿಸಿದರ್ ವನದಲ್ಲಿ ಪುಳಿಂದಕಾಂತೆಯರ್ ॥ ೧೨೩

ವ॥ ಅದಲ್ಲದೆಯುಂ ಮತ್ತೊಂದೆಡೆಯೊಳ್ ಅತಿಬಳನೊರ್ವ ಪುಳಿಂದನಾಥಂ ಒಡನೆಯ ಬೇಡರ ಮುಂದಾಸುರದಿಂ ಭಾಷೆಗುಡುತ್ತಿರ್ದನದೆಂತೆಂದೊಡೆ

ಸ್ರ॥ನಿಂದಂ ನಿಂದೆಂತುವೀ ವೀರದ ರದನಿಕರಂ ಬಂದೊಡಂಗೊಂ
ಡಂದಾವಂದಾವನಂತಿರ್ಪ ಸರಪಸರಮಂಕಾಣ್ಬನಾ ಮಾತದಿರ್ಕೆ ।
ನ್ನಂದಂ ನಂದಂ ಕನಲ್ದಿರ್ಪೊಡೆ ಪೊಡೆ ಪುಲಿಯಂ ಬೇಗದಿಂ ಬೇಗದಿಂದಂ
ಬಂದಂ ಬಂದಂತೆ ಕೊಂದುರ್ಕುವ ಕುವರನವಂ ಸೋಂಕಿರಾತಂ ಕಿರಾತಂ ॥ ೧೨೪

ಕಂ॥ ಬಿದಿರಂ ಬಿದಿರಂ ನಡೆ ನಡೆ
ಯದೆ ಯದೆ ಪಿಡಿ ಪಿಡಿಗೆ ಬಂದ ಕರಿಯಂ ಕರಿಯಂ ।
ಪದೆದೆಚ್ಚಂ ಕಲಿ ಕಲಿ ಪೇ
ಸದೆ ಸದೆದಪನೆಂದು ಬೇಡರೆನೆ ನಲಿದಿಸುವಂ ॥ ೧೨೫

ವ॥ ಮತ್ತೊಂದೆಡೆಯೊಳ್

ಕಂ॥ ಇನೆಯುನೊಡಗೂಡಲೆಂದಿಂ
ಪಿನ ರಮ್ಯಸ್ಥಳಮನಜಿಸಿ ಬರುತಂ ನವಯಾ ॥

ಒಟ್ಟುಗೂಡಿದ್ದರು. ೧೨೩. ಆ ಕಾಡಿನಲ್ಲಿರುವ ಶಬರ ಸ್ತ್ರೀಯರು ಚಿಗುರುಗಳ ಸೀರೆಯನ್ನು ಉಟ್ಟು, ಗುರುಗಂಜಿಯ ಹಾರವನ್ನು ಸಿಂಗರಿಸಿಕೊಂಡು, ಚಂದ್ರಕಾಂತ ಶಿಲೆಯಲ್ಲಿ ಮಾಡಿದ ಒರಳುಗಳಲ್ಲಿ ಬಿದಿರಕ್ಕಿಯನ್ನು ಹಾಕಿ, "ನಿಚ್ಚಳಮನ ಸುವ್ವಿ, ಕಾಡೊಡೆಯ ಸುವ್ವಿ, ಮನೋಹರ ಸುವ್ವಿ, ಸುವ್ವಿ" ಎಂದು ರಾಗದಿಂದ ಹಾಡುತ್ತ ಕುಟ್ಟಿದರು. ವ ॥ ಅದೂ ಅಲ್ಲದೆ ಮತ್ತೊಂದುಕಡೆ ಅತಿ ಬಲಶಾಲಿಯಾದ ಒಬ್ಬ ಪುಳಿಂದರ ಒಡೆಯನು ಬೇಡರ ಮುಂದೆ ಆಸುರದಿಂದ ಭಾಷೆಕೊಡುತ್ತಿದ್ದಾನೆ–ಹೇಗೆಂದರೆ– ೧೨೪. ನಿಂದೆನು, ನಿಂತು ಹೇಗೆ ಈ ವೀರದ ಆನೆ ಸಮೂಹವು ಬಂದು ಎರಗುವಾಗ ಬಂದವನು ಹೇಗಿದ್ದಾನು! ಅವನು ನನ್ನ ಶರಪ್ರಹಾರವನ್ನು ಕಾಣುವನು! ಆ ಮಾತು ಹಾಗಿರಲಿ! ನನ್ನ ಹಾಗೆ ನಂದನು ಕನಲಿದಂತೆ ಹುಲಿಯನ್ನು ಹೊಡೆ! ಬೇಗ ಬೇಗವಾಗಿ ಬಂದ ಬಂದ ಹಾಗೆ ಅವುಗಳನ್ನು ಕೊಂದು ವಿಜೃಂಭಿಸುವ ಆ ಶಬರಕುಮಾರನು ಸೋಂಕಿರಾತ (ಸೋಂಕಿರೆ–ಆತಂ) ೧೨೫. ಬಿದಿರನ್ನು ಬಿಡುವುದಿಲ್ಲ; ನಡೆ, ನಡೆ! ಅದೆ ಅದೆ ಹಿಡಿ, ಹಿಡಿ! ಹೆಣ್ಣಾನೆಗೆ

ಪೆಸ ಮುಗ್ಧೆ ತುಱುಗಿ ಪರ್ವಿದ
ವನದೊಳಗಣ ಮೆಳೆಗಳೊಳಗೆ ಪುಗುವನ್ನೆವರಂ ॥ ೧೨೬

ಬೆಳಗಂ ಕಳ್ತಲಿಸುವ ಮೆಳೆ
ಮೆಳೆಯಂ ಪೊಕ್ಕಲ್ಲಿ ತನ್ನ ಕಣ್ಗಳ ಬೆಳಗಿಂ ।
ಬೆಳಗಾಗಿರೆ ಬೆಳಗಿಲ್ಲದ
ಮೆಳೆಯಿಲ್ಲೆಂದಬಲೆ ಶಬರಿ ಸೊಬಗಳಿದಿರ್ದಳ್ ॥ ೧೨೭

ಇರೆ ಸುಪ್ರೌಢಕಿರಾತಂ
ತರುಣಿಯ ಮುಗ್ಧತೆಗೆ ಮೆಚ್ಚಿ ಮುಗ್ಧೆಯ ಕಣ್ಣಂ ।
ಬರೆ ಮುಚ್ಚಿ ಇಡಿದ ಕಳ್ತಲೆ
ದೊರೆಕೊಂಡತ್ತೆಂದು ನೆರೆದು ಸುಖಿಯಾಗಿರ್ದಂ ॥ ೧೨೮

ವ ॥ ಮತ್ತಮತಿವಿಸ್ತಾರಮಾದ ಘೋರಾರಣ್ಯಂ ಕಡು ನಿಡುದು ಗೊಂಡಂಬರ ಚುಂಬಿತಮಾಗಿ ನಳನಳಿಸಿ ಕೊರ್ಬಿ ಬೆಳೆದ ಪೆರ್ಬಿದಿರ ತುದಿ ತಾಗಿ ಪಱಿದ ಕಿಱುಮುಗಿಲ್ಗಳಿಂದವನೀತಳಕ್ಕಾಲಿಕಲ್ಲೊಳ್ಕ್ಕ ಚೆಲ್ಲಿದಂತಿರ್ಪ ಮುಕ್ತಾಫಲಂಗಳಂ ವಂಶತಂಡುಲಂ ಗೆತ್ತು ಸುತ್ತಿ ಬಂದುಡುಗುವ

ಬಂದ ಆನೆಯನ್ನು ಆ ಕಪ್ಪನೆಯ ಕಿರಾತನು ಗುರಿಯಿಟ್ಟು ಬಾಣದಿಂದ ಹೊಡೆದನು ! ಕಲಿ ಕಲಿ ! ಹೇಸದೆ ಸದೆಬಡಿಯುಸನು ಎಂದು ಜೇಡರು ಹುರುಪುಗೊಡಲು ನಾನು ನಲಿದು ಶರಪ್ರಹಾರ ಮಾಡುವೆನು. ೧೨೬. ಅಲ್ಲೊಬ್ಬ ಶಬರ. ಆತ ತನ್ನ ಇನಿಯಳನ್ನು ಒಡಗೂಡಬೇಕೆಂಬ ಬಯಕೆಯಿಂದ ರಮ್ಯಸ್ಥಳವೊಂದನ್ನು ಹುಡುಕುತ್ತ ಬಂದ ; ನವಯೌವನೆಯೂ ಮುಗ್ಧೆಯೂ ಆದ ಇನಿಯಳೊಡನೆ ಅವನು ಆ ವನದೊಳಗಿನ ಮೆಳೆಗಳಲ್ಲಿ ಪ್ರವೇಶಿಸಿದ. ೧೨೭. ಹಗಲಿನ ಬೆಳಕನ್ನೇ ಕತ್ತಲುಗೊಳಿಸುವ ದಟ್ಟವಾದ ಮೆಳೆಗಳು ; ಅಂತಹ ಯಾವ ಮೆಳೆಯನ್ನು ಹೊಕ್ಕರೂ ಅವಳ ಕಣ್ಣಿನ ಬೆಳಗಿನಿಂದ ಮೆಳೆಗಳು ಬೆಳಗಿನಿಂದ ತುಂಬುತ್ತಿದ್ದವು. ಇದನ್ನು ಕಂಡ ಆ ಶಬರಿಯು ಬೆಳಗಿಲ್ಲದ ಮೆಳೆಯಿಲ್ಲವಲ್ಲಾ ಎಂದು ಕಳೆಗುಂದಿದಳು. ೧೨೮. ಇದನ್ನು ಕಂಡ ಆ ಕಿರಾತ ಪ್ರೌಢನಾದ್ದ. ಆತ ತರುಣಿಯ ಮುಗ್ಧತೆಗೆ ಮೆಚ್ಚಿ ಕೂಡಲೆ ಅವನು ಅವಳ ಕಣ್ಣನ್ನು ಮುಚ್ಚಿದ. ಕತ್ತಲೆ ಕವಿಯಿತು. ಆಗ ಅವನು ' ನೋಡು ; ಕತ್ತಲೆ ಕವಿಯಿತು ' ಎಂದು ಹೇಳಿ ಒಪ್ಪಿಸಿ ಅವಳೊಡನೆ ನೆರೆದು ಸುಖಿಸಿದ. ವ ॥ ಅತಿ ವಿಸ್ತಾರವಾದ ಕಡುಕಾಡು, ಅಲ್ಲಿ ಅತ್ಯಂತ ಎತ್ತರಕ್ಕೆ ಬೆಳೆದು ಗಗನವನ್ನು ಸೋಂಕಿ ಸುಂದರವಾಗಿ ಕೊಬ್ಬಿಬೆಳೆದ ದೊಡ್ಡ ದೊಡ್ಡ ಬಿದಿರು ಮೆಳೆಗಳು. ಅವುಗಳ ತುದಿ ತಾಗಿ ಹರಿದ ಸಣ್ಣ ಸಣ್ಣ ಮೋಡಗಳು, ಅವುಗಳಿಂದ ಸುರಿದು ಆಲಿಕಲ್ಲು ಚೆಲ್ಲಿದೆಯೋ ಎಂಬಂತಿರುವ ಮುತ್ತುಗಳನ್ನು ಬಿದಿರ ಅಕ್ಕಿ ಎಂದು ಭ್ರಮಿಸಿ ಸುತ್ತು ಬಂದು ಗುಡಿಸಿಕೊಳ್ಳುತ್ತಿರುವ ಮುಗ್ಧ ಶಬರಿಯರು, ಅವರನ್ನು ಕಂಡು ನಗು

ಮುಗ್ಧ ಶಬರಿಯರಂ ನಗುವ ಕಾಮುಕ ಶಬರ ಸಂದೋಹದಿಂ, ಮತ್ತೆ ಪೆಱತೊಂದೆಡೆಯೊಳ್ ಪುಲಿಯ ಬೇಂಟೆಯ ಕಾಳೆಗದ ಕೋಳಾಹಳದ ಮಲ್ಲಾ ಮಲ್ಲಿಯನಾದ ಕರನಖರನವವ್ರಣಕಳಂ ಕಾಂಕಿತ ಭುಜವಳಯನಾಗಿ ಬಂದ ಪುಳಿಂದನಂ ಕಂಡು ಕಡು ಮುಳಿದು ಪ್ರಣಯಕಲಹಂ ಕೆಯ್ಗುಣ್ಮೆ ಪಲ್ಲವದಿಂ ಪೊಯ್ದು ಪೊಯ್ದು ತಿಕೋಪದಿಂದುತ್ಕಂಠೆಯಾದ ನಲ್ಲಳ್ಗೆ ಲಲ್ಲೆಗರೆದು ಬೆರಲಂ ಕರ್ಚಿ ಕಾಲ್ಗೆಱಗಿ ವಿನಯದಿಂ ತಿಳಿಪಿ ಮುಳಿಸಂ ಕಳಲ್ಚಿ ಕಳ್ತಲಿಪ ಮೆಳೆಗಳೊಳ್ ಉತ್ತಾನ ಲತೆ ಚಿತ್ತ ಜಂಗೆತ್ತಿದುಪ್ಪರವಟ್ಟಮಾಗೆ ನಿರಂತರಂ ನೆರೆವ ಕಿರಾತ ಮಿಥುನಂಗಳಿಂ, ಮತ್ತಂ ಸಂಚಿತ ತಿಳಿಕಿತ ವರ್ಧಕಪೋಳಿತ ವತಿವರ್ತಿತ ವಧೋನುಬಂಧಿನಿ ಕ್ರೋಧಿನಿ ಗಂಧ ಚಾರಿಣಿಗಳೆಂಬ ಸಪ್ತಾವಸ್ಥೆಯ ಮದದಿಂ ಮುಂದುಗಾಣದೆ ತನ್ನ ನೆಳಲಿಂ ಪ್ರತಿಗಜವೆಂದುಱಿದೆ ಕಱುತ್ತೆಱಗಿ ಬೆಟ್ಟದ ಪೆಟ್ಟೆಗಳನೆತ್ತಿ ಯೆತ್ತಿ ಕೋಪಮಾಱದೆ ಮಿಱಿಬಂದು ನೀಡುಂನೋಡಿ ಕೋಡುಂಗಲ್ಲಂ ಪರಿದು ಪಾಯ್ದು ಕೋಡುಡಿಯೆ ನಾಡೆನೊಂದು ನೋವಂ ಮಱೆದು ಚಂದ್ರಕಾಂತ ಶಿಲಾತಲದೊಳ್ ಮಾರ್ಪೊಳೆವ ನಿಜಬಿಂಬಮಂ ಕಂಡು ಕರಿಣಿಗೆತ್ತಡಿಗಡಿಗೆ ಕರಮನಿಟ್ಟಾರಯ್ದು ಸಾರುತಿರ್ಪ ಮದಾಂಧ ಗಂಧ

ತ್ತಿರುವ ಕಾಮುಕ ಶಬರರ ಗುಂಪು ಒಂದು ಕಡೆ; ಬೇರೆಯ ಕಡೆ ಕೆಲವು ಶಬರರು ಹುಲಿಯ ಬೇಂಟೆಯ ಸಮಯದಲ್ಲಿ ಹುಲಿಯೊಡನೆ ಹೋರಾಟ ನಡೆಸಿ ಮಲ್ಲಾಮಲ್ಲಿ ದ್ವಂದ್ವ ಯುದ್ಧದಲ್ಲಿ ತೊಡಗಿದ್ದಾರೆ,ಆಗ ಹುಲಿಯ ಉಗುರುಗಳು ತುಗುಲಿ ಅವರ ಭುಜಗಳಲ್ಲಿ ಹೊಸ ಗಾಯಗಳಾಗಿವೆ, ಅವರು ಮನೆಗೆ ಬಂದೊಡನೆಯೇ ಆ ಗಾಯಗಳನ್ನು ಕಂಡು ಕಿರಾತಿಯರು ಅವು ಪರಸತಿಯ ರತಿ ಸಮಯದಲ್ಲಿ ಎಸಗಿದ ನಖಕ್ಷತಗಳೆಂದು ಭ್ರಮಿಸಿದರು, ಕೋಪವುಕ್ಕಿ ಬಂತು, ಪ್ರಣಯಕಲಹ ಆರಂಭವಾಯಿತು, ಅವರು ಚಿಗುರಿನಿಂದ ತಮ್ಮ ಪ್ರಿಯ ಪುಳಿಂದ ರನ್ನು ಹೊಡೆದು ಹೊಡೆದು ಉತ್ಕಂಠಿತರಾದರು, ಇದರಿಂದ ಸೋಜಿಗಗೊಂಡ ಪುಳಿಂದರು ತಮ್ಮ ನಲ್ಲೆಯರನ್ನು ಲಲ್ಲೆಗರೆದು ಅನುನಯಮಾಡಿ ಬೆರಲು ಕಚ್ಚಿ, ಕಾಲಿಗೆಬಿದ್ದು, ವಿನಯದಿಂದ ಅವರ ಹುಸಿಕೋಪವನ್ನು ಹೋಗಲಾಡಿಸಿದ ಆ ಶಬರರು ಕತ್ತಲು ಕವಿದ ಬಿದಿರಮೆಳೆಗಳಲ್ಲಿ ಉದ್ದವಾಗಿ ಬೆಳೆದ ಲತೆಗಳೇ ಮನ್ಮಥನಿಗೆತ್ತಿ ಕಟ್ಟಿದ ಮೇಲ್ಕಟ್ಟು ಬಟ್ಟೆ ಯಾಗಿರಲು ಅಲ್ಲಿ ನಿರಂತರವೂ ತಮ್ಮ ನಲ್ಲೆಯರೊಡನೆ ನೆರೆಯುತ್ತಿದ್ದಾರೆ. ಮತ್ತೊಂದು ಕಡೆ ಮದೋನ್ಮತ್ತವಾದ ಆನೆಗಳು, ಅವು ಸಂಚಿತ, ತಿಳಕಿತ, ಅರ್ಧಕಪೋಳಿತ, ಅತಿವರ್ತಿತ ಅಧೋನುಬಂಧಿನಿ, ಕ್ರೋಧಿನಿ, ಗಂಧ ಸಂಚಾರಿಣಿ ಎಂಬ ಸಪ್ತ ಅವಸ್ಥೆಗಳಿಂದ ಕೂಡಿ ದವುಗಳಾದುದರಿಂದ ಮುಂದರಿಯದೆ ತಮ್ಮ ನೆಳಲನ್ನೇ ಮತ್ತೊಂದು ಆನೆಯೆಂದು (ಪ್ರತಿ ಗಜನೆಂದು) ಭ್ರಮಿಸಿದವು, ಅವು ರಭಸದಿಂದ ಅವಕ್ಕೆ ಎದಿರುಬಿದ್ದು ಬೆಟ್ಟದ ದೊಡ್ಡ ದೊಡ್ಡ ಹೆಂಟೆಗಳನ್ನು ಎತ್ತಿಹಾಕಿದವು, ಅಲ್ಲಿಗೂ ಅವುಗಳ ಕೋಪ ತೀರಲಿಲ್ಲ, ಅಲ್ಲಿಂದ ಮಿಾರಿ ಬಂದು ದಿಟ್ಟಿಸಿನೋಡಿ ಕೋಡುಗಲ್ಲುಗಳನ್ನು ತಾಗಿದವು, ಅವುಗಳ ಕೊಂಬು ಮುರಿಯಿತು, ನೋವಾಯಿತು, ಆದಾಗ್ಯೂ ಅದನ್ನು ಮರೆದು ಚಂದ್ರಕಾಂತ ಶಿಲೆಯಲ್ಲಿ ಪ್ರತಿ ಬಿಂಬಿಸಿದ್ದ ತಮ್ಮ ಬಿಂಬವನ್ನು ನೋಡಿ ಹೆಣ್ಣಾನೆಯೆಂದು ಭ್ರಮಿಸಿ ಅವು ಸೊಂಡಿಲನ್ನು

ಸಿಂಧುರಂಗಳಿಂ, ಮತ್ತಮೊಂದೆಡೆಯೊಳ್ ಪಸಿವೆತ್ತು ಮಸಗಿಬಂದು ಬಿಲಂಗಳೊಳಗಣಿರುಂಪೆಗಳಂ ಮೊಗಮಿಟ್ಟೂದಿಯೂದಿತಣಿಯದೆ ತವಕದಿಂ ನಡೆ ನಡೆದು ನಳನಳಿಸುವ ಬೆಳಲ ಮರದ ತಳದೊಳಿರ್ದ ಪಕ್ವಫಲಂಗಳನಾಯ್ದುಕೊಂಡು ಗಳಗಳನೆ ಪರಿದು ಪಾಸಱೆಯ ಮೇಲಾಸುರದಿಂದೊಡೆದೊಟ್ಟಿ ಜೇನ ಹುಟ್ಟುಗಳನ್ನಿಟ್ಟಟ್ಟಲಸದೆ ಕಲಸಿ ತಣಿವಿನಂ ತಿಂದು ತೇಗಿ ತೂಗಿ ಕೆಲೆ ಕೆಲೆದು ಕುಪ್ಪಿ ಕುಪ್ಪಿ ಯುರ್ಬಿ ಕೊರ್ಬಿ ನಲಿದಾಡುವ ಭಲ್ಲೂಕನಿಕಾಯದಿಂ, ಮತ್ತಮೊಂದೆಡೆಯೊಳ್ ಎಳೆವುಲ್ಗಳಂ ಮೇದು ತಿಳಿನೀರನೀಂಟಿ ನೆಳಲೊಳ್ ಪಟ್ಟಿರ್ದು ಬೆಂಡೇಳ್ವಲೋಳೆಹಿಂಡಿಲ್ಗಟ್ಟಿ ಮೇವಂ ಮಗುಳ್ಚಿ ಕಟ್ಟಿದಿರ ಪುಲಿಯಂ ತೊಟ್ಟನೆ ಕಂಡು ಭೋಂಕನೆಳ್ದು ಮೊಗಮನೆತ್ತಿ ಕಡುಮುಳಿದು ಖಾತಿಗೊಂಡು ಚಲದಿಂ ಮಲೆದು ಘಳಿಲನೆಯ್ದಿ ಪಾಯ್ದುಪೊಯ್ದು ಕೋಡಿಟ್ಟು ಜಲ್ಲಿಸಿ ಬಿಸುಟ್ಟು ನೊಸಲತೀಂಟೆತೀಱದೆ ಕೊಣಕಿಟ್ಟು ಮುಱಿದು ಒಱಿದಪ್ಪ ಪುತ್ತಿನೊಳೊತ್ತಿಪೋರ್ದು ಮೆತ್ತಿದ ಕರ್ದಮಂ ನಿಟಲ ತಟದೊಳ್ ಪತ್ತಿರ್ದಧೂಳಿ ಮೆಯ್ಯೊಳೆ ಮೆಱೆಯೆ ಪಲವೋತ್ಕರದಿಂ ಪೊಱಮಟ್ಟ ಕಾಳರಕ್ಕಸರಂತಿರ್ಪ ಕಾಳ್ಕೋಣಂಗಳಿಂ, ಮತ್ತಮೊಂದೆಡೆಯೊಳ್ ಮರದಿಂ ಮರಕ್ಕೆ ತಿರುಗಿ ಪಾಯ್ದೆಳಗೊಂಬನಲ್ಲಾಡಿ ತೂಗಿ ಕೊನೆದಳ್ಕಱಿದು ಕುಳ್ಳಿರ್ದು ಕಾಲ್ಗಳಂ ನೀಡಿ ಬಱಿಯಂ ಬೆರಂಟಿ ಬಿಸಿಲ್ಗಾಯ್ದು ಪಸಿವೆತ್ತಿ ಮೇಲಂ ನೋಡಿ ನೀಡಿ ನೆಗೆದು ತಿಣ್ಣಗೊಂಬಿನೊಳ್ ಬಣ್ಣವಳಿಯದ

ಚಾಚಿ ಹುಡುಕುತ್ತಿವೆ ; ಮತ್ತೊಂದೆಡೆ ನಲಿವ ಕರಡಿಗಳು–ಅವು ಹಸಿದಿವೆ, ಹುತ್ತಗಳ ಹತ್ತಿರ ಬಂದು ಬಿಲದಿಂದ ಹೊರಬರುವ ಇರುವೆಗಳನ್ನು ಕಂಡು ಬಿಲದಲ್ಲಿ ಮುಖಹೊಗಿಸಿ ಊದಿ ಊದಿದರೂ ಅವಕ್ಕೆ ತೃಪ್ತಿಯಾಗಲಿಲ್ಲ, ಅಲ್ಲಿಂದ ಮುನ್ನಡೆದು ಅಲ್ಲಲ್ಲಿ ಬೇಲದ ಮರದತಳದಲ್ಲಿ ಪಕ್ವವಾಗಿ ಬೇಲದಕಾಯಿಗಳು ಬಿದ್ದಿದ್ದವು, ಅವುಗಳನ್ನು ಆಯ್ದು ತಂದು ಒಂದು ಹಾಸಗಲ್ಲ ಮೇಲೆ ಚಚ್ಚಿ ಬಿಚ್ಚಿದವು, ತರುವಾಯ ಜೇನುಹುಟ್ಟುಗಳನ್ನು ಕಿತ್ತು ತಂದು ಅದೆಲ್ಲವನ್ನು ಬೆರೆಸಿದವು, ತಣಿವಂತೆ ಚೆನ್ನಾಗಿ ತಿಂದು ತೇಗಿ ತೂಗಿ ಕೆಲೆದು ಕುಪ್ಪಳಿಸಿ ಕೊಬ್ಬಿ ನಲಿದಾಡುತ್ತಿವೆ ; ಇನ್ನೊಂದು ಕಡೆ ಕಾಡುಕೋಣಗಳು, ಅವು ಕಾಡಿನಲ್ಲಿ ಎಳೆಯ ಹುಲ್ಲನ್ನು ಚೆನ್ನಾಗಿ ಮೇದು, ತಿಳಿನೀರನ್ನು ಕುಡಿದು, ನೆಳಲಿನಲ್ಲಿ ಒಟ್ಟೈದ್ದು ಬೆಂಡಾಗಿರುವ ಲೋಳೆ ಹಿಂಡಿಲು ಮೇವನ್ನು ತಿರುವಿ ಹಾಕುತ್ತಿರುವಾಗ ಎದುರಿನಲ್ಲಿಯೇ ಹುಲಿಯನ್ನು ಕಂಡವು, ಕೂಡಲೆ ಮೇಲೆ ತಲೆಯೆತ್ತಿ ನೋಡಿ ಕೋಪಗೊಂಡು ಚಲದಿಂ ಮಲೆದು ಅದರ ಮೇಲೆ ಬಿದ್ದು ಕೋಡಿನಿಂದ ತಿವಿ ತಿವಿದು ಎಸೆದವು, ಅಲ್ಲಿಗೂ ಅವುಗಳ ನೊಸಲ ತೀಟೆ ತೀರಲಿಲ್ಲ, ನೆಗೆದ್ದು ಮುರಿದು ದೊಡ್ಡ ಹುತ್ತವನ್ನು ತಿವಿದವು, ಅದರ ಕೆಸರು ಮುಖಕ್ಕೆ ಮೆತ್ತಿಕೊಂಡಿತ್ತು, ಮಣ್ಣು ಧೂಳಿ ಮೆಯ್ಯೆಲ್ಲ ಮೆತ್ತಿಕೊಂಡಿತು. ಇದರಿಂದ ಆ ಕಾಡು ಕೋಣಗಳು ಭುಜದ ತೀಟೆ ತೀರಿಸಲು ಹೊರಟ ಕಾಳರಕ್ಕಸರೋ ಎಂಬಂತಿವೆ; ಮತ್ತೊಂದು ಕಡೆ ಕೋತಿಗಳ ಹಿಂಡು, ಅವು ಮರದಿಂದ ಮರಕ್ಕೆ ನೆಗೆದು ಎಳೆಕೊಂಬುಗಳನ್ನು ಅಳ್ಳಾಡಿಸಿ, ತೂಗಿ, ಕುಳಿತು, ಕಾಲುಗಳನ್ನು ಚಾಚಿ, ಪಕ್ಕವನ್ನು ಕೆರೆದುಕೊಳ್ಳುತ್ತಾ ಬಿಸಿಲು ಕಾಯ್ದು, ಹಸಿದು, ಮೇಲೆನೋಡಿ, ನೀಡಿನೆಗೆದು ದಪ್ಪವಾದ ಕೊಂಬುಗಳಲ್ಲಿ ಹಣ್ಣಾಗದ

ಪಣ್ಣಂ ತಿಂದು ತಣ್ಣನೆ ತಣಿದು ಕಣ್ಣಂ ಬಿಟ್ಟು ಪುರ್ಬಿಕ್ಕಿ ಪಲಿರಿದುಹುಚಿಸ್ರೆಂದು ಕಿರಾತ ಕಾಂತೆಯರಂ ಮಿಗೆ ನಗಿಸುತಿರ್ಪ ಮರ್ಕಟ ಪ್ರಕರದಿಂ, ಮತ್ತಮೊಂದೆಡೆಯೊಳ್ ಚಿತ್ತಜಕೇಳಿಗೆಂದು ಮತ್ತಗಜಂಪರಿವ ಕರಿಣಿಯ ಬಳಿಸಂದು ಬೋಳೈಸಿ ಕರಮಂ ನೆಗಪಿ ಕೂಡುವ ಪಿಂಚಕ ಚುಂಬನ ಪ್ರಾರಂಭ ಸಮಯದೊಳ್ ತೊಟ್ಟನೆ ಕಂಠೀರವ ರವಮಂ ಕೇಳಲಾಗೆ ಬೆಳ್ಳಾಗಿ ಬಿಗುರ್ತು ರಾಗಮಳಿದಗಿದು ಸುಗಿದು ಹಳುಂಗಿ ಹಮ್ಮಾದಂ ಬೋಗಿ ಪರಿದೋಡಿ ಪಿರಿಯ ಗುಹೆಯೊಳಡಂಗಿ ಬೆಡಂಗಳಿದು ತಡಂಗೆಡೆದಿರ್ಪ ಮಾತಂಗ ದಂಪತಿಗಳಿಂ, ಮತ್ತಮೊಂದೆಡೆಯೊಳಾರ್ದು ಸಾರ್ದು ಪರಿತರ್ಪ ಕಿರಾತ ನಿಕರದೊಳೊರ್ವಲುಬ್ಧಕಂ ಯಮಕಿಂಕರನಂತೆ ಮುಳಿದು ಪರಿತಂದು ಪಿರಿದಪ್ಪ ಪಕ್ಕಿಗಳ್ ನೆರೆದಿರ್ಪ ಶಾಲ್ಮಲಿಯ ತುದಿಯನದಿರದೆ ನೋಡಿ ಮಿಾಜಿದ ಮರನನೇಱಲ್ ಸಾಲದೆ ಕಾಲಪಾಶದಂತೆ ಮುರಿದು ಪರಿದು ಪರ್ವಿದ ಪೆರ್ಬಳ್ಳಿಯನಡರ್ದೇಱಿಬಿಡದೆ ಬರ್ಪುದಂ ತಡೆಯದೆ ಕಂಡಾನಡನಡಂ ನಡುಗಿ ತಲ್ಲಣಿಸಿ ಮಲ್ಲಳಿಗೊಂಡು ಪೋಳಲೊಳಗಣ ಬಾಲವಿಹಂಗಂಗಳನೆಱಂಕೆಯೊಳಿಱುಂಕಿಕೊಂಡು ಪಾಱಲಸುವಾಗಿ ತೂಱಲ್ಕೊಂಬಿನೊಳಿರ್ಪ ವಿಹಂಗ ಸಂಕುಳದಿಂದತಿ ಸೌಂದರ್ಯಮನುರುತರವಿಕ್ರಮುಮನುಧ್ಯದ್ಭಯಾನಕಮನೂರ್ಜಿತ ಸಂಪದಮನಪಾರಗಭೀರತೆಯನನಂತ ಕೌತುಕಮನನೇಕ ರೌದ್ರರಸಮನೊಳಕೊಂಡಿರ್ಪುದಂತುಮಲ್ಲದೆಯುಂ

ಕಾಯಿಗಳನ್ನು ತಿಂದು, ತಣಿದು, ಕಣ್ಣುಮಿಟುಕಿಸಿ, ಹುಬ್ಬುಹಾರಿಸಿ, ಹಲ್ಲುಕಿರಿದು, ಹುರ್‍ರೆಂದು ಕಿರುಚಿ, ಅಲ್ಲಿರುವ ಕಿರಾತಿಯರನ್ನು ನಗಿಸತೊಡಗಿವೆ ; ಇನ್ನೊಂದೆಡೆ ಮದ್ದಾನೆಗಳ ದಂಪತಿಗಳು, ಅವು ರತಿಕೇಳಿಗೆ ಎಳಸಿವೆ, ಮದ್ದಾನೆಗಳು ವಿಹರಿಸುವ ಕಣಿವೆಯ ಹತ್ತಿರ ಬಂದಿವೆ, ಅಲ್ಲಿ ಗಂಡಾನೆ ತನ್ನ ಸೊಂಡಿಲನ್ನು ಚಾಚಿ ತನ್ನ ನಲ್ಲೆಗೆ ಮೊದಲ ಚುಂಬನ ಮಾಡುವಷ್ಟರಲ್ಲಿ ಸಿಂಹಗರ್ಜನೆ ಕೇಳಿಬಂತು, ಕೂಡಲೆ ಭಯದಿಂದ ಅವುಗಳ ಮೈ ಬೆವರಿತು, ಬಿಳಿಚಿ, ರಾಗನಳಿದು, ಹಮ್ಮೈಸಿ ದಿಕ್ಕುತಿಳಿಯದೆ ಓಡಿಬಂದು ಒಂದು ದೊಡ್ಡ ಗುಹೆಯನ್ನು ಹೊಕ್ಕವು, ಅಲ್ಲಿ ಭಯದಿಂದ ಬಸವಳಿದು ಬೆಂಡಾಗಿ ತಲೆನುರಸಿಕೊಂಡಿವೆ ; ಇನ್ನೊಂದೆಡೆ ಒಂದು ಲುಬ್ಧಕರ ಗುಂಪು, ಅವರು ಬೇಂಟೆಗಾಗಿ ಆತುರದಿಂದ ಬರುತ್ತಿದ್ದಾರೆ, ಅವರಲ್ಲಿ ಒಬ್ಬನು ಯಮಕಿಂಕರನಂತೆ ಕುಪಿತನಾಗಿದ್ದಾನೆ, ಅವನು ಹೆಚ್ಚು ಹಕ್ಕಿಗಳಿರುವ ಒಂದು ಬೂರುಗದ ಮರದ ಸಮೀಪಕ್ಕೆ ಬಂದು, ಅದನ್ನು ಏರುವುದಕ್ಕಾಗಲಿಲ್ಲ. ಅಲ್ಲಿ ಕಾಲ ಪಾಶದಂತಿದ್ದ ಮರಕ್ಕೆ ಸುತ್ತಿಕೊಂಡಿರುವ ಬಳ್ಳಿಯ ಸಹಾಯದಿಂದ ಮರವನ್ನು ಏರಿದ, ಇವನು ಬರುತ್ತಿರುವುದನ್ನು ಕಂಡ ಪಕ್ಷಿಗಳು, ಭಯದಿಂದ ನಡುಗಿದವು, ಕೂಡಲೆ ಅವು ಪೊಟರೆಗಳಲ್ಲಿದ್ದ ಎಳೆಮರಿಗಳನ್ನು ತಮ್ಮ ರೆಕ್ಕೆಗಳ ಮರೆಯಲ್ಲಿ ಅಡಗಿಸಿಕೊಂಡು ಹಾರಲು ಪ್ರಯತ್ನಿಸಿದವು. ಹೀಗೆ ತುದಿಕೊಂಬುಗಳಲ್ಲಿ ಕುಳಿತಿರುವ ಹಕ್ಕಿಗಳಿಂದ ಕೂಡಿದ ಆ ಕಾಡು ಅತ್ಯಂತ ಸುಂದರವಾಗಿಯೂ, ಉರುತರವಿಕ್ರಮ, ಭಯಾನಕ, ಊರ್ಜಿತ ಸಂಪತ್ತು, ಅಪಾರ ಗಾಂಭೀರ್ಯ, ಅನಂತಕೌತುಕ, ರೌದ್ರರಸಗಳನ್ನು ಒಳಗೊಂಡಿತ್ತು.

ಶಾ ॥ ಇಂತುದ್ಯನ್ಮೃಗ ಸಂಘದಿಂ ವನಚರಸ್ತೋಮಂಗಳಿಂ ಭೂಮಿಜಾ
ನಂತಶ್ರೇಣಿಗಳಿಂದರಣ್ಯಕುಲದಿಂದಂ ತಾಪಸವ್ರಾತದಿಂ ।
ಸಂತಂ ಸುತ್ತಿದ ಸೂಕ್ಷ್ಮಗೋತ್ರಚಯದಿಂ ಗಂಧರ್ವಸಿದ್ಧಾಮರೌ
ಘಂ ತೀವಿರ್ದ ಮಹಾಗುಹಾವಳಿಗಳಿಂದೊರ್ಪಿರ್ದುದುದ್ಯನ್ನಗಂ ೧೨೯

ಮ ॥ ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನ ಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ ।
ಕರನಾನಂದಕರಂ ಸಮಂತೆನಗೆ ಭಕ್ತಿ ಜ್ಞಾನ ವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ॥ ೧೩೦

ಇದು ಸಮಸ್ತ ಸುರಾಸುರಮಕುಟ ಖಚಿತ
ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪುಂಜರಂಜಿತಚರಣ
ನೆನಿಪ ಪಂಪಾವಿರೂಪಾಕ್ಷ ಶ್ರೀ ಪಾದಕಮಲ
ಮಕರಂದ ಮಧುಕರಾಯಮಾಣ
ಸತ್ಕವೀಶ್ವರ ಹಂಪೆಯ
ಹರಿಹರದೇವ ವಿರಚಿತಮಪ್ಪ

ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ಹೈಮಾಚಲ ವರ್ಣನಂ
ಪ್ರಥಮಾಶ್ವಾಸಂ

೧೨೯. ಹೀಗೆ ಮೃಗಗಳ ಗುಂಪುಗಳಿಂದ, ವನಚರರ ಸಮೂಹಗಳಿಂದ, ವಿವಿಧ ಮರಗಳಿಂದ ಕೂಡಿದ ಕಾಡುಗಳಿಂದ, ತಾಪಸರ ನೆರವಿಗಳಿಂದ, ಸುತ್ತಲೂ ಹಬ್ಬಿರುವ ಸಣ್ಣ ಪುಟ್ಟ ಗುಡ್ಡಬೆಟ್ಟಗಳಿಂದ, ಗಂಧರ್ವ-ಸಿದ್ಧ ಮೊದಲಾದ ದೇವತೆಗಳ ವಿಹಾರಗಳಿಂದ ತುಂಬಿದ್ದ ಆ ಹಿಮಾಲಯ ಪರ್ವತವು ಅನೇಕ ಗುಹೆಗಳಿಂದ ಒಪ್ಪಿ ರಮ್ಯವಾಗಿತ್ತು.
೧೩೦. ಪರಮಪ್ರಭು, ಜಟಾಧರ, ಶಶಿಧರ, ಗಂಗಾಧರ, ಕಾಲಸಂಹರ, ಅಜ್ಞಾನವನ್ನು ಕಳೆಯುವವನು, ತ್ರಿಪುರಗಳನ್ನು ಸುಟ್ಟವನು, ಸುಖಕರ, ಶಂಭು, ಶಂಕರ, ಆನಂದಕರ, ಶಿವೆಗೆ ಪ್ರಿಯನಾದ ಹಂಪೆಯ ವಿರೂಪಾಕ್ಷಸ್ವಾಮಿಯು ಪ್ರಸನ್ನನಾಗಿ ನನಗೆ ಭಕ್ತಿ-ಜ್ಞಾನ-ವೈರಾಗ್ಯಗಳನ್ನು ಕರುಣಿಸಲಿ.

# ದ್ವಿತೀಯಾಶ್ವಾಸಂ

## ಗಿರಿರಾಜ ದೇಶಪುರಾಸ್ಥಾನ ವರ್ಣನಂ

ಕಂ॥ ಶ್ರೀಮಚ್ಛರ್ವಂ ಪರಮ
ಸ್ವಾಮಿ ದಯಾವಾರ್ಧಿ ಭಕ್ತಿಯಿಂ ಕುಡುಗೆಮಗು ।
ದ್ದಾಮ ಸುರರಾಜರಾಜಂ
ಸೋಮಧರಂ ಕೂರ್ತು ಹಂಪೆಯ ವಿರೂಪಾಕ್ಷಂ ॥ ೧

ಉ ॥ ಆ ಹಿದುಶೈಲಮುತ್ತರ ವಿಭಾಗದೊಳೊಪ್ಪುವುದಾತ್ತನಂದನ
ವ್ಯೂಹ ತಟಾಕವೀಥಿಕಳಮಾವಳಿ ಕೈರವರಾಜಿಯಬ್ಜಸಂ ।
ದೋಹ ವಿಶಾಲ ರಾಜನಗರೀವ್ರಜ ಚಾರುನದೀನದಾಳಿಯು
ತ್ಸಾಹ ಸಮಗ್ರದಿಂದ ಗಿರಿರಾಜನ ದೇಶಮಿಳಾವಿಭೂಷಣಂ । ೨

ಚಂ ॥ ಸೊಗಯಿಪ ದೇಶಮಚ್ಚರಿಯ ದೇಶಮುದುತ್ತಮ ದೇಶಮಾರ್ಗೆಯುಂ
ಬಗೆದುದನೀವ ದೇಶಮತಿ ಮಂಗಳ ದೇಶಮನೂನದೇಶಮು ।
ರ್ವಿಗೆ ಸುಖಮಪ್ಪ ದೇಶಮುದಿತೋದಯ ದೇಶಮಪಾರಪುಣ್ಯಕಾ
ರಿಗಳನುಕೂಲದೇಶಮಮೃತೋದಯದೇಶಮದೆಂತು ಬಣ್ಣಿಪೆಂ ॥ ೩

ಕಂ॥ ತೀವಿ ಬೆಳೆಯಿಲ್ಲದಿಳೆಯಿ
ಲ್ಲಾವೆಡೆ ಬೆಳೆಯಿಸದ ವನಮಲ್ಲದಿಲ್ಲನವರತಂ ॥
ಪೂವಿಲ್ಲದ ಕೊಳನಿಲ್ಲ ಫ
ಲಾವಳಿಯಿಲ್ಲದ ಮರಂಗಳಿಲ್ಲಾ ನಾಡೊಳ್ ॥ ೪

೧. ಪರಮಸ್ವಾಮಿ, ಶರ್ವ, ದಯೆಗೆ ಸಾಗರ, ಸುರರಾಜನಿಗೆ ರಾಜ, ಸೋಮನನ್ನು ಧರಿಸಿರುವ ಹಂಪೆಯ ವಿರೂಪಾಕ್ಷನು ನಲುಮೆಯಿಂದ ನಮಗೆ ಅಮಿತ ಭಕ್ತಿಯನ್ನು ಕರುಣಿಸಲಿ. ೨. ಆ ಹಿಮಗಿರಿಯ ಉತ್ತರದಲ್ಲಿ ಒಪ್ಪುವ ಸುಂದರವಾದ ನಂದನವನ, ತಟಾಕಗಳು, ಗದ್ದೆಗಳು, ನೈದಿಲೆ–ಕಮಲಗಳಿಂದ ಅಲಂಕೃತವಾದ ರಾಜನಗರೀವ್ರಜ, ಸುಂದರವಾದ ನದೀ–ನದಗಳು ಮುಂತಾದವುಗಳಿಂದ ಗಿರಿರಾಜನ ನಾಡು ಬುವಿಗೆ ಭೂಷಣವಾಗಿದೆ. ೩. ಅದು ಒಂದು ಸೊಗಸಾದ ದೇಶ, ಅದು ಅನೇಕ ಸೋಜಿಗಗಳುಳ್ಳದ್ದು ; ಬಹುಶ್ರೇಷ್ಠವಾದದೇಶ, ಯಾರಿಗಾದರೂ ಬೇಡಿದುದನ್ನು ನೀಡುವ ದೇಶವದು : ಮಂಗಳಕರವಾದದ್ದು, ಯಾವುದಕ್ಕೂ ಅಲ್ಲಿ ಕಡಮೆಇಲ್ಲ ; ಭೂಲೋಕಕ್ಕೇ ಅದು ಸುಖಕರವಾದದೇಶ, ಅಭಿವೃದ್ಧಿಯನುಳ್ಳದೇಶ, ಪುಣ್ಯವಂತರನಾಡು, ಅದು ಅಮೃತಮಯ ಎಂದ ಮೇಲೆ ಬಣ್ಣಿಸುವುದಿನ್ನೇನು ! ೪. ಆ ನಾಡಿನಲ್ಲಿ ಹುಲುಸಾಗಿ ಬೆಳೆ ಇಲ್ಲದ ನೆಲವಿಲ್ಲ. ಯಾವಕಡೆಯಲ್ಲಿಯೂ

ಅಳಿಯಾಸೆ ಪುಷ್ಪವಾಟೀ
ಸ್ಥಳದೊಳ್ ರಾಜಭಯಮಬ್ಜ ಸಂಕುಳದೊಳ್ ಸಂ ।
ಚಳತೆ ಪವಮಾನನೊಳ್ ವಿ
ಹ್ವಳತೆ ರಥಾಂಗದೊಳಮಲ್ಲದಿಲ್ಲಾ ನಾಡೊಳ್ ॥ ೫

ಸಕಲಂಕತೆ ಚಂದ್ರಮನೊಳ್
ವಿಕಲಧ್ವನಿ ವಿಹಗದಲ್ಲಿ ಭಂಗಂ ನದಿಯೊಳ್ ।
ಸಕುಟಿಲತೆ ಲತೆಗಳೊಳ್ ಭುವ
ನ ಕಂಟಕಂ ಬಿಸದೊಳಲ್ಲದಿಲ್ಲಾ ನಾಡೊಳ್ ॥ ೬

ಕರ ವಿಚ್ಛೇದಂ ಗ್ರಾಮನಿ
ಕರಂಗಳೊಳ್ ಬಂಧನಂ ಕುಸುಮಮಾಲಿಕೆಯೊಳ್ ।
ಪರವಶಮೆಂಬುದು ಯೋಗೀಂ
ದ್ರರೊಳಲ್ಲದೆ ಶೈಲವತಿಯ ದೇಶದೊಳುಂಟೇ ॥ ೭

ಬೆಳೆ ಆಗಿಸದಿರುವ ಕಾಡೂ ಇಲ್ಲ, ಹೂವಿಲ್ಲದಕೊಳವಿಲ್ಲ, ಫಲಿಸದ ಮರಗಳೂ ಆ ನಾಡಿನಲ್ಲಿಲ್ಲ. ೫. ಆ ನಾಡಿನಲ್ಲಿ ಅಳಿಯಾಸೆ-ಕೀಳು ಆಸೆ, ರಾಜ-ಭಯ, ಸಂಚಲತೆ (ಚಾಂಚಲ್ಯ) ವಿಹ್ವಲತೆ (ಕಳವಳಗೊಳ್ಳುವಿಕೆ) ಎಂಬ ಗುಣಗಳು ಇದ್ದಿಲ್ಲ; ಆದರೆ ಅಳಿ (ದುಂಬಿ) ಯಾಸೆಯು ಪುಷ್ಪವಾಟಿಕೆಯಲ್ಲಿಯೂ, ರಾಜಭಯ ಎಂದರೆ ಚಂದ್ರನಭಯವು ತಾವರೆಗಳಲ್ಲಿಯೂ, ಸಂಚಲತೆ ಎಂದರೆ ಚಲಿಸುವಿಕೆಯು ಮಂದಮಾರುತದಲ್ಲಿಯೂ, ವಿಹ್ವಲತೆ ಎಂದರೆ ಕಳವಳಗೊಳ್ಳುವುದು ಚಕ್ರವಾಕ ಪಕ್ಷಿಗಳಲ್ಲಿ ಮಾತ್ರವೇ ಇತ್ತು. ೬. ಕಳಂಕ ಎಂಬ ದೋಷವು ಚಂದ್ರನಲ್ಲಿ, ವಿಕಲವಾಗಿ ಕೂಗುವ ಗುಣ ಹಕ್ಕಿಗಳಲ್ಲಿ, ಭಂಗ ಎಂದರೆ ವಕ್ರವಾಗಿ ಹರಿಯುವ ಸ್ವಭಾವ ನದಿಯಲ್ಲಿ ಕುಟಿಲತೆ ಎಂದರೆ ಡೊಂಕಾಗಿರುವಿಕೆಯು ಲತೆಗಳ (ಬಳ್ಳಿಗಳು)ಲ್ಲಿ, ಭುವನಕಂಟಕ ಎಂದರೆ ಕಮಲದ ದಂಟಿನಲ್ಲಿರುವ ಮುಳ್ಳು (ಸುಂಕು) ತಾವರೆ ದಂಟಿನಲ್ಲಿದ್ದಿತೇ ಹೊರತು ಉಳಿದ ಕಳಂಕ (ಅಪವಾದ) ವಿಕಾರವಾಗಿ ಕಾಣದು, ವಕ್ರಸ್ವಭಾವ, ಕುಟಿಲತ್ವ ಮತ್ತು ಲೋಕಕಂಟಕವಾಗುವ ಸ್ವಭಾವಗಳು ನಾಡಿನ ಜನರಲ್ಲಿರಲಿಲ್ಲ. ೭. 'ಕರವಿಚ್ಛೇದ' ಕಂದಾಯವನ್ನು ಬಿಡಿಸಿಕೊಳ್ಳುವಿಕೆ ಎಂಬುದು ಆ ಗ್ರಾಮಗಳ ಜನತೆಯಲ್ಲಿದ್ದಿತೆ ಹೊರತು, ಅಲ್ಲಿ ಕರವಿಚ್ಛೇದ-ಕೈಕತ್ತರಿಸುವ ಪ್ರಮೇಯವಿರಲಿಲ್ಲ; 'ಬಂಧನ' ಕಟ್ಟುವಿಕೆಯು ಹೂ ಪೋಣಿಸುವ ವ್ಯವಹಾರದಲ್ಲಿದ್ದಿತೇ ಹೊರತು ಅಲ್ಲಿ 'ಬಂಧನ' ವೆಂಬುದಿರಲಿಲ್ಲ; 'ಪರವಶ' 'ತನ್ಮಯವಾಗು' ಎಂಬ ವ್ಯವಹಾರವು ಯೋಗಿಗಳಲ್ಲಿದ್ದಿತೇ ಹೊರತು ಆ ನಾಡಿನಲ್ಲಿ 'ಪರವಶ'ಶತ್ರುವಿಗೆ ವಶನಾಗು ಎಂಬ ಅರ್ಥ

ಆ ಮಯಮಕ್ಷರ ಕುಲದೊಳ್
ಸಾಮಂ ವೇದಂಗಳಲ್ಲಿ ಭೀಮಂ ಚಿತ್ರ ।
ಸ್ತೋಮದೊಳಂ ಕ್ಷಾಮಂ ಲಲ
ನಾ ಮಧ್ಯದೊಳಲ್ಲದಾ ಸುದೇಶದೊಳುಂಟೇ ? ॥ ೮

ಆ ದೇಶಂ ಸಲೆ ಗಿರಿರಾ
ಜಾದೇಶಂ ತೀವಿ ವಿಪ್ರವೇದೋಚ್ಚ ರಣಾ ।
ನಾದ ಶಿವ ವಾಕ್ಯದೊಳ್ ಸಮ
ನಾದ ಶಿವಜ್ಞಾನಗಾನದಿಂದಿಸೆದಿರ್ಕುಂ ॥ ೯

ಗ್ರಾಮಂ ಜಿತಾಘಕುಲಸಂ
ಗ್ರಾಮಂ ಸದನಂ ಸುಖಕ್ಕೆ ಪಸದನಮೆಸೆವಾ ।
ರಾಮಂ ರಾಮಂ ಜನಕುಲ
ಕಾಮಂ ಕಾಮಹರಪೂಜೆ ನೋಡಾ ನಾಡೊಳ್ ॥ ೧೦

ದಲ್ಲಿ ಆ ಹೈಮವತಿ ನಾಡಿನಲ್ಲಿ ಬಳಕೆಯಲ್ಲಿರಲಿಲ್ಲ. ೮. ಆ ಮಯರೋಗ ಮತ್ತು ಆಕಾರ ದಿಂದ ಕೂಡಿದ ಅಕ್ಷರಗಳು; ಆದೇಶದಲ್ಲಿ 'ಆಮಯ' ಎಂಬ ಪದವು ಅಕ್ಷರಮಾಲೆಯಲ್ಲಿ ದ್ದಿತೇ ಹೊರತು ಅಲ್ಲಿಯ ಜನತೆಯಲ್ಲಿ ರೋಗರುಜಿನಗಳಿರಲಿಲ್ಲ; 'ಸಾಮ' ಸವಿಮಾತು ಗಳನ್ನಾಡಿ ವಂಚಿಸುವಿಕೆ ಮತ್ತು ಸಾಮವೇದ; ಆ ದೇಶದಲ್ಲಿ ಸಾಮ ಎಂಬ ಪದವು ವೇದ ವಾಚಕವಾಗಿದ್ದಿತಲ್ಲದೆ ಸವಿಮಾತುಗಳನ್ನಾಡಿ ವಂಚಿಸು ಎಂಬ ಅರ್ಥದಲ್ಲಿರಲಿಲ್ಲ; 'ಭೀಮ' ಭಯಂಕರ ಎಂಬ ಪದವು ಭಯಂಕರವಾದ ಚಿತ್ರಗಳು ಎಂಬ ಅರ್ಥಮಾತ್ರವೇ ಇತ್ತಲ್ಲದೆ ಜನತೆಯಲ್ಲಿ ಭೀಕರತೆ ಇದ್ದಿಲ್ಲ; ಅದರಂತೆ ಕ್ಷಾಮ ಎಂದರೆ ಕೃಶನಾಗು ಮತ್ತು ಬರ (ಮಳೆ–ಬೆಳೆಗಳಿಲ್ಲದ್ದು) ಎಂದು ಅರ್ಥ; ಇಲ್ಲಿ ಕ್ಷಾಮ ಎಂಬುದು ಸ್ತ್ರೀಯರ ನಡುಕೃಶ ವಾಗಿದೆ ಎಂಬ ಅರ್ಥದಲ್ಲಿ ಮಾತ್ರವೇ ಬಳಕೆಯಲ್ಲಿತ್ತೇ ಹೊರತು ಸರ್ವಸಮೃದ್ಧವಾದ ಆ ನಾಡಿನಲ್ಲಿ ಕ್ಷಾಮವೆಂಬುದಿರಲಿಲ್ಲ. ೯. ಆ ದೇಶವು ಗಿರಿರಾಜನ ಆದೇಶ (ಆಜ್ಞೆ)ಕ್ಕೆ ಒಳಗಾಗಿತ್ತು. ಅಲ್ಲಿ ವಿಪ್ರರ ವೇದೋಚ್ಚಾರದ ನಾದ ಶಿವವಾಕ್ಯದಲ್ಲಿ ಸಮನಾದ ಶಿವಜ್ಞಾನಗಾನಗಳಿಂದ ಆ ದೇಶವು ವಿರಾಜಮಾನವಾಗಿತ್ತು. ಎಲ್ಲೆಲ್ಲಿಯೂ ವೇದಾಧ್ಯಯನ, ಶಿವಜ್ಞಾನಧ್ಯಾನ–ಗಾನಗಳು ಮೊಳಗುತ್ತಿದ್ದವು ಎಂದು ಭಾವ. ೧೦. ಅಲ್ಲಿಯ ಗ್ರಾಮಗಳು ಎಂದರೆ ಆ ಗ್ರಾಮವಾಸಿಗಳು ಆಸುರೀವೃತ್ತಿ (ಪಾಪ ಚಿಂತನ) ಗಳ ಸಂಗ್ರಾಮದಲ್ಲಿ ಜಯಗಳಿಸಿದ್ದರು ಎಂದರೆ ಪಾಪದೂರರಾಗಿದ್ದರು, ಆ ದೇಶ ಸುಖಕ್ಕೆ ನೆಲೆಯಾಗಿತ್ತು; ಪ್ರಸನ್ನತೆ (ಕಾಣಿಕೆ) ಯಿಂದ ಬೆಳಗುವ ಮನೋಹರವಾದ ತೋಟಗಳು, ಜನತೆಗೆ ಇಷ್ಟಾರ್ಥಗಳನ್ನು ನೀಡುವ ಕಾಮಹರನಾದ ಪರಶಿವನಪೂಜೆಗಳು

ಕಂ॥ ಕಲ್ಲೆಲ್ಲಂ ಪರುಷಂ ತರು
ವೆಲ್ಲಂ ಕಲ್ಪತರು ಗುಲ್ಮಮೆಲ್ಲೌಷಧಿ ಗೋ।
ವೆಲ್ಲಂ ಸುರಭಿಕುಲಂ ಮಡು
ವೆಲ್ಲಂ ಸಿದ್ಧರಸಮೆನಿಕುಮಂತಾ ನಾಡೊಳ್ ॥ ೧೧

ಆ ವಿಷಯದೊಳೊಪ್ಪುವ ಕಳ
ಮಾವಳಿ ಸಳಸಳಿಸಿ ಬೆಳೆದು ಪಸುರೇಱಿ ಲಸದ್।
ಭೂವನಿತೆಗೆ ಧಾತ್ರಂ ಪರಿ
ಭಾವಿಸಿ ಪೊದೆಯಿಸಿದ ಹರಿತಪಟದಂತಿರ್ಕುಂ ॥ ೧೨

ಸೊಂಪಾಗುತ್ತಂಕುರಿಸು
ತ್ತುಂ ಪಸುರೇಱುತ್ತೆ ಕವಲಿಱಿದು ಪೊಡೆಯೊತ್ತು।
ತ್ತುಂ ಪಾಲೆಱುತ್ತುಂ ನೆಱೆ
ದಿಂಪಿಂ ನಳನಳಿಸಿ ಶಾಲಿವನಮೆಸೆದಿರ್ಕುಂ ॥ ೧೩

ಉಗುವೆಳನೀರಿಂದಂ ಕದ
ಳಿಗಳಾ ಕದಳಿಗಳ ಪಣ್ಣರಸದಿಂ ಪುಂಡ್ರೇ।
ಕ್ಷುಗಳಿಕ್ಷುರಸದಿನಾ ಕಳ
ವೆಗಳಾಕಳವೆಗಳ ಕಣಿಶದಿಂ ಗಿಳಿ ಬಳೆಗುಂ ॥ ೧೪

ವ ॥ ಆ ಕಳಮಕ್ಷೇತ್ರಮಂ ಬಳಸಿ ಬಂದು ತಾಮರಸಾಕ್ಷಿಯರಪ್ಪ ಪಾಮರಿಯರ್ ಸಾದರಂ ಕಾದಿರ್ಪಲ್ಲಿ,

ಆ ನಾಡಿನಲ್ಲೆಲ್ಲಿಯೂ ಕಂಗೊಳಿಸುತ್ತಿದ್ದವು. ೧೧. ಅಲ್ಲಿಯ ಕಲ್ಲೆಲ್ಲ ಸ್ಪರ್ಶಮಣಿಗಳು, ಮರಗಳೆಲ್ಲ ಕಲ್ಪಕುಜಗಳು, ಗಿಡಗೆಂಟೆಗಳೆಲ್ಲ ಓಷಧಿಗಳು, ಗೋವುಗಳು ಕಾಮಧೇನುಗಳ ಹಿಂಡು, ಮಡುಗಳೆಲ್ಲ ಸಿದ್ಧರಸಭರಿತವಾಗಿದ್ದವು. ೧೨ ಆ ದೇಶದಲ್ಲಿ ಒಪ್ಪುವ ಬತ್ತದ ಗದ್ದೆಗಳು ಹಸುರು ಚೆಲ್ಲಿದಂತೆ ಹುಲುಸಾಗಿ ಬೆಳೆದಿವೆ. ಅದನ್ನು ನೋಡಿದರೆ ಸೃಷ್ಟಿಕರ್ತನಾದ ಬ್ರಹ್ಮನು ಭೂವನಿತೆಗೆ ಹೊದಿಸಿದ ಹಸುರು ವಸ್ತ್ರವೊ ಎಂಬಂತಿದೆ. ೧೩. ಅಲ್ಲಿಯ ಗಂಧಶಾಲಿ ಗದ್ದೆಗಳಲ್ಲಿ ಸೊಂಪಾಗಿ, ಅಂಕುರಿಸಿ, ಪಸುರಾಗಿ, ಕವಲೊಡೆದು, ಪೊಡೆಯೊತ್ತಿ, ಹಾಲುತುಂಬಿ, ಸುಂದರವಾಗಿ ಭತ್ತದ ಪೈರು ಹುಲುಸಾಗಿ ಬೆಳಗುತ್ತಿದೆ. ೧೪. ಉಕ್ಕಿಬರುವ ಎಳನೀರಿನಿಂದ ಕದಳಿ (ಬಾಳೆ)ಗಳು ; ಆ ಕದಳಿಗಳ ಹಣ್ಣಿನ ರಸದಿಂದ ಪುಂಡ್ರೇಕ್ಷು (ಪಟಾವಳಿಕಬ್ಬು)ಗಳು, ಆ ಇಕ್ಷು (ಕಬ್ಬಿನ) ರಸದಿಂದ ಕಳವೆ (ಗಂಧಶಾಲಿ ಭತ್ತ) ಪೈರು, ಆ ಭತ್ತದ ತೆನೆಯ ಹಾಲಿನಿಂದ ಗಿಳಿಗಳು ಬೆಳೆಯುತ್ತಿವೆ. ವ॥ ಆ ಗಂಧಶಾಲಿಯ ಭತ್ತದ ಗದ್ದೆಗಳನ್ನು ತಾವರೆಗಣ್ಣಿನ ನಾಡಹೆಣ್ಣು ಮಕ್ಕಳು ಕಾಯುತ್ತಿದ್ದಾರೆ.

ಚಂ॥ ತ್ವರಿತಗತಿಪ್ರಚಾರತೆ ಮರಾಳಲಸದ್ಗತಿ ಸಾರುತೆಳ್ಪಲ
ಬ್ಬರಿಸುವನಾದ ಮನ್ಯಭೃತನಾದ ಮಡರ್ಚುತಿಡಲ್ಕೆ ಮಚ್ಚಿಮ ।
ಚ್ಚರಿಸುವ ತೋಳ್ಮರುದ್ಧತಲತಾಕುಳಮೆಂದುಱೆ ಪಕ್ಕಿಸೋವ ಪಾ
ಮರಿಯರ ಝುಂಕೆಗಲ್ಲಿ ಗಿಳಿಯಂಜದೆ ಬೆರ್ಚದೆ ನಿಲ್ಕುಮಾವಗಂ ॥ ೧೫

ವ ॥ ಮತ್ತಮಲ್ಲಿ

ಕಂ॥ ಮುಡಿ ಮೊಲೆ ನಿತಂಬ ಭಾರದಿ
ನಡಿಯಿಡಲಾಱದೆ ಶುಕಾಳಿಯಂ ಪಾಮರಿಯರ್ ।
ಬಿಡೆ ಸೋವುತ್ತಿರ್ಪರ್ ಸಂ
ಗಡಮಿರ್ದಲ್ಲಿರ್ದು ಬಱಿಯ ಗಳಬಳದಿಂದಂ ॥ ೧೬

ಗಿಳಿಯಂ ಸೋವೆಳೆಯಳ ನುಡಿ
ವಳಿಯಿಂದೆ ವಿಕಾಸಮಾದ ಬಾಯ್ದೆಱೆಗಂಡಂ ।
ವೆಳಸುತ್ತಿರ್ಪುವು ದಾಡಿಮ
ಫಳ ಬೀಜಂಗೆತ್ತು ದಂತಕುಳಮಂ ಗಿಳಿಗಳ್ ॥ ೧೭

ವ ॥ ಮತ್ತಂ ಪೆಱತೊಂದೆಡೆಯ ಕಳಮಕ್ಷೇತ್ರಮಂ ಕಾದಿರ್ಪ ಕಾಮಿನಿಯರೊಳೊರ್ವ ಪ್ರೌಢಪಾಮರಿ ಪಾಂಥರೊಳಗೆ ಬಳಲ್ದು ಬರ್ಪ ಜವ್ವನಿಗನಂ ಕಂಡು ನಾಡೆ ಮನಮೆಳಸಿ ಕೂಡ ಲೆಂದು,

೧೫. ಹಕ್ಕಿಗಳನ್ನು ಸೋವುತ್ತಿರುವ ಪಾಮರಿಯರ ತ್ವರಿತಗತಿಯು ಅವರ ಹಂಸ ನಡಗೆಯನ್ನು ಸಾರುತ್ತಿರಲು ಅವರು ಅಬ್ಬರಿಸುವ ನಾದವು ಕೋಗಿಲೆಯ ನಾದವನ್ನು ತಿರಸ್ಕರಿಸುತ್ತಿರಲು, ಮೆಚ್ಚಿ ಮಚ್ಚರಿಸುವ ಅವರ ತೋಳನ್ನು ಗಾಳಿಯಿಂದ ಅಲುಗಾಡುವ ಲತೆಯೆಂದು ತಿಳಿದ ಗಿಳಿಗಳು ಅವರ ಝುಂಕೆಗೆ ಬೆದರದೆ ಬೆಚ್ಚದೆ ಭತ್ತದಗದ್ದೆ ಬಿಟ್ಟು ಏಳುತ್ತಲೇ ಇರಲಿಲ್ಲ. ೧೬. ಆ ಪಾಮರಿಯರಿಗೆ ತಲೆಯಲ್ಲಿ ಮುಡಿಭಾರ, ಎದೆಯಮೇಲೆ ಮೊಲೆಭಾರ, ಸಾಲದ್ದಕ್ಕೆ ನಿತಂಬಭಾರ, ಇದರಿಂದ, ಅವರು ಅಡಿಯಿಡಲಾರದೆ ಇದ್ದಲ್ಲಿಯೇ ಕುಳಿತು ಬರಿಯ ಗಳಬಳ ಶಬ್ದಗಳಿಂದಲೇ ಗಿಳಿಗಳನ್ನು ಸೋವುತ್ತಿದ್ದರು. ೧೭. ಗಿಳಿಯನ್ನು ಸೋವ ಒಬ್ಬ ಎಳೆಯಳು, ಅವಳ ನುಡಿವಳಿಯಿಂದ ಅರಳಿದ ತುಟಿಗಳ ಹಿಂದೆ ಇರುವ ದಂತ ಪಂಕ್ತಿಯನ್ನು ಗಿಳಿಗಳು ದಾಳಿಂಬೆಯ ಬೀಜವೆಂದು ತಿಳಿದ ಗಿಳಿಗಳು ಅವನ್ನು ಬಯಸುತ್ತಿದ್ದವು. ವ ॥ ಮತ್ತೊಂದು ಕಡೆಯ ಕಳಮ ಕ್ಷೇತ್ರವನ್ನು ಕಾಯ್ದಿರುವ ಹೆಣ್ಣುಗಳಲ್ಲಿ ಒಬ್ಬ ಪ್ರೌಢೆ, ಅವಳು ದಾರಿಗರಲ್ಲಿ ಆಯಾಸಗೊಂಡು ಬರುತ್ತಿರುವ ಒಬ್ಬ ಯುವಕ

ಕಂ॥ ಪತ್ತಿತು ಬಿಸಿಲುಱಿ ಕಾಲುಂ
ಮುತ್ತಿತು ನೋವುದಕದಿಚ್ಛೆಯಿಂದಂ ಬೆಳರ್ವಾಯ್ ।
ಬಿತ್ತಿತ್ತಯ್ಯೋ ಶ್ರಮಮನಿ
ನಿತ್ತುಂ ಕಳೆವವರೆ ಜಾಣರೆನುತುಂ ನುಡಿದಳ್ ॥ ೧೮

ಚಂ॥ ನುಡಿಯೆ ಬಳಲ್ದ ಪಾಂಥನೆರ್ದೆತಣ್ಪಿನ ಸೋನೆಯನಾಂತಮಾಳ್ಕೆಯಿಂ
ಪೊಡಕರಿಸುತ್ತೆ ಪೆರ್ಚಿಮಿಗೆ ಸಾರ್ದು ನಿವಾತಸುಖಸ್ಥಳಕ್ಕೆ ಬಂ ।
ದೆಡೆಗುಡದನ್ಯಚಿಂತೆಗೆ ಮನೋಜ ಸುಖಾರ್ಣವಮಧ್ಯದೊಳ್ ಮನಂ
ಗುಡುತಮಮರ್ಚುತೀಸುತೆ ಧುಡುಮ್ಮಿಱಿಯುತ್ತಮೆ ಪಾಂಥನೊಪ್ಪಿದಂ ॥ ೧೯

ಕಂ॥ ನೆಳಲಾದುದು ಧಮ್ಮಿಲ್ಲಂ
ಪುಳಿನಸ್ಥಳಮಾಯ್ತು ವೃತ್ತಜಘನಭರಂ ಶೀ ।
ತಳತರಜಳಮಾದುದು ಕೋ
ಮಳೆಯಧರ ಮರೀಚಿ ಪಾಂಥನೇಂ ಬರ್ದುಕಿದನೋ ॥ ೨೦

ವ॥ ಮತ್ತಮಾದೇಶದೊಂದಱವಟಿಗೆಯಲ್ಲಿ

ಸ್ರ॥ ಕಳಕೇಕೀಕೇಶಪಾಶಂ ಶಶಿನಿಭವದನಂ ಭೃಂಗನೀಲಾಳಕಂ ಸಂ
ಚಲಿತ ಪ್ರೋನ್ಮತ್ಸ್ಯನೇತ್ರಂ ಘಟಕುಚಯುಗಳಂ ಲೇಶಮಧ್ಯಂ ಗಭೀರೋ ।
ಜ್ಜ್ವಳ ಶೋಭಾನಾಭಿ ಕುಂಭಸ್ಥಳ ಸದೃಶ ನಿತಂಬಂ ಸುರಂಭಾವಿಳಾಸಂ
ದಳೆದೊಪ್ಪಿರ್ದೂರುದಂಡಂ ತನಗೆಸೆದಿರೆ ಸಂತಂ ಪ್ರಪಾಕಾಂತೆಯಿರ್ದಳ್ ॥ ೨೧

ನನ್ನು ಕಂಡು ಮನತಿಳಿಸಿ ಕೊಡಬಯಸಿ. ೧೮. ಬಿಸಿಲು ಏರಿತು, ಕಾಲುನೊಂದಿದೆ, ನೀರಡಸಿ ಬಾಯಿ ಬತ್ತಿದೆ, ಅಯ್ಯೊ, ಎಂಥ ಶ್ರಮ! ಇಷ್ಟನ್ನೂ ಒಮ್ಮೆಗೇ ಕಳೆಯುವರೇ ಜಾಣರು! ಎಂದು ಅರ್ಥಗರ್ಭಿತವಾಗಿ ನುಡಿದಳು. ೧೯. ಅವಳ ನುಡಿಯನ್ನು ಕೇಳಿದ ಆ ಪಾಂಥನ ಎದೆಗೆ ತಣ್ಣನೆ ಸೋನೆಮಳೆ ಬಿದ್ದಂತಾಯಿತು, ಅದರಿಂದ ಉತ್ಸಾಹಗೊಂಡು ಅವನು ಒಂದು ನಿರ್ಜನ ಪ್ರದೇಶಕ್ಕೆ ಆಗಮಿಸಿದ, ಅಲ್ಲಿ ಅವನು ಬೇರೆ ಯೋಚನೆಯನ್ನು ಬಿಟ್ಟು, ರತಿವಿಲಾಸಸುಖದಲ್ಲಿ ಮಗ್ನನಾಗಿ ಸುಖಿಸುತ್ತಿದ್ದ. ೨೦. ಆ ಪಾಂಥನಿಗೆ ಅವಳ ನೀಳಕೇಶಪಾಶವೆ ನೆಳಲಾಯಿತು. ಅವಳ ವೃತ್ತ ಜಘನವೇ ವಿಹಾರಕ್ಕೆ ಯೋಗ್ಯವಾದ ಮರಳ ದಿಣ್ಣೆಯಾಯಿತು; ಆ ಕೋಮಲೆಯ ಅಧರ ಮರೀಚಿಯೇ ಅವನಿಗೆ ತಣ್ಣನೆಯ ಜಲವಾಯಿತು ಎಂದಮೇಲೆ ಆ ಪಾಂಥನ ಪುಣ್ಯವೆಂತಹುದಿರಬೇಕು! ವ॥ ಆ ಅರವಟ್ಟಿಗೆಯಲ್ಲಿದ್ದ ಪ್ರಪಾಕಾಂತೆಯ ಸೌಂದರ್ಯವಿದು– ೨೧. ಸುಂದರವಾದ ನವಿಲಿನ ಪಿಂಛದಂತಿರುವ ಕೇಶಪಾಶ; ಚಂದ್ರನಂತಿರುವ ಮುಖ; ದುಂಬಿಯಂತಿರುವ ಕಪ್ಪಾದ ಚೂರ್ಣಕುಂತಳ, ಮೀನುಕಣ್ಣು, ಕಲಶಕುಚ, ಸಿಂಹಮಧ್ಯ, ಶೋಭಿಸುವ ನಾಭಿ, ಆನೆಯ ಕುಂಭ

ಕಂ॥ ವರನಾಭಿಸುಳಿಗಳಂ ತೋಳ್
ತರಂಗ ಮಾಲೆಗಳನಂಬಕಂ ಮತ್ಸ್ಯಮನಂ ।
ಗರುಚಿ ರುಚಿರಾಂಬುವಂ ಪೋ
ಲ್ತು ರಮಣಿ ನದಿಯಂದದಿಂ ಪ್ರಪಾಂತದೊಳಿರ್ದಳ್ ॥ ೨೨

ಇರೆ ಬಂದ ಪಥಿಕನೋರ್ವಂ
ತರುಣಿಯ ಲಾವಣ್ಯರಸಮನಕ್ಷಿಗಳಿಂದಂ ।
ಬರೆ ಪೀರ್ದು ದಣಿದು ಬಟ್ಟೆಯ
ಪರಿಶ್ರಮವ್ಯಥೆಯನಱಿಯದಿರ್ದಂ ಸುಖದೊಳ್ ॥ ೨೩

ವ ॥ ಆ ಪ್ರಪಾಕಾಮಿನಿ ಪಥಿಕರ್ಗೆ ನೀರ್ಗುಡಿಯಲೆಱೆವಲ್ಲಿಯೊರ್ವ ವಿಟಂ ಜಲಪಾನಂ ಮಾಡುತಂ ತರುಣಿಯ ನಿರತಿಶಯಲಾವಣ್ಯಮಂ ಕಂಡು,

ಕಂ॥ ತೀರ್ದುದು ನೀರ್ ತೀರ್ದುದು ತೃಷೆ
ತೀರ್ದುದು ಕಡುಸೇದೆ ತೀರ್ದೊಡೇಂ ಪಥಿಕಂ ತಾ ।
ನಿರ್ದಂತಿರ್ದಂ ಸ್ತ್ರೀಮುಖ
ಮಿರ್ದಿರವಂ ನೋಡುವಾಸೆ ತೀಱದೆಮನದೊಳ್ ॥ ೨೪

ನಡೆ ನುಡಿ ಬಳಲ್ಕೆ ಮುನ್ನಂ
ಕಡು ಚಲ್ವಿಯ ರೂಪುಗಂಡ ಬಳಿಕಂ ನಡೆಯರ್ ।
ನುಡಿಯರ್ ನೀರಂ ಕುಡಿಯರ್
ನಡೆನೋಡುತ್ತಿರ್ಪರತನುಶಿಥಿಲರ್ ಪಥಿಕರ್ ॥ ೨೫

ಸ್ಥಳದಂತಿರುವ ನಿತಂಬ, ಬಾಳೆಯದಂಟಿನಂತಿರುವ ತೊಡೆಗಳು ಮುಂತಾದವುಗಳಿಂದ ಅವಳು ಒಪ್ಪಿದ್ದಳು. ೨೨. ಅರವಟ್ಟಿಗೆಯಲ್ಲಿ ಪಾಂಥರಿಗೆ ನೀರೆರೆಯುತ್ತಿದ್ದ ಒಬ್ಬ ತರುಣಿ ನದಿಯಂತೆ ಕಂಗೊಳಿಸುತ್ತಿದ್ದಳು. ಅವಳ ಸುಂದರ ನಾಭಿಯು ಸುಳಿಯನ್ನೂ, ತೋಳು ತರಂಗ (ಅಲೆ) ಮಾಲೆಯನ್ನೂ, ಕಣ್ಣು ಮೀನನ್ನೂ, ಶರೀರಕಾಂತಿಯು ನೀರನ್ನೂ ಹೋಲುತ್ತಿತ್ತು. ೨೩. ಹೀಗಿರುವ ಆ ತರುಣಿಯ ಲಾವಣ್ಯರಸವನ್ನು ಕಣ್ಣುಗಳಿಂದ ಚೆನ್ನಾಗಿ ಹೀರಿದ ಪಥಿಕ ಆ ಸುಖದಲ್ಲಿ ತಾನು ದಾರಿ ನಡೆದು ಬಂದ ಆಯಾಸವನ್ನೆಲ್ಲ ಮರೆತಿದ್ದ. ವ ॥ ಹೀಗೆ ಅರವಟ್ಟಿಗೆಯ ಆ ಲಲನೆ ಪಥಿಕರಿಗೆ ನೀರೆರೆಯುತ್ತಿರುವಾಗ ಒಬ್ಬ ವಿಟ ಜಲಪಾನವನ್ನು ಮಾಡುತ್ತಾ ಆಕೆಯ ಮನಂಬುಗುವ ಲಾವಣ್ಯವನ್ನು ಕಂಡು ೨೪. ತಂಬಿಗೆಯಲ್ಲಿದ್ದ ನೀರು ತೀರಿತು, ಅವನ ಬಾಯಾರಿಕೆಯೂ ತೀರಿತು, ಆಯಾಸವೂ ತೀರಿತು. ಆದರೇನು ? ಅವನಿಗೆ ಅವಳ ಮುಖವು ಇದ್ದ ರೀತಿಯನ್ನು ನೋಡುವ ಆಸೆ ತೀರದೆ, ಅವನು ಇದ್ದಂತೆಯೇ ಇದ್ದ ! ೨೫. ಮೊದಲು ಆ ದಾರಿಗರಿಗೆ ನಡೆನುಡಿಗಳಲ್ಲಿ ಬಳಲಿಕೆ ಇತ್ತು. ಕಡುಚೆಲುವೆ

ವ ॥ ಮತ್ತಮೊಂದು ಪ್ರಪಾಶಾಲೆಯಲ್ಲಿ,

ಕಂ ॥ಅಂಬುವನೆಱೆವಾಗಳ್ ಪ್ರತಿ
ಬಿಂಬಿಸೆ ಕೆಯ್ನೀರೊಳವಳ ವದನಂ ಪಥಿಕಂ ।
ನಂಬಿ ನಲಿದೀಂಟಿದಂ ಪ್ರತಿ
ಬಿಂಬಾಧರ ಮಧುರ ರಸಮನೀಂಟುವ ತೆಱದಿಂ ॥ ೨೬

ವ ॥ ಮತ್ತಮಾ ದೇಶದಲ್ಲಿ—

ಕಂ॥ ಬಳಸಿಗವೊಪ್ಪಿದುವು ಜಿನುಗಿ
ಗಳಪಿ ಕುಳಿರ್ಕೊಡಿ ಕಳ್ತಲಿಸಿ ಮಲೆದುದ್ದಂ ।
ದಳೆದು ಫಲವಾಗೆ ಪರಿವಡೆ
ದಳಿ ಗಿಳಿ ಮಡು ಗಿಡು ಕರಿ ಗಿರಿ ಚೂತಂ ಗೀತಂ ॥ ೨೭

ನಾನಾ ದೇವಾಯತನಾ
ನೂನವಿಭೋಗಾದಿ ಸಂಪದಪ್ರದಮೆನಿಸಿ ।
ರ್ಪಾನಾಡಿಂಗೆ ಶಿರೋಮಣಿ
ತಾನೆನಿಕುಂ ಪೆಸರೊಳೋಷಧಿಪ್ರಸ್ಥಪುರಂ ॥ ೨೮

ಅದು ಗಿರಿರಾಜನ ರಾಜ್ಯಾ
ಸ್ಪದ ರಾಜಿತರಾಜಧಾನಿ ತಾನೆಂದೆನಿಸಿ ।
ರ್ಪುದು ಪುರಮಾ ಪುರಮಂ ಸು
ತ್ತಿದ ಬಹಿರುದ್ಯಾನಚಯಮನಾರ್ ಬಣ್ಣಿಸುವರ್ ॥ ೨೯

ಯಾದ ಅವಳ ರೂಪು ಕಂಡ ಮೇಲೆ ಅವರು ನಡೆಯರು, ನುಡಿಯರು, ನೀರನ್ನೂ ಕುಡಿಯರು ; ಶಿಥಿಲ ಮನಸ್ಸುಳ್ಳ ಆ ಪಥಿಕರು ಸುಮ್ಮನೆ ಅವಳನ್ನು ನೋಡುತ್ತಲೇ ಇದ್ದರು. ವ ॥ ಇನ್ನೊಂದು ಅರವಟ್ಟಿಗೆಯಲ್ಲಿ, ೨೬. ದಾರಿಗನಿಗೆ ನೀರೆರೆಯುವಾಗ ಅವಳ ಮುಖವು ಅವನ ಬೊಗಸೆಯ ನೀರಿನಲ್ಲಿ ಪ್ರತಿಬಿಂಬಿಸಿತು. ಅದನ್ನು ಅವನು ಅವಳ ನಿಜವಾದ ಮುಖವೆಂದೇ ತಿಳಿದ. ಇದರಿಂದ ಅವನು ಬೊಗಸೆಯಲ್ಲಿದ್ದ ನೀರನ್ನು ಪ್ರತಿಬಿಂಬಾಧರದ ಮಧುರರಸವನ್ನು ಹೀರುವಂತೆ ಹೀರಿದ. ವ ॥ ಮತ್ತೆ ಆ ನಾಡಿನಲ್ಲಿ ೨೭. ಅಳಿ ಜಿನುಗಿ, ಗಿಳಿ ಗಳಪಿ (ಹೆಚ್ಚು ಮಾತನಾಡಿ) ಮಡು ತಂಪನ್ನುಂಟುಮಾಡಿ, ಗಿಡಗಳು ಬೆಳೆದು ಕತ್ತಲೆಯುಂಟುಮಾಡಿ, ಕರಿ (ಆನೆ) ಮದೋನ್ಮತ್ತವಾಗಿ, ಗಿರಿ ಎತ್ತರವಾಗಿ ಬೆಳೆದು, ಚೂತ (ಮಾವು) ಫಲಿಸಿ, ಗೀತವು ಹರಡಿ ಆದೇಶದ ಸುತ್ತುಮುತ್ತಲೂ ಒಪ್ಪಿದ್ದವು. ೨೮. ಅನೇಕ ದೇವಾಲಯಗಳು, ಯಾವುದಕ್ಕೂ ಕೊರತೆಯಿಲ್ಲದ ಭೋಗ ಸಂಪತ್ತುಗಳು ಇವುಗಳನ್ನು ನೀಡುವ ಆ ನಾಡಿಗೆ ಶಿರೋಮಣಿ ಎನಿಸಿತ್ತು ಓಷಧಿಪ್ರಸ್ಥಪುರ. ೨೯. ಆ ಪುರವು

ಚಂ॥ ಕರಮೆಸೆವೀಳೆ ಬಾಳೆ ನವಪೂಗಚಯಂ ಪನಸಾಳಿ ಶಾಳಿ ಭಾ
ಸುರ ಸುರಹೊನ್ನೆ ಜಂಬು ಘನನಿಂಬಕುಳಂ ಬಕುಳಂ ಕವುಂಗು ತೆಂ।
ಗುರುತರಮಾತುಳಂಗತತಿ ಚೂತಕುಜಾತಮಶೋಕೆ ಪೂಗೊಳಂ
ಕುರುವಕನತ್ತಮಾಲ ಕೃತಮಾಲ ತಮಾಲದಿನೊಪ್ಪುಗುಂ ವನಂ ॥ ೩೦

ಮ॥ ಸಿರಿತಂದಿಕ್ಕಿದಶೋಕೆ ವಾಗ್ವನಿತೆಯಿಟ್ಟಾಮ್ರಂ ಶಚಿದೇವಿಯಿ
ಟ್ಟರನೇರಿಲ್ ಮಿಗೆ ರಂಭೆಯಿಟ್ಟ ಕದಳಿಷಂಡಂ ಸುರಸ್ತ್ರೀಯರಿ।
ಟ್ಟರವಿಂದಾಕರಮೂರ್ವಶೀವಧು ಸರಾಗಂ ತಂದ ಪೂಗದ್ರುಮಂ
ತರದಿಂದಂ ರತಿಯಿಟ್ಟ ದಾಡಿಮಕುಲಂ ಸಾರ್ವರ್ತುಕೋದ್ಯಾನದೊಳ್ ॥ ೩೧

ಚಂ ॥ ಸುರುಚಿರಸಾರಪಕ್ವ ಫಲವಕ್ತ್ರಲಸಚ್ಛುಕ ಚುಂಬನಂ ಬನಂ
ಪರಮವಿರಕ್ತ ಸಂತತಿಗಿದೇತಜಮೋಹನಮೆಂಬಿನಂ ಬನಂ।
ಚರಿತದೆ ಸೋಲಿಕುಂ ಶುಕಪಿಕಾಳಿಕುಲಕ್ಕತಿಜೀವನಂ ವನಂ
ಧರೆಗೆ ವಿಚಿತ್ರಭಾಸುರಮದೇಳಿಪುದಗ್ಗದ ಕಾವನಂ ವನಂ ॥ ೩೨

ವ ॥ ಆ ಸಾರ್ವರ್ತುಕಮೆನಿಸಿದುದ್ಯಾನದಲ್ಲಿ,

ಉ ॥ ಅಂಕುರದಿಂ ಪ್ರವಾಳಕುಲದಿಂ ನನೆಯಿಂ ಮುಗುಳಿಂ ಪ್ರಸೂನದಿಂ
ದಂ ಕಿಱುಗಾಯ್ಗಳಿಂ ತೊರೆದ ದೋರೆಗಳಿಂ ತನಿವಣ್ಣ ಪಂಕ್ತಿಯಿಂ।

ಗಿರಿರಾಜನ ರಾಜ್ಯಕ್ಕೆ ಆಶ್ರಯವಾದ ರಾಜಧಾನಿ. ಆ ಪುರದ ಹೊರಗೆ ಸುಂದರವಾದ ಉದ್ಯಾನ. ಅದನ್ನು ಯಾರು ತಾನೆ ಬಣ್ಣಿಸಲು ಸಾಧ್ಯ! ೩೦. ಆ ಉದ್ಯಾನದಲ್ಲಿ ಪ್ರಕಾಶಿಸುವ ಈಳೆ, ಬಾಳೆ, ಅಡಕೆ, ಹಲಸು, ಗಂಧಶಾಳಿ, ಸುರಹೊನ್ನೆ, ಜಂಬುನೇರಳೆ, ನಿಂಬೆ, ಬಕುಳ, ಶ್ರೇಷ್ಠ ಅಡಿಕೆ, ತೆಂಗು, ಮಾತುಳಂಗ, ಮಾವು, ಅಶೋಕ, ಹೂವು ಅರಳಿದ ಕೊಳ, ಕುರುವಕ, ಹೊಂಗೆ, ಕೃತಮಾಲ ಮೊದಲಾದ ಗಿಡಮರಗಳಿಂದ ಆ ವನವು ಒಪ್ಪಿತ್ತು. ೩೧. ಅದು ಎಲ್ಲ ಋತುಗಳಿಗೂ ಹೊಂದಿಕೊಂಡ ಉದ್ಯಾನವನ. ಏಕೆಂದರೆ ಆ ಉದ್ಯಾನದಲ್ಲಿ ಸಾಕ್ಷಾತ್ ಲಕ್ಷ್ಮೀದೇವಿಯೆ ಅಶೋಕೆ ನೆಟ್ಟಿದ್ದಳು, ಶಾರದೆ ಮಾವಿನಗಿಡ ನಾಟಿದ್ದಳು, ಶಚೀದೇವಿ ಅರನೇರಿಲನ್ನು, ರಂಭೆಯು ಕದಳಿಗಳನ್ನು, ಸುರಸ್ತ್ರೀಯರು ಕಮಲ ಮಡುವನ್ನು, ಊರ್ವಶಿಯು ಅಡಕೆ ಸಸಿಗಳನ್ನು, ರತಿಯು ದಾಳಿಂಬೆಯನ್ನು ನೆಟ್ಟಿದ್ದರು. ೩೨. ಆ ವನದಲ್ಲಿ ಸುರುಚಿರಸಾರವೆನಿಸುವ ಹಣ್ಣುಗಳನ್ನು ಗಿಳಿಗಳು ಕಚ್ಚಿದ್ದವು; ಪರಮ ವಿರಕ್ತ ಸಂತತಿಗೆ ಇದೆಂತಹ ಮೋಹಕವಾದ ವನ ಎನಿಸಿತ್ತು! ಶುಕ–ಪಿಕಗಳ ಕುಲಕ್ಕೆ ಅತಿ ಜೀವನಪ್ರದವಾದ ಚಾರಿತ್ರವನ್ನು ಸೋಲಿಸುತ್ತಿದೆ. ಧರೆಗೆ ವಿಚಿತ್ರವೂ, ಭಾಸುರ (ಮನೋಹರ)ವೂ ಆದ ಆ ವನವು ಕಾಮನ ವನವನ್ನು ಹೀಯಾಳಿಸುವಂತಿತ್ತು. ವ ॥ ಸರ್ವ ಋತುಗಳಲ್ಲೂ ಫಲಕೊಡುವ ಉದ್ಯಾನದಲ್ಲಿ, ೩೩. ಅಂಕುರ, ಚಿಗುರು, ನನೆ, ಮುಗುಳು

ದಂ ಕಳಕಂಠಕೂಜಿತದಿನೊಪ್ಪುವ ಷಟ್ಪದವೃಂದಗಾನದಿಂ
ದಂ ಕಡುಕೊರ್ಬಿ ಚಪ್ಪರಿಪ ರಾಜಶುಕಾಳಿಯಿನಾಮ್ರಮೊಪ್ಪುಗುಂ ॥ ೩೩

ವ ॥ ಮತ್ತಂ,

ಚಂ॥ ಇದು ರತಿರಾಜಭದ್ರಗಜಮೋ ಇದು ಚೈತ್ರನ ರಾಜಧಾನಿಯೋ
ಇದ್ದವನ ಲಕ್ಷ್ಮಿಗೆತ್ತಿಸಿದ ಪೀಲಿಯ ಸತ್ತಿಗೆಯೋ ವಸಂತನಿಂ ।
ದಿದು ಶಶಿಯಳ್ತಿಯಿಂ ಸಲಪಿದರ್ವಿದ ಕೊರ್ವಿದ ಕಲ್ಪವೃಕ್ಷಮೋ
ಇದು ಧರೆಯಿಂದೆ ಮೂಡಿದ ನವಾಂಬುದಮೋ ಎನೆ ಚೂತಮೊಪ್ಪುಗುಂ ॥ ೩೪

ಮ ॥ ತರದಿಂದಂಕುರಮಂ ಕುರಪ್ರಕರದಿಂದಂ ಪಲ್ಲವಂ ಪಲ್ಲವೋ
ತ್ಕರದಿಂದಂ ಕುಸುಮಂ ಲಸತ್ಕುಸುಮದಿಂ ಚಂಚತ್ಫಲಂ ತತ್ಫಲೋ ।
ತ್ಕರದಿಂ ಚಾರುಶುಕಂ ಶುಕಾವಳಿಗಳಿಂ ಭೃಂಗಾಳಿಯಿಂ
ಪರಪುಷ್ಟಂ ಪರಪುಷ್ಟಪೋತಕಕುಲಂ ಪೊಣ್ಮಿರ್ಪುದಿಮ್ಮಾವಿನೊಳ್ ॥ ೩೫

ಚಂ ॥ ಸಲೆ ಸಹಕಾರದಲ್ಲಿ ಕೆಲವಂಕುರಮಂ ಕೆಲವಾಪ್ರಸೂನಮಂ
ಕೆಲವು ಫಲಂಗಳಂ ಮಿಸುಪಚಂಚುಗಳಿಂ ನವನಾಸಿಕಂಗಳಿಂ ।
ತೊಲಗದೆ ಜಿಹ್ವೆಯಿಂ ಕರ್ದುೞ್ಕಿ ವಾಸಿಸಿ ಪೀರ್ದುೞಿ ಸೊರ್ಕುತುಂ ಕರಂ
ನಲಿಯುತೆ ಮಿಾೞಿ ತೊಂಡುಗೆಡೆಯುತ್ತೆ ಪಿಕಾಳಿ ಶುಕಾಳಿಯೊಪ್ಪುಗುಂ ॥ ೩೬

(ಮೊಗ್ಗೆ) ಹೂವು, ಕಿರುಗಾಯಿಗಳು, ದೋರೆಹಣ್ಣು, ಮಾಗಿದಹಣ್ಣು, ಮಧುರವಾದ ಕೂಜಿತದಿಂದ ಒಪ್ಪುವ ದುಂಬಿಗಾನ, ಕಡುಕೊಬ್ಬಿ ಚಪ್ಪರಿಸುವ ರಾಜಶುಕಗಳಿಂದ ಒಪ್ಪುವ ಮಾವಿನಮರಗಳು ಇವುಗಳಿಂದ ಆ ವನವು ಶೋಭಿಸಿತ್ತು. ೩೪. ಅಲ್ಲೊಂದು ಮಾವಿನಮರ; ಅದು ರತಿರಾಜ ಮನ್ಮಥನ ಭದ್ರ ಗಜವೊ, ಚೈತ್ರನ ರಾಜಧಾನಿಯೊ, ವನಲಕ್ಷ್ಮಿಗೆ ಎತ್ತಿಸಿದ ಪೀಲಿಯಛತ್ರಿಯೊ, ವಸಂತನು ಶಶಿಯ ಪ್ರೀತಿಗಾಗಿ ಸಲಹಿದ ಕಲ್ಪವೃಕ್ಷವೊ, ಅಥವಾ ನೆಲದಿಂದೊಗೆದ ನವಮೇಘವೊ ಎಂಬಂತೆ ಶೋಭಿಸುತ್ತಿದೆ. ೩೫. ಆ ಇನಿದಾದ ಮಾವಿನಮರ; ಅದರಿಂದ ಮೊಳಕೆಗಳು, ಅವುಗಳಿಂದ ಚಿಗುರು, ಚಿಗುರಿನಿಂದ ಹೂವು, ಹೂವಿನಿಂದ ಪ್ರಕಾಶಿಸುವ ಫಲ, ಫಲಕ್ಕೆ ಬಂದೆರಗುವ ಗಿಳಿಗಳು, ಅವುಗಳಿಂದ ದುಂಬಿಗಳು, ಅವುಗಳಿಂದ ಕೋಗಿಲೆಗಳು, ಅವುಗಳಿಂದ ಕೋಗಿಲೆ ಮರಿಗಳು ಹೀಗೆ ಆ ಇಮ್ಮಾವಿನಲ್ಲಿ ಹುದುಗಿ ಬೆಳಗುತ್ತಿವೆ. ೩೬. ಮನೋಹರವಾದ ಸಹಕಾರ (ಮಾವು) ದಲ್ಲಿ ಕೆಲವು ಅಂಕುರಗಳನ್ನು ಕೆಲವು ಹೂವುಗಳನ್ನು ಕೆಲವು ಫಲಗಳನ್ನು ತಮ್ಮ ಚೂಪಾದ ಕೊಕ್ಕುಗಳಿಂದ, ಮೂಗುಗಳಿಂದ, ಜಿಹ್ವೆ (ನಾಲಗೆ) ಗಳಿಂದ ಕ್ರಮವಾಗಿ ಕುಕ್ಕಿ, ಮೂಸಿ ನೋಡಿ, ಹೀರಿ ಸೊಕ್ಕಿರುವ ಕೋಗಿಲೆ ಮತ್ತು ಗಿಳಿಗಳು ಕಲರವ ಮಾಡುತ್ತಿದ್ದವು.

ಕಂ॥ ಕಾವಂಗೆಂದು ವಸಂತಂ
ಭಾವಿಸಿ ಸಮೆದಿಟ್ಟ ನೀಲದರಮನೆಯೆನಿಕುಂ।
ಮಾವಿನ ಹೂವಿನ ಕಾವಿನ
ತಾವಿನ ಮೊದಲಿಂದೆ ತೀವಿದಳಿಗಳ ಬಳಗಂ॥ ೩೭

ಬಿರಿಯಲ್ ಪೊಂಗಿದ ಪಣ್ಗಳ
ಸಿರೆಯುಱಿದಲ್ಲಿರಿಸಿ ಚಂಚುಪುಟದಿಂ ಸವಿಯಂ।
ಬರೆತೆಗೆದು ತಣಿವು ತವಕಮ
ನರಳ್ಚುತ್ತಿರೆ ಮೆಱೆದುದಾಮ್ರದೊಳ್ ಶುಕನಿಕರಂ॥ ೩೮

ಬಿಗಿಯಪ್ಪಿ ಮೊಗಮನಿಟ್ಟಾ
ಲಿಗಳವು ನಸುಮುಚ್ಚಿ ಪಕ್ಷಯುಗಮೆಳಲೆ ರಸಂ।
ದೆಗೆವ ದನಿ ನಿಮಿರೆ ನಾಲಗೆ
ಚಿಗುರುತ್ತಿರೆ ಸವಿದುದೊಂದು ಗಿಳಿ ತನಿವಣ್ಣಂ॥ ೩೯

ಎಳಸಿ ನೆಗೆತಂದು ಮಿಕ್ಕ
ಗ್ಗಳಿಸುತುಮಿರ್ದಂತಿರಪ್ಪೆ ಮಧುರರಸಂ ಪೆ।
ಗ್ಗಳಿಸೆ ಲವಲವಿಸುತುಂ ಪ
ಣ್ಗಳೊಳಳ್ದುದದೊಂದು ರಾಜ ಶುಕನತಿಭರದಿಂ॥ ೪೦

ವ॥ ಮತ್ತಮಲ್ಲದೆ

ಕಂ॥ ಅರಳೆಲೆ ಮೇಲಾಡುತ್ತಿರೆ
ಭರದಿಂ ಮಾಂಗಾಯ್ಗಳೊಲೆಯೆ ಕೆಲಬಲದೊಳ್ ನಿಂ।

೩೭. ಆ ಮಾವಿನ ಮರವು ವಸಂತನು ಕಾಮನಿಗೋಸ್ಕರ ಮಾಡಿಸಿದ ನೀಲದ ಅರಮನೆ ಎಂಬಂತೆ ಇತ್ತು. ಆ ಮಾವಿನ ಹೂವಿನ, ಕಾವಿನ, ತಾವಿನ ನೆಲೆಗಳಲ್ಲಿ ದುಂಬಿಗಳ ಬಳಗವು ಮೊರೆಯುತ್ತಿತ್ತು. ೩೮. ಮಾವಿನಮರದಲ್ಲಿ ಮಾಗಿದ ಹಣ್ಣುಗಳು ಬಿರಿದಿವೆ. ಅವುಗಳ ಸರವನ್ನು ಗುರ್ತಿಸಿ, ಚಂಚುಪುಟವನ್ನು ಅದಕ್ಕೆ ಚುಚ್ಚಿ, ಹಣ್ಣಿನ ಸವಿಯನ್ನು ಬರಸೆಳೆದು ಗಿಳಿಗಳು ತಣಿದು ನಲಿಯುತ್ತಿವೆ. ೩೯. ಅಲ್ಲಿ ಒಂದು ಗಿಳಿ; ಅದು ಒಂದು ತನಿ ಹಣ್ಣನ್ನು ಬಿಗಿದಪ್ಪಿ, ಮುಖವನ್ನಿಟ್ಟು, ಕಣ್ಣುಗಳನ್ನು ನಸುಮುಚ್ಚಿ, ರೆಕ್ಕೆಗಳು ಸ್ತಬ್ಧವಾಗಿ, ರಸವನ್ನು ಹೀರುವ ದನಿ ನಿಮಿರೆ, ನಾಲಗೆ ಚಪ್ಪರಿಸುತ್ತಾ ಸವಿಯುತ್ತಿದೆ. ೪೦. ಅಲ್ಲೊಂದು ರಾಜ ಶುಕವು ರುಚಿಬಯಸಿ, ನೆಗೆದು ಬಂದು ಅತಿಶಯವಾಗಿ ಇದ್ದಂತೆಯೇ ಹಣ್ಣನ್ನು ಅಪ್ಪಿ ಕೊಳ್ಳಲು ಅದರಿಂದ ಮಧುರರಸವು ಪೆಗ್ಗಳಿ (ಚಿಮ್ಮಿ) ಸಿತು. ಆಗ ಅದು ಅತ್ಯಾಶೆಯಿಂದ ಹಣ್ಣುಗಳಲ್ಲಿಯೇ ಮಗ್ನವಾಯಿತು. ವ॥ ಅಲ್ಲದೆ, ೪೧. ಆ ಮಾವಿನ ಮರವು

ದರಗಿಳಿಯ ತೊದಳ್ನುಡಿ ಬಿ
ತ್ತರಿಸೆ ವಸಂತನ ಕುಮಾರನೆನಿಸಿತ್ತಾಮ್ರಂ ॥ ೪೧

ಅಂತಂತೆ ನಲಿದು ನಾಲಗೆ
ತೀಂತೆ ಮಿಗಲ್ ಕಳಿಕೆಗೆಳಸಿ ಚಂಚುವನಿಟ್ಟೋ ।
ರಂತೆ ಸವಿ ಸವಿದು ಸೊರ್ಕಿ ನಿ
ರಂತಂ ಕರೆದತ್ತು ಮಾವಿನೊಳ್ ಪರಪುಟ್ಟಂ ॥ ೪೨

ಅಳಿ ಗಿಳಿ ಪಿಕಕುಲರವದಿಂ
ನೆಳಲಿಂ ರೂಪಿಂ ಫಲಂಗಳಿಂ ಪೂವಿಂದಂ ।
ಬಳಸಿ ತಣಿಪುವುದು ಪೊಸಮಾ
ವೆಳಸಿದ ಪಾಂಥಪ್ರತಾನ ಪಂಚೇಂದ್ರಿಯಮಂ । ೪೩

ತಿಳಿನೀರಿಂ ತಾವರೆಯಿಂ
ಕಳಹಂಸೆಯಿನೆಸೆವುದಲ್ಲಿ ಸರಸೀಷಂಡಂ ।
ತಳಿರಿಂ ನನೆಯಿಂ ಪೂವಿಂ
ಫಳಂಗಳಿಂದೆಸೆವುದಲ್ಲಿ ಚೂತಕುಜಾತಂ ॥ ೪೪

ಪಿಕಕುಲದ ಸೊರ್ಕು ಮಧುಕರ
ನಿಕರದ ಮದವರಗಿಳಿಗಳ ಗರ್ವಂ ನವಚೂ ।

ವಸಂತನ ಕುಮಾರನಂತೆ ಇತ್ತು. ಅರಳೆಲೆ ಮೇಲೆ ಆಡುತ್ತಿವೆ, ಮಾಂಗಾಯ್ಗಳು ಕೆಲಬಲಗಳಲ್ಲಿ ತೊನೆಯುತ್ತಿವೆ. ಅರಗಿಳಿಗಳ ತೊದಲ್ನುಡಿಗಳು ಬಿತ್ತರಿಸುತ್ತಿವೆ. ಇವೆಲ್ಲವುಗಳಿಂದ ಮಾವಿನಮರವು ಕುಮಾರನಂತೆ ಇತ್ತು. ೪೨. ಅಲ್ಲೊಂದು ಕೋಗಿಲೆ, ಅದು ಹಾಗೆಯೇ ನಲಿದು, ನಾಲಗೆಯ ತೀಟೆಗೆ ಮಾವಿನ ಚಿಗುರಿಗೆ ಆಸೆಪಟ್ಟು, ತನ್ನ ಚಂಚುವನ್ನಿಟ್ಟು, ರಸವನ್ನು ಚೆನ್ನಾಗಿ ಸವಿದು, ಸೊಕ್ಕಿ, ಒಂದೇ ಸಮನೆ ಕೂಗುತ್ತಿತ್ತು. ೪೩. ಅಲ್ಲಿರುವ ಪೊಸ ಮಾವಿನಮರಗಳು ದಾರಿಗರ ಪಂಚೇಂದ್ರಿಯಗಳನ್ನು (ಕ್ರಮವಾಗಿ ಕಿವಿ-ಮೈ-ಕಣ್ಣು ನಾಲಗೆ-ಮೂಗು) ದುಂಬಿ–ಗಿಳಿ–ಕೋಗಿಲೆಗಳ ಮಧುರ ಧ್ವನಿಯಿಂದಲೂ, ನೆಳಲಿನಿಂದಲೂ, ರೂಪಿನಿಂದಲೂ, ಹಣ್ಣುಗಳಿಂದಲೂ, ಹೂವುಗಳಿಂದಲೂ, ತಣಿಸುತ್ತಿತ್ತು. ೪೪. ಅಲ್ಲಿಯ ತಾವರೆ ಕೊಳಗಳು ತಿಳಿನೀರಿನಿಂದಲೂ, ತಾವರೆಯಿಂದಲೂ, ಕಳಹಂಸೆಗಳಿಂದಲೂ ಪ್ರಕಾಶಿಸುತ್ತಿವೆ. ಮಾವಿನ ಮರಗಳು ತಳಿರಿನಿಂದಲೂ, ನನೆಯಿಂದಲೂ, ಹೂವಿನಿಂದಲೂ ಫಲಗಳಿಂದಲೂ ಬೆಳಗುತ್ತಿವೆ. ೪೫. ಕೋಗಿಲೆಗಳ ಸೊಕ್ಕು, ದುಂಬಿಗಳ ಮದ, ಅರಗಿಳಿಗಳ ಗರ್ವಗಳು ಪೊಸಮಾವಿನಮರ, ಮಲ್ಲಿಗೆ, ದಾಳಿಂಬೆಗಳ ಚಿಗುರು–ಫಲಗಳಿಂದ ಉದ್ಯಾನವು

ತಕುಜಂ ಮಲ್ಲಿಗೆ ದಾಡಿಮ
ನಿಕಾಯಮಂಕುರದೆ ಪುಷ್ಪದಿಂ ಫಲದಿಂದಂ ॥ ೪೫

ವ॥ ಮತ್ತಮಲ್ಲದೆಯುಂ,

ಕಂ॥ ಬೇರಿಂದಂ ನೀರುಂಡಾ
ಬೇರಿಂದಗ್ರಂಬರಂ ಫಲಂಗಳ ನೀವೆಂ ।
ಧಾರಿಣೆಗೆಂಬಂತಿರೆ ಫಲ
ಪೂರಿತ ಪನಸದ್ರುಮಂಗಳೆಸೆದುವು ಬನದೊಳ್ ॥ ೪೬

ನೀರೆಱೆದುಪಕಾರಕ್ಕೆಳ
ನೀರಂ ರುಚಿವೆರಸು ತೀವಿ ವನಪಾಲಕರಂ ।
ಪಾರುತ್ತಿರ್ಪಂತಿರ್ಪುವು
ಸಾರಾಯ ಫಲಾಳಿನಾಳಿಕೇರಂ ಬನದೊಳ್ ॥ ೪೭

ವನಲಕ್ಷ್ಮಿಗೆ ಸಕಲವಿಲಾ
ಸಿನಿಯರ್ ಬಳೆದೋಳ್ಗಳಿಂದೆ ಚಾಮರಮಿಕ್ಕಲ್ ।
ತನ ತನಗೆ ನಿಂದರೆನೆ ತದ್
ವನದೊಳ್ ಪೊಂಬಾಳೆಯಿಂದೆ ಪೂಗಮದೆಸೆಗುಂ ॥ ೪೮

ಕುಸುಮಶರಂಗೆ ವಸಂತಂ
ಪೊಸ ಪೊಂಗಳಸಂಗಳಲ್ಲಿ ಸೌರಭ್ಯ ಸುಧಾ ।

ಶೋಭಿಸುತ್ತಿತ್ತು. ವ॥ ಆದೂ ಅಲ್ಲದೆ, ೪೬. ಬೇರಿನಿಂದ ನೀರನ್ನು ಹೀರಿದ ಹಲಸಿನ ಮರಗಳು ಬೇರಿನಿಂದ ತುದಿಯವರೆಗೆ ಫಲಗಳನ್ನು ಧಾರುಣಿಗೆ ಕೊಡುವೆವು ಎನ್ನುತ್ತಿವೆಯೊ ಎಂಬಂತೆ ಹಣ್ಣು ಬಿಟ್ಟವೆ. ಇಂಥ ಹಲಸಿನ ಮರಗಳಿಂದ ಉದ್ಯಾನವು ಬೆಳಗುತ್ತಿದೆ. ೪೭. ಅಲ್ಲಿಯ ತೆಂಗಿನಮರಗಳು, ಅವು ತಮಗೆ ನೀರೆರೆದ ಉಪಕಾರಕ್ಕಾಗಿ ರುಚಿಯಾದ ಎಳನೀರನ್ನು ತುಂಬಿ ವನಪಾಲಕರನ್ನು ನೋಡುತ್ತಿವೆಯೊ ಎಂಬಂತೆ ಇರುವ ಒಳ್ಳೆಯ ನಾರಿಕೇಳವೃಕ್ಷಗಳು ಆ ವನದಲ್ಲಿದ್ದವು. ೪೮. ಆಲ್ಲಿರುವ ಅಡಕೆ ಮರಗಳು; ಅವು ವನ ಲಕ್ಷ್ಮಿಗೆ ಸಕಲವಿಲಾಸಿನಿಯರೂ ತಮ್ಮ ಬಳೆತೋಳುಗಳಿಂದ ಚಾಮರವನ್ನು ಹಾಕುವುದ ಕ್ಕಾಗಿ ತನತನಗೆ ಎಂದು ಬಂದು ನಿಂದಿರುವರೊ ಎಂಬಂತೆ ಹೊಂಬಾಳೆಯಿಂದ ಶೋಭಿಸು ತ್ತಿವೆ. ಇಂಥ ಅಡಕೆಮರಗಳು ಆ ವನದಲ್ಲಿ ಪ್ರಕಾಶಿಸುತ್ತಿದ್ದವು. ೪೯. ಫಲಭಾರದಿಂದ ಬೆಳಗುವ ಮಾತುಲುಂಗ ವೃಕ್ಷಗಳು ; ಅವು, ಹೂ ಬಾಣನಾದ ಮನ್ಮಥನಿಗೆ ವಸಂತನು

ರಸಮಂ ತೀವಿರಿಸಿದವೋ
ಲೆಸೆವುವು ಫಳಭಾರಮಾತುಳಂಗವ್ರಾತಂ ॥ ೪೯

ಕಂ॥ ಬಾಗುತೆ ಬಲಿಯುತೆ ಪೊಳೆದಿನಿ
ದಾಗುತೆ ದಳವೇಱಿತಿದಿಡಿದು ಹಿಗ್ಗುತೆ ಪ।
ಣ್ಣಾಗುತೆ ಕಾಯ್ಗಳ್ ಪೋಱಿಮಡೆ
ಬೀಗುತ್ತುಂ ಬೆಳೆದುವಲ್ಲಿ ಕದಳೀಷಂಡಂ ॥ ೫೦

ವ॥ ಅಂತುಮಲ್ಲದೆಯುಂ,

ಕಂ॥ ಅಳಿಗಳ ಗಿಳಿಗಳ ಕೋಗಿಲೆ
ಗಳ ಕಳ ಹಂಸೆಗಳ ಪಾರಿವಂಗಳ ಕೋಕಂ।
ಗಳ ಪುರುಳಿಗಳ ನವಿಲ್ಗಳ
ಕೊಳರ್ವಕ್ಕಿಗಳೆಸೆವ ಮನದ ಬಿನದಂ ವನದೊಳ್ ॥ ೫೧

ನಲಿದು ಕೊರಲೆತ್ತಿ ಕುಕಿಲಿಱಿ
ದುಲಿದುಂ ಸುಳಿದೆಳಸಿ ಬಳೆಸಿ ಬಳಿಸಂದು ಪಳಂ।
ಚಲೆದೊಲೆದು ಪಕ್ಕಮಂ ಬಿ
ರ್ಚಿ ಲಲ್ಲೆಗೆಯ್ದುತ್ತು ಪಾರಿವಂ ಪಾರಿವದೊಳ್ ॥ ೫೨

ಚಾರುತರಂ ನಿರ್ಮಲಜಲ
ಪೂರಂ ಸೌರಭ್ಯಮುದಿತಮದ ಮಧುಕರ ಝೇಂ।

ಹೊಸ ಹೊನ್ನ ಕಲಶಗಳಲ್ಲಿ ಸುವಾಸನೆಯುಳ್ಳ ಸುಧೆಯನ್ನು ತುಂಬಿ ಇರಿಸಿರುವನೋ ಎಂಬಂತಿವೆ. ೫೦. ಅಲ್ಲಿಯ ಬಾಳೆಯ ಮರಗಳು, ಅವು ಬಾಗಿ, ಬಲಿತು, ಹೊಳೆದು, ಮಾಗಿ, ಹೂವಿನ ಎಸಳೇರಿ, ಕಿಕ್ಕಿರಿದು, ಹಿಗ್ಗಿ, ಹಣ್ಣಾಗಿ, ಕಾಯಿಗಳು ಹೊರಬೀಳುತ್ತಿರಲು ಅಲ್ಲಿ ಬೀಗಿ ಬೆಳೆದಿವೆ. ವ॥ ಅದೂ ಅಲ್ಲದೆ ೫೧. ದುಂಬಿಗಳು, ಗಿಳಿಗಳು, ಕೋಗಿಲೆಗಳು, ಕಲಹಂಸೆಗಳು, ಪಾರಿವಾಳಗಳು, ಚಕ್ರವಾಕ ಪಕ್ಷಿಗಳು, ಪುರುಳಿಗಳು, ನವಿಲುಗಳು ಹಾಗೂ ನೀರು ಹಕ್ಕಿಗಳು ಇವುಗಳಿಂದ ಆ ವನವು ಮನೋಹರವಾಗಿತ್ತು. ೫೨. ಆ ವನದಲ್ಲಿಯ ಪಾರಿವಾಳಗಳು; ಅವು ಒಂದನ್ನೊಂದು ಕಂಡು, ನಲಿದು, ಕೊರಲೆತ್ತಿ, ಕುಕಿಲಿಱಿದು, ಉಲಿದು, ಸುಳಿದು, ಎಳಸಿ, ಬಳೆಸಿ, ಹತ್ತಿರಕ್ಕೆ ಬಂದು, ಮೈಮೇಲೆ ಹಾಯ್ದು, ರೆಕ್ಕೆಯನ್ನು ಬಿಚ್ಚಿ, ಅನುನಯ ಮಾಡುತ್ತಿದ್ದವು. ೫೩. ಅಲ್ಲಿಯ ಕೊಳಗಳು; ಅವು ಮನೋಹರವಾದ ನಿರ್ಮಲವಾದ ಜಲಪೂರ, ಸೌರಭದಿಂದ ಹರ್ಷಗೊಂಡ

ಕಾಱಂ ಹಂಸಕುಲ ಕ್ರೇಂ
ಕಾರಂ ರಾಜೀವಭರಿತ ನವಕಾಸಾರಂ ॥ ೫೩

ವ॥ ಅಂತುಮಲ್ಲದೆಯುಂ

ಚಂ॥ ಸುರರ ನಿವಾಸದಂತನಿಮಿಷಪ್ರಕರಂ ನಭದಂತಿರಬ್ಜಬಂ
ಧುರ ಮಧುಮಾಸದಂತೆ ಸಿತಪಕ್ಷಯುತಂ ರಥದಂತೆ ಚಕ್ರವಿ ।
ಸ್ತರಮುರುಪದ್ಮಜಾಂಡದವೊಲಾತ್ತರಸದ್ಭುವನಾಶ್ರಯಂ ಧನು
ರ್ಧರರ ಕಳಾಪದಂತೆ ರಮಣೀಯ ಶಿಲೀಮುಖ ಸಂಕುಳಂ ॥ ೫೪

ಕಂ॥ ನಳಿನದ ಕರ್ಣಿಕೆಯೊತ್ತಿನೊ
ಳ್ಪವಡೆ ಕಣ್ಮುಚ್ಚಿ ಮಗ್ಗುಲಿಕ್ಕಿಯಜಸ್ರಂ ।
ತಳರದೆ ನಿದ್ರಾಸುಖದಿಂ
ಕಳಹಂಸೆಯ ಮಱಿಗಳಿರ್ಪುವಂತಾ ಕೊಳನೊಳ್ ॥ ೫೫

ವ ॥ ಇಂತೊಪ್ಪುವ ಸರೋವರದೊಳೊಂದು ಕಳಹಂಸಂ ಕಾಂತೆಯನಗಲ್ದು

ಕಂ॥ ಅತಿಭರದಿಂ ನವಕುವಲಯ
ತತಿಯೊಳ್ ಕಾಸಾರದೊಳ್ ಕುಶೇಶಯ ಚಯದೊಳ್ ।

ಮದಿಸಿದ ದುಂಬಿಗಳ ಝೇಂಕಾರ, ಹಂಸಗಳ ಕ್ರೇಂಕಾರ ಮತ್ತು ತಾವರೆಗಳಿಂದ ಅಲಂಕೃತ ವಾಗಿವೆ. ವ॥ ಅದೂ ಅಲ್ಲದೆ—೫೪. ಅಲ್ಲಿಯ ಕೊಳಗಳು, ಅವು ಸುರರ ನಿವಾಸ (ದೇವಲೋಕ) ದಂತೆ ಅನಿಮಿಷ ಪ್ರಕರ ಎಂದರೆ ದೇವಲೋಕವು ಬಿಡುಗಣ್ಣರಿಂದ ಕೂಡಿ ರುವಂತೆ ಕೊಳಗಳು ಮೀನು (ಅನಿಮಿಷ) ಗಳಿಂದ ತುಂಬಿವೆ. ನಭದಂತೆ ಅಬ್ಜ ಬಂಧುರ- ನಭವು ಅಬ್ಜ (ಕಮಲಜನಾದ ಬ್ರಹ್ಮ)ನಿಂದ ಮನೋಹರ; ಕೊಳವು ಅಬ್ಜ–ಕಮಲ ಗಳಿಂದ ಸುಂದರ; ಮಧುಮಾಸ (ವಸಂತವು) ಸಿತಪಕ್ಷ–ಶುಕ್ಲ ಪಕ್ಷದಿಂದ ಕೂಡಿದೆ; ಕೊಳವು ಬಿಳಿಯ ರೆಕ್ಕೆಯ ಹಂಸಗಳಿಂದ ಕೂಡಿದೆ. ರಥದಂತೆ ಚಕ್ರವಿಸ್ತರ ಎಂದರೆ ರಥವು ಚಕ್ರಗಳಿಂದ ಕೂಡಿರುವಂತೆ ಕೊಳವು ಚಕ್ರವಾಕ ಪಕ್ಷಿಗಳಿಂದ ವಿಸ್ತೃತವಾಗಿದೆ. ಪದ್ಮ ಜಾಂಡ (ಬ್ರಹ್ಮಾಂಡ)ವು ಭುವನ (ಲೋಕ)ಗಳಿಗೆ ಆಶ್ರಯ, ಕೊಳವು ಭುವನ (ನೀರು)ಕ್ಕೆ ಆಶ್ರಯವಾಗಿದೆ. ಧನುರ್ಧರರ ಕಳಾಪವು ರಮಣೀಯ ಶಿಲೀಮುಖ (ಬಾಣ) ಗಳಿಂದ ಕೂಡಿದೆ, ಕೊಳವು ಶಿಲೀಮುಖ (ದುಂಬಿ) ಗಳಿಂದ ಕೂಡಿ ರಮ್ಯವಾಗಿದೆ. ೫೫. ಆ ಕೊಳದಲ್ಲಿಯ ತಾವರೆಗಳು, ಅವುಗಳ ಕರ್ಣಿಕೆಯ ಮಗ್ಗುಲಲ್ಲಿ ಮಲಗಿ, ಕಣ್ಮುಚ್ಚಿ, ಮಗ್ಗು ಲಿಕ್ಕಿ, ಯಾವಾಗಲೂ ಕದಲದೆ ನಿದ್ರಾಸುಖದಲ್ಲಿವೆ ಕಳಹಂಸೆಯ ಮರಿಗಳು. ವ॥ ಹೀಗಿ ರುವ ಆ ಸರೋವರದಲ್ಲಿಯ ಒಂದು ಹಂಸವು ತನ್ನ ಕಾಂತೆಯನ್ನಗಲಿ–೫೬. ಹೀಗೆ ಅಗಲಿದ ಹಂಸವು ಅತಿ ಭರದಿಂದ ನೂತನ ನೈದಿಲೆಯ ಗುಂಪಿನಲ್ಲಿ, ಕೊಳದಲ್ಲಿ, ಕಮಲಗಳ ತಂಡ

ಲತೆವನೆಯೊಳ್ ವನದೊಳ್ ಪುಳಿ
ನತಳದೊಳಱಸಿದುದು ಕಾಂತೆಯಂ ಕಳಹಂಸಂ ॥ ೫೭

ಪುಳಿನಮನಡಿಗಡಿಗೇಱುತೆ
ಕೊಳನೊಳಗಡಿಗಡಿಗೆ ಪೊಕ್ಕು ಪೊಱಮಡುತೆ ಲತಾ ।
ವಳಿಗಳೊಳಡಿಗಡಿಗಾಲಿಸು
ತಳವಳದಡಿಗಡಿಗೆ ಬಳಲುತಿರ್ದುದು ಹಂಸಂ ॥ ೫೭

ಬಱಿದೆ ಗಳಗಳನೆ ನಡೆವುದು
ಪೆಱಸಾರ್ವುದು ಬೆರ್ಚುವುದು ಬಳಲ್ವುದು ಮತ್ತಂ ।
ಳ್ಚಱಿಲಿರ್ಪುದು ಕಣ್ಗಳನರೆ
ದೆಱೆವುದು ನೆನೆನೆನೆದು ಕಾಂತೆಯಂ ಕಳಹಂಸಂ ॥ ೫೮

ಇರೆ ಸಿರಿ ಬರ್ಪಂದದೆ ಸುಂ
ದರಿ ಬರೆ ಪರಿತಂದು ಚಂಚುಗೂಡುತೆ ಪಕ್ಷಾಂ ।
ತರದೊಳ್ ಮುಸುಂಕಿ ಬಿಬ್ಬಿರ
ಬಿರಿವಂತಪ್ಪಿದುದು ದೇಹವೊಂದೆಂಬಿನೆಗಂ ॥ ೫೯

ವ॥ ಮತ್ತವೊಂದೆಡೆಯೊಳ್

ಉ ॥ ಕಾಮನ ಬಾಣದಿರ್ಕೆವನೆಯೋ ಭ್ರಮರಾಳಿಯ ಸತ್ರಸಾಲೆಯೋ
ಭೂಮಿಯದೊಂದು ಗಂಧಗುಣವಿರ್ಪೆಡೆಯೋ ವಿಲಸತ್ ಸದಾಗತಿ ।

ದಲ್ಲಿ, ಬಳ್ಳಿ ಪೊದೆಯಲ್ಲಿ, ವನದಲ್ಲಿ, ಮರಳುದಿಣ್ಣೆಗಳಲ್ಲಿ ತನ್ನ ಕಾಂತೆಯನ್ನು ಹುಡುಕುತ್ತಿತ್ತು. ೫೭. ಮರಳು ದಿಬ್ಬಗಳನ್ನು ಮತ್ತೆ ಮತ್ತೆ ಏರುತ್ತಾ, ಕೊಳದಲ್ಲಿ ಮತ್ತೆ ಮತ್ತೆ ಹೊಕ್ಕು; ಹೊರಬಂದು, ಪೊದೆಗಳಲ್ಲಿ ಪುನಃ ಪುನಃ ಆಲಿಸುತ್ತಾ ಸುಸ್ತಾಗಿ ಮತ್ತೆ ಮತ್ತೆ ಬಳಲುತ್ತಿತ್ತು ಆ ಅಗಲಿದ ಹಂಸ. ೫೮. ಸುಮ್ಮನೆ ಗಳಗಳ ನಡೆಯುವುದು, ಹೊರಕ್ಕೆ ಹೋಗಿ ನೋಡುವುದು, ಬೆಚ್ಚುವುದು, ಬಳಲುವುದು, ಮತ್ತೆ ಎಚ್ಚರಿಕೆಯಿಂದಿರುವುದು, ಕಣ್ಣುಗಳನ್ನು ಅರ್ಧತೆಗೆದು ಕಾಂತೆಯನ್ನು ನೆನೆನೆನೆದು ನಿಡುಸುಯ್ಯುತ್ತಿತ್ತು. ೫೯. ಇದ್ದಕ್ಕಿದ್ದ ಹಾಗೆಯೇ ಆ ಕಾಂತೆ ಬಂದುದು ಆ ಹಂಸಕ್ಕೆ ಸಿರಿಬಂದಂತಾಯಿತು. ಕೂಡಲೆ ಅದು ಓಡಿ ಬಂದು ಅದರ ಕೊಕ್ಕಿಗೆ ತನ್ನ ಕೊಕ್ಕು ಕೂಡಿಸಿ, ತನ್ನ ರೆಕ್ಕೆಯನ್ನು ಅಗಲಿಸಿ ಅದರಲ್ಲಿ ಅದನ್ನು ಆಲಿಂಗಿಸಿ, ಎರಡೂ ಒಂದೇ ದೇಹವೆಂಬಂತೆ ಅವುಕಿಕೊಂಡಿತು. ವ॥ ಮತ್ತೊಂದು ಕಡೆ, ೬೦. ಅಲ್ಲೊಂದು ಹೂವಿನ ತೋಟ. ಅದು ಕಾಮನಬಾಣದ ಬತ್ತಳಿಕೆಯೋ, ದುಂಬಿಗಳ ಸತ್ರವೋ, ನೆಲದ ಗಂಧಗುಣವುಳ್ಳ ಸ್ಥಳವೋ, ಗಾಳಿಯು

ಪ್ರೇಮದೆ ಸೌರಭಂದಲೆದ ತಾಣಮೊ ಪೇಳಿಮಿದೆಂದು ಕಂಡವರ್
ಕಾಮಿಸೆ ಮಾಲೆಗಾಱರೊಸೆದೋವಿದ ಪೂವಿನ ತೋಂಟವೊಪ್ಪುಗುಂ ॥ ೬೦

ಚಂ॥ ಸುರಗಿಯ ಕಂಪು ಸಂಪಗೆಯ ಕಂಪದಿರ್ಗಂತಿಯ ಸೊರ್ಕುಗಂಪು ಪಾ
ದರಿಯಲರ್ಗಂಪು ಪಡ್ಡಲಿಯ ಕಂಪಿರವಂತಿಯ ಕಂಪು ಮೊಲ್ಲೆಯೊಂ ।
ದುರವಣೆಗಂಪು ಮಲ್ಲಿಗೆಯಕಂಪು ಸರೋಜದಕಂಪು ನೀಲನೀ
ರರುಹದ ಕಂಪು ಕೇತಕಿಯಕಂಪೆಸೆಗುಂ ಸಲೆ ಪುಷ್ಪವಾಟಿಯೊಳ್ ॥ ೬೧

ಕಂ॥ ಆ ನವಗಂಧಕ್ಕೆಳಸಿಯ
ನೂನಂ ಮಧುಕರನಿಕಾಯಮೊಲ್ದನವರತಂ ।
ನಾನಾ ಮಂಜುಳನಿನದದೊ
ಳಾನಂದಂ ಮಿಕ್ಕು ಕಂಪನೀಂಟುತ್ತಿರ್ಕುಂ ॥ ೬೨

ಬಿಗಿಯಪ್ಪಿ ಪುಷ್ಪರಸಮಂ
ತೆಗೆದೀಂಟಿ ತುಳುಂಕಿ ತೂಱಿ ತೇಂಕಾಡಿ ಮನಂ ।
ಮಿಗೆ ಸೊರ್ಕಿ ಜಿನುಗಿ ಜೀವಿಸಿ
ಮುಗಮುಗಿಸಿತ್ತೊಂದು ಮಧುಕರಂ ಮಲ್ಲಿಗೆಯೊಳ್ ॥ ೬೩

ವ॥ ಅಂತುಮಲ್ಲದೆಯುಂ

ಕಂ॥ ಧೃತಕಂಟಕಮಾದೊಡಮು
ನ್ನತಿಯಂ ಕೇತಕಿಯೊಳೆಱಗಿದುದು ಮಧುಕರನಿಂ ।

ಪ್ರೇಮದಿಂದ ಸೌರಭವನ್ನು ತಳೆದ ತಾಣವೋ ಎಂಬಂತೆ ಇತ್ತು. ಕಂಡವರು ಆಸೆಪಡು ವಂತಹ, ಹೂವಾಡಿಗರು ಬೆಳೆಸಿದ ತೋಟ ಅದು. ೬೧, ಆ ಪುಷ್ಪವಾಟಿಕೆಯಲ್ಲಿ ಎಲ್ಲೆ ಲ್ಲಿಯೂ ಸುರಗಿಯ ಸುವಾಸನೆ, ಸಂಪಿಗೆಯ ಕಂಪು, ಅದಿರ್ಮುತ್ತೆಯ ಕಟುಸುವಾಸನೆ, ಪಾದರಿಯ ಹೂಗಳ ಕಂಪು, ಪಡ್ಡಳಿ ಹೂವಿನ ಸುವಾಸನೆ, ಇರವಂತಿ, ಮೊಲ್ಲೆ, ಮಲ್ಲಿಗೆ, ಸರೋಜ, ಕನ್ನೈದಿಲೆ ಮತ್ತು ಕೇದಿಗೆಗಳ ಸುವಾಸನೆ ಹಬ್ಬಿತ್ತು. ೬೨. ಆ ನೂತನ ಸುವಾಸನೆಗೆ ಆಸೆಮಾಡಿ ಬಂದ ದುಂಬಿಗಳು ಯಾವಾಗಲೂ ಮಂಜುಳ ನಿನಾದಮಾಡುತ್ತ ಆನಂದದಿಂದ ಕಂಪನ್ನು ಹೀರುತ್ತಿದ್ದವು. ೬೩. ಅವುಗಳಲ್ಲಿ ಒಂದು ಮಧುಕರ (ದುಂಬಿ), ಅದು ಪುಷ್ಪರಸವನ್ನು ಬಿಗಿಯಪ್ಪಿ, ತೆಗೆದೀಂಟಿ, ತುಳುಂಕಿ, ತೂರಿ ತೇಂಕಾಡಿ, ಸೊಕ್ಕಿ ಜಿನುಗಿ, ಜೀವಿಸಿ,ಮಲ್ಲಿಗೆಯಲ್ಲಿ ಮುಗಮುಗಿಸಿ ಮನೋಮುಗ್ನವಾಗಿತ್ತು. ವ॥ ಅದೂ ಅಲ್ಲದೆ– ೬೪. ಕೇದಗೆ ಎಲ್ಲರಿಗೂ ತಿಳಿದಂತೆ ಧೃತಕಂಟಕ ಎಂದರೆ ಮುಳ್ಳುಉಳ್ಳದ್ದು, ಹೀಗೆ ಎಷ್ಟೇ ಕಂಟಕಗಳಿದ್ದರೂ ಮಧುಕರನಿಕರವು ಕೇತಕಿಗೆ ಎರಗಿತು ; ಹೀಗೆ ಜಗತ್ತಿನಲ್ಲಿ ಸ್ನೇಹಿತರು

ತತಿರೂಕ್ಷರಾದೊಡಂ ಸ್ನೇ
ಹಿತರಂ ಕಾಯಲ್ಕೆ ಬರ್ಪುದೇ ಧಾರಿಣಿಯೊಳ್ ॥ ೬೪

ವ॥ ಅದಲ್ಲದೆಯುಂ

ಕಂ॥ ಭದ್ರಮೆನಿಸಿರ್ದ ಕುಸುಮಲ
ಸದ್ರಸಮಂ ಪೀರ್ವ ಪದದೊಳೊಪ್ಪಿತು ಮದನಂ ।
ಮುದ್ರಿಸಿದಂಬಿನ ಲಾಕ್ಷಾ
ಮುದ್ರೆಯಿದೆಂಬಂತೆ ತೀವಿದಳಿ ನಿಕುರುಂಬಂ ॥ ೬೫

ವ॥ ಅದಲ್ಲದೆಯುಂ

ಕಂ॥ ನನೆಯಂ ಮುಂಡಾಡುತೆ ಬಲ್
ನನೆಯಂ ಬಲವಂದು ಮುಗುಳನಾಲಿಂಗಿಸಿ ಕಂ ।
ಪಿನ ಬಿರಿಮುಗುಳಂ ಚುಂಬಿಸಿ
ಯನುನಯದಿಂದಲರನಲೆದು ತೀವಿದುವಳಿಗಳ್ ॥ ೬೬

ಅಂಡಲೆದು ಜಾದಿಯಂ ಬಂ
ಡುಂಡಳಿಯಂ ಮಿಕ್ಕು ಮಧುಕರಂಗಳ್ ಭರದಿಂ ।
ಬಂಡುಣ್ಬುವೆನೆ ಸುಗಂಧಮ
ಖಂಡಿತಮತಿನುತ ರಸೋದಯಂ ಮಾಳತಿಯಾ ॥ ೬೭

ವ॥ ಅಂತುಮಲ್ಲದೆಯುಂ

ಕಂ॥ ಆ ವನದ ಕೊಳದ ಪೂಗೊಳ
ನೇವೇಳ್ವೆಂ ಹಂಸೆ ರಾಜ ಹಂಸೆಗಳಾಹಾ ।

ಎಷ್ಟೇ ಕ್ರೂರಿಗಳಾದರೂ ಕೂಡ ಅವರನ್ನು ಕೈಬಿಡುವುದಕ್ಕಾಗುತ್ತದೆಯೇ ? ವ॥ ಅದೂ ಅಲ್ಲದೆ, ೬೫. ಮಧುರವಾದ ಕುಸುಮ ರಸವನ್ನು ಹೀರುತ್ತಿರುವ ದುಂಬಿಹಿಂಡು ಮದನನು ಮುದ್ರಿಸಿದ ಅಂಬಿನ ಅರಗಿನ ಮುದ್ರೆಯೋ ಎಂಬಂತಿತ್ತು. ವ॥ ಅದೂ ಅಲ್ಲದೆ, ೬೬. ಅಲ್ಲಿಯ ದುಂಬಿಗಳು ನನೆ(ಮೊಗ್ಗು)ಯನ್ನು ಮುಂಡಾಡಿ, ಬಲ್ನನೆಯನ್ನು ಸುತ್ತಿ, ಮೊಗ್ಗುಗಳನ್ನು ಆಲಿಂಗಿಸಿ, ಸುವಾಸನೆಯ ಬಿರಿಯುತ್ತಿರುವ ಮೊಗ್ಗೆಗಳನ್ನು ಚುಂಬಿಸಿ, ಎಷ್ಟೋ ಅನುನಯದಿಂದ ಹೂವಿನಿಂದ ಹೂವಿಗೆ ಅಲೆಯುತ್ತಿದ್ದವು. ೬೭. ಅಂಡಲೆದು ಜಾಜಿಯ ಮಕರಂದವನ್ನು ಉಂಡ ಅಳಿಯನ್ನು ಮೀರಿ ಮಧುಕರಗಳು ಅದಕ್ಕಿಂತ ಮಿಗಿಲಾದ ರುಚಿಯುಳ್ಳ ಸುಗಂಧಯುತವಾದ ಮಾಲತಿಯ ಬಂಡನ್ನು ಉಣ್ಣುತ್ತಿವೆಯೋ ಎಂಬಂತಿತ್ತು. ವ॥ ಅದೂ ಅಲ್ಲದೆ ೬೮. ಆ ವನದ ಕೊಳದ ಪೂಗೊಳಗಳ ಸೌಂದರ್ಯವನ್ನು ಬಣ್ಣಿಸಲು ಸಾಧ್ಯವೆ ? ಅಲ್ಲಿಯ ಹಂಸೆಗಳು, ರಾಜಹಂಸೆಗಳು ;

ತಾವರೆ ಹೊಂದಾವರೆಗಳ್
ಮಾವಿಮ್ಮಾವಳಿ ಮದಾಳಿ ಗಿಳಿಯರಗಿಳಿಗಳ್ ॥ ೭೮

ವ॥ ಅಂತುಮಲ್ಲದೆಯುಂ

ಕಂ॥ ತವೆ ಬೆಳೆದ ಪೊಸ ಪನಸು ಬ
ಕ್ಕೆ ವಲಸು ನಳ ನಳಿಸುವಿಕ್ಷು ಪುಂಡ್ರೇಕ್ಷು ಪಳಂ ।
ಚುವ ತೆಂಗವು ಚೆಂದೆಂಗೊ
ಪ್ಪುವ ದಾಳಿಂಬಂಗಳೆಲ್ಲ ರಸದಾಳಿಂಬಂ ॥ ೭೯

ಚಂ॥ ಬನವಿದೆ ನೋಡು ಸರ್ವಸುಖಮಪ್ಪುದುಕೇಳ್ ನುಡಿಯಿಲ್ಲ ತಣ್ಣೆಲರ್
ಮನದೊಲವಿಂದೆ ತೀಡುತಿದೆ ಚೆಲ್ವು ಮನೋಹರಮಿರ್ಪುದಳ್ಕಱಿಂ ।
ದನುದಿನಮೆಯ್ದಿ ಕಿಂಪುರುಪ ಕಿನ್ನರ ಖೇಚರ ಭೂಚರಾದಿ ಮಂ
ಡನ ಮಿಥುನಂ ರತೀಶ್ವರ ಸುಖಾಬ್ಧಿಯೊಳೊಪ್ಪುಗುಮಾ ವನಾಂತದೊಳ್ ॥ ೭೦

ಚಂ॥ ಸುರತರುವೊಂದೆ ತತ್ಸುರಭಿಯೊಂದೆ ಸುರಾಪಗೆಯೊಂದೆ ನಿಶ್ಚಯಂ
ಸುರಪುರದಲ್ಲಿ ಇಲ್ಲಿ ಸುಮನಸ್ತರು ಗೋ ಪಶು ನಿರ್ಜರಾಪಗೋ
ತ್ಕರಮುಮನಂತಮೆಂದು ಗಿರಿರಾಜ ಪುರೋಪವನಾಳಿಯಲ್ಲಿಯ
ಪ್ಸರತತಿ ಕಿನ್ನರಪ್ರತತಿ ಕಿಂಪುರುಷವ್ರಜಮಿರ್ಪುದಾವಗಂ ॥ ೭೧

ಆಹಾ ! ತಾವರೆ–ಕೊಂದಾವರೆಗಳು ; ಮಾವು, ಇನಿದಾದ ಮಾವುಗಳು ; ಮದಿಸಿದ ದುಂಬಿಗಳು, ಗಿಳಿ, ಅರಗಿಳಿಗಳು, ಇವುಗಳ ಬೆಡಗನ್ನು ಹೇಗೆ ವರ್ಣಿಸುವುದು ! ವ || ಅದೂ ಅಲ್ಲದೆ, ೭೯. ಚೆನ್ನಾಗಿಬೆಳೆದ ಹೊಸ ಹಲಸು, ಬಕ್ಕೆ ಹಲಸು, ನಳನಳಿಸುವ ಕಬ್ಬು, ಪಟಾವಳಿ ಕಬ್ಬು, ತೆಂಗು ಚೆಂದೆಂಗು ; ದಾಳಿಂಬ ಹಾಗೂ ರಸವತ್ತಾದ ದಾಳಿಂಬಗಳು ಅಲ್ಲಿ ಒಪ್ಪಿದ್ದವು. ೭೦. ಇಗೊ, ಈ ವನವನ್ನು ನೋಡು ; ಇಲ್ಲಿ ಸರ್ವಸುಖಗಳು ಉಂಟು ಎಂಬ ವಿಷಯದಲ್ಲಿ ಎರಡು ನುಡಿಯಿಲ್ಲ ; ಇಲ್ಲಿ ತಂಗಾಳಿಯು ಮನೋಹರವಾಗಿ ಬೀಸುತ್ತಿದೆ. ಚೆಲ್ವು ಮೈದಾಳಿ ನಿಂತಿದೆ. ಇಲ್ಲಿಗೆ ಪ್ರತಿದಿನವೂ ಕಿಂಪುರುಷರು, ಕಿನ್ನರರು ಖೇಚರರು, ಭೂಚರರಾದಿಯಾಗಿ ಅಲಂಕೃತರಾಗಿ ಬಂದ ಸ್ತ್ರೀಪುರುಷರು ಮನ್ಮಥ ಸುಖ ಸಾಗರದಲ್ಲಿ ಮುಳುಗಿರುತ್ತಾರೆ. ೭೧. ದೇವಲೋಕದಲ್ಲಿ ಕಲ್ಪವೃಕ್ಷ, ಕಾಮಧೇನು, ದೇವಗಂಗೆಗಳು ಒಂದೊಂದೆ ಇವೆ. ನಿಜ ; ಆದರೆ ಇಲ್ಲಿ ಅಂತಹ ಕಲ್ಪವೃಕ್ಷ, ಕಾಮಧೇನು, ದೇವಗಂಗೆಗಳು ಅಸಂಖ್ಯಾತವಾಗಿವೆ ಎಂದು ಗಿರಿರಾಜನ ಪುರದ ಉಪವನದಲ್ಲಿಯ ಅಪ್ಸರೆಯರು, ಕಿನ್ನರ–ಕಿಂಪುರುಷರು ಅಲ್ಲಿ ಯಾವಾಗಲೂ ನಲಿಯುತ್ತಿದ್ದಾರೆ.

ವ|| ಮತ್ತಮಾ ಪುರದ ಬಹಿರುದ್ಯಾನಂ ನಾನಾ ಪಿಕ ಚಂಚುಸಂಚಾರಿತ ಚೂತಾಂಕುರ ಪ್ರಕರದಿಂದೊಸರ್ದು ಮಂದಾನಿಲನಿಂ ಸೂಸಿ ಮಂಜುಮಸಗಿ ಬೀಳ್ವ ಪೊಸರಸದಿಂ ವಿಕಸಿತಪ್ರಸೂನಕುಲದೊಳ್ ಕೂಡೆ ಬಂಡುಣ್ಬ ಪಟ್ಪದ ಪದಘಾತದಿಂದುದಿರ್ದ ಪರಾಗಧೂಳಿಯಿಂ ಶುಕ ತುಂಡವಿದಾರಿತ ಪಕ್ವಫಲ ಗಳಿತ ರಸಾಸಾರದಿಂ ಪರಿಮಳದ ಕೆಸಱ್ಮಸಗಿದ ವನಸ್ಥಳದೊಳ್ ಬಿನದದಿಂ ನಡೆವಲ್ಲಿ ಕಾಲ್ ಜಗುಳ್ದು ಜೋಲ್ದು ಬೀಳ್ವ ಕಳಹಂಸೆಗಳಂ ನಗುವಂತಿರರೆವಿರಿದ ಪಣ್ಗಳಿಂ ಕಣ್ಗೊಳಿಪ ದಾಡಿಮದ್ರುಮಂಗಳಿಂ- ಮತ್ತಮೊಂದೆಡೆಯೊಳ್ ವಿಾಱಿಪಾಱುವ ಪಱಿಮೆಗಳ ಪಜ್ಜೆವಿಡಿದಱಸಿ ಗಂಧವಹನನೊಡಗೂಡಿ ಬಂದೆಳೆದುಯ್ದು ಮಿಸುಗುವ ಕುಸುಮ ಕರ್ಣಿಕೆಯೊಳ್ ಕಡುಪಿಂ ಕೆಡೆಪಿ ಕೊಲ್ವುದಿದೆಂಬ ಶಂಕೆ ಭೋಂಕನೆ ಪುಟ್ಟೆ ಝುಂಕಾರರವದಿಂ ಪಲ್ಮೊರೆವಂತೆ ಸಲೆ ಮೊರೆದು ಸಂಪಗೆಯ ಕಂಪಿಂಗೆ ಕಂಪಿಸಿ ಮಲ್ಲಳಿಗೊಂಡೊಲ್ಲದೆ ಮೊಗಂದಿರುವಿ ಪರಿತಂದು ಸಾದರದಿಂ ಪೂದೋಂಟದ ಪ್ರಸೂನಕುಲಮನಂಡಲೆದು ಬಂಡುಣ್ಬಲ್ಲಿ ಬಾಯಕುಟುಕನೆಳಕುಳಿಗೊಂಡು ತೀಡುವ ಗಂಧವಹನ ಬಳಿವಿಡಿದು ಘಳಿಲನೆಳ್ದು ಪರಿಮಳದ ಪಸಿವಿನುಱವಣೆಯಡಂಗದೆ ಕಡಂಗಿ ಕಾಯ್ದು ವಸಂತರಾಜಂಗೆ ಪುಯ್ಯಲಿಡುವಂತೆ ಸೆರೆ ಸೆರೆದು ಮೊರೆವ ಮಧುಕರ ಪ್ರಕರದಿಂ, ಮತ್ತಮೊಂದೆಡೆಯೊಳ್ ತೀವಿಪೂತ ಸೇವಂತಿಗೆಯ ತೋಂಟದೊಳ್ ವಿಾಂಟುವರಿವ ಪರಿಮಳದ ಪನಿ ನೀರ ಪಳ್ಳಮಂ ದಾಂಟ

ವ|| ಮತ್ತು ಆ ಪುರದ ಹೊರಗಿನ ಉದ್ಯಾನವು ಅನೇಕ ಕೋಗಿಲೆಗಳ ಚಂಚು ಸೋಕಿದ ಚೂತಾಂಕುರಗಳಿಂದ ಒಸರಿದ ಮಂದಮಾರುತದಿಂದಲೂ, ಸೂಸಿ ಮಂಜುಮಸಗಿ ಬೀಳುವ ಹೊಸರಸದಿಂದಲೂ, ಅರಳಿದ ಹೂವುಗಳಲ್ಲಿ ಮಕರಂದವನ್ನು ಸವಿಯುವ ದುಂಬಿಗಳ ಕಾಲ ತುಳಿತದಿಂದ ಉದುರಿದ ಪರಾಗ ಧೂಳಿಯಿಂದಲೂ, ಗಿಳಿಗಳ ಕೊಕ್ಕಿನಿಂದ ಸೀಳಿದ ಪರಿಪಕ್ವವಾದ ಹಣ್ಣುಗಳಿಂದ ಸುರಿಯುತ್ತಿರುವ ರಸಸಾರದಿಂದಲೂ ಪರಿಮಳದ ಕೆಸರು ತುಂಬಿದ ವನದಲ್ಲಿ ವಿನೋದದಿಂದ ನಡೆಯುವಾಗ ಕಾಲು ಜಾರಿ ಜೋಲ್ದು ಬೀಳುವ ಕಳಹಂಸೆಗಳನ್ನು ನಗಿಸುವಂತೆ ಅರ್ಧಬಿರಿದ ಹಣ್ಣುಗಳಿಂದ ಕಂಗೊಳಿಸುವ ದಾಳಿಂಬೆಯ ಮರಗಳಿಂದಲೂ; ಮತ್ತೊಂದು ಸ್ಥಳದಲ್ಲಿ ಮೀರಿ ಓಡುತ್ತಿರುವ ದುಂಬಿಗಳ ಹೆಜ್ಜೆ ಹಿಡಿದು ಹುಡುಕಿ ಮಂದಾನಿಲನೊಡಗೂಡಿ ಬಂದು ಎಳೆದೊಯ್ದು ಮಿಸುಗುವ ಹೂವಿನ ಕರ್ಣಿಕೆಯಲ್ಲಿ ನಿರ್ಬಂಧವಾಗಿ ಕೆಡವಿ, ಇದು ತನ್ನನ್ನು ಕೊಲ್ಲುವುದೆಂಬ ಸಂಶಯವು ತಟ್ಟನೆ ಹುಟ್ಟಿ ಝೇಂಕಾರ ಶಬ್ದದಿಂದ ಹಲ್ಲುನೊರೆವಂತೆ ಚೆನ್ನಾಗಿ ಮೊರೆದು ಸಂಪಿಗೆಯ ಕಂಪಿಗೆ ನಡುಗಿ ಮೇಳವಾಗಲು ಬಯಸದೆ ಮುಖ ತಿರುಗಿಸಿ ಮುಂದೆ ಬಂದು ಹೂವಿನ ತೋಟದಲ್ಲಿರುವ ಹೂವುಗಳಲ್ಲಿನ ಮಕರಂದವನ್ನು ಆದರದಿಂದ ಉಣ್ಣುವಾಗ ಬಾಯಿಯಲ್ಲಿಯ ಗುಟುಕನ್ನು ಎಳೆದುಕೊಂಡು ಬೀಸುವ ಗಾಳಿಯನ್ನು ಅನುಸರಿಸಿ, ಬೇಗನೆ ಎದ್ದು ಸುವಾಸನೆಯ ಹಸಿವು ಅಡಗದೆ, ಬಯಸಿ, ಕಾಯ್ದು, ವಸಂತರಾಜನಿಗೆ ಹುಯ್ಯಲಿಡುತ್ತಿನೆಯೊ ಎಂಬಂತೆ ಮೊರೆಯುವ ದುಂಬಿಗಳಿಂದಲೂ; ಮತ್ತೊಂದು ಕಡೆ ಚೆನ್ನಾಗಿ ಹೂ ಬಿಟ್ಟ ಸೇವಂತಿಗೆಯ ತೋಟ, ಅಲ್ಲಿ ಪರಿಮಳದ ಹನಿಗಳ ನೀರಿನ ಹಳ್ಳವನ್ನು ದಾಟಲಾರದೆ ಇವೆ. ಎಳೆಯ ಹಂಸೆಯ ಮರಿ

ಲಾಱದ ಬಾಲಮರಾಳಂಗಳಂ ಪದ್ಮಪತ್ರದಿನೊಪ್ಪುವ ತೆಪ್ಪದೊಳಿಟ್ಟು ದಾಂಟಿಸುತಿರ್ಪ ರಾಜ ಹಂಸ ರಾಜಿಗಳಿಂ, ಮತ್ತಂ ಚಕ್ರವಾಕ ಚಕ್ರವಳಯಾಗ್ರದೊಳೊಗ್ಗಿನ ಕಮಳದ ಮೊಗ್ಗೆಯ ಗುಂಡಿಗೆಯಂ ತಂಡದೊಳಮರ್ಚಿ ಕೊಳರ್ವಕ್ಕಿಯಂ ಹೂಡಿ ದ್ರಾಕ್ಷಾರಸಪೂರಿತ ಕಾಸಾರಜಲಮಂ ಕೇತಕೀದಳದ ದೋಣಿಯೊಳ್ ವಸಂತರಾಜಂ ಕತ್ತುರಿಯ ಮಡಿಯೊಳ್ ಕಪ್ಪುರದ ಗಿಡುವಂನಟ್ಟು ಱಾಟಳಮ ನೆತ್ತಿ ಬೆಳೆಯಿಸಿದನೆಂಬಂತಿರ್ದ ಕರ್ಪೂರದ್ರುಮಂಗಳಿಂ,ಮತ್ತಮೊಂದೆಡೆಯೊಳ್ ಪಸಿದ ಮಱಿಗಿಳಿಯ ಮೊಗಮಂ ನೋಡಿ ಚಂಚುಗೂಡಿ ಕಿಸಲಯದೆಸಳ ಮಾಣಿಕ್ಯದ ಸಿಂಪಿಂ ಫಳರಸದ ಪಾಲನೆಱೆದು ತಳಿರ ತೊಟ್ಟಿಲೊಳಿಟ್ಟು ಸಣ್ಣನನೆಗಳ ನನೆಯಕ್ಕಿಯನಿಕ್ಕಿ ಪಣ್ಣಬಾಯಿನಮಣ್ಣವಳಿಯದೆ ಕೊಟ್ಟು ಚೂತವಲ್ಲಭನೆಂಬ ಪೆಸರಿಟ್ಟು ಮಂದಾನಿಳಂ ತೂಗೆ ಮಧುಕರನಿಕರಂ ಪಾಡೆ ಸಹಕಾರಕುಲ ದೊಳ್ ಸಂತಸದಿಂ ಸಲಪುತಿರ್ಪ ರಾಜಶುಕಪ್ರಕರದಿಂ, ಮತ್ತಮೊಂದು ಪೂಗೊಳದೊಳ್ ಪೆತ್ತಮ ಱಿದುಂಬಿಯಂ ಕಂಡು ಮನಂಗೊಂಡು ಪುಂಡರೀಕದೆಸಳ ಬೆಳ್ಳಿಯ ಸಿಂಪಿಂ ಪರಿಮಳದ ರಸಮನೆ ಱೆದು ಪರಾಗದ ತಿಲಕಮನಿಕ್ಕಿ ಸೌರಭದ ತುಂತುಱಿಂ ತೂಪಿಱಿದೆಸಳ ಸೋಗಿಲ ಹಸುಳೆಯಂ ಝುಂಕಾರರವದಿಂ ಜೊಂಗುಳಂಬಾಡಿ ತರಂಗದಿಂ ತೂಗಿ ವಸಂತತಿಲಕನೆಂದು ನಾಮಕರಣಮಂ ಮಾಡಿ ಬಾಳುತಿರ್ಪ ಬಾಣಂತಿ ದುಂಬಿಗಳ ಗೊಂದಣಂಗಳಿಂ, ಮತ್ತಮೊಂದೆಡೆಯೊಳ್ ಚಂದ್ರ ಕಾಂತನಿರ್ಮಿತಕೃತಕಾಚಳನಿತಂಬ ವಿಳಸಿತ ಲತಾಮಂಟಪವಳಯಸ್ಥಿತ ಪುಳಿನಸ್ಥಳ ಕುಸುಮ ತಳ್ಪ

ಗಳು, ಅವುಗಳನ್ನು ತಾವರೆ ಎಲೆಯ ತೆಪ್ಪದಲ್ಲಿಟ್ಟು ದಾಟಿಸುತ್ತಿರುವ ರಾಜ ಹಂಸೆ ಗಳಿಂದಲೂ, ಮತ್ತು ಚಕ್ರವಾಕಗಳ ಚಕ್ರವಲಯದ ಅಗ್ರದಲ್ಲಿ ಒಗ್ಗಿನ ಕಮಲದ ಮೊಗ್ಗೆಯ ಗುಂಡಿಗೆಯನ್ನು ಸಮೂಹದಲ್ಲಿರಿಸಿ, ಅದಕ್ಕೆ ಕೊಳದ ಹಕ್ಕಿಗಳನ್ನು ಹೂಡಿ, ದ್ರಾಕ್ಷಾರಸ ದಿಂದ ತುಂಬಿದ ಕೊಳದ ಜಲರಸವನ್ನು ಕೇದಗೆಯದಳದ ದೋಣಿಯಲ್ಲಿ ವಸಂತರಾಜನು ಕಸ್ತೂರಿಯ ಪಾತಿಯಲ್ಲಿ ಕರ್ಪೂರದಗಿಡವನ್ನು ನಟ್ಟು ರಾಟಳದಿಂದ ನೀರನ್ನೆತ್ತಿ ಬೆಳೆಸಿದನೋ ಎಂಬಂತಿರುವ ಕರ್ಪೂರದ ಮರಗಳಿಂದಲೂ, ಮತ್ತೊಂದು ಕಡೆ ಹಸಿದಿರುವ ಮರಿಗಿಳಿಗಳು, ಅವುಗಳ ಮುಖವನ್ನು ನೋಡಿ ಚಂಚುಗೂಡಿ ಚಿಗುರಿನ ಎಸಳು, ಎಂಬ ಮಾಣಿಕ್ಯ ಚಿಪ್ಪು, ಅದರಲ್ಲಿ ಫಲರಸವೆಂಬ ಹಾಲನ್ನೆರೆದು ಚಿಗುರಿನ ತೊಟ್ಟಿಲಲ್ಲಿಟ್ಟು, ಸಣ್ಣ ಮೊಗ್ಗೆಗಳೆಂಬ ನೆನೆದ ಅಕ್ಕಿಯನ್ನಿಟ್ಟು, ಹಣ್ಣಿನ ಬಾಗಿನವನ್ನು ಅಂದಗೆಡದೆ ಕೊಟ್ಟು ಚೂತವಲ್ಲಭ ಎಂದು ಹೆಸರಿಟ್ಟು, ಮಂದಾನಿಲನು ತೂಗುತ್ತಿರಲು; ದುಂಬಿಗಳು ಹಾಡುತ್ತಿರಲು, ಮಾವಿನಮರ ಗಳಲ್ಲಿ ಸಂತಸದಿಂದ ಸಲಹುತ್ತಿರುವ ರಾಜಶುಕ ಸಮೂಹದಿಂದಲೂ, ಮತ್ತೊಂದು ಹೂವಿನ ಕೊಳದಲ್ಲಿ ಹೆತ್ತ ಮರಿದುಂಬಿಯನ್ನು ಕಂಡು ಮನಸ್ಸುಮಾಡಿ ಕಮಲದ ದಳದ ಬೆಳ್ಳಿಯ ಚಿಪ್ಪಿನಲ್ಲಿ ಪರಿಮಳದ ರಸವನ್ನೆರೆದು, ಪರಾಗದ ತಿಲಕವನಿಟ್ಟು, ಸುವಾಸನೆಯ ತುಂತುರಿ ನಿಂದ ತೂಪಿರಿದ ಎಸಳ ಸೋಗಿಲ ಹಸುಳೆಯನ್ನು ಝುಂಕಾರರಸದಿಂದ ಜೋಗುಳಹಾಡಿ, ಅಲೆಗಳಿಂದ ತೂಗಿ,ವಸಂತತಿಲಕನೆಂದು ನಾಮಕರಣವಂ ಮಾಡಿ ಬಾಳುತ್ತಿರುವ ಬಾಣಂತಿ ದುಂಬಿಗಳ ಸಮೂಹಗಳಿಂದಲೂ, ಮತ್ತೊಂದು ಕಡೆಯಲ್ಲಿ ಚಂದ್ರಕಾಂತದ ಕೃತಕ

ದೊಳ್ ಕುಸುಮಾಯುಧ ಸಕಳಸುಖ ಸಾಮ್ರಾಜ್ಯಭರದಿಂ ನೆರೆವ ಹಂಸ ಕೀರ ಪಾರಾವತಂಗಳಂ ನೋಡಿ ಸಾಡೆ ನಲಿದು ಕಾಮಬಾಣಮನಿಕ್ಕಿ ಮೆಟ್ಟಿದಂತೆ ಹೂವಿನ ಪಸೆಯೊಳ್ ಮನಂ ಮುಟ್ಟಿ ಮಾಣದೆ ನೆರೆದ ವಿದ್ಯಾಧರ ಮಿಥುನಂಗಳಂ, ಇಂತು ತರುಕುಲದ ತೆಕ್ಕೆಯಿಂ ಗುಲ್ಮ ಕುಲದಿರ್ಕೆಯಿಂ ನೆಳಲ ತಣ್ಪಿಂದಂಕುರದ ಸೊಂಪಿಂ ಪಲ್ಲವದ ನುಣ್ಪಿಂ ಕುಸುಮಾವಳಿಯ ಕಂಪಿಂ ಪಣ್ ಗೊನೆಯ ಬಿಣ್ಪಿಂ ಪಕ್ವಫಲರಸದಿಂಪಿಂ ಕೋಕಿಲಧ್ವಾನದಿಂದಳಿಕುಲದ ಗಾನದಿಂ ಶುಕರವ ಪ್ರತಾನದಿಂ ಫಲರಸ ಪಾನದಿಂ ರಾಜಹಂಸಯಾನದಿಂ ಲತಾಮಂಟಪಸ್ಥಾನದಿಂ ಪರಿಕಾಲಪರ್ಬಿಂ ಪೂದೋಂಟದ ಕೊರ್ಬಿಂ ವಿಹಂಗಮ ಕುಲದುರ್ಬಿಂ ತಮಾಳವನದ ಮರ್ಬಿಂ ವಿಧ್ಯಾಧರಿಯಗುರ್ಬಿಂ ಪ್ರಸೂನಕುಲದಪರ್ಬಿಂ ಚಕ್ರವಾಕದ ಪೆರ್ಮೆಯಿಂ ಮಂದಾನಿಲನ ಕೂರ್ಮೆಯಿಂ ಇಂತು ಪುರದ ಬಹಿರುದ್ಯಾನಂ ಸಕಲ ಸೌಂದರ್ಯಮನಧಿಕತರಸುಕುಮಾರತೆಯಸುರುತರ ಭೋಗಮನುನ್ನತಕ್ರೀಡೆಯನತ್ಯುದಾರತೆಯ ನತಿಪ್ರಸನ್ನತೆಯನೊಳಕೊಂಡಿರ್ಪುದಂತುಮಲ್ಲದೆಯುಂ

ಮ॥ ಸ್ರ॥ ಪೊಗಮಬ್ಜಂ ಲೋಚನಂಗಳ್ ಕುವಲಯಮಧರಂ ಬಿಂಬಮಾನಾಸಿಕಂ ಸಂ
ಪಗೆ ತೋಳ್ ಶಾಖಾನಿಕಾಯಂ ಘನಕುಚಯುಗಳಂ ಚಕ್ರವಾಕದ್ವಯಂ ನಾ।
ಭಿಗಭೀರೋದ್ಯತ್ಸರಂ ತೋಱುವ ತೊಡೆ ಕದಳೀಸ್ತಂಭಮಂಘ್ರಿ ಪ್ರವಾಳಂ
ಸೊಗಸಿಂ ತಾಪಾಗೆ ತನ್ನಂದನಮೆ ಘನ ವನಶ್ರೀಗೆ ರೂಪಾಗಿ ತೋರ್ಕುಂ॥ ೭೨

ಪರ್ವತಗಳ ತಪ್ಪಲಲ್ಲಿ ಪ್ರಕಾಶಿಸುವ ಲತಾಮಂಟಪಗಳು, ಅಲ್ಲಿರುವ ಮರಳು ದಿಣ್ಣೆಗಳು, ಅಲ್ಲಿ ಉದುರಿರುವ ಹೂವಿನ ಹಾಸಿಗೆಯಲ್ಲಿ ಮನ್ಮಥನ ಸಕಲ ಸುಖಸಾಮ್ರಾಜ್ಯದಿಂದ ನೆರೆವ ಹಂಸ–ಕೀರ–ಪಾರಿವಾಳಗಳನ್ನು ನೋಡಿ, ಚನ್ನಾಗಿ ನಲಿದು, ಕಾಮಬಾಣವನ್ನಿಕ್ಕಿ ಮೆಟ್ಟಿದಂತೆ ಹೂವಿನ ಹಸೆಯಲ್ಲಿ ಮನಸಾರೆ ಮುಟ್ಟಬಿಡದೆ ನೆರೆದ ವಿದ್ಯಾಧರ ಮಿಥುನಗಳಿಂದಲೂ, ಹೀಗೆ ಮರಗಳ ತೆಕ್ಕೆಯಿಂದಲೂ, ಪೊದೆಗಳ ಇರುವಿಕೆಯಿಂದಲೂ, ನೆಳಲಿನ ತಂಪು, ಅಂಕುರದ ಸೊಂಪು, ಪಲ್ಲವದನುಣುಪು, ಹೂವುಗಳ ಕಂಪು, ಹಣ್ಣಿನಗೊನೆಗಳಗಡಸು, ಮಾಗಿದ ಹಣ್ಣಿನ ಇಂಪುಗಳಿಂದಲೂ, ಕೋಗಿಲೆಯ ಧ್ವನಿ, ಅಳಿಕುಲದ ಗಾನ, ಗಿಳಿಗಳ ಗುಂಪುಗಳು, ಫಲರಸಪಾನ, ರಾಜಹಂಸಯಾನ, ಲತಾಮಂಟಪಗಳಸ್ಥಾನ, ಪರಿಕಾಲದ ಹಬ್ಬುವಿಕೆ, ಹೂತೋಟಗಳ ಕೊಬ್ಬು, ವಿಹಂಗಕುಲದ ಉಬ್ಬು, ಹೊಂಗೆಮರಗಳ ಮಬ್ಬು, ವಿದ್ಯಾಧರಿಯರ ವಿಹಾರ, ಹೂವುಗಳು ಹರಡಿರುವಿಕೆ, ಚಕ್ರವಾಕಗಳ ಹೆಮ್ಮೆ, ಮಂದಾನಿಲನ ಕೂರ್ಮೆ ಮುಂತಾದವುಗಳಿಂದ ಆ ಪುರದ ಉದ್ಯಾನವು ಸಕಲ ಸೌಂದರ್ಯದಿಂದ ಅಧಿಕತರವಾದ ಸೌಕುಮಾರ್ಯದ ಶ್ರೇಷ್ಠ ಭೋಗವನ್ನು, ಉನ್ನತ ಕ್ರೀಡೆಯನ್ನು, ಅತ್ಯುದಾರತೆ ಅತಿಪ್ರಸನ್ನತೆಯನ್ನು ಒಳಗೊಂಡು ಇದೆ. ಅಷ್ಟೇ ಅಲ್ಲದೆ—೭೨. ಆ ಘನವನಲಕ್ಷ್ಮಿಗೆ ಕಮಲವೇ ಮುಖ, ನೈದಿಲೆಗಳೇ ಕಣ್ಣುಗಳು, ತೊಂಡೆಯಹಣ್ಣುಗಳೇ ತುಟಿ, ಸಂಪಿಗೆಮೂಗು, ಕೊಂಬೆಗಳೇ ತೋಳುಗಳು, ಚಕ್ರವಾಕದ್ವಯವೇ ಸ್ತನದ್ವಯ, ಗಂಭೀರವಾದ ಸರಸ್ಸನಾಭಿ,

ಕಂ॥ ಆ ವನದ ಪುರದ ನಡುವೆ ಸು
ಖಾವಹಮತಿವಿಭ್ರಮಂ ವಿಶಾಲಂ ಸರ್ವೋ।
ರ್ವೀವರ ಶಸ್ತ್ರಾಭ್ಯಾಸ ನಿ
ಜಾವಾಸಂ ಸುಭಟಪಟಲ ಪಟುರವಭರಿತಂ ॥ ೭೩

ಹಯ ಶಿಕ್ಷಕರಿಂ ಗಜಶಿ
ಕ್ಷೆಯ ಭೀಕರದಿಂ ಪ್ರಪಂಗುಡುವ ಜೋದರ ಸಂ।
ಚಯದಿಂ ನಯದಿಂ ವೈಹಾ
ಳಿಯ ಬಯಲೊಪ್ಪಿತ್ತು ಪಟ್ಟಣದ ವನದೆಡೆಯೊಳ್ ॥ ೭೪

ವ॥ ಮತ್ತಮಲ್ಲಿ

ಕಂ॥ ಕರಿಗಳ್ ಬಾಳ್ಗಂಬದೊಳೊ
ಪ್ಪಿರುತ್ತಿರ್ದುವು ಸುಳಿವ ನೀಲಮೇಘಾವಳಿಯಂ।
ತರದಿಂ ಸೆಜೆಯಿಟ್ಟಂತಾ
ಗಿರಿಪತಿ ಸುರಪತಿಯ ಪಗೆಯ ಪರಿಬವ ಚಲದೊಳ್ ॥ ೭೫

ಸುರಿವ ಮದಂ ಮಳೆ ಗಂಭೀ
ರ ರವಂ ಪೊಳಗಂಗಮಂಬುದಂ ದಂತಂ ನಿ।

ಬಾಳೆಯ ಮರಗಳೇ ತೊಡೆ, ಚಿಗುರು ಪಾದಗಳಾಗಿ ಒಟ್ಟಿನಲ್ಲಿ ಆ ನಂದನವನವೇ ಅವಳ ರೂಪು ಎನಿಸಿ ತೋರುತ್ತಿದೆ. ೭೩. ಆ ವನದ ಹಾಗೂ ಪುರದ ಮಧ್ಯದಲ್ಲಿ ಅತಿ ವಿಶಾಲವೂ ಸುಖಕರವೂ ಆದ ಒಂದು ನಿವೇಶನವು ಸೈನ್ಯ ಚಟುವಟಿಕೆಗಳಿಗೆ ಮೀಸಲಾಗಿತ್ತು. ಅಲ್ಲಿ ಇಡಿಯ ಜಗತ್ತಿನಲ್ಲಿಯೇ ಶ್ರೇಷ್ಠವಾದ ಶಸ್ತ್ರಾಭ್ಯಾಸ ವ್ಯವಸ್ಥೆ ಇತ್ತು. ಯೋಧರ ನಿಜಾವಾಸಗಳೂ ಅಲ್ಲಿದ್ದವು. ಅವರ ಪಟುರವಭರಿತವಾಗಿತ್ತು ಆ ಪ್ರದೇಶ. ೭೪. ಅಲ್ಲಿ ಕುದುರೆಗಳಿಗೆ ಶಿಕ್ಷಣ ಕೊಡುತ್ತಿದ್ದ ಹಯಶಾಸ್ತ್ರವಿಚಕ್ಷಣರಿದ್ದರು. ಗಜ(ಆನೆ) ಶಿಕ್ಷಕರಾದ ಭಯಂಕರವಾಗಿ ಪ್ರವವನ್ನು ಕೊಡುವ ಯೋಧರಸಂಚಯ ಒಂದು ಕಡೆ; ನಯದಿಂದ ಜಾಣ್ಮೆಯಿಂದ ವೈಹಾಳಿ(ಕುದುರೆಸವಾರಿ)ಎಸಗುವ ಆ ಬಯಲು ಅಲ್ಲಿತ್ತು. ವ॥ ಮತ್ತೆ ಅಲ್ಲಿ, ೭೫. ಆನೆಗಳು ಬಾಳ್ಗಂಬ (ಆಲಾನಸ್ತಂಭ–ಆನೆಕಟ್ಟುವ ಎತ್ತರವೂ ದಪ್ಪವೂ ಆದ ಕಂಭ) ದಲ್ಲಿ ಬಂಧಿತವಾಗಿದ್ದವು. ಇದನ್ನು ನೋಡಿದರೆ ಪರ್ವತರಾಜನು ತನ್ನ ಹಗೆಯಾದ ಸುರಪತಿಯ ಕಾರಣದಿಂದ ಛಲವಿಡಿದು ಸುಳಿವ ನೀಲಮೇಘಗಳನ್ನೆಲ್ಲ ಹಿಡಿದು ಸೆರೆಯಲ್ಲಿಟ್ಟಂತೆ ಇತ್ತು. ೭೬. ಅಲ್ಲಿಯ ಕರಿಗಳು ಮುಂಗಾರಿನಂತೆ ಕಾಣುತ್ತಿದ್ದವು. ಅಲ್ಲಿ ಆನೆಗಳಿಂದ ನಿರಂತರ ಸುರಿವ ಮದೋದಕವೇ ಮಳೆ, ಆನೆಗಳ ಗಂಭೀರ ಘೀಂಕಾರವೆ ಗುಡುಗಿನಿಂದ ಕೂಡಿದ

ಷ್ಠುರದಿಂದೆಱಗುವ ಸಿಡಿಲಾ
ಗಿರೆ ಕಾರ್ಗಾಲದವೊಲಿರ್ದುವಲ್ಲಿಯ ಕರಿಗಳ್ ॥ ೭೬

ವ॥ ಮತ್ತಮಾ ಪೊಱವೊಳಲ ವೈಹಾಳಿಯ ಬಯಲಿಂದೊಳಗೆ

ಕಂ॥ ಧರೆಯಂ ಸುತ್ತಿದ ಜಲಧಿಗೆ
ಪುರುಡಿಸಿ ಪುರವಳಯ ವಿಳಸಿತ ಪ್ರಾಕಾರಂ ।
ಪುರಮಂ ಸುತ್ತಿರ್ಪುದು ತತ್
ಪರಿಖಾತಂ ಜಲೌಘಮೌರ್ವವಿಹರಣದೂರಂ ॥ ೭೭

ಹರಿ ಮತ್ಸ್ಯಾಕಾರದೊಳು
ದ್ಧುರತಮಸಂ ಪತಿಸಲೆಂದು ಪಾತಾಳ ತಳ ।
ಕ್ಕಿರದಿಳಿದ ತಾಣಮೆಂಬಂ
ತಿರೆ ಪುರದಗಳಿರ್ಪುದತುಳಮತಿ ಗಂಭೀರಂ ॥ ೭೮

ವ॥ ಮತ್ತಮನಂತರದಲ್ಲಿ

ಚಂ॥ ಪಳಿಕಿನ ಕೋಂಟೆ ಬಟ್ಟದೆಸೆ ಬೇವಿನದಂಡೆ ನಭಕ್ಕೆ ಮಿಱುವ
ಟ್ಟಳೆ ನಿಮಿರ್ದೇಱು ಪಾಱುವ ಪತಾಕೆ ವಿರಾಜಿಪ ಗೊಂಟುಗೊಂಟಿನೊಳ್ ।
ಬಳಸಿದ ಕೊತ್ತಳಂ ಸೊಗಯಿಪಾಳ್ವರಿ ಡೆಂಕಣಿ ಸಾರಮಾಗಿಯ
ಗ್ಗಳಿಸುವ ಗೋಪುರಂ ಪುಲಿಮೊಗಂ ಮೆಱೆಗುಂ ಪುರದೊಳ್ ನಿರಂತರಂ ॥ ೭೯

ಮೇಘ, ಆವುಗಳ ದಂತಗಳೇ ನಿಷ್ಠುರದಿಂದ ಬೀಳುವ ಸಿಡಿಲು, ಹೀಗಾಗಿ ಆ ಕರಿಗಳು ಕಾರ್ಗಾಲದಂತೆ ಆಗಿದ್ದವು. ವ॥ ಪಟ್ಟಣದ ಹೊರವಳಯದ ವೈಹಾಳಿಯ ಬಯಲಿನಲ್ಲಿ, ೭೭. ಧರೆಯ ಸುತ್ತಲೂ ಸಮುದ್ರವಿದೆ. ಅಂಥ ಜಲಧಿಯ ಮೇಲಣ ಸ್ಪರ್ಧೆಯಿಂದಲೋ ಎಂಬಂತೆ ಆ ಪುರದ ಸುತ್ತಲೂ ಇರುವ ಪ್ರಾಕಾರ (ಕೋಟೆ) ವನ್ನು ಬಳಸಿಕೊಂಡು ಬಂದಿದೆ. ನೀರಿನಿಂದ ತುಂಬಿದ ಬಡಬಾಗ್ನಿ (ನೀರಿನಲ್ಲಿರುವಬೆಂಕಿ) ಯಿಲ್ಲದ ಅಗಳ್ತೆ (ಸಂಖೆ) ೭೮. ಆ ಪುರದ ಸುತ್ತಲೂ ಇರುವ ಬಹು ಆಳವಾದ ಅಗಳ್ತೆ ಯನ್ನು ನೋಡಿದರೆ ಹಿಂದೆ ವಿಷ್ಣುವು ಅತ್ಯಂತ ಉದ್ಧತನೂ, ತಮೋಗುಣ ತುಂಬಿದವನೂ ಸಮುದ್ರದ ತಳದಲ್ಲಿ ನೆಲೆಸಿದ್ದವನೂ ಆದ ಹಿರಣ್ಯಾಕ್ಷನೆಂಬ ರಾಕ್ಷಸನನ್ನು ಕೊಲ್ಲಲು ಮತ್ಸ್ಯಾವತಾರವನ್ನೆತ್ತಿ ಸಮುದ್ರಕ್ಕೆ ಇಳಿದ ಸ್ಥಾನವೋ ಎಂಬಂತಿದೆ. ೭೯. ಸ್ಫಟಿಕದ ಕೋಟೆ ಬಟ್ಟದೆನೆ ಬೇವಿನದಂಡೆ ನಭ (ಗಗನ)ಕ್ಕೆ ಮಿಾರುವ ಅಟ್ಟಳೆ (ಅಟ್ಟ), (ಗೊತ್ತು ಮಾಡಿದ ಪ್ರತಿ ಸ್ಥಳದಲ್ಲಿಯೂ) ಎತ್ತರಕ್ಕೆ ಏರಿಸಿರುವ ಬಾವುಟ ; ಪ್ರಾಕಾರವನ್ನು ಬಳಸಿರುವ ಕೊತ್ತಳ (ಹುಡೆ) ; ಸೊಗಸಾದ ಆಳ್ವರಿ (ಕಂದಕ) ; ಯುದ್ಧ ಕಾಲದಲ್ಲಿ ಬಳಸುವ ಆಯುಧಯಂತ್ರ (ಡೆಂಕಣಿ) ವೇ ಮುಖ್ಯವಾಗಿರುವ ಅತಿಶಯವಾದ ಹುಲಿಮುಖದ

ಕಂ॥ ನೆಗೆದ ಪತಾಕಾ ಪಟಕೋ
ಟಿಗಳೊಪ್ಪಿದುವಾವಗಂ ತೊಳಲ್ದು ಬಳಲ್ದಾ ।
ಖಗನ ತುರಂಗ ಪ್ರತತಿಗೆ
ಗಗನಾಂಗನೆ ಬೀಸುತಿರ್ಪ ವೀಜನ ತತಿವೋಲ್ ॥ ೮೦

ವ॥ ಅಂತುಮಲ್ಲದೆಯುಂ

ಕಂ॥ ಬಗೆವೊಡಮರಾವತಿಗೆ ಮಿಥಿ
ಳೆಗೆಯುದಯನಗಕ್ಕೆ ಉಜ್ಜಯಂತಿಗೆ ದಿಟಮಾ ।
ನಗರಿ ಗುಣೋನ್ನತಿಯಿಂದಂ
ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ॥ ೮೧

ಪೊಸಸೊದೆ ಕೌಮುದಿಯಂ ಪಸ
ರಿಸೆ ಕನಕದ ಕಳಶಮಾಳೆ ಪೊಂಬಿಸಿಲಂ ಪೂ ।
ರಿಸೆ ತರತರದಿಂದಂ ರಾ
ಜಿಸುತಿರ್ಪುವು ಸೋಮ ಸೂರ್ಯವೀಥಿಗಳದಱೊಳ್ ॥ ೮೨

ವ॥ ಆ ವೀಥಿಗಳೊಳಗೆ

ಕಂ॥ ನಯದಿಂ ಮಾಱುಗುಡುವ ಕೊ
ಳ್ವ ಯತ್ನಪೂರ್ವಕದೊಳಿರ್ಪ ಘನಧನಿಕರ ಪ ।

ಗೋಪುರ ಇವೆಲ್ಲವೂ ಆ ಪುರದಲ್ಲಿ ಯಾವಾಗಲೂ ಬೆಳಗುತ್ತಿವೆ. ೮೦. ಆ ಪುರದಲ್ಲಿ ಎಲ್ಲಿ ನೋಡಿದರೂ ಬಾವುಟಗಳೇ ! ಆ ಬಾವುಟ ಪಟ (ಬಟ್ಟೆ) ಗಳು ಕೋಟಿಗಟ್ಟಲೆ ಆಕಾಶದಲ್ಲಿ ಯಾವಾಗಲೂ ಹಾರಾಡುತ್ತಿವೆ. ಇದನ್ನು ನೋಡಿದರೆ ಗಗನದಲ್ಲಿ ಪ್ರತಿನಿತ್ಯವೂ ತೊಳಲೆ ಬಳಲಿ ಬರುವ ಸೂರ್ಯನ ರಥದ ಕುದುರೆಗಳ ಶ್ರಮವನ್ನು ಪರಿಹರಿಸಲು ಗಗನಾಂಗನೆ ಬೀಸುತ್ತಿರುವ ಬೀಸಣಿಗೆಗಳೊ ಎಂಬಂತಿದೆ. ವ॥ ಅಲ್ಲದೆ, ೮೧. ಜಗತ್ತಿನಲ್ಲಿ ಅತ್ಯಂತ ಪ್ರಸಿದ್ಧವಾದ ನಗರಗಳೆಂದರೆ ಇಂದ್ರನ ರಾಜಧಾನಿ ಅಮರಾವತಿ, ಮಿಥಿಲಾ, ಉದಯಾದ್ರಿ, ಉಜಯಂತಿ ಮುಂತಾದವು. ನಿಜವಾಗಿಯೂ ವಿಚಾರ ಮಾಡಿ ನೋಡಿದರೆ ಗಿರಿರಾಜನಗರವು ಗುಣೋನ್ನತಿಯಲ್ಲಿ ಸೌಂದರ್ಯದಲ್ಲಿ ಇವೆಲ್ಲಕ್ಕಿಂತ ಎರಡರಷ್ಟು ಮೂರರಷ್ಟು ನಾಲ್ಕರಷ್ಟು ಅಥವಾ ಐದರಷ್ಟು ಅಧಿಕವಾಗಿತ್ತು. ೮೨. ಆ ನಗರದಲ್ಲಿ ಸೂರ್ಯ-ಚಂದ್ರ ಬೀದಿಗಳಿದ್ದವು. ಹೊಸ ಸುಧೆ (ಸುಣ್ಣ ಬಳಿದ ಮನೆಗಳ ಬೆಳಕು) ಬೆಳದಿಂಗಳನ್ನು ಬಿತ್ತರಿಸುತ್ತಿತ್ತು ; ಚಿನ್ನದ ಕಲಶಮಾಲೆಯು ಹೊಂಬಿಸಿಲನ್ನು ಬೀರುತ್ತಿತ್ತು. ಇದರಿಂದ ವಿವಿಧ ಸೌಂದರ್ಯವು ಅಲ್ಲಿ ನೆಲೆಸಿತ್ತು. ವ॥ ಆ ಬೀದಿಗಳಲ್ಲಿ, ೮೩. ವಿನಯದಿಂದ ಮಾರಾಟ ಮಾಡುತ್ತಿರುವ

ಙ್ಗಿಯ ಮುಂದೆ ಸಂದಣಿಸಿ ವಿ
ಕ್ರಯ ನವ ಕಳಮಾದಿಧಾನ್ಯರಾಶಿಗಳೆಸೆಗುಂ ॥ ೮೩

ವ॥ ಅನಂತರಮಲ್ಲಿ

ಕಂ॥ ಪರಿಮಳದಾಡುಂಬೊಲನಿದು
ವರವಿಟರ ವಿಶಾಲ ಲೋಲ ಲೀಲಾಸ್ಥಲಮಾ ।
ತುರಿಸುವ ತುಂಬಿಗಳೌತಣ
ದರಮನೆಯೆನೆ ಪುಷ್ಪವಿಕ್ರಯಸ್ಥಲಮೆಸೆಗುಂ ॥ ೮೪

ಭರದಿಂ ಪೂಮಾಲೆಗಳಂ
ತರದಿಂ ಪಿಡಿದೆತ್ತಿ ನಿಂದ ಶಶಿಮುಖಿಯರ್ ಬಂ ।
ಧುರ ಶಶಿಕಳೆಗಳನೀವಂ
ತಿರಿರ್ದರಾ ವಿಟಚಕೋರ ಸಂಗತಿಗಾಗಳ್ ॥ ೮೫

ವ॥ ಮತ್ತೊರ್ವಳ್

ಕಂ॥ ವರಮಲ್ಲಿಗೆ ಮೊಲ್ಲೆಗಳೊಳ್
ಬೆರಸಿದ ಮಧುಕರ ಕದಂಬದಿಂದಂ ನೀಲೋ ।
ತ್ಕರಮಂ ಮೌಕ್ತಿಕಮಂ ಪೋ
ಲ್ತಿರೆ ಮೆಱೆದಳ್ ಮಾಲೆಗಾರ್ತಿ ಮಣಿಗಾರ್ತಿಯವೋಲ್ ॥ ೮೬

ವ॥ ಆ ಮಾಲೆಗಾರ್ತಿಯರ ನಡುವೆಯೋರ್ವ ಪಣ್ಯಾಂಗನೆಯಿರೆ ಕಂಡು

ಕಂ॥ ನಗೆಗಣ್ಗಳ ಕಾಂತಿಯ ಸೆ
ಳ್ಳುಗುರ್ಗಳ ಕಾಂತಿಯ ಕರದ್ವಯದ ಕಾಂತಿಯ ಮಾ ।

ಪ್ರಶ್ನಪೂರ್ವಕವಾಗಿ ಕೊಳ್ಳುವ ಧನಿಕರ ಮುಂದೆ ವಿಕ್ರಯಕ್ಕೆ ಸಿದ್ಧವಾಗಿರುವ ವಿವಿಧ ಧಾನ್ಯರಾಶಿಗಳಿದ್ದವು. ವ॥ ಮತ್ತೆ ಅಲ್ಲಿ, ೮೪. ಅಲ್ಲಿಯ ಹೂವಿನ ಮಾರುಕಟ್ಟೆ ; ಅದು ಪರಿಮಳದ ಬೀಡು, ವರವಿಟ (ರಸಿಕ)ರ ವಿಶಾಲ ಲೀಲಾರಂಗ, ಆತುರದಿಂದ ಬಂದು ಮುತ್ತಿರುವ ದುಂಬಿಗಳ ಔತಣದ ಅರಮನೆಯೋ ಎಂಬಂತಿತ್ತು. ೮೫. ಅಲ್ಲಿ ಹೂವಿನ ಹಾರಗಳನ್ನು ವೈಯಾರದಿಂದ ಹಿಡಿದೆತ್ತಿ ನಿಂತಿರುವ ಶಶಿಮುಖಿಯರು, ವಿಟಚಕೋರಗಳಿಗೆ ಶಶಿಕಳೆಗಳನ್ನು ಬೀರುತ್ತಿರುವರೋ ಎಂಬಂತಿತ್ತು. ೮೬. ಮತ್ತೊಬ್ಬಳು ಮಾಲೆಗಾರ್ತಿ, ಅವಳು ಹಿಡಿದಿರುವ ಮಾಲೆಯಲ್ಲಿರುವ ಮಲ್ಲಿಗೆ–ಮೊಲ್ಲೆಗಳಲ್ಲಿ ದುಂಬಿಗಳು ಮಕರಂದಪಾನ ಮಾಡುತ್ತಿವೆ. ಅದನ್ನು ನೋಡಿದರೆ ನೀಲ ಮತ್ತು ಮುತ್ತುಗಳನ್ನು ಪೋಣಿಸಿದ ಮಾಲೆಯಂತೆ ಕಾಣುತ್ತಿದೆ. ಇದರಿಂದ ಆ ಮಾಲೆಗಾರ್ತಿಯು ಮಣಿಗಾರ್ತಿ (ಮಣಿ ಮಾರುವವಳು) ಯಂತೆ ಕಂಡಳು. ವ॥ ಅವರ ಮಧ್ಯೆ ಒಬ್ಬಳು ಬೆಲೆವಣ್ಣು, ೮೭. ಅವಳ ನಗೆ

ಲೆಗಳಂ ಹೊಸಹೂವಿನ ಮಾ
ಲೆಗೆತ್ತು ಬೆಲೆಗೊಟ್ಟು ಕೊಂಡು ನಗಿಸಿದನೊರ್ವಂ ॥ ೮೭

ವ॥ ಅಂತುಮಲ್ಲದೆ

ಉ॥ ಎತ್ತಿದುದೊಂದು ಮಾಲೆ ಪೊಸಪೂವಿನ ಬಿಲ್ಲವೊಲಾಗೆ ಮಾಱಿ ಬೆಂ
ಬಿತ್ತುವ ನೋಟಮಂಗಜನ ಬಾಣದವೋಲಿರೆ ಕಾಯಕಾಂತಿ ಸೈ ।
ತೊತ್ತಿದ ಮೌರ್ವಿಯಂತಿರೆಸಲೆಂದು ಯುವೋನ್ಮೃಗಮಂ ಕಱುತ್ತುಕೋ
ಲೆತ್ತುವ ಬೇಂಟೆಕಾರ್ತಿಯರವೋಲೆಸೆದರ್ ಮಿಗೆ ಮಾಲೆಕಾರ್ತಿಯರ್ ॥ ೮೮

ವ॥ ಮತ್ತಮಲ್ಲದೆಯುಮಾ ಪುರದಲ್ಲಿ

ಚಂ ॥ ಎಸೆಯೆ ಪುರಂಧ್ರಿಯರ್ ಪಡೆದು ಸಂಗಡಮಿರ್ದುಮನೋನುರಾಗದಿಂ
ದಸುವೆಯಕಲ್ಗಳಂ ತೊಳೆದು ಚಂದನಮಂ ಪನಿನೀರ್ಗಳಿಂದೆ ಚಾ ।
ರಿಸಿ ಹಿಮಚೂರ್ಣಮಂ ತಳಿದು ಕಂದುಗಳಂ ಪಿಡಿದೌಂಕಿ ನೂಂಕಿದರ್
ದೆಸೆ ದೆಸೆಗೆಲ್ಲ ಕಂಪೆಸಗೆ ಗಟ್ಟಿಮಗುಳ್ಚುತೆ ಗಟ್ಟಿವಳ್ತಿಯರ್ ॥ ೮೯

ಚಂ॥ ಸುಳಿಗುರುಳಾಡೆ ತೋಳ್ಗಳೆಡೆಯಾಡೆ ಬೆಮರ್ ಮಿಗೆ ಮೂಡೆ ಸುಯ್ಯೆಲರ್
ಮಿಳಿರೆ ಕುಚಂಗಳೊತ್ತರಿಸೆ ಕಕ್ಷಪುಟಂ ನಸುದೋಱೆ ಮೇಲುದಿಂ ।

ಕಣ್ಣುಗಳ ಕಾಂತಿ,ಚೂಪಾದ ಉಗುರುಗಳ ಕಾಂತಿ,ನಳಿತೋಳುಗಳ ಕಾಂತಿ ಮಾಲೆಗಳನ್ನೇ ಹೊಸ ಹೂವಿನ ಮಾಲೆಗಳೆಂದು ಬಗೆದು ಬೆಲೆಗೊಟ್ಟು ಕೊಂಡು ಒಬ್ಬ ಎಲ್ಲರನ್ನೂ ನಗಿಸಿದ. ವ॥ ಅದೂ ಅಲ್ಲದೆ ೮೮. ಅಲ್ಲಿರುವ ಮಾಲೆಗಾರ್ತಿಯರು ಯುವಕರೆಂಬ ಮೃಗಗಳನ್ನು ಉದ್ದೇಶಿಸಿ ಬಾಣಗಳನ್ನು ಬಿಡುವ ಬೇಂಟೆಕಾರ್ತಿಯರೆಂಬಂತೆ ಎಸೆದರು. ಈ ಬೇಂಟೆಕಾರ್ತಿಯರಿಗೆ ಅವರು ಹಿಡಿದು ಎತ್ತಿರುವ ಹೂವಿನ ಮಾಲೆಯೆ ಹೊಸ ಹೂವಿನ ಬಿಲ್ಲು, ಯುವಕರನ್ನು ಬೆಂಬಟ್ಟುವ ನೋಟವೇ ಕಾಮನ ಬಾಣ, ಅವರ ಶರೀರ ಕಾಂತಿಯೆ ಶಿಂಜಿನಿ (ಬಿಲ್ಲಿಗೆ ಬಿಗಿದ ದಾರ),ಇದರಿಂದ ಅವರು ಬೇಂಟೆಗಾರ್ತಿಯರೆ ಎಂಬಂತಿದ್ದರು ! ವ॥ ಅಲ್ಲದೆ ಆ ಪುರದಲ್ಲಿ, ೮೯. ಅಲ್ಲಿರುವ ಪುರಂಧ್ರಿಯರು (ಗಂಡ ಮತ್ತು ಮಗ ಇರುವ ಸ್ತ್ರೀ), ಜೊತೆಗಿದ್ದು ಮನೋನುರಾಗದಿಂದ ಅರೆಯುವ ಕಲ್ಲುಗಳನ್ನು ತೊಳೆದು ಪನ್ನೀರಿನಿಂದ ಚಂದನವನ್ನು ತೆಗೆಯುವಂದು ಹಿಮಚೂರ್ಣವನ್ನು ತಳಿದು ಗುಂಡುಕಲ್ಲುಗಳನ್ನು ಹಿಡಿದು ಔಂಕಿ, ನೂಕಿದರು ; ಇದರಿಂದ ದಿಕ್ಕು ದಿಕ್ಕಿಗೂ ಸುವಾಸನೆ ಹರಡಿತು. ಹೀಗೆ ಆ ಗಟ್ಟಿವಳ್ತಿಯರು ಗಂಧವನ್ನು ತೆಯ್ಯುತ್ತಿದ್ದರು. ೯೦. ಗಂಧತೇಯುವ ಇಂದು ಮುಖಿಯರ ವರ್ಣನವಿದು. ತೇಯು ವ ವಯ್ಯಾರದಲ್ಲಿ ಅವರ ಸುಳಿ ಮುಂಗುರುಳುಗಳು ಆಡುತ್ತಿದ್ದವು, ತೋಳು ಸಂದಿಯಲ್ಲಿ ಬೆವರು ಮೂಡಿತು, ಸುಯ್ಯೆಲರು (ಸುವಾಸನೆಯ ಉಸಿರು) ಸೂಸಿತು,

ಬಳಿಯೆ ಕರಂ ಕರಂ ಕೊರಗೆ ಸೋರ್ಮುಡಿ ಲಂಬಿಸೆ ಕರ್ಣಪೂರಿತೋ
ತ್ಪಳವೊಲೆದಾಡೆ ಗಟ್ಟಿಗಳನಂದು ಮಗುಳ್ದಿದರಿಂದುವಕ್ತ್ರೆಯರ್ ॥ ೯೦

ಕಂ॥ ಚಂದನಗಂಧಕ್ಕಂ ವದ
ನೇಂದೀವರ ಪರಿಮಳಕ್ಕಮೆಱಗುವ ಭೃಂಗೀ ।
ವೃಂದಮನುಱೆ ಸೋವುತ್ತುಂ
ಮಂದಯ್ಸಿ ಮಗುಳ್ದಿ ಗಟ್ಟಿವಳ್ತಿಯರೆಸೆಗುಂ ॥ ೯೧

ಬೆಳಗಿನ ಬಿಂಬಂಗಳನಂ
ತಳವಡೆ ತರ ತರದಿನಿಳಿಪಿದಂತಿರ್ದುವು ನಿ ।
ರ್ಮಳ ಪಾತ್ರಾಕುಲದಿಂದಂ
ತೊಳ ತೊಳಗುತಿರ್ಪ ಕಂಚುಗಾಱರ ಪಸರಂ ॥ ೯೨

ಚಾರುತರ ವಿಮಳ ಮೌಕ್ತಿಕ
ಹಾರಾದಿ ಸಮಸ್ತರತ್ನರಾಶಿಗಳಿಂದಂ ।
ನೀರೋಡಿದ ರತ್ನಾಕರ
ದೋರನ್ನಮದಾಯ್ತು ರನ್ನವಸರಂ ಪುರದೊಳ್ ॥ ೯೩

ತೀವಿರ್ಪಶ್ವಾಳಿಯ ಗ
ಜಾವಳಿಯ ನರಾವಳಿಗಳ ವಿಕ್ರಯದಿಂದಂ ।
ಭಾವಿಸೆ ದೂಸಿಗವಸರಂ
ಮೂವರ್ ರಾಯರನೆ ಮಾಱುವಂತೆಸೆದಿರ್ಕ್ಕುಂ ॥ ೯೪

ಸ್ತನಗಳು ಒತ್ತರಿಸಿದವು, ಕಕ್ಷ (ಕಂಕುಳು) ಪುಟವು ತುಸು ಕಂಡಿತು. ಮೇಲುದು(ಸೆರಗು) ಜಾರಿತು, ಕೈಸೋತಿತು, ಸೋರ್ಮುಡಿ ಲಂಬಿಸಿತು, ಕರ್ಣಪೂರವಾಗಿ ಧರಿಸಿದ್ದ ನೈದಿಲೆ ಒಲೆದಾಡಿತು. ೯೧. ಚಂದನ ಗಂಧಕ್ಕೆ, ಅವರ ವದನಕಮಲದ ಪರಿಮಳಕ್ಕೆ ಎರಗುವ ಹೆಣ್ಣುದುಂಬಿಗಳನ್ನು ಸೋವುತ್ತಾ ಆ ಗಟ್ಟಿವಳ್ತಿಯರು ನಿಧಾನವಾಗಿ ಗಂಧತೇಯುತ್ತಿದ್ದರು. ೯೨. ಅಲ್ಲಿರುವ ಕಂಚುಗಾರರ ಅಂಗಡಿಗಳು ; ಅಲ್ಲಿ ನಿರ್ಮಲವಾದ ಪಾತ್ರೆಗಳನ್ನು ಜೋಡಿಸಿದ್ದರು, ಅವುಗಳಲ್ಲಿ ತೊಳಗುವ ಬೆಳಗಿನ ಬಿಂಬಗಳನ್ನೇ ತರತರದಿಂದ ಅಳವಡಿಸಿದಂತಿತ್ತು. ೯೩. ಮನೋಹರವಾದ ಸ್ವಚ್ಛವಾದ ಮುತ್ತಿನ ಹಾರವೇ ಮೊದಲಾದ ಸಮಸ್ತ ರತ್ನಗಳ ರಾಶಿಗಳು ಅಲ್ಲಿವೆ. ಇದರಿಂದ ರತ್ನಪಡಿ ವ್ಯಾಪಾರದ ಆ ಬೀದಿಯು ನೀರು ಇಲ್ಲದ ರತ್ನಾಕರ (ಸಮುದ್ರ)ದಂತೆ ಇತ್ತು. ೯೪. ಅಲ್ಲಿ ನೆರೆದಿರುವ ಬಟ್ಟೆಅಂಗಡಿಗಳವರು ಅಶ್ವ–ಗಜ–ನರ (ಕಾಲಾಳು) ಸೈನ್ಯಗಳನ್ನು ಮಾರುವ ಮೂವರು ಅಶ್ವಪತಿ-ಗಜಪತಿ ಮತ್ತು ನರಪತಿಗಳೋ

ಕಂ॥ ತನ ತನಗೆ ಪೊನ್ನರಾಶಿಯ
ನನವರತಂ ಮುಂದುಗೊಂಡನೇಕ ಕುಬೇರರ್ ।
ಜನಿಯಿಸಿ ನಿಂದಂತಿರ್ಪುದು
ಕನಕ ವ್ಯವಹಾರದಿಂದೆ ವೈಶ್ಯಕದಂಬಂ ॥ ೯೫

ವ॥ ಮತ್ತಮಾಪುರದಲ್ಲಿ

ಕಂ॥ ನೀಲದ ಪಚ್ಚೆಯ ಪವಳದ
ಶಾಲೆಗಳ ಮರೀಚಿಯಂ ಪುರಂದರಧನುಗೆ ।
ತ್ತಾಲೋಕಿಸಿ ನವನರ್ತನ
ಲೀಲೆಯನೊಳಕೊಳ್ವುವಲ್ಲಿ ಪುರದ ನವಿಲ್ಗಳ್ ॥ ೯೬

ಬೆಳ ಬೆಳಿಪ ಸುಧಾಧವಳಿತ
ನಿಳಯಂಗಳ ಧವಳಕಾಂತಿಯಂ ಕೌಮುದಿಗೆ ।
ತ್ತೆಳಸುತ್ತಿರ್ಪುವು ಪಗಲುಂ
ಬಳಸಿ ಚಕೋರಾಳಿ ಪುರದ ನಿಳಯದೊಳೆಲ್ಲಂ ॥ ೯೭

ವ॥ ಅಂತುಮಲ್ಲದೆ,

ಕಂ॥ ಒದವಿದ ಮುತ್ತಿನ ಮಾಣಿ
ಕ್ಯದ ಗೋಮೇಧಿಕದ ಪುಷ್ಯರಾಗದ ವೈಡೂ ।
ರ್ಯದ ವಜ್ರದ ಪಚ್ಚೆಯ ಪವ
ಳದ ನೀಲದ ಕಳಶದಿಂ ಶಿವಾಲಯಮೆಸೆಗುಂ ॥ ೯೮

ಎಂಬಂತಿದ್ದರು. ೯೫. ಅಲ್ಲಿಯ ವೈಶ್ಯರು; ಅವರು ಹೊನ್ನ ರಾಶಿಗಳು ತನತನಗೆ ಬೇಕೆಂದು ಮುಂದುವರಿದು ಬರುತ್ತಿದ್ದಾರೆ. ಇದನ್ನು ನೋಡಿದರೆ ಕುಬೇರರೇ ಇಲ್ಲಿ ಜನಿಸಿ ಕನಕ ವ್ಯವಹಾರ ಮಾಡುತ್ತಿರುವಂತಿದೆ. ೯೬. ನೀಲ, ಪಚ್ಚೆ ಮತ್ತು ಹವಳದ ಶಾಲೆಗಳ ಕಿರಣಗಳ ಮೊತ್ತವನ್ನು ಕಂಡು ಕಾಮನಬಿಲ್ಲು ಎಂದು ತಿಳಿದ ಆ ಪುರದ ನವಿಲುಗಳು ನರ್ತಿಸತೊಡಗಿವೆ. ೯೭. ಅಲ್ಲಿ ಬೆಳಗುತ್ತಿರುವ ಸುಧಾಲೇಪನದಿಂದ ಬಿಳುಪೇರಿದ ಮನೆಗಳ ಬಿಳಿಯ ಕಾಂತಿಯನ್ನು ಬೆಳದಿಂಗಳೆಂದು ತಿಳಿದ ಚಕೋರ ಪಕ್ಷಿಗಳು ಹಗಲಿನಲ್ಲಿಯೇ ವಿಹರಿಸತೊಡಗಿವೆ. ವ॥ ಅದೂ ಅಲ್ಲದೆ, ೯೮. ಅಲ್ಲಿಯ ಶಿವಾಲಯ; ಅದು ಮುತ್ತು, ಮಾಣಿಕ್ಯ, ಗೋಮೇಧಿಕ, ಪುಷ್ಯರಾಗ, ವೈಡೂರ್ಯ, ವಜ್ರ, ಪಚ್ಚೆ, ಹವಳ ಮತ್ತು ನೀಲಾದಿ

ಮ॥ ಸ್ರ॥ ಶ್ರುತಿಘೋಷಂ ಮಂತ್ರಘೋಷಂ ನತಜನಜಯಘೋಷಂ ಪುರಾಣಪ್ರ
ಘೋಷಂ
ಸ್ಮೃತಿಘೋಷಂ ಗೀತಘೋಷಂ ಪರಶಿವ ವಿಮಳಜ್ಞಾನಸಂವಾದ ಘೋಷಂ ।
ಕೃತಿಘೋಷಂ ಯಜ್ಞಘೋಷಂ ಪರಿಣಯನ ಮಹೋತ್ಸಾಹವಿಸ್ತಾರಘೋಷಂ
ಸತತಂ ತೀವಿರ್ಪುವಂತಾಪುರದೊಳಭವಗೇಹಾವಳೀ ವಾದ್ಯಘೋಷಂ ॥ ೯೯

ವ॥ ಮತ್ತಮಾಪುರದ ರಾಜವೀಧಿಯಲ್ಲಿ

ಮ॥ ಸ್ರ॥ ವಿಳಸತ್ ಸೇವಾಪುರಂಧ್ರೀನಿಕರ ಚರಣಮಂಜೀರ ತನ್ಮುದ್ರಿಕಾ ಮಂ
ಜುಳನಾದಂ ರಾಜಪುತ್ರಪ್ರಕರ ಪರಿವೃತಾತೇಪಗೀತ ಪ್ರಣಾದಂ ।
ಜಳಪಾನಾಸಕ್ತ ಮುಕ್ತದ್ವಿಪಕುಲ ನಿಗಳವ್ರಾತ ಸಂಭೂತ ನೂತ್ನೋ
ಜ್ಜ್ವಳನಾದಂ ಪೊಣ್ಮುತಿರ್ಕುಂ ನರಪಯುತ ಕವೀಂದ್ರಾಸ್ಯ ಸಂಸ್ತೋತ್ರನಾದಂ ॥ ೧೦೦

ಕಂ॥ ತಿಂತಿಣಿಪ ನಿಳಯದಿಂ ಜನ
ದಿಂ ತರದಿಂದೆಸೆವ ವೀಧಿಯಿಂ ನೃಪಕುಲದಿಂ ।
ದಂ ತರುಣೀತತಿಯಿಂ ತಾ
ನಿಂತೊಪ್ಪುವುದಿಳೆಯೊಳೋಷಧಿಪ್ರಸ್ಥಪುರಂ ॥ ೧೦೧

ಉ॥ ಶ್ರೀ ಪರಮೇಶ್ವರಾಂಘ್ರಿ ಸರಸೀಜಮಧುವ್ರತನುದ್ಧತೇಜನು
ರ್ವೀಪತಿ ಸರ್ವದಿಗ್ಭರಿತ ಕೀರ್ತಿಯುತಂ ವರಭೂಭುಜಂ ಜಗ ।
ದ್ದೀಪಕನತ್ಯುದಾರನತಿಧೀರನತಿಸ್ತುತಿಪಾತ್ರ ಗೋತ್ರನಂ
ತಾ ಪುರನಾಥನೊಪ್ಪುವನುದಾತ್ತಗುಣಂ ಗಿರಿರಾಜನುರ್ವಿಯೊಳ್ ॥ ೧೦೨

ರತ್ನಗಳ ಕಲಶಗಳಿಂದ ಅಲಂಕೃತವಾಗಿದೆ ೯೯. ಆ ಪಟ್ಟಣದ ಶಿವಾಲಯಗಳಲ್ಲಿ ವೇದ ಘೋಷ, ಮಂತ್ರಪಠನ, ಶರಣಾಗುತ್ತಿರುವ ಭಕ್ತರ ಜಯಘೋಷ, ಪುರಾಣಪ್ರವಚನ, ಸ್ಮೃತಿ ವಿಚಾರ, ಗೀತಪಠನ, ಪರಶಿವ ವಿಚಾರ ಸಂವಾದ, ಕೃತಿ ಪಾರಾಯಣ, ಯಜ್ಞ ಘೋಷ, ಮದುವೆಯ ಮಹೋತ್ಸಾಹದ ವಿಸ್ತಾರವಾದ ಘೋಷ ಇವುಗಳು ನಿರಂತರವಾಗಿ ನಡೆಯುತ್ತಿವೆ. ವ ॥ ಆ ಪುರದ ರಾಜವೀಧಿಯಲ್ಲಿ ೧೦೦. ಶಿವನಸೇವೆಗಾಗಿ ಬರುತ್ತಿರುವ ಪುರಂಧ್ರಿಯರ ಚರಣಮಂಜೀರಗಳ ಮಂಜುಳನಾದ, ರಾಜಪುತ್ರರು ಹಾಡುತ್ತಿರುವ ಗೀತೆ ಗಳನಾದ, ನೀರು ಕುಡಿಯುತ್ತಿರುವ ಮುಕ್ತವಾದ ಆನೆಗಳ ಸರಪಳಿಗಳಿಂದ ಹುಟ್ಟಿದನೂತನ ಉಜ್ವಲನಾದ ಮತ್ತು ರಾಜನೊಂದಿಗಿರುವ ಕವೀಂದ್ರರು ಸ್ತುತಿಸುವ ಸ್ತೋತ್ರಗಳ ನಾದ ಗಳು ಅಲ್ಲಿ ಮೊಳಗುತ್ತಿದ್ದವು ೧೦೧. ಆ ಓಷಧಿಪ್ರಸ್ಥಪುರವು ಕಿಕ್ಕಿರಿದ ಮನೆಗಳಿಂದಲೂ, ಜನನಿಬಿಡವಾದ ಬೀದಿಗಳಿಂದಲೂ, ರಾಜ ಸಮೂಹದಿಂದಲೂ, ಯುವತಿಯರಿಂದಲೂ ಒಪ್ಪುತ್ತಿತ್ತು. ೧೦೨. ಆ ಪುರದ ಒಡೆಯ ಉದಾತ್ತ ಗುಣಶಾಲಿಯಾದ ಗಿರಿರಾಜ ; ಆತ

ಮ॥ ಪರಭೂಪಾಲ ವಿಶಾಲ ಮೌಳಿಮಣಿಸಂಘಾತ ಪ್ರಭಾಪುಂಜವಿ
ಸ್ಫುರಪಾದಂ ನತ ಸರ್ವಲೋಕನಭಯಂ ತೀವ್ರಪ್ರತಾಪಂ ಮಹೀ ।
ಧರರಾಜಂ ಮಹಿಮಾಂಬುರಾಶಿಯಚಳಂ ಭರ್ಗಪ್ರಿಯಂ ಭೋಗಭಾ
ಸುರನುದ್ದಾಮಗುಣಂ ಪ್ರಚಂಡ ಭುಜಸೊಪ್ಪಿರ್ಪಂ ನಗಾಧೀಶ್ವರಂ ॥ ೧೧೩

ಚಂ॥ ಎಜಗದ ಭೂಪರಿಲ್ಲ ಬೆಸಕೆಯ್ಯದ ರಾಜಕುಮಾರರಿಲ್ಲ ಕೂ
ರ್ತೞಿಯದ ಪೆಣ್ಗಳಿಲ್ಲ ತಲೆವಾಗದ ಚಾಗಿಗಳಿಲ್ಲ ತುಳ್ಳು ಕು ।
ಕ್ಕುೞಿಸದ ವೀರರಿಲ್ಲ ನತರಾಗದ ಬಲ್ಲಿದರಿಲ್ಲ ಕೀರ್ತಿಯಿಂ
ತುಱುಗದ ದಿಕ್ಕ್ರತಾನಮಣಮಿಲ್ಲೆನೆ ಬಾಳ್ವನಗಾಧಿನಾಯಕಂ ॥ ೧೧೪

ಉ॥ ಆತನ ಪುಣ್ಯವಲ್ಲಭೆ ವಿರಾಜಿತೆ ಪೂಜ್ಯೆಪರಾಪರೈಕ ವಿ
ಖ್ಯಾತೆ ಪತಿವ್ರತಾ ಗುಣವಿಭೂಷಣೆ ಸಲ್ಲಲಿತಾಂಗಿ ಸತ್ಯೆ ಶೈ ।
ವಾತುರೆ ಶಾಂತೆ ಶಾಶ್ವತೆ ಶುಭಾಚರಣಾನ್ವಿತೆ ಮಾನ್ಯೆ ಸದ್ಗುಣ
ವ್ರಾತೆ ವಿಳಾಸ ವಿಭ್ರಮ ಕಳಾನಿಧಿ ಮೇನೆಯೆನಿಪ್ಪಳುರ್ವಿಯೊಳ್ ॥ ೧೧೫

ವ॥ ಇಂತು ಪಿತೃಗಳ ಮನದೊಳ್ ಪುಟ್ಟಿದ ಸಕಲ ಗುಣಾಲಂಕೃತೆಯಪ್ಪ ಮೇನಾದೇವಿ

ಶ್ರೀ ಪರಮೇಶ್ವರನ ಪಾದಕಮಲದಲ್ಲಿ ದುಂಬಿಯಂತಿದ್ದಾನೆ. ಮಹಾತೇಜಸ್ವಿ, ಸಾರ್ವಭೌಮ, ದಿಗಂತವಿಶ್ರಾಂತವಾದ ಕೀರ್ತಿಶಾಲಿ, ಶರಣಾದ ಅನೇಕ ರಾಜರುಳ್ಳವ, ಜಗತ್ತನ್ನು ಬೆಳಗುವವನು, ಉದಾರಿ, ಧೀರ, ಸ್ತುತಿಗೆ ಪಾತ್ರನಾದ ಸದ್ವಂಶವುಳ್ಳವನು. ೧೧೩. ಆ ಗಿರಿರಾಜನು ಶತ್ರುರಾಜರು ಮಣಿವಾಗ ಅವರ ಕಿರೀಟದಲ್ಲಿನ ಮಣಿಪ್ರಭೆಗಳಿಂದ ಬೆಳಗುವ ಪಾದಗಳುಳ್ಳವನು, ಸರ್ವಲೋಕವಂದ್ಯ, ಭಯರಹಿತ, ತೀವ್ರಪ್ರತಾಪಶಾಲಿ, ಪರ್ವತಗಳಿಗೆಲ್ಲ ರಾಜ, ಮಹಿಮಾವಂತ, ಅಚಲ, ಶಿವನಿಗೆ ಪ್ರಿಯನಾದವನು, ಭೋಗಭಾಸುರ, ಶ್ರೇಷ್ಠ ಗುಣಶಾಲಿ, ಪ್ರಚಂಡ ಪರಾಕ್ರಮಶಾಲಿ ಎನಿಸಿದ್ದನು. ೧೧೪. ಆ ನಗಾಧಿರಾಜನಿಗೆ ವಂದಿಸದೆ ಇರುವ ರಾಜರಿಲ್ಲ, ಗೌರವಿಸದ ರಾಜಪುತ್ರರಿಲ್ಲ, ಒಲಿಯದ ಹೆಣ್ಣುಗಳಿಲ್ಲ, ತಲೆಬಾಗದಿರುವ ತ್ಯಾಗಿಗಳಿಲ್ಲ, ಮಣಿಯದ ವೀರರಿಲ್ಲ, ಶರಣಾಗದ ಬಲವಂತರಿಲ್ಲ, ಆತನ ಕೀರ್ತಿ ವ್ಯಾಪಿಸದೆ ಇರುವ ಯಾವ ದಿಕ್ಕೂ ಇಲ್ಲ ಎಂಬಂತೆ ಆತ ಎಲ್ಲರಿಗೂ ಗೌರವಾರ್ಹನಾಗಿದ್ದನು. ೧೧೫. ಆತನ ಪುಣ್ಯಾಂಗನೆ ಮೇನಾದೇವಿ; ಆಕೆ ಮಹಾಸೌಂದರ್ಯವತಿ, ಪೂಜ್ಯಳು, ಪರಾಪರಕ್ಕೆಲ್ಲ ಮುಖ್ಯಳಾದವಳು, ಪತಿವ್ರತೆ, ಸತ್ಯೆ, ಶಿವಭಕ್ತಿಯಲ್ಲಿ ಆಸಕ್ತಿಯುಳ್ಳವಳು, ಶಾಂತೆ, ಶಾಶ್ವತೆ, ಶುಭಕರ್ಮನಿರತೆ, ಸದ್ಗುಣವತಿ, ವಿಲಾಸ-ವಿಭ್ರಮಕಲೆಗಳಿಗೆ ನಿಧಿ, ಎಂಬಂತೆ ಆಕೆ ಇದ್ದಳು. ವ॥ ಹೀಗೆ ಪಿತೃಗಳ ಮನೋಭವೆಯಾದ ಮೇನಾದೇವಿಯು ಹಿಮವಂತನಿಗೆ ಮನ್ನದನ್ನೆಯಾದಳು. ಆ

ನಿಜವಲ್ಲಭೆಯಾಗೆ ನಿಶ್ಚಿಂತತೆಯಿಂದಿರ್ಪರುಂ ಪರ್ವಿದ ಹರ್ಷಕ್ಕಿಂಬುಗೊಟ್ಟು ನಲಿ ನಲಿದು ಕೆಲವು ದಿನಂ ಸಮಸುಖದೊಳಿರ್ದುಂ ಮೈನಾಕನೆಂಬ ಕುಮಾರನಂ ಪಡೆದು ಸಕಳಸಾಮ್ರಾಜ್ಯಭರಿತ ದಿಗ್ವಳಯನಾಗಿ ಅಪ್ರತಿಹತ ಪ್ರತಾಪಭೂಪನೆನಿಸಿಯೋಷಧಿ ಪ್ರಸ್ಥಪುರಕ್ಕೆ ಮಲಯಜತಿಲಕದಂತೆ ವಿರಾಜಿಸುವರಮನೆಯ ಸಭಾನಿಳಯದೊಳ್ ಪ್ರಭಾವಳಯಮೆನಿಸಿದ ನವಕನಕ ಮಣಿಗಣ ಭಾಸುರ ನಿವಾಸಭದ್ರಾಸನಮಂ ದುಷ್ಟವಿದ್ವಿಷ ವಿದ್ರಾವಣನೆನಿಪ್ಪ ಶೈಲರಾಜನವಷ್ಟಂಭಿಸಲೊಡಂ, ಸಿಂಹಾಸನದಿರ್ಕೆಲದೊಳ್‌ನಿಂದ ವೀರಲಕ್ಷ್ಮಿ ವಿಜಯಲಕ್ಷ್ಮಿಯರ್ ಸಕಲ ಭೂಪಾಲರ ಸುಕೃತ ಬೀಜರಾಜಿಗಳಂ ಜಗದ್ವಿಜಯವಲ್ಲಭೈಕಪಟ್ಟಕ್ಕೆ ವೀರಸೇಸೆಯನಿಕ್ಕುವಂತೆ ಬಿಂಕದಿಂ ಕೊಂಕಿನಿಂದು ಕಂಕಣ ಝುಣಝುಣತ್ಕಾರಂ ಸಭೆಯ ಕಿವಿಗೆ ಸವಿಗಳಂ ಸಾಲಿಡೆ ಸೂಳಱಿದಿಕ್ಕುವ ಚಾಮರ ಗ್ರಾಹಿಣಿಯರೊಳಂ, ಮತ್ತಮಾಸ್ಥಾನಮೆಂಬ ನೀರ್‌ತೆಗೆದ ರತ್ನಾಕರದೊಳಲ್ಲಲ್ಲಿ ತರತರಂಬಿಡಿದು ಗುಡಿಸಿದ ರತ್ನರಾಶಿಗಳಿವೆಂಬಂತ ಮಣಿನಿಕರ ಖಚಿತಮಕುಟಕೋಟಿಗಳ್ ಮೆಱೆಯೆ ಬಹುರತ್ನಕದಂಬಕಾಂತಿ ಮಂಡಳಿಸೆ ಪರಿವೇಷಂಗೊಂಡ ರವಿಮಂಡಲದ ಹಿಂಡುಗಳಂತೆ ತೆಕ್ಕನೆ ತೀವಿ ಕಿಕ್ಕಿಱಿಗಿಱಿದು ಕುಳ್ಳಿರ್ದು ಲಾಳ ಗೌಳ ಚೋಳ ಕೇರಳ ಪಾಂಡ್ಯ ಪಲ್ಲವ ಮಗಧ ಮಾಳವ ವಂಗ ಕಳಿಂಗ ಬಂಗಾಳ ತೆಲುಂಗ ಗುರ್ಜರ ಹಮ್ಮೀರ ನೇಪಾಳರ್ ಮೊದಲಾದ ರಾಜಪುತ್ರರ ಪಙ್ಕ್ತಿಗಳೊಳಂ, ಮತ್ತಮಾ ಶೈಳಪತಿಗೆ ನೆನೆವ ಮನಂ, ನುಡಿವನಾಲಗೆ, ನೋಡುವಕಣ್, ಕುಡುವಕೆಯ್, ಪಿಡಿವ ಕೈಯ್ದುಗಳೆನಿಸಿ ಸುರಗುರುವಿನ ಬುದ್ಧಿಯೆಲ್ಲಂ ದೇವಲೋಕವಿಳಸಿತಮೆಂದೇಳಿಸಿ ದೈತ್ಯ ಗುರುವಿನ ಮಂತ್ರಮನ

ದಂಪತಿಗಳು ನಿಶ್ಚಿಂತೆಯಿಂದ ಆನಂದವಾಗಿ ಕೆಲವುದಿನವಿರಲು ಅವರಿಗೆ ಮೈನಾಕನೆಂಬ ಪುತ್ರನುದಿಸಿದನು. ಸಕಲಸಾಮ್ರಾಜ್ಯವನ್ನು ಅಪ್ರತಿಮ ಪ್ರತಾಪದಿಂದ ಆಳುತ್ತಿದ್ದಾನೆ ಹಿಮವಂತ. ಓಷಧಿಪ್ರಸ್ಥಪುರಕ್ಕೆ ಅವರ ಅರಮನೆ ಮಲಯಜ ತಿಲಕದಂತಿದೆ. ಅದರಲ್ಲಿ ಮಣಿಖಚಿತ ರತ್ನ ಸಿಂಹಾಸನ, ಅದರಲ್ಲಿ ಶತ್ರುಭಯಂಕರನಾದ ಗಿರಿರಾಜ ವಿರಾಜಿಸುತ್ತಿದ್ದಾನೆ. ಸಿಂಹಾಸನದ ಎರಡೂ ಕಡೆಗಳಲ್ಲಿ ವೀರಲಕ್ಷ್ಮಿ ವಿಜಯಲಕ್ಷ್ಮಿಯರಂತೆ ಬಿಂಕದಿಂದ ಕೊಂಕಿನಿಂದು ಚಾಮರಗ್ರಾಹಿಣಿಯರು, ಚಾಮರಬೀಸುತ್ತಿದ್ದಾರೆ. ಅದು ಸಕಲಭೂಪಾಲರ ಸುಕೃತ ಬೀಜರಾಜಿಗಳನ್ನು ಜಗದ್ವಿಜಯಪಟ್ಟಕ್ಕೆ ಕೂಡಿಸಿ ವೀರಸೇಸೆಯನಿಕ್ಕುವಂತೆ ಇದೆ. ಚಾಮರ ಬೀಸುವಾಗ ಅವರ ಕಂಕಣ ಝುಣತ್ಕಾರ ಸಭೆಯ ಕಿವಿಗೆ ಇಂಪುತರುತ್ತಿದೆ. ಹಿಮವಂತನ ಸಭಾಸ್ಥಾನವು ನೀರು ತೆಗೆದ ರತ್ನಾಕರ (ಸಾಗರ)ವೊ ಎಂಬಂತೆ ಗುಡಿಸಿ ರಾಶಿ ಮಾಡಿದ ರತ್ನರಾಶಿಗಳೆಂಬಂತೆ ಮಣಿನಿಕರ ಖಚಿತ ಮಕುಟ ಕೋಟಿಗಳು ರಾಜಿಸುತ್ತಿದೆ. ಬಹುರತ್ನಕಾಂತಿಗಳು ಮಂಡಳಿಸಿದ್ದರಿಂದ ಗೂಡುಗಟ್ಟಿದ ರವಿಮಂಡಲಿಗಳ ಹಿಂಡುಗಳಂತೆ ಪಂಕ್ತಿಕಟ್ಟಿ ಕುಳಿತಿದ್ದಾರೆ ಲಾಳ, ಗೌಳ, ಚೋಳ, ಕೇರಳ ಮೊದಲಾದ ರಾಜಪುತ್ರರು ; ಮತ್ತು ಆ ಶೈಲಪತಿಗೆ ನೆನೆವಮನವೂ, ನುಡಿವನಾಲಗೆಯೂ, ನೋಡುವ ಕಣ್ಣೂ, ಕೊಡುವಕೈಯೂ, ಹಿಡಿವಕೈದು (ಆಯುಧ)ವೂ ಎನಿಸಿದೆ ಸುರಗುರುವಿನ ಪ್ರಜ್ಞಾಶಕ್ತಿ, ಅದು ದೇವಲೋಕದ ವಿಲಾಸವನ್ನೂ ದೈತ್ಯಗುರು (ಶುಕ್ರಾಚಾರ್ಯ) ವಿನ

ಧೋಭುವನ ವಿಳಸಿತಮೆಂದಧಃಕರಿಸಿ ನಿಜಮಂತ್ರ ಶಕ್ತಿಯಿಂ ಸರ್ವೋರ್ವೀಧರ ನಿಕಾಯಮಂ ಕಾಲ್ಗೆಱಗಿಸಿಕೊಳ್ವ ಮಂತ್ರಿಗಳ ಮಂತಣದೊಳಂ, ಮತ್ತಮೊತ್ತರದಿನೆತ್ತಿ ನಡೆವೆಡೆಯೊಳರಿರಾಯರ ಗುಹೆ ಗಹ್ವರಂ ಬೆಟ್ಟಗಟ್ಟ ಬಿದಿರ್ಬೆತ್ತದಿಂದೆತ್ತಲುಂ ಮುತ್ತಲರಿದೆನಿಸಿದರಿ ಬಿರುದಿನ ಗಿರಿದುರ್ಗಂಗಳಂ ವಜ್ರಧರನಂತಡಿಸಿ ಘಡು ಘಡುಸಿ ಪುಡಿಗುಟ್ಟುವ, ಮತ್ತಂ ಸಕಲತರುನಿಕರದಿಂದಿಡಿದಿಡಿದುರ್ವಿ ಕೊರ್ವಿ ಪರ್ಬಿದ ಮರ್ಬಿಂದಗುರ್ವಿಸುತ್ತಪ್ರತಿಹತಮೆನಿಸಿ ದುಷ್ಪ್ರವೇಶಮಾದ ವನದುರ್ಗಂಗಳಂ ದಾವಾನಳನಂತಟ್ಟಿ ಮುಟ್ಟಿ ಸುಟ್ಟುರಿಪುವ, ಮತ್ತಮಲ್ಲದೆಯುಂ ನಾಲ್ಕುಂ ದೆಸೆಗಳೊತ್ತರದಿಂ ಸುತ್ತಿ ಮುತ್ತಿ ನಿಬಿಡತರ ನಿರ್ಘೋಷ ಪ್ರಭೂಷಣ ಲೋಲಕಲ್ಲೋಲ ಮಾಲಾಸಂಘಟ್ಟನ ಸಮುದ್ಭೂತ ಸಲಿಲ ಪೂರ್ಣಮಾದ ಜಲದುರ್ಗಂಗಳಂ ಬಡಬಾನಳನಂತೆ ನಾಡೆಪೀರ್ವ, ನಿಜಭುಜಪ್ರತಾಪಂ ರೂಪುಗೊಂಡಂತೆ ತಂಡ ತಂಡದೊಳ್ ಕುಳ್ಳಿರ್ದ ದಂಡನಾಥಯೂಥದೊಳಂ; ಮತ್ತಂ ನಿಜಮಂದಿರದ ರಸಿಕರ ಗಾಯಕರ ಗೋಷ್ಠಿಯೊಳ್ ಪುಟ್ಟಿದ ರಸಕಾವ್ಯಗಾನಮನುಱ ಕೇಳ್ದು ಸವಿವ, ಮುಖಮಂಡಲದ ಲಲಿತಲಾವಣ್ಯಮಂ ಕಮನೀಯ ಕಾಂತಿಯಂ ಕನ್ನಡಿಯೊಳ್ ಕಳ್ದು ನೋಳ್ಪ, ಸಖೀಜನಂ ಕಲಿಸಿದ ಸುಖಪ್ರತಿಕೂಲವಚನಮಂ ಮುಖದ ಮುನಿಸುಮಂ ಪ್ರಿಯದರ್ಶನದಿಂ ಮುನ್ನಮೆ ಮಱೆದು ನಲ್ಲನೊಳ್ ಸಲ್ಲೀಲೆಯಿಂ ನೆರೆವ, ಕೇಳೀವನದ ಬಿನದಕ್ಕೆ ಇನಿಯಂ ಪೋದನಿತು ಬೇಗಮಂ ಸೈರಿಸಲಾಱದೆ ಪರಿತಂದು ಸೆಜ್ಜೆವನೆಯ ಸಿರಿಮಂಚದೊಳ್ ಕುಳ್ಳಿರ್ದು ಬಳ್ಳಿವರಿವ ನೇಹಂ ಕುಡಿನಿಮಿರೆ ಸುರತಸಮಯದೊಳಿನಿಯನಾಡಿದ ಸನಿನುಡಿಗಳನುಸಿರ್ದುಸಿರ್ದು ಸವಿ

ಮಂತ್ರಶಕ್ತಿಯು ಅಧೋಭುವನ (ಪಾತಾಳ) ವಿಲಾಸವೆಂದು ತಿರಸ್ಕರಿಸುತ್ತಿದೆಯೋ ಎಂಬಂತಿದೆ; ಮೇಲಾಗಿ ನಿಜಮಂತ್ರ ಶಕ್ತಿಯಿಂದ ಎಲ್ಲ ಪರ್ವತಗಳನ್ನು ಕಾಲಿಗೆ ಎರಗಿಸಿಕೊಳ್ಳುವ ಮಂತ್ರಿಗಳನ್ನು ಒಳಗೊಂಡಿದೆ ಮತ್ತು ಮೇಲೇರಿ ಬರುವ ಅರಿರಾಯರಿಗೆ ಗುಹೆ ಗಹ್ವರ–ಬೆಟ್ಟ–ಗಟ್ಟ–ಬಿದಿರು–ಬೆತ್ತ ಮೊದಲಾದವುಗಳಿಂದ ಅಸಾಧ್ಯವಾಗಿರುವ ಗಿರಿದುರ್ಗಗಳನ್ನು ವಜ್ರಧರನಂತೆ ಪ್ರತಿಭಟಿಸುತ್ತಿದೆ. ಸಕಲ ತರು ಸಮೂಹಗಳಿಂದ ಗುಂಪುಗುಂಪಾಗಿ ಹಬ್ಬಿರುವ ವನದುರ್ಗಗಳನ್ನು ದಾವಾನಲನಂತೆ ಸುಟ್ಟುರಿಸುವ, ಮೇಲಾಗಿ ನಾಲ್ದೆಸೆಗಳಲ್ಲಿ ಸುತ್ತಿಮುತ್ತಿ ಹೆದ್ದೆರೆಗಳ ಘೋಷಣೆಯಿಂದ ಜಲಪೂರ್ಣವಾದ ಜಲದುರ್ಗಗಳನ್ನು ಬಡಬಾನಳನಂತೆ ಚೆನ್ನಾಗಿ ಹೀರುವ, ತನ್ನ ಭುಜಪ್ರತಾಪವೇ ರೂಪುಗೊಂಡಂತೆ ತಂಡತಂಡವಾಗಿ ಕುಳಿತಿರುವ ದಂಡನಾಥರ ಸಮೂಹಗಳಲ್ಲಿಯೂ; ಮತ್ತು ತಮ್ಮ ತಮ್ಮ ಮನೆಗಳಲ್ಲಿ ರಸಿಕರ ಗಾಯಕರ ಗೋಷ್ಠಿಗಳಲ್ಲಿ ರಚಿತವಾದ ರಸಕಾವ್ಯಗಾನವನ್ನು ಸವಿಯುವ, ತಮ್ಮ ಮುಖಮಂಡಲಗಳ ಲಲಿತ ಲಾವಣ್ಯವನ್ನು ಕನ್ನಡಿಗಳಲ್ಲಿ ಕದ್ದು ನೋಡುವ, ಸಖಿಯರು ಕಲಿಸಿದ ಸುಖಕ್ಕೆ ಪ್ರತಿಕೂಲವಾದ ಮಾತುಗಳನ್ನು, ಹುಸಿ ಮುನಿಸನ್ನು ಪ್ರಿಯರ ದರ್ಶನಕ್ಕೆ ಮೊದಲೇ ಮರೆತು ತಮ್ಮ ನಲ್ಲರಲ್ಲಿ ರಮಿಸುವ, ವಿನೋದಕ್ಕಾಗಿ ಕೇಳೀವನಕ್ಕೆ ಹೋದ ಇನಿಯನ ವಿರಹವನ್ನು ಸೈರಿಸಲಾರದೆ ಓಡಿಬಂದು ಶಯನಗೃಹದ ಮಂಚದಲ್ಲಿ ಕುಳಿತು ಬೆಳೆದ ಸ್ನೇಹವು ಚಿಗುರಿ, ಸುರತ ಸಮಯದಲ್ಲಿ ಇನಿಯನು ನುಡಿದ ಸವಿಮಾತುಗಳನ್ನು ನೆನೆಸಿಕೊಂಡು ಅವುಗಳನ್ನು ಕೇಳಿ ಕೇಳಿ, ನವಿರೇರಿ ಸುತ್ತಲೂ ನೋಡಿ ಚಿತ್ರಚಿತ್ರಗಳು

ಸವಿದಾಲಿಸಿ ಪುಳಕಿಸುತುಂ ಕೆಲಬಲನಂ ನೋಡಿ ಭಿತ್ತಿಯ ಚಿತ್ರಂ ಕಾಣ್ಗುಮೆಂದು ನಾಣ್ಚಿನಿಲುತ್ತ್ತ ತಡೆದ ನಲ್ಲನಂ ಕಣ್ಮುಚ್ಚಿ ನೆನೆದು ಮನದ ಕಣ್ಣೊಳ್ ಸನ್ನೆಗೆಯ್ದು ಬುದ್ಧಿಯಿಂ ಬರಿಸಿಯಹಂಕಾರದಿಂ ಪಿಡಿದು ಚಿತ್ತದೊಳ್ ನೆರೆದು ಭಾವರತಿ ಒಲಿದು ಬಂದಂತೆ ಬಗೆದು ಕಣ್ದೆಱೆದು ಕಾಣದೆ ಬಯಲನಪ್ಪಿದ ತೋಳ್ ಬಂಜೆಯಾಗೆ ಬಾಡಿದ ಲತೆಯಂತೆ ಕಂದಿ ಕುಂದುವ ಪೊಳ್ತುಮಱೆಯಿಲ್ಲದೆ ಪೊಸಂತಿಲಂ ಪೊಱಮಡಲಱಿಯದೋಲಗಕ್ಕೆ ಪೋಪಲ್ಲಿ ದಾದಿಯ ಸೆರಗಂ ಪಿಡಿದು ನಡೆವಲ್ಲಿ ರಾಜವೀಧಿಯೊಳ್ ಸುಳಿವ ಜವ್ವನಿಗರಂ ಕಂಡು ಪೊಲಂಬುಗೆಟ್ಟ ಪುಲ್ಲೆಯಂತೆ ದೆಸೆದೆಸೆಗೆ ಬೆರ್ಚುವ ನುಡಿಸಿದ ವಿಟಂಗೆ ಮೌನಮನುತ್ತರಂಗುಡುವ, ಸಮದೃಷ್ಟಿಯಾಗೆ ಮಿಂಚು ಪಳಂಚಿದಂತೆ ಕಣ್ಮುಚ್ಚುವ, ಎಸೆವ ಸಭೆಯೊಳ್ ನಸು ಮುಸುಂಕು ನಾಡೆ ಮೆಱೆಯೆ ಮಱೆಗೊಂಡು ಕುಳ್ಳಿರ್ಪಲ್ಲಿ ರಾಜಪುತ್ರರ್ ನೆವದಿಂ ಸೋಂಕಿ ಭೀತಿಯಿಂ ಬೆಮರ್ವ, ಸಾತ್ವಿಕರಸಂ ಪುಟ್ಟ ಸನ್ನೆಯಱಿಯದ ಸರಸವಱಿಯದ ಜಾಣಱಿಯದ ಕೇಣವಱಿಯದ ನಿಲವು ನಿರ್ವಿಕಾರ ಸುಖಮನೀಯೆ ಕಾಮಸುಖಕ್ಕೆ ಕಣ್ ಬಂದಂತೆ ಸೌಕುಮಾರ್ಯಕ್ಕೆ ಸವಿಯೇಱಿದಂತೆ ಆಲಿಂಗನಕ್ಕೆ ಅವಯವಂ ಬಂದಂತೆ ಚೆಲ್ವಿಂಗೆ ಮೊಲೆಮೂಡಿದಂತಲ್ಲಲ್ಲಿ ಕುಳ್ಳಿರ್ದ ಬಚ್ಚ ಬಱಿಯಚ್ಚಸುಖದ ಪಚ್ಚಪಸಿಯು ಪೊಚ್ಚಪೊಸ ಹರೆಯದ ಮುಗ್ಧಾಂಗನೆಯರೊಳಂ; ಮತ್ತಂ ನಿಳಯಾಂಗಣದೊಳ್ ಸುಳಿವ ವಿಟನಂ ನೋಟದೊಳೊಳವುಗಿಸಿ ಕೂಟದೊಳ್ ಕೊಸಱಿ ಬೇಟದೊಳ್ ಬಳೆಯಿಸಿ ನೆರೆವ, ಪರಿಮಿತದ ಮೋಡಾ ಮೋಡಿಯನುಭವದೊಳ್ ವಲ್ಲಭನ ಮನಂ ಪಲ್ಲಟಿಸುವ ಕಾಲಮನಱಿದು ಕಡುಮುಳಿದ

ಕಾಣುವುವೆಂದು ನಾಚಿ ನಿಲ್ಲುತ್ತಾ, ತಡೆದ ನಲ್ಲನನ್ನು ಕಣ್ಣು ಮುಚ್ಚಿ ನೆನೆದು ಮಾನಸಿಕವಾಗಿ ಸನ್ನೆಮಾಡಿ, ಬುದ್ಧಿಯಿಂದ ಬರಮಾಡಿಕೊಂಡು ಅಹಂಕಾರದಿಂದ ಹಿಡಿದು, ಚಿತ್ತದಲ್ಲಿ ನೆರೆದು, ಭಾವರತಿಯಿಂದ ಒಲಿದು ಬಂದಂತೆ ತಿಳಿದು, ಕಣ್ದೆರೆದು ಕಾಣದೆ ಬಯಲನ್ನು ಅಪ್ಪಿತೋಳು ನಿರರ್ಥಕವಾಗಲು, ಬಾಡಿದ ಲತೆಯಂತೆ ಕಂದಿಕುಂದುವ, ಹೊತ್ತು ಮರೆಯಿಲ್ಲದೆ ಹೊಸ್ತಿಲನ್ನು ದಾಟಲರಿಯದೆ ಓಲಗಕ್ಕೆ ಹೋಗುವಾಗ, ದಾದಿಯ ಸೆರಗನ್ನು ಹಿಡಿದು ನಡೆಯುವಾಗ, ರಾಜಬೀದಿಗಳಲ್ಲಿ ಸುಳಿಯುವ ಯುವಕರನ್ನು ಕಂಡು ಹೊಲಬುಗೆಟ್ಟ ಹುಲ್ಲೆಯಂತೆ ದೆಸೆದೆಸೆಗೆ ಬೆಚ್ಚುವ, ಮಾತನಾಡಿಸಿದ ವಿಟನಿಗೆ ಮೌನವಾಗಿಯೇ ಉತ್ತರಿಸುವ, ಸಮದೃಷ್ಟಿಯಾಗಲು ಮಿಂಚು ಹೊಳೆದಂತೆ ಕಣ್ಮುಚ್ಚುವ; ರಾಜಸಭೆಯಲ್ಲಿ ಮುಖಪರದೆಯ ಮರೆಯಲ್ಲಿ ಕುಳಿತಿದ್ದ ರಾಜಪುತ್ರರು ನೆವದಿಂದ ಸೋಂಕಲು ಭೀತಿಯಿಂದ ಬೆವರುವ, ಸಾತ್ವಿಕಸವು ಹುಟ್ಟಲು ಸನ್ನೆಯರಿಯದ, ಸರಸವರಿಯದ ನಿಲವು ನಿರ್ವಿಕಾರವನ್ನೂ ಈಯಲು ಕಾಮಸುಖಕ್ಕೆ ಕಣ್ಣು ಬಂದಂತೆ ಸೌಕುಮಾರ್ಯಕ್ಕೆ ಸವಿಯೇರಿದಂತೆ ಆಲಿಂಗನಕ್ಕೆ ಅವಯವವು ಬಂದಂತೆ ಚೆಲ್ವಿಗೆ ಚೆಲುವು ಮೂಡಿದಂತೆ ಅಲ್ಲಲ್ಲಿ ಕುಳಿತು ಪಚ್ಚಪಸಿಯ ಹರಯದ ಮುಗ್ಧಾಂಗನೆಯರಲ್ಲಿಯೂ; ಮತ್ತು ನಿಲಯಾಂಗಣದಲ್ಲಿ ಸುಳಿವ ವಿಟನನ್ನು ನೋಟದಲ್ಲಿ ಹುದುಗಿಸಿ, ಕೂಟದಲ್ಲಿ ಕೊಸರಿ, ಬೇಟದಲ್ಲಿ ಬಳೆಯಿಸಿ ನೆರೆವ, ಪರಿಮಿತಿಯ ಮೋಡಾಮೋಡಿಯ ಅನುಭವದಲ್ಲಿ ಪ್ರಿಯನ ಮನಸ್ಸನ್ನು ಪಲ್ಲಟಸುವ ಕಾಲ

ಖಾತಿಮಿಕ್ಕು ಪ್ರಣಯ ಕಲಹಂ ಕೈಗಣ್ಮೆ ಕಂಡಂಜಿ ಕಾಲ್ಗೆಱಗಿದ ಕಾಂತಂಗೆ ಕಾರುಣ್ಯಮಂ ನೀಡಿ ಕೊಡುವ ಸುರತಚಂದ್ರೋದಯದೊಳ್ ಕಾಮ ಸುಖಾಬ್ಧಿಯುರ್ಕಿ ಪರಿಯೆ ಗಾಢಾಲಿಂಗನಂ ತೆರಪುಗುಡದಿರೆ ಸರ್ವಾಂಗಮಂ ಪ್ರತ್ಯಂಗದೊಳ್ ಮೇಳಯಿಸಿ ಕುಸುಮಾಯುಧ ಸುಖತರಂಗಿಣಿಯ ಸುಳಿಯೊಳ್ ಮನಂ ಮುಳುಂಗಿರ್ದ ಸುಖಸಮಯದೊಳರಮನೆಯ ಸೂಳಾಯ್ತರ ಸರವೆತ್ತಿ ಸಾಱುವ ದನಿಯಂ ಭೋಂಕನೆ ಕೇಳ್ದು ಮುಗಿಲ ದನಿಗೇಳ್ದ ಮರಾಳನಂತೆ ಮನಂಗುಂದಿ ಕೂಟದ ಕೇಡಿಂಗೆ ನಾಡೆನೊಂದು ಮನದಪ್ಪು ಸಡಿಲದೆ ತನುವಿನಪ್ಪು ಸಡಿಲ್ದು ಸಂಗಸುಖಮಂ ಪಿಂಗಲಾಱದೆ ಕಾಮನ ಬಾಣಕ್ಕೆ ಗುಱಿಯಾಗಿ ಮಱುಗಿ ಮಲ್ಲಳಿಗೊಂಡು ಮೆಲ್ಲನೇಳ್ದು ಮುಂದುಗೆಟ್ಟಂತಂತೆ ಸಿಂಗರಿಸಿ ಪಿಡಿಮಿಡಿಗೊಂಡು ನಡೆತರ್ಪಾಗಳ್ ಮುಡಿಯಭಾರಕ್ಕೆ ಕೊರಲ್ ಕೊಂಕೆ ನೆಲೆಮೊಲೆಯ ಬಿಣ್ಪಂಗೆ ಬಡನಡು ಬಳ್ಕೆ ನಿತಂಬಭಾರಕ್ಕೆ ಮೆಲ್ಲಡಿ ಮಲ್ಲಳಿಗೊಳುತ್ತಿರೆ ನೇಪುರದನುಣ್ದನಿಗೆಗಾವಱಿಸುವ ವಿಟರ ನೋಟಮಂ ಜಡಿವಂತೆ ಪಾದ ಮುದ್ರಿಕೆ ಪಳಂಚೆ ಕಡೆಗಣ್ಗಳ ಕಾಂತಿಯೊಳೆಳಲ್ವನವ ಜವ್ವನಿಗರಂ ನಗುವಂತೆ ಸೂಕ್ತಿಯೊಡನೆ ಸೂಸುವ ಸುಲಿಪಲ್ಲ ಬೆಳಗು ಬೀದಿವರಿಯೆ ನಡೆತಂದೊಡ್ಡೋಲಗಮನೊಟ್ಟಯಿಸಿ ಪೊಕ್ಕು ಮಕುಟವರ್ಧನರಂ ಮರುಳ್ಗೊಳಿಸುತುಂ ಮೆಱೆದು ಕುಳ್ಳಿರ್ದ ಮಧ್ಯಮ ನಾಯಕಿಯರ ನಿಕರದೊಳಂ ; ಮತ್ತಮನುರಾಗಮೇಱೆ ಮನಃದಂದು ಬಂದ ವಿಟರ್ಗುನ್ನತಾಸನಮನಿತ್ತು ಮನ್ನಿಸಿ ಮಣೆದು ಸಜ್ಜೆವನೆಗುಯ್ದು ಸಜ್ಜನಸ್ನೇಹದಿಂ ಸಾಗಿಸಿ ನೋಡಿ ಭೋಗದೊಳ್ ಬೋಳಯಿಸಿ ರಾಗದಿಂ ಮೇಳಯಿಸಿ ಮುಂದೆವಾಳಂ ಮೆಯ್ಸಂದೊಂದೆರಳ್ ಬಂಧದನುಭವದೊಳ್ ಮಂದಯಿಪ ಸುಖಮನಿತ್ತು ನೆತ್ತದೊಳ್ ಬಿತ್ತರಂ ಬಡೆದು ಚದುರಂಗದೊಳ್

ವನ್ನು ಅರಿತು, ಕಡುಮುಳಿದ ಪ್ರಣಯ ಕಲಹವು ಕಂಡುಬರಲು ಕಾಲಿಗೆ ಬಿದ್ದ ಕಾಂತನಿಗೆ ಕರಗಿ ಕೊಡುವ ಸುರತದಲ್ಲಿ ಕಾಮಸುಖವು ಉಕ್ಕಿಬಂದು ಗಾಢವಾಗಿ ಆಲಿಂಗಿಸಿ ಅಂಗಾಂಗಗಳನ್ನು ಅಂಗಾಂಗಗಳಿಗೆ ಮೇಳವಿಸಿ, ಮದನಸುಖತರಂಗಿಣಿಯಲ್ಲಿ ಸುಳಿದು ಮನವು ಮಗ್ನವಾಗಿರುವಾಗ ಅರಮನೆಯ ಜಾವಕಾವಲುಗಾರರ ಎಚ್ಚರಿಕೆಯನ್ನು ಕೇಳಿ ಮೇಘಧ್ವನಿಯನ್ನು ಆಲಿಸಿದ ಹಂಸೆಯರಂತೆ ಖಿನ್ನರಾಗಿ ಮನಸ್ಸು ಸಡಿಲದಿದ್ದರೂ ಶರೀರದ ಅಪ್ಪುಗೆ ಸಡಲಿ,ಸಂಗಸುಖವು ಹಿಂಗಲಾರದೆ ಮದನಬಾಣಕ್ಕೆ ಗುರಿಯಾಗಿ ಮರುಗಿ ಮೆಲ್ಲನೆ ಎದ್ದು ಸಿಂಗರಿಸಿಕೊಂಡು ನಡೆತರುವಾಗ ಮುಡಿಯಭಾರಕ್ಕೆ ಕೊರಲುಕೊಂಕಿತು, ಮೊಲೆಭಾರಕ್ಕೆ ನಡು ಬಳುಕಿತು, ನಿತಂಬಭಾರಕ್ಕೆ ನಡೆಮಂದವಾಯಿತು, ನೂಪುರಧ್ವನಿಗೆ ಕಿವಿಗುಡುವ ವಿಟರ ನೋಟವನ್ನು ಪಾದಮುದ್ರಿಕೆ ಕಾಂತಿ ಎದುರಿಸಿತು. ಕಡೆಗಣ್ಣ ನೋಟಕ್ಕೆ ಅಳುಕಿದ ನವಯುವಕರನ್ನು ನಗುವಂತೆ ಸೂಕ್ತಿಯೊಡನೆ ಸೂಸುವ ಸುಲಿಪಲ್ಲ ಬೆಳಕು ಹರಡುತ್ತಿರಲು, ಒಡ್ಡೋಲಗಕ್ಕೆ ಬಂದು ರಾಜಕುಮಾರರನ್ನು ಮರುಳುಗೊಳಿಸುವ ಮಧ್ಯಮ ನಾಯಕಿಯರ ಗುಂಪುಗಳಲ್ಲಿಯೂ, ಮತ್ತೆ ಅನುರಾಗವು ಹೆಚ್ಚಿ ಬಂದ ವಿಟರಿಗೆ ಉನ್ನತಾಸನವಿತ್ತು ಮನ್ನಿಸಿ,ಮಲಗುವ ಮನೆಗೊಯ್ದು ಸಂಗಮಿಸಿ ರಾಗದಿಂದ ಒಂದುಗೂಡಿ ವಿವಿಧ ಬಂಧದ ಅನುಭವಗಳಿಂದ ಸುಖವನ್ನಿತ್ತು,ಪಗಡೆ, ಚದುರಂಗ ಮೊದಲಾದ ಆಟಗಳು,

ಚಾತುರ್ಯಮನಿತ್ತು ಓದಿನೊಳ್ ಮಾಧುರ್ಯಂಬಡೆದು ಪಾಡಿನೊಳ್ ಪರಿವಡೆದು ನುಡಿಯೊಳ್
ನಯಂಬಡೆದು ವೀಣೆಯೊಳ್ ಜಾಣಂ ಮೆಱೆದು ಉಪಚಾರದೊಳೊಯ್ಯಾರಂ ಬಡೆದು ಇಚ್ಛೆ
ಯೊಳ್ ಕೆಚ್ಚುಗಟ್ಟಿ ಸಿಂಗರದೊಳ್ ಸೊಬಗುವೆತ್ತು ವಿಳಾಸದೊಳ್ ವಿವೇಕಂಬಡೆದು ನಡೆದು ಬಂದ
ರಮನೆಯಂ ಪುಗುವಾಗಳ್ ಮುಖಮಂಡಲಂ ಚಂದ್ರಮಂಡಲಮನಿಳಿಕೆಗೆಯ್ಯೆ, ಪುರ್ವಿನ ಕೊರ್ವು
ಕರ್ವುವಿಲ್ಲಂ ಕೀಳ್ಮಾಡೆ ಕಡೆಗಣ್ಣ ಕಾಂತಿ ಕುಸುಮಾಸ್ತ್ರಮಂ ಕಿದಱೆ ಕರ್ಣಾಭರಣಂ ರವಿಕಿರಣಮ
ನನುಕರಿಸೆ ಉಟ್ಟಬಿಳಿದು ಬೆಳ್ದಿಂಗಳಂ ಬೀಱೆ ಪಿಡಿದಲೀಲಾಬ್ಜಂ ನೂತನಂ ಬಡೆಯೆ ನೇವುರದ ದನಿ
ನೆಲನನುಗ್ಗಡಿಸೆ ಕಂಕಣ ಝಣತ್ಕಾರರವಂ ಅರಸುಮಕ್ಕಳಂ ಜಡಿಯೆ ವಿಳಾಸದಿಂ ಪೊಕ್ಕು ಮೆಯ್ಯೊಳ್
ಪೂಸಿದ ಸಿರಿಗಂಧದ ಕಕ್ಷದೊಳಳವಟ್ಟ ಸಾದಿನ ಕಿವಿಯೊಳ್ ಮಗಮಗಿಪ ಮೃಗಮದದ ಮುಡಿದ
ಕದಂಬ ಪ್ರಸೂನದ ಬೆರಕೆಗಂಪಿಗುರವಣಿಸಿ ಮುಸುಱೆ ಮೊರೆದು ಮಂಡಳಿಸಿ ಮೌಳಿಚಳನ
ದೊಳೇಳುತೆಱಗುವ ಮಧುಕರನಿಕರಂ ಸೌಭಾಗ್ಯಲಕ್ಷ್ಮಿಯರಿಕ್ಕುವ ನೀಲದ ಸೀಗುರಿಯಂತಿರೆ
ತರದಿಂ ಕುಳ್ಳಿರ್ದ ವಿದಗ್ಧವನಿತಾ ಸಮೂಹದೊಳಂ; ಮತ್ತಂ ಸೊರ್ಕಿನ ಸೊವಡಿಂಗೆಱಗಿ ತುಱು
ಗಿದ ಪರಮೆಗಳ್ ಕರಿಮುರಿವೋಗಿ ಧರೆಯ ಮೇಲುದಿರಲಗ್ರ ಪಲ್ಲವದಿಂ ಬೀಸಿಕೊಳ್ವ ನೆಗೆದ
ತುಂತುರ್ವನಿಗಳಂ ಮುಗಿಲ ಮೆಯ್‌ಪುಗಲೇಳೆ ಪುಷ್ಕರದಿಂ ಫೂತ್ಕರಿಸುವ ಒಳಗುರ್ಕಿ ತೆರೆಮಸ
ಗುವ ಮದಸಮುದ್ರದೊಡನೆ ಕ್ರೋಧ ಬಡಬಾನಳನಂ ಬೆರಸಿ ಸುರಿದಪುದೆಂಬಂತೆ ನೆಗೆದ ಪೊಗೆ
ವೆರಸಿ ಕೀಳ್ಮದಂ ಬಿಡುವ ಕಣ್ಣಂ ಕೋಡ ಮೊನೆಗನೇಕಕಾಲದೊಳ್ ಬಂದ ರೂಪಂ ಪ್ರತಿಮಾನ
ದೊಳಟ್ಟಿಕೊಳ್ವ ಕಟ್ಟಣಕದ ದುಷ್ಟಗಜಮನಗ್ರ ಪಲ್ಲವಮಂಪಿಡಿದೇಱೆ ಭಂಗಿಸುತ್ತುಂಗುಟಕ್ಕಾಳ್ಮಾಡಿ

ಓದುಗಾರಿಕೆ, ಹಾಡಿಕೆ, ಸಲ್ಲಾಪ, ವೀಣಾವಾದನ, ಮುಂತಾದವುಗಳಿಂದ ಅವರನ್ನು
ಸಂತೋಷಗೊಳಿಸಿ, ಅರಮನೆಗೆ ಹಿಂದಿರುಗುವಾಗ, ಆ ಅಂಗನೆಯರ ಮುಖಮಂಡಲ
ಚಂದ್ರಮಂಡಲವನ್ನು ಕಣ್ಣುಹುಬ್ಬು ಕಾಮನಬಿಲ್ಲನ್ನು ಹಿಯ್ಯಾಳಿಸುತ್ತಿತ್ತು, ಅವರ ಕಡೆ
ಗಣ್ಣ ಕಾಂತಿ ಕುಸುಮಾಸ್ತ್ರವನ್ನು ಕೆದಕುವಂತಿತ್ತು. ಕರ್ಣಾಭರಣಗಳು ರವಿಕಿರಣಗಳನ್ನು
ಅನುಕರಿಸುತ್ತಿದ್ದವು, ಉಟ್ಟ ಬಿಳಿಸೀರೆ ಬೆಳ್ದಿಂಗಳನ್ನು ಬೀರುತ್ತಿತ್ತು, ಅವರು ಹಿಡಿದ ಲೀಲಾ
ಕಮಲ ಹೊಸತೆನಿಸಿತ್ತು, ನೂಪುರಧ್ವನಿ ನೆಲದ ಘೋಷಣೆಯಂತಿತ್ತು, ಕಂಕಣಗಳ
ಝಣತ್ಕಾರ ರಾಜಕುಮಾರರನ್ನು ಹೊಡೆವಂತಿತ್ತು. ಅವರು ವಿಲಾಸಕ್ಕಾಗಿ ಬಳಿದಿದ್ದ
ಶ್ರೀಗಂಧ ಮಗಮಗಿಸುತ್ತಿತ್ತು, ಆ ಕಂಪಿಗೆ ದುಂಬಿವಿಂಡು ಮುಸುರುತ್ತಿತ್ತು. ಅದು ಸೌಭಾಗ್ಯ
ಲಕ್ಷ್ಮಿಗೆ ಬೀಸುವ ನೀಲಚಾಮರದ ಸೊಬಗು ಪಡೆದಿತ್ತು ; ಇಂತೆಸೆವ ವಿದಗ್ಧವನಿತೆಯರ
ಸಮೂಹದಲ್ಲಿಯೂ, ಮತ್ತು ಕಟುವಾದ ಸೌರಭಕ್ಕೆ ಎರಗಿದ (ಮುತ್ತಿದ) ದುಂಬಿಗಳು
ಸೀದುಹೋಗಿ ನೆಲದಮೇಲೆ ಉದುರಲು ತುದಿಚಿಗುರಿನಿಂದ ಬೀಸಿಕೊಳ್ಳುವ, ನೆಗೆದ
ತುಂತುರು ಹನಿಗಳು ಮುಗಿಲನ್ನು ಪುಗಲು ಮೇಲೇಳಲು ಸೊಂಡಿಲಿನಿಂದ ಫೂತ್ಕರಿಸುವ,
ಒಳಗೆ ಉಕ್ಕಿ ತೆರೆಯೇಳುವ ಮದಸಾಗರದೊಡನೆ ಕ್ರೋಧವೆಂಬ ಬಡಬಾಗ್ನಿಯು ಬೆರತು
ಸುರಿವುದೋ ಎಂಬಂತೆ, ನೆಗೆದ ಹೊಗೆ ಬೆರತು ಮದೋದಕವನ್ನು ಸುರಿಸುವ
ಕಣ್ಣಿಗೂ, ಕೊಂಬಿನ ಮೊನೆಗೂ ಏಕಕಾಲದಲ್ಲಿ ಬಂದ ರೂಪವನ್ನು ಪ್ರತಿಮಾನ
ದಲ್ಲಿ ಒಟ್ಟಿಕೊಳ್ಳುವ, ಎದುರಾದ ದುಷ್ಟಗಜವನ್ನು ಅಗ್ರ ಪಲ್ಲವವನ್ನು ಹಿಡಿದೇರಿ ಭಂಗಿ

ಬಿದುವನಪ್ಪಳಿಸಿ ಚಪ್ಪರಿಸುತ್ತಬ್ಬರಿಸುವ ಕೊರ್ಬಿನುಡಿಯೆ ಕೂರಂಕುಸಮಾಗೆ ತೋಱಿ ತೊಟ್ಟು ಕೀಱಿ ಬಿಟ್ಟಿಕ್ಕುವ ಬಲ್ಪಿನ ಕಟ್ಟುಬ್ಬಟೆಯಿಂ ಬಿರುದಿನ ಹಾಹೆ ಕಾಲೊಳೊಳಲೆ ಕಡುಪಿಂ ಬಂದು ಪುರುಷ ಸಿಂಹಂಗಳಂತೆ ತರದಿಂ ಕುಳ್ಳಿರ್ದ ಗಜರೋಹಕರ ಗೊಂದಣದೊಳಂ; ಮತ್ತಂ ಮಂದುರ ದೊಳ್ ನಟ್ಟ ಕೆಚ್ಚಿನ ಮುಂಡಿಗೆ ಮುಱಿಯೆ ಪಾಳಾಸಂ ಪಱಿಯೆ ಪೊಱಮಟ್ಟು ನೆರವಿಯನುರವಣಿ ಸಿ ಪಾಯ್ದು ಬೀದಿವರಿದಾಱಿಗೊಂಡು ಸಿಕ್ಕಿದ ರೂಪಿನ ತಲೆಯೊಳ್ ನಿಳಿಲ್ ನಿಕ್ಕೆಂದು ತರ್ಗಿ ನುರ್ಗಿ ಕರ್ಬಿಕೊಡಹುವ ನಚ್ಚಿನ ಗೋವಂ ದನಿದೋಱಿ ಕತ್ತರಿ ವೊನೆಗೊಂಡ ಕಿವಿಯಂ ಕೆಕ್ಕಳಿಸುವ ದಿಟ್ಟಿಯಿಂ ಕಂಗನೆ ಕನಲ್ದು ಮುಂಗಾಲಿಂ ನೆಲಸಂ ಪೊಯ್ದೆಳ್ದು ಪರಿದೆಯ್ದುವ ಮುಂದೆ ಕಚ್ಚುವ ಹಿಂದೆ ಮೆಟ್ಟುವ ಕೆಲಕೆ ಚಿಮ್ಮುವ ದುಂಡಿಸಿ ನೆಗೆವ ಮುಂಡಿಸಿ ನಿಲ್ವ ಮುದಿದಪ್ಪರಿಸುವ ತರಹರಿಸಿ ಪೊಣ್ಮುವ ಪೊಱಕಾಲೊಳ್ ನಡೆವ ಸುಕಳಾಶ್ವಮಂ ಬೇಗದಿಂ ಬೆಂಗವಾಯ್ದು ರಾಘೆಯೊಳೌಂಕಿ ವಾಘೆಯೊಳ್ ನಿಲಿಸಿ ಕೆಲಬಲಕ್ಕಿಕ್ಕಿ ಸರಸ ಬೀದಿಯೊಳೇಱಿ ತೋಱಿ ನಳನಂ ದತ್ತಿಳನನಿಳಿಕೆಗೆಯ್ವ ಬಿರುದಿನ ಬಿಂಕದಂಕಮಾಲೆ ಕೆಲಬಲದೊಳಲಂಕರಿಸುತ್ತುಮಿರೆ ನಡೆತಂದು ಸಮುಚಿತಾಸನದೊಳ್ ಕ್ರಮದಿಂ ಕುಳ್ಳಿರ್ದ ಪಟ್ಟಸಹಣಿಯರ ಪರಿವಿಡಿಯೊಳಂ ಮತ್ತಂ ಮಲೆತು ನಿಂದು ಅಖ್ಖಡ ದೊಳ್ ಪೊಕ್ಕು ಬಾಹಪ್ಪಳಿಸಿ ಬಲ್ಪುದೋಱಿಸಿದ ಮಲ್ಲನನುರ್ಬಿತ್ತೊಯ್ಯನೊಳಪೊಕ್ಕು ಮಿಕ್ಕು ಪರಿದಿಕ್ಕಿ ಮುರಿವ ಅಡುಪಾಯದಳವಿಂಗೆ ಕಡಂಗುವ ಮಲ್ಲನನಡಸಿ ತಿವಿದು ಕಡುಪಿಂ ಕೆಡೆಪಿ ಕೊಪ್ಪರದೊಳ್ ಕುಮ್ಮಿ ಮುಂಡಿಯೊಳ್ ಮಿದಿದು ಕುದಿದು ಸದೆದು ಸಣ್ಣಿಸುವ ಚೊಕ್ಕೆಯ

ಸುತ್ತಾ, ಗುಟದಲ್ಲಿ ಕಿಲ್ಕಾಡಿ, ಗಂಡಸ್ಥಳವನ್ನು ಅಪ್ಪಳಿಸಿ, ಚಪ್ಪರಿಸುತ್ತಾ ಅಬ್ಬರಿಸುವ ಕೊಬ್ಬಿನ ನುಡಿಯೇ ಕ್ರೂರ ಅಂಕುಶವಾಗಲು, ಕೋರಿ, ತೊಟ್ಟು ಕೀರಿಬಿಟ್ಟಿಕ್ಕುವ, ಬಲ್ಪಿನ ಕಟ್ಟುಬ್ಬಟೆಯ ಬಿರುದಿನ ಹಾಹೆ (ಗೊಂಬೆ)ಗಳು ಕಾಲಿಗೆ ತೊಡರಲು ವೊಗದಿಂದ ಬಂದು ಪುರುಷಸಿಂಹಗಳಂತೆ ಸಡಗರದಿಂದ ಕುಳಿತಿರುವ ಗಜಾರೋಹಕರ ಸಮೂಹ ದಿಂದಲೂ ; ಅಶ್ವವಾಹಕರು ಮತ್ತು ಕುದುರೆ ಕಟ್ಟುವ ಲಾಯದಲ್ಲಿ ನಟ್ಟಿದ್ದ ಗೂಟವು ಮುರಿಯಲು ಮುತ್ತುಗ (ಪಾಳಾಸ)ದ ಗೂಟವು ಹರಿದು ಹೊರಬಂದು ಜನರ ಗುಂಪನ್ನು ರಭಸದಿಂದ ದಾಟಿ ಬೀದಿಗೆಬಂದು ತಲೆಕೊಡಹುತ್ತಾ ನಚ್ಚಿನಗೋವನ್ನು ಬೆದರಿಸಿ, ಕಿವಿಯ ನಿಮಿರಿಸಿ, ಕೆಕ್ಕಳಿಸುವ ದೃಷ್ಟಿಯಿಂದ ಕೋಪಗೊಂಡು, ಮುಂಗಾಲಿನಿಂದ ನೆಲವನ್ನು ಕುಟ್ಟುತ್ತಾ ಮುನ್ನಡೆವ, ಮುಂದೆ ಕಚ್ಚುವುದು, ಹಿಂದೆ ಒದೆವುದು, ಪಕ್ಕಕ್ಕೆ ಚಿಮ್ಮುವುದು, ದುಂಡಿಸಿ ನೆಗೆವುದು, ಮುಂಡಿಸಿ ನಿಲ್ಲುವುದು ; ಪೊರಕಾಲೊಳ್ ನಡೆವ ಸುಳಾಶ್ವವನ್ನು ಬೇಗನೆ ಹಿಂಬಾಲಿಸಿ ತೊಡೆ (ರಾಘೆ) ಯಲ್ಲಿ ಅದುಮಿ, ಕಡಿವಾಣದಿಂದ ನಿಲ್ಲಿಸಿ, ಅಕ್ಕ ಪಕ್ಕಗಳಿಗೆ ಹೊಡೆದು ಸರಸಬೀದಿಯಲ್ಲಿ ಏರಿ, ಅಶ್ವಹೃದಯಬಲ್ಲ ನಳನನ್ನು ತಿರಸ್ಕರಿಸುವ ಬಿರುದಿನ ಅಶ್ವಶಿಕ್ಷಕರ ಸಮೂಹದಿಂದಲೂ, ಮತ್ತು ಜಟ್ಟಿ (ಮಲ್ಲ)ಗಳ ನೆರವಿಗಳು, ಅವರ ವರ್ಣನೆ–ಮಲೆತು ನಿಂತು ಅಖಾಡದಲ್ಲಿ ಹೊಕ್ಕು ಭುಜತಟ್ಟಿ ಶಕ್ತಿತೋರಿಸಿದ ಪ್ರತಿಜಟ್ಟಿ ಯನ್ನು ಒಳಹೊಕ್ಕು ಮುರಿವ ಅಡುಪಾಯದ ಅಳ (ಶಕ್ತಿ)ವಿಗೆ ಕೋಪಿಸಿಕೊಂಡು ಮಲ್ಲ ನನ್ನು ಅಡಸಿ ತಿವಿದು, ಕೆಳಕ್ಕೆ ಕೆಡವಿ, ಮೊಣಕೈ (ಕೊಪ್ಪರ) ಯಿಂದ ಚಿಮ್ಮಿ, ಮುಂಡಿ ಯಿಂದ ಮಿದಿದು, ಸದೆದು, ಚೊಕ್ಕೆಯದ ಆಸೆಗೆ ಹೊಕ್ಕ ಜಟ್ಟಿಯನ್ನು ಮೆಟ್ಟಿ ಚಡಿಕೆ

ದಾಸೆಗೆ ಪೊಕ್ಕಮಲ್ಲನನಿಕ್ಕಿ ಮೆಟ್ಟಿ ವಜ್ರದ ಬಳ್ಳಿಯಂತೆ ಛಡಿಕೆಯೊಳ್ ಬಿಗಿದು ಚಾಳಿಸಿ ನೂಂಕುವ ನೂಂಕೆ ಪೋಗದೆ ನಿಂದ ಸೆಳೆಪನಂ ಸೆಳೆದು ಕೆಡೆಪಿ ಪಿಡಿದೆತ್ತಿಯೊತ್ತಿ ಕುಸುಬಿ ಕುಸುಕಿಱಿದುಪೊಸೆದು ಪೊಳ್ವ ಸಾಹಸಿತನಕೆ ಬೆರಸಿದ ಮಲ್ಲನನೊರಸಿಬಿಡುವ ಲವಣಸಾರದೊಳ್ ನುಣ್ಬುವ ಮಲ್ಲನನೌಂಕಿ ಪಿಡಿದು ಸುತ್ತಿ ಮುತ್ತಿ ಸೆಳೆದಿಕ್ಕಿ ಸೀಸಕದೊಳ್ ಪೊಕ್ಕು ಭುಜದೊಳಣೆದುರದೊಳ್ ತೇದು ಉತ್ತಾನಕದೊಳ್ ನಿಂದು ಸಖಾಯರ್ ಝುಣ ಝುಣರೆನೆ ಬಳಸಿ ಭುಂಜಿಸುವ ಐರಾವತಂ ಮಲ್ಲವೇಷದೊಳಿದಿರಾದೊಡಂ ತೋರಹತ್ತದೊಳಂ ತಿವಿದು ತಿರುಪುವ ಸಂಚಳಿಸುವ ಮುಂಚಿ ಮೇಳವಿಸಿ ಚೊಕ್ಕೆಯದನುಮಾನದೊಳ್ ಡೊಕ್ಕರಿಸಿ ಪಿಡಿವರಿಬಿರುದಿನ ಕಲ್ಲ ಮಾನಸರಂತಿರ್ಪ ಮಲ್ಲರ ನೆರವಿಗಳೊಳಂ ; ಮತ್ತಂ ಕಳನೇಱಿದಂಕಮುಂಗಳೆಯೊಡ್ಡದ ಮುನ್ನಂ ಕುತ್ತಿ ಕೆಡೆಪುವ ತಳ್ತು ಗಂಟಿಕ್ಕಿ ಟೆಂಟಣಿಸುವಂತಮಂ ಸೆಳೆದು ಕೆಡೆಪುವ ಮುಳಿದು ಮೆಟ್ಟುವ ಸುಳಿದು ಸುತ್ತಿ ಬಳಸಿ ಮೊನೆದೋಱುವ ಬಿರುದಿನಂತಮನುರವಣಿಸಿ ಪೊತ್ತಿಪೊರಳ್ಚಿ ಕೊಳ್ವಬಿನ್ನಣಂದೋರ್ಪ ಗನ್ನದಂಕಮಂ ಬಿಡಿಸಿ ಬೆಂಬತ್ತಿ ಕುತ್ತಿ ಸುರುಳ್ಚುವುಬ್ಬಟೆಯ ಬಿರುದಿನುಪ್ಪರವಟ್ಟದುಭಯಸತ್ತಿಗೆಯ ಪಗಲ ಕೈಯಿಡ್ಡಿಗೆಯ ಕಾಲ ಹಾಹೆಯ ಮೊತ್ತದ ಬಾವುಲಿಯ ಮಾಲೆದೊಡರ ಮಾಸಾಳ್ಗಳ ಮಂತಣದೊಳಂ ; ಮತ್ತಂ ವಕ್ರೋಕ್ತಿ ಸ್ವಭಾವೋಕ್ತಿ ಪಾಕ ಲಾಲಿತ್ಯ ಗುಂಪು ಇಂಪು ರೀತಿ ನೂತನವಾಗೆ ಗದ್ಯ ಪದ್ಯ ಕಾವ್ಯಕಳಾಪ್ರೌಢಿವಡೆಯೆ ಮೆಱೆದಿರ್ಪ ಸರಸಕವಿಗಳ ಸಂದಣಿಯೊಳಂ ; ಮತ್ತಮಾರಭಟಿಯೊಳ್ ದೆಖ್ಖಾಳಂ ಮಿಕ್ಕು ಸಾತ್ವತಿಯೊಳ್ ಪಜ್ಜಳಿಸಿಬೆತ್ತು ಭಾರತಿಯೊಳ್ ಕಾಂತಿ ಕೈಗಣ್ಮೆ ಆಸ್ಥಾನಮಂ

ಯಿಂದ ಬಿಗಿದು ಚಾಳಿಸಿ ನೂಂಕುವ, ನೂಕಿದರೂ ಹೋಗದಿರುವ ಸೆಳೆಹನನ್ನು ಎಳೆದು ಕೆಡವಿ, ಹಿಡಿದೆತ್ತಿ, ಒತ್ತಿ, ಕುಸುಬಿ, ಪೊಳ್ವಾದ ಸಾಹಸತನಕ್ಕೆ ಬೆರಸಿದ ಮಲ್ಲನನ್ನು ಒರೆಸಿ ಬಿಡುವ ಒಂದು ಕುಸ್ತೀಪೇಚು (ಲವಣಸಾರ) ಮಲ್ಲನನ್ನು ಅಮುಕಿ ಹಿಡಿದು ಸುತ್ತಿಮುತ್ತಿ ಸೆಳೆದಿಕ್ಕಿ, ಸೀರ್ಷಕವಲ್ಲಿ ಹೊಕ್ಕು, ಭುಜದೊಳ್ ಅಣೆದುರದೊಳ್ ತೇದು ಉತ್ತಾನಕ (ಕುಸ್ತಿಯ ಒಂದು ಪಟ್ಟು) ದಲ್ಲಿ ನಿಂತು, ಜೊತೆಗಾರರು ಝುಣ ಝುಣರೆನಲು ಬಳಸಿ ಭಂಗಪಡಿಸುವ, ಐರಾವತವು ಮಲ್ಲವೇಷದಿಂದ ಇದಿರಾದರೂ ತೋರಹತ್ತದಿಂದ ತಿವಿದು ತಿರುಪುವ, ತುಯ್ದಾಡುವ ಕಲ್ಲಮಾನಸರಂತಿರುವ ಮಲ್ಲರನೆರವಿಗಳು, ವೀರ (ಮಾಸಾಳ್)ರ ವರ್ಣನ–ಕಳನೇರಿದ ಅಂಕವನ್ನು ಗಳೆಯೊಡ್ಡುವ ಮುನ್ನವೇ ಕುತ್ತಿ ಕೆಡಪುವ, ತಳ್ತುಗಂಟಿಕ್ಕಿ ಟೆಂಟಣಿಸುವ, ಎಳೆದು ಕೆಡಪುವ ಕೋಪಿಸಿ ಮೆಟ್ಟುವ, ಸುಳಿದುಸುತ್ತಿ ಮೊನೆದೋರುವ ಬಿರುದಿನ ಅಂಕವನ್ನು ಉರವಣಿಸಿ ಪತ್ತಿ ಹೊರಳಿಸಿಕೊಳ್ಳುವ, ಬಿನ್ನಾಣ ತೋರುವ ಗನ್ನದ ಅಂಕವನ್ನು ಬಿಡಿಸಿ ಬೆನ್ನು ಹತ್ತಿ ಉಬ್ಬಟೆಯ ಬಿರುದಿನ ಉಪ್ಪರವಟ್ಟವ ಉಭಯಸತ್ತಿಗೆಯುಳ್ಳ ಹಗಲ ಕೈಯ್ದಾನಿಗೆ, ಕಾಲಹಾಹೆ, ಮೊತ್ತದ ಬಾವುಲಿ, ಮಾಲೆತೊಡರು ಇವುಗಳುಳ್ಳ ವೀರರಸಂದಣಿಯಲ್ಲಿ ; ಇನ್ನು ಸರಸಕವಿಗಳ ತಂಡ ; ಅವರು ವಕ್ರೋಕ್ತಿ ಸ್ವಭಾವೋಕ್ತಿ ಪಾಕಲಾಲಿತ್ಯ ಗುಂಪು ಇಂಪುಗಳ ನೂತನ ರೀತಿಯಲ್ಲಿ ಗದ್ಯಪದ್ಯಕಳಾಪ್ರೌಢಿ ಮೆರೆಯೆ ಬಂಧರಚಿಸತಕ್ಕವರು ; ಒಂದು ಕಡೆ ಗಮಕಿಗಳು ; ಅವರು ಆರಭಟೀ, ದೆಖ್ಖಾಳ ರೀತಿಗಳನ್ನು ಮೀರಿ ಸಾತ್ವತಿಯಲ್ಲಿ ಪ್ರಜ್ವಲಿಸಿ, ಭಾರತಿಯಲ್ಲಿ ಕಾಂತಿಗೊಂಡು

ಕೌತುಕರಸದೊಳ್ ಕರುವಿಟ್ಟಂತಿರಿಸುವ ಸಾಮರ್ಥ್ಯಮನೊಳಕೊಂಡು ಕುಳ್ಳಿರ್ಪ ಗಮಕಿಗಳ ತಂಡದೊಳಂ ; ಮತ್ತಂ ಶಬ್ದಖಂಡನಮರ್ಥಖಂಡನಮನುಮಾನಖಂಡನವೆಂಬ ತರ್ಕತಂತ್ರಕೋವಿದರಪ್ಪ ವಾದಿಗಳೊಳಂ ; ಮತ್ತಂ ಮಧುರರಸವೊಸರ್ವ ಪೊಸನುಡಿಗಳಂ ಕೇಳ್ವ ಸಭೆಗೆ ಕರ್ಣರಸಾಯನಮನೀವ ಮಾಧುರ್ಯಗುಣಂ ಮೆಯ್ಯಿಕ್ಕಿರ್ದ ವಾಗ್ಮಿಗಳೊಳಂ ; ಮತ್ತವಳಿ ವಕ್ರತೆಯನೀವ ವಹಣಿ ತರಂಗಿಸುವ ತಿರುಪು ಸುಳಿಗೊಳ್ವ ಪೆಂಪು ಇಂಪಂ ಕಱೆವ ಸುಧಾರಸಗಾನಂ ನಾನಾರಸದ ಲಹಣಿಯ ರೂಪುವಡೆಯೆ ಪಾಡುವ ಗಾಯಕರೊಳಂ ; ಮತ್ತಂ ಸುಗತಿಗಳಂ ಸೂಸುವ ಮದ್ದಳಿಗರಿಂ ರೂಪುರೇಖೆ ರಸಂಬಡೆವ ನೃತ್ಯನಾಯಕಿಯರಿಂ ನವೀನಗತಿಯಂ ನೀಡುವ ನರ್ತಕರಿಂ ಭಾವರಸಮನೀವ ಚಿತ್ರಕರಿಂ ಇಂತು ಗಿರಿರಾಜನೊಡ್ಡೋಲಗಮನಂತ ಗಂಭೀರಮನತುಳಪ್ರತಾಪಮನುರುತರ ಸೌಂದರ್ಯಮನೂರ್ಜಿತವಿಳಾಸಮನನುಪಮವೌದಾರ್ಯಮನೊಳಕೊಂಡಿರ್ದುದಾ ಪ್ರಸ್ತಾವದೊಳ್

ಚಂ॥ ಸುಡಿಯದಿರಾಂಧ್ರಕಯ್ಮುಗಿ ಕಳಿಂಗ ಕುಸುಂಗೆಲೆ ವಂಗ ಕೇರಳಂ
ಗೆಡೆಗುಡು ಚೋಳ ಲಾಳ ಪೆಱಸಾರ್ ಪುಗದಿರ್ ಮಗಧೇಶ ಕಾಣ್ಕೆಯಂ ।
ಪಿಡಿದಿರು ಪಾಂಡ್ಯ ಬಿನ್ನವಿಸು ಮಾಳವ ಗೌಳನೆ ಪಿಂಗೆಸುತ್ತಣಂ
ಜಡಿವರಿಳೇಶರಂ ಪಡಿಯಱರ್ ಗಿರಿರಾಜ ಸಭಾಂತರಾಳದೊಳ್ ॥ ೧೧೬

ಮ॥ ಪರಮ ಸ್ವಾಮಿಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ ।

ಆಸ್ಥಾನವನ್ನು ಅಚ್ಚರಿಗೊಳಿಸುತ್ತಿದ್ದಾರೆ, ಇನ್ನೊಂದೆಡೆ ವಾದಿಗಳು, ಅವರು ಶಬ್ದಖಂಡನ, ಅರ್ಥಖಂಡನ ಮತ್ತು ಅನುಮಾನ ಖಂಡನವೆಂಬ ತರ್ಕತಂತ್ರ ಕೋವಿದರು ; ಮತ್ತೊಂದೆಡೆ ವಾಗ್ಮಿಗಳು ; ಮಧುರರಸವನ್ನು ಉಕ್ಕಿಸುವ ವಾಕ್ಚಾತುರ್ಯದಿಂದ ಕೇಳುವವರ ಕಿವಿಗೆ ಸವಿಯನ್ನು ಉಂಟುಮಾಡುತ್ತಿದ್ದಾರೆ. ಅವರ ಸನಿಹದಲ್ಲಿ ಗಾಯಕರು, ಅವರು ವಳಿವಕ್ರತೆಯನ್ನು ನೀಡುವ, ವಹಣಿ (ರಾಗದ ಅಲೆಗಳು) ತರಂಗಿಸುವ ತಿರುಪು, ಸುಳಿಗೊಳ್ಳುವ ಪೆಂಪು, ಇಂಪೆರೆವ ಸುಧಾಗಾನ ಮಾಡುತ್ತಿದ್ದಾರೆ ; ಸುಗತಿಗಳನ್ನು ಸೂಸುವ ಮದ್ದಳಿಗರು, ರೂಪುರೇಖೆ ವಿನ್ಯಾಸಗಳಲ್ಲಿ ರಸವನ್ನು ಉದ್ರೇಕಿಸುವ ನೃತ್ಯನಾಯಕಿಯರು, ನವೀನ ಗತಿ ನೀಡುವ ನವೀನನರ್ತಕರು, ಭಾವರಸವನ್ನೀವ ಚಿತ್ರಗಳನ್ನು ರಚಿಸುವ ಚಿತ್ರಕರು ಹೀಗೆ ಗಿರಿರಾಜನ ಒಡ್ಡೋಲಗವು ಅತುಳ ಗಾಂಭೀರ್ಯ, ಪ್ರತಾಪ, ಸೌಂದರ್ಯ ವಿಳಾಸ, ಅನುಪಮ ಔದಾರ್ಯಗಳನ್ನು ಒಳಗೊಂಡಿತ್ತು. ೧೧೬. ಆಂಧ್ರನೆ ಮಾತು ನಿಲ್ಲಿಸು, ಕಳಿಂಗ ಕಯ್ಮುಗಿ, ವಂಗನೆ ಬಗ್ಗು, ಕೇರಳನಿಗೆ ಎಡೆಕೊಡು, ಚೋಳ-ಲಾಳ ಪಕ್ಕಕ್ಕೆ ಸರಿ, ಮಗಧೇಶ ನುಗ್ಗಬೇಡ, ಪಾಂಡ್ಯನೆ ಕಾಣ್ಕೆಯನ್ನು ಸಿದ್ಧಪಡಿಸಿಕೊಂಡಿರು, ಮಾಳವನೆ ಬಿನ್ನಹ ಮಾಡು, ಮಾಳವ-ಗೌಳ ಹಿಂದಿರು ಎಂದು ಗಿರಿರಾಜನ ಸಭೆಯಲ್ಲಿದ್ದ ಪಡಿಹಾರರು ನೆರೆದ ರಾಜರನ್ನು ಜರೆಯುತ್ತಿದ್ದರು.

ಕರಸಾನಂದಕರಂ ಸಮಂತೆನಗೆ ಭಕ್ತಿಜ್ಞಾನ ವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ॥ ೧೦೭

ಇದು ಸಮಸ್ತ ಸುರಾಸುರಮಕುಟ ಖಚಿತ
ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪುಂಜರಂಜಿತಚರಣ
ಸೆನಿಪ ಪಂಪಾವಿರೂಪಾಕ್ಷ ಶ್ರೀಪಾದಕಮಲ
ಮಕರಂದ ಮಧುಕರಾಯಮಾಣ
ಸತ್ಕವೀಶ್ವರ ಹಂಪೆಯ
ಹರಿಹರದೇವ ವಿರಚಿತಮಪ್ಪ

ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ಗಿರಿರಾಜದೇಶ ಪುರಾಸ್ಥಾನ ವರ್ಣನಂ
ದ್ವಿತೀಯಾಶ್ವಾಸಂ

# ತೃತೀಯಾಶ್ವಾಸಂ

## ಹೈಮವತೀ ಶೈಶವವರ್ಣನಂ

ಕಂ॥ ಶ್ರೀ ಗೌರೀಕುಚಯುಗಳ ಪ
ರಾಗಯುತಾನರ್ಘ್ಯರತ್ನವಿಳಸದ್ವಕ್ಷೋ ।
ಭಾಗಂ ಸದ್ಭಕ್ತಿಯನೆಮ
ಗೀಗೆ ದಯಾವಾರ್ಧಿ ಹಂಪೆಯ ವಿರೂಪಾಕ್ಷಂ ॥ ೧

ಸ್ರ॥ ಅಂತಿರ್ಪಾಸ್ಥಾನದೊಳ್ ಭೂಭುಜನಿಕರ ಕಿರೀಟಪ್ರರತ್ನಪ್ರಭೂತಾ
ನಂತಪ್ರದ್ಯೋತ ನೂತ್ನೋದಕಜನಿತ ಪದಾಂಭೋಜನುದ್ಯದ್ಧರಿತ್ರೀ ।
ಕಾಂತಾ ವಕ್ಷಃಸ್ಥಲಾಲಿಂಗನಭರ ನಿಜದೋರ್ದಂಡ ಚಂಡಾಸಿಧಾರಾ
ಶ್ರಾಂತಂ ಪ್ರಾತರ್ಕ್ಯವೈರಿವ್ರಜಧರನೆನಿಸಿರ್ದಂ ಗಿರಿವ್ರಾತನಾಥಂ ॥ ೨

ಕಂ॥ ಇರೆ ಮಾಧ್ಯಂದಿನ ಡಿಂಡಿಮ
ವರನಾದಂ ಕೇಳಲಾಗೆ ಗಿರಿಕುಲರಾಜಂ ।
ತರದಿಂ ನೆರೆದೋಲಗಮಂ
ಪರೆಯಲ್ವೇಳ್ಕೆಂದು ಪೇಳ್ದ ಸಮನಂತರದೊಳ್ ॥ ೩

ಮ॥ ಸ್ರ॥ ಕ್ವಣಿತಾನೇಕಪ್ರಧಾನಾಭರಣ ಚರಮಹಾಮಾತ್ಯ ಸಾಮಂತಕೂಥಂ
ಗಣಿಕಾಸಂತಾನ ನಾನಾ ನವಮಣಿಗಣ ವಿಸ್ತೀರ್ಣ ಮಂಜೀರಘುದ್ರಾ ।
ರಣಿತಂ ತದ್ವೇತ್ರ ಹಸ್ತಪ್ರತಿಮುಖರ ಪ್ರೋದ್ಗತಾಭೀಳಘೋಷಂ
ಪ್ರಣತಾಸಕ್ತಾವನೀಶ ಪ್ರಕಟಮಕುಟಯುಕ್ತಂ, ಸಭಾವಾಸವಕ್ತ್ರಂ ॥ ೪

೧. ಜಗಜ್ಜನನಿಯಾದ ಗೌರೀದೇವಿಯ ಸ್ತನದ್ವಯ ಶ್ರೀಸುಗಂಧಧೂಳಿಯಿಂದ ಕೂಡಿದ, ಶ್ರೇಷ್ಠರತ್ನಗಳಿಂದ ಪ್ರಕಾಶಿಸುವ ಎದೆಯುಳ್ಳ ದಯಾಸಾಗರನಾದ ಹಂಪೆಯ ವಿರೂಪಾಕ್ಷನು ನಮಗೆ ಸದ್ಭಕ್ತಿಯನ್ನು ನೀಡಲಿ. ೨. ಹಾಗಿರುವ ಆಸ್ಥಾನದಲ್ಲಿ ಆ ಗಿರಿರಾಜನು ಅಲ್ಲಿ ನೆರೆದಿದ್ದ ರಾಜರ ಕಿರೀಟಗಳಲ್ಲಿದ್ದ ರತ್ನಗಳ ಉಜ್ವಲಪ್ರಕಾಶವೆಂಬ ನೂತನ ಉದಕದಲ್ಲಿ ಹುಟ್ಟಿದ ಪಾದಕಮಲವುಳ್ಳವನೂ, ಭೂಕಾಂತೆಯ ವಕ್ಷಃಸ್ಥಲವನ್ನು ಆಲಿಂಗಿಸಿದ ಪ್ರಚಂಡವಾದ ಅಸಿಧಾರೆಗಳಿಂದ ಶ್ರಮಗೊಂಡ ಭುಜದಂಡವುಳ್ಳವನೂ, ಪ್ರಾತರ್ಕ್ಯ-ಚನ್ನಾಗಿ ಯೋಚಿಸುವ ಶತ್ರುಗಳುಳ್ಳವನೂ ಆಗಿದ್ದನು. ೩. ಹೀಗೆ ರಾಜಸಭೆಯಲ್ಲಿ ಗಿರಿರಾಜನಿರುವಾಗ ಮಧ್ಯಾಹ್ನವನ್ನು ಸೂಚಿಸುವ ಡಿಂಡಿಮವಾದ್ಯ ಘೋಷ ಕೇಳಿಸಿತು. ರಾಜನು ಓಲಗವನ್ನು ಮುಕ್ತಾಯಗೊಳಿಸಿದನು. ಆ ತರುವಾಯ—೪. ಮುಕ್ತಾಯಗೊಂಡ ಆಸ್ಥಾನವರ್ಣನವಿದು. ಅದು ಮಹಾಮಾತ್ಯರೂ, ಸಾಮಂತರಾಜರೂ ಧರಿಸಿದ್ದ

ಮ॥ ಸ್ರ॥ ಗಿರಿರಾಜಂ ಸಿಂಹಪೀಠೋತ್ಥಿತಕರಭರಣಾಗುತ್ತುಮೇಳ್ತಂದು ಸೌಖ್ಯಾ
ಕರರೂಪಂ ಮಜ್ಜನಂಮಾಡುತೆ ಭಸಿತಲಲಾಟಂ ಸರುದ್ರಾಕ್ಷ ಕಂಠಂ ।
ಸ್ಥಿರಚಿತ್ತಂ ಲಿಂಗಪೂಜಾವಿರಚನಪರಿತುಷ್ಟಂ ಪ್ರಸಾದಪ್ರಮೋದಂ
ಸ್ಮರಬಾಣವ್ರಾತಮಂ ಲೆಕ್ಕಿಸದತಿಸುಖದಿಂ ಮೇನೆಯುಂ ತಾನುಮಿರ್ದರ್ ॥ ೫

ವ॥ ಇಂತು ವಿಮಳ ಮನದಿಂ ಸಮಸುಖದೊಳಿರ್ಪಲ್ಲಿ,

ಕಂ॥ ಭರದಿಂ ಬಹುಸಂತಾನಾ
ತುರೆ ಸಾಧುಸುಶೀಲೆ ಲೀಲೆ ಮಿಕ್ಕಾದರದಿಂ ।
ಗಿರಿರಾಜಂಗೆ ವಿರಾಜಿಪ
ವರಜೀವಸಮಾನೆ ಮೇನೆ ನಯದಿಂ ನುಡಿದಳ್ ॥ ೬

ಚಂ॥ ಮೊಲೆಯುಣುತಳ್ಕಱಿಂ ನಗುವ ನಿಂದಿರುತಪ್ಪುವ ಪೊಂಗಿ ಹಿಗ್ಗುತಂ
ಮಲೆವ ಮರಳ್ದ ಕಣ್ಗಳನಲರ್ಚುವ ಮುಚ್ಚುವ ನೋಡುತಾಡುತಂ ।
ನಲಿನಲಿದುಬ್ಬುತಂ ತೊಲೆಯುತಿಂತೊಲೆವಳ್ತಿಯ ಮುದ್ದಿನೊಪ್ಪದೊಳ್
ನೆಲಸಿದ ಪುತ್ರಿಯಂ ಬಯಸುತಿರ್ದಪುದೆನ್ನಮನಂ ಮನಃಪ್ರಿಯಾ ॥ ೭

ಕಂ॥ ಉಗ್ರತಪದಿಂದೆಯತುಳಸ
ಮಗ್ರಯನಭವಂಗೆ ವಧುವೆನಿಪ್ಪಳನಾನ ।
ವ್ಯಗ್ರದೆ ಪಡೆವೆಂ ಕುಧರ
ಪ್ರಾಗ್ರನೆ ಕಳಿಪೆಂದು ಮೇನೆ ನುಡಿವವಸರದೊಳ್ ॥ ೮

ಮುಖ್ಯ ಆಭರಣಗಳ ಧ್ವನಿ (ಕ್ವಣಿತ) ಯಿಂದಲೂ, ಗಣಿಕೆಯರು ಧರಿಸಿದ್ದ ಮಣಿಗಳು ಮಂಜೀರ ಮುದ್ರೆಗಳ ರಣಿತದಿಂದಲೂ, ಬೆತ್ತವನ್ನು ಹಿಡಿದಿರುವ ಪ್ರತೀಹಾರಿಯರ ಗದರಿಸುವ ಶಬ್ದದಿಂದಲೂ, ವಂದಿಸುತ್ತಿರುವ ರಾಜರ ಬಾಗಿದ ಮುಕುಟಯುತವೂ ಆದ ವಿಸರ್ಜಿತ ಆಸ್ಥಾನವಾಗಿತ್ತು. ೫. ಗಿರಿರಾಜನು ಸಿಂಹಾಸನದಿಂದ ಎದ್ದು ಬಂದು ಸ್ನಾನಮಾಡಿ ಭಸ್ಮರುದ್ರಾಕ್ಷಗಳನ್ನು ಧರಿಸಿ, ಲಿಂಗಪೂಜೆಯನ್ನು ಸ್ಥಿರಚಿತ್ತದಿಂದ ಎಸಗಿದನು. ಪ್ರಸಾದವನ್ನು ಸ್ವೀಕರಿಸಿ ಪರಿತುಷ್ಟನಾಗಿ, ಮದನನ ಬಾಣಗಳನ್ನು ಲೆಕ್ಕಿಸದೆ ಎಂದರೆ ಮೋಹಪರವಶನಾಗದೆ ಮೇನೆಯೊಡನೆ ಸುಖಿಸಿದನು. ವ॥ ಹೀಗೆ ನಿರ್ಮಲ ಮನಸ್ಸುಳ್ಳ ಅವರು ಸಮಸುಖದಲ್ಲಿರುವಾಗ ೬. ಬಹುಸಂತಾನಾಪೇಕ್ಷೆಯುಳ್ಳವಳೂ, ಗಿರಿರಾಜನಿಗೆ ಜೀವಸಮಾನೆಯೂ ಸಾಧುಸುಶೀಲೆಯೂ ಆದ ಮೇನಾದೇವಿ ಗಿರಿರಾಜನಿಗೆ ಹೀಗೆ ನುಡಿದಳು. ೭. ಎಲೈ ಪ್ರಿಯನೆ, ಮೊಲೆಯುಣ್ಣುವ, ನಲ್ಮೆಯಿಂದ ನಗುವ ನಿಂತಿರುವಾಗ ಬಂದು ಅಪ್ಪಿಕೊಳ್ಳುವ ಹಿಗ್ಗುತ ಮಲೆವ ಮರಳ್ದ ಕಣ್ಣನರಳಿಸುವ ಕಣ್ಣುಗಳನ್ನು ಮುಚ್ಚುವ ನೋಡುತ್ತ ಆಡುತ್ತ ನಲಿದು ಉಬ್ಬುತ್ತ ಹಾಗೆ ಹೀಗೆ ಒಲೆಯುತ್ತಾ ಮುದ್ದಿನ ಒಪ್ಪದಲ್ಲಿ ಲೀಲೆಗಳಲ್ಲಿ ತೊಡಗಿರುವ ಮಗಳನ್ನು ನನ್ನಮನಸು ಬಯಸುತ್ತಿದೆ ಎಂದಳು. ೮. ನಾನು

ಕಂ॥ ಗಿರಿರಾಜನೊಡಂಬಟ್ಟಾ
ದರದಿಂದಂ ಪುಳಕಿಸುತ್ತೆ ಪುಟವೇಳುತ್ತುಂ ।
ಪರಿಚಾರ ಪಟುಗಳೆನಿಸುವ
ತರುಣಿಯರಂ ಕೂಡಿಕೊಟ್ಟು ಸಂತಸದಿಂದಂ ॥ ೯

ಮ॥ ವರಪುತ್ರೀ ಸ್ಥಿರಭಾವಕಾಮ್ಯವಿಲಸತ್‌ಸನ್ಮಾನ್ಯೆಯಂ ಯಾನೆಯಂ
ತರುಣೀ ಕುಂತಳಮಲ್ಲಿಕಾ ಮಧುಕರೀ ಸಂತಾನೆಯಂ ಜ್ಞಾನೆಯಂ ।
ಪರಮಾನಂದ ತಪೋಭರೋತ್ಥಿತ ಮನಃ ಪ್ರಾಧೀನೆಯಂ ಸ್ಥಾನೆಯಂ
ಗಿರಿರಾಜಂ ಕಳಿಪುತ್ತುಮಿರ್ದನತಿಯೋಗಧ್ಯಾನೆಯಂ ಮೇನೆಯಂ ॥ ೧೦

ಕಂ॥ ಕಳಿಪೆ ನಡೆತಂದು ರಮ್ಯ
ಸ್ಥಳದೊಳ್ ನಿಂದೇಕಪಾದದಿಂದಂ ಮೇನಾ ।
ಲಳನೆ ಮಹಾದೇವಿಯ ನಿ
ರ್ಮಳರೂಪಂ ಹೃದಯಕಮಲದೊಳ್ ತಳೆದಿರ್ದಳ್ ॥ ೧೧

ಮುಗಿದುವು ನಯನಸರೋಜಂ
ಮಿಗೆಯಲರ್ದುದು ಚಿತ್ತಕೈರವಂ ಮಿಕ್ಕೇಱ ।
ತ್ತು ಗಭೀರ ತಪೋವಾರಿಧಿ
ಬಗೆಯೊಳಗಾ ಧ್ಯಾನ ಚಂದ್ರನುದಯಿಸುವಾಗಳ್ ॥ ೧೨

ಉಗ್ರತಪಸ್ಸನ್ನು ಮಾಡಿ ಅನುಪಮ ಗುಣಶೀಲೆಯೂ ಅಭವನಿಗೆ ವಧುವಾಗುವವಳೂ ಆದ ಮಗಳನ್ನು ಪಡೆಯುತ್ತೇನೆ. ಪರ್ವತಶ್ರೇಷ್ಠನೆ, ನನ್ನನ್ನು ತಪಸ್ಸಿಗೆ ಕಳುಹಿಸು ಎಂದು ಪ್ರಾರ್ಥಿಸಿದಳು. ೯. ಗಿರಿರಾಜನಿಗೆ ಒಪ್ಪಿಗೆಯಾಯಿತು, ಸಂತೋಷವೂ ಆಯಿತು. ಆತ ಪರಿಚಾರ ಸಮರ್ಥೆಯರಾದ ಅನೇಕ ತರುಣಿಯರನ್ನು ಅವಳ ಸೇವೆಗೆ ನೇಮಿಸಿ, ೧೦. ಗಿರಿರಾಜನು ಒಳ್ಳೆಯ ಮಗಳನ್ನು ಪಡೆಯಬೇಕೆಂಬ ಬಯಕೆಯುಳ್ಳವಳೂ, ಮುಂಗುರುಳುಗಳಲ್ಲಿ ಧರಿಸಿದ ಮಲ್ಲಿಗೆ ಹೂವಿಗೆ ಮುತ್ತಿದ ದುಂಬಿಯುಳ್ಳವಳೂ, ಜ್ಞಾನಿಯೂ, ಪರಮಾನಂದವೆಂಬ ತಪೋಭಿಲಾಷೆಯಿಂದ ಮನಸ್ಸಂತುಷ್ಟಿಯುಳ್ಳವಳೂ ಯೋಗಧ್ಯಾನೆಯೂ ಆದ ಮೇನಾದೇವಿಯನ್ನು ತಪಸ್ಸಿಗೆ ಕಳುಹಿಸಿದನು. ೧೧. ಗಿರಿರಾಜನಿಂದ ಬೀಳ್ಕೊಂಡು ಬಂದ ಮೇನಾದೇವಿಯು ತಪೋಯೋಗ್ಯವಾದ ರಮ್ಯಸ್ಥಲವಲ್ಲಿ ಒಂದೇ ಕಾಲಿನಿಂದ ನಿಂತುಕೊಂಡು, ಮಹಾದೇವನ ಅರ್ಧಾಂಗಿನಿಯಾದ ಮಹಾದೇವಿ ಸರ್ವಮಂಗಳೆಯ ನಿರ್ಮಲ ರೂಪವನ್ನು ಹೃದಯಕಮಲದಲ್ಲಿ ತಳೆದಿದ್ದಳು. ೧೨. ಮೇನಾದೇವಿಯ ಮನಸ್ಸಿನಲ್ಲಿ ಧ್ಯಾನವೆಂಬ ಚಂದ್ರನು ಉದಯಿಸುವಾಗ ಅವಳ ಕಣ್ಣುಕಮಲಗಳು ಮುಚ್ಚಿದವು, ಅವಳ ಚಿತ್ತವೆಂಬ ನೈದಿಲೆ ಅರಳಿತು. ಅವಳ ಗಂಭೀರವಾದ ತಪಸ್ಸು ಎಂಬ ಸಮುದ್ರ ಉಕ್ಕೇರಿತ್ತು.

ವ॥ ಇಂತು ತಪೋಬೀಜಂ ಚಿತ್ತಭೂಮಿಯೊಳ್ ಬೇರೂಱಿಯಹಂಕಾರದೊಳಂಕುರಿಸಿ ಬುದ್ಧಿಯೊಳ್ ಪಲ್ಲವಿಸಿ ಮನದೊಳ್ ನಿಮಿರ್ದು ನಿಷ್ಠೆಯೊಳ್ ಕುಡಿವರಿದು ಪರಿದು ಪರ್ವಿ ಪುರಹರ ನರಸಿಯ ಮೆಲ್ಲಡಿಗಳ್ಗೆ ನಿಲ್ಲದೆ ಧೀಂಕಡೆ ಭವಾನಿ ಭೋಂಕನಱಿದು ಮೇನೆಯ ತಪಕ್ಕೆ ಮಿಗೆ ಮೆಚ್ಚಿ ಕರುಣಿಸಿ ಹರನಂ ಬೀಳ್ಕೊಂಡು ತಂದೆ ಮಾಡುವ ಯಾಗಮಂ ನೋಳ್ಪ ನೆವದಿಂ ಕೈಲಾಸಮಂ ಪೊಱಮಟ್ಟು ದಕ್ಷನ ಪುರಕ್ಕಭಿಮುಖಿಯಾಗಿ,

ಕಂ॥ ತ್ರಿಣಯನ ವಿರಹಿತಯಾಗ
ಕ್ಕಣಿಯರದಿಂ ಪೋಗಿ ಮುಂದೆ ನಿಲೆ ದಕ್ಷಂ ನಿ।
ರ್ಗುಣನಂ ನಿಂದಿಸೆ ದಾಕ್ಷಾ
ಯಣಿ ಕೇಳದೆ ವಿಮಳಯೋಗದಿಂ ನಡೆತಂದಳ್ ॥ ೧೩

ಸುರತರುವಿಂ ಬೀಜಂ ದಿ
ವ್ಯರತ್ನದಿಂ ಕಾಂತಿ ಪೂರ್ಣಶಶಿಯಿಂ ಕಿರಣಂ ।
ವರಸುಧೆಯಿಂ ಮಧುರತೆ ಬಂ
ಧುರಕುಸುಮದೆ ಕಂಪು ಬರ್ಪತೆರದಿಂ ಬಂದಳ್ ॥ ೧೪

ಬಂದು ನಿಜ ತಪದ ಮೇನೆಯ
ನಂದೀಕ್ಷಿಸಿ ಶಾಂತ ರವಿ ನಿಕಾಯ ಮರೀಚೀ ।
ವೃಂದನಿಭಕಮಳ ವಿಮಳಾ
ನಂದ ವಿಕಾಶಪ್ರಕಾಶನಿಧಿ ನಿಂದಿರ್ದಳ್ ॥ ೧೫

ವ ॥ ಮೇನಾದೇವಿಯ ಚಿತ್ತಭೂಮಿಯಲ್ಲಿ ತಪೋಬೀಜವು ಬೇರೂರಿತು, ಅಹಂಕಾರದಲ್ಲಿ ಅಂಕುರಿಸಿತು, ಬುದ್ಧಿಯಲ್ಲಿ ಪಲ್ಲವಿಸಿತು (ಚಿಗುರಿತು), ಅದು ಮುಂದೆ ನಿಷ್ಠೆಯಲ್ಲಿ ನಿಮಿರಿ ಕುಡಿಯಿಟ್ಟು ಮುಂದುವರಿದು ಹಬ್ಬಿ ಪರಶಿವನ ಅರಸಿಯ ಮೆಲ್ಲಡಿಗಳಿಗೆ ಧಾಳಿಯಿಟ್ಟಿತು. ಕೂಡಲೆ ಭವಾನಿಗೆ ಇದು ಅರಿವಾಯಿತು. ದೇವಿ ಮೇನೆಯ ತಪಕ್ಕೆ ಮೆಚ್ಚಿದಳು. ಕರುಣಾಳುವಾದ ಭವಾನಿಯು ಪರಶಿವನ ಅಪ್ಪಣೆ ಪಡೆದು ತಂದೆ ದಕ್ಷನು ಕೈಗೊಂಡಿದ್ದ ಯಾಗವನ್ನು ನೋಡುವ ನೆಪದಿಂದ ಕೈಲಾಸದಿಂದ ಹೊರಟು ದಕ್ಷಪುರಾಭಿಮುಖಿಯಾಗಿ ೧೩. ದಾಕ್ಷಾಯಿಣಿಯಾದ ಗೌರಿಯು ಮುಕ್ಕಣ್ಣನಿಲ್ಲದ ಯಾಗಭೂಮಿಗೆ ಬಂದಳು. ದಕ್ಷನು ನಿರ್ಗುಣಶಿವನಿಂದೆಯಲ್ಲಿ ತೊಡಗಿದ್ದ. ಅದನ್ನು ಕೇಳಿ ಸ್ಥೈರಿಸಲಾರದೆ ವಿಮಳ ಯೋಗದಿಂದ ಹಿಂದಿರುಗಿದಳು. ೧೪. ಅವಳು ಬಂದುದು ಕಲ್ಪವೃಕ್ಷದಿಂದ ಬೀಜವೂ, ದಿವ್ಯರತ್ನದಿಂದ ಕಾಂತಿಯೂ, ಪೂರ್ಣಚಂದ್ರನಿಂದ ಕಿರಣವೂ, ಅಮೃತದಿಂದ ಮಾಧುರ್ಯವೂ, ಹೂವಿನಿಂದ ಸುವಾಸನೆಯೂ ಬರುವಂತೆ ಇತ್ತು. ೧೫. ಭವಾನಿ, ನಿಜ ತಪೋಮಗ್ನೆಯಾಗಿದ್ದ ಮೇನಾದೇವಿಯ ಮುಂದೆ ಬಂದು ನಿಂತಳು. ಆ ದೇವಿಯ

ವ॥ ಅಂತು ನಿಂದು,

ಕಂ॥ ಉತ್ಕಟ ತಪೋನಿಷ್ಠೆಗೆ
ಸತ್ಕರುಣಮನಾಂತು ನಿನ್ನ ಬಸಿಱೊಳ್ ಬರ್ಪೆಂ।
ಸತ್ಕುಲಜೆಯೆನುತೆ ಮೇನೆಯ
ಹೃತ್ಕಮಲದ ಬೆಳಗಿನೊಳಗೆ ಬೆಳಗಾಗಿರ್ದಳ್ ॥ ೧೬

ಇರೆ ಮೇನೆಯಱಿದು ಹರ್ಷದ
ಶರನಿಧಿಯೊಳ್ ಪೊಕ್ಕು ಲೀಲೆ ಮಿಕ್ಕೋಲಾಡು।
ತ್ತಿರಲುತ್ತೀಸಾಡುತ್ತುಂ
ಪೊರೆಯೇಱುತೆ ಜಪದ ಎಪುಳೆ ತಪಮಂ ಬಿಟ್ಟಳ್ ॥ ೧೭

ಮ॥ ನಡೆತಂದಳ್ ಗಿರಿರಾಜವಲ್ಲಭೆ ಭವಾನೀ ಪ್ರೇಮದಿಂ ರಾಗದಿಂ
ಬಿಡದುದ್ಯತ್ ಕಲಶಪ್ರಬದ್ಧಲಲನಾ ಸಂತಾನದಿಂ ಗಾನದಿಂ।
ಕಡುಪಿಂ ಪೊಣ್ಮುವ ವಾದ್ಯ ವಿಪ್ರವದನ ಪ್ರೋನ್ನಾದದಿಂ ವೇದದಿಂ
ಗುಡಿಗುಟ್ಟುತ್ತಿದಿಗೊಳ್ವ ಪೌರಜನತಾ ಸಂತೋಷದಿಂ ಘೋಷದಿಂ ॥ ೧೮

ಉ॥ ಬಂದಗರಾಜ ರಾಜಗೃಹಮಂ ಪುಗುತುಂ ಪರಮ ಪ್ರದೀಪೆ ಸಾ
ನಂದೆ ಸರೋಜನೇತ್ರಪ್ರವರವಕ್ತ್ರೆ ಮನೋಹರೆ ಮಾನ್ಯೆಮೇನೆ ಸಾ।
ರ್ತಂದು ನಿಜೇಶನಂ ಪ್ರಿಯದೊಳಪ್ಪಿ ಮನೋರಥ ಸಿದ್ಧಿಯಾದುದಂ
ನಿಂದುಸಿರ್ದಂತರಂಗ ಬಹಿರಂಗ ಸುಖಾನ್ವಿತೆಯಾಗುತೊಪ್ಪಿದಳ್ ॥ ೧೯

ಅಂದಿನ ನಿಲವು ಶಾಂತನಾದ ಸೂರ್ಯನ ಬಿಂಬದಿಂದ ಹೊರಟ ಕಿರಣವೃಂದಕ್ಕೆ ಸಮ ನಾಗಿದ್ದು ಮೇನೆಯ ಮುಖ ಕಮಲವಿಮಲಾನಂದವನ್ನು ಅರಳಿಸುವ ಪ್ರಕಾಶದಂತೆ ಇತ್ತು. ೧೬. ಭವಾನಿಯು ಮೇನೆಯ ಉತ್ಕಟ ತಪೋನಿಷ್ಠೆಗೆ ಮೆಚ್ಚಿ, ಅವಳಲ್ಲಿನ ಕರುಣೆಯಿಂದ "ನಿನ್ನ ಬಸಿರಲ್ಲಿ ಬರುತ್ತೇನೆ" ಎಂದು ಮೇನೆಯ ಹೃದಯಕಮಲದಲ್ಲಿನ ಬೆಳಗಿನಲ್ಲಿ ಬೆಳ ಕಾಗಿದ್ದಳು. ೧೭. ಅದು ಮೇನಾದೇವಿಗೆ ಅರಿವಾಯಿತು. ಅವಳು ಆನಂದದ ಕಡಲಿ ನಲ್ಲಿ ಓಲಾಡಿದಳು. ತನ್ನ ತಪಸ್ಸು ಸಿದ್ಧಿಸಿತೆಂಬ ತೃಪ್ತಿ ಮೂಡಿತು. ಕೂಡಲೆ ಅವಳು ತನ್ನ ತಪಸ್ಸನ್ನು ಮುಗಿಸಿದಳು. ೧೮. ಭವಾನಿಯು ತನ್ನ ಉದರದಲ್ಲಿ ಹುಟ್ಟುವಳೆಂಬ ಸಂತೋಷದಿಂದ ಮೇನಾದೇವಿ ತನ್ನ ಪುರಕ್ಕೆ ಹಿಂದಿರುಗಿದಳು. ಅವಳನ್ನು ಎದುರುಗೊಳ್ಳುವ ಸಂಭ್ರಮ ಓಷಧಿಪ್ರಸ್ಥಪುರದಲ್ಲಿ ನಡೆದಿತ್ತು. ಮುತ್ತೈದೆಯರು ಪೂರ್ಣಕಲಶಗಳನ್ನು ಹಿಡಿದು ನಡೆತಂದರು. ಒಂದೆಡೆ ಗಾನ, ವಾದ್ಯಗಳ ಹಾಗೂ ವಿಪ್ರರ ವೇದಘೋಷವೊಳ ಗುತ್ತಿತ್ತು. ಪೌರರು ಸಂತೋಷದಿಂದ ಮಹಾರಾಣಿಯನ್ನು ಎದುರುಗೊಂಡರು. ೧೯. ಮಾನ್ಯೆಯಾದ ಮೇನಾದೇವಿ ಪುರವನ್ನು ಪ್ರವೇಶಿಸಿ ಆನಂದದಿಂದ ಅರಮನೆಯನ್ನು

ವ॥ ಇಂತು ತನ್ನ ಬಸಿಱೊಳ್ ಭವಾನಿ ಬರ್ಪ ವರಮಂ ಪಡೆದು ಮೇನಾದೇವಿ ಸಾನ್ಸ್ರಾ ಸುಖದೊಳೊಪ್ಪಿರ್ದು,

ಕಂ॥ ಮುಂದಾ ಸ್ತ್ರೀರತ್ನಮನೊಲ
ವಿಂದಂ ಪಡೆದಪ್ಪೆನೆಂಬುದಂ ಸೂಚಿಸುವಂ ।
ತೊಂದೆರಡು ದಿನದೊಳತ್ತಾ
ನಂದದೆ ಕಡುಜಾಣೆ ಮಾಣಿಕಂಗಂಡಿರ್ದಳ್ ॥ ೨೦

ವ॥ ಆ ಸಮಯದೊಳ್

ಕಂ॥ ಎಸೆವ ಬಳಲ್ಕೆಗಮುಷ್ಣಮ
ನುಸಿರ್ವುಸಿರನುರಾಗವೇಱುವಕ್ಷಿದ್ವಿತಯಂ ।
ಪೊಸಕಂಪನುಗುಳ್ವ ಕಕ್ಷಂ
ನಸು ಕರಗುವ ತನು ಮನೋಹರಂ ಮಾನಿನಿಯಾ ॥ ೨೧

ಸೆಡೆವ ನಡೆ ತೊಡೆಯ ತಡೆಗಾಲ್
ನಡುವಿಂಗತಿಗಾಢದುಡಿಗೆ ಬಡತನು ಸೊಂಕಿಂ ।
ಗೆಡೆಗುಡದ ಮನಂ ಮಾತಂ
ಮಡಗುವ ಪರಿ ಸೊಗಯಿಸಿತ್ತು ಪಂಕಜಮುಖಿಯೊಳ್ ॥ ೨೨

ಮಾನಿನಿಯಾತೆಱದಿಂ ಸಂ
ದಾ ನಾಲ್ಕುಂದಿವಸಮಿರ್ದು ಬಳಿಯಿಂ ಶುದ್ಧ ।

ಹೊಕ್ಕಳು. ತನ್ನ ಪ್ರಾಣಕಾಂತನನ್ನು ಅಪ್ಪಿ ಮನೋರಥವು ಸಿದ್ಧಿಸಿದಬಗೆಯನ್ನು ವಿವರಿಸಿದಳು. ಅವಳ ಅಂತರಂಗ ಬಹಿರಂಗಗಳಲ್ಲಿ ಆನಂದ ಉಕ್ಕುತ್ತಿತ್ತು. ವ॥ ಭವಾನಿಯು ತನ್ನ ಉದರದಲ್ಲಿ ಜನಿಸುವಳೆಂಬ ಸಂತೋಷದಿಂದ ಮೇನೆ ಒಪ್ಪಿದ್ದಳು. ೨೦. ಮುಂದೆ, ಒಂದು ಸ್ತ್ರೀರತ್ನವನ್ನು ಒಲವಿನಿಂದ ಪಡೆಯುವೆನು ಎಂಬುದನ್ನು ಸೂಚಿಸುವಂತೆ ಕಡು ಜಾಣೆಯಾದ ಮೇನೆ ಒಂದೆರಡು ದಿನಗಳಲ್ಲಿಯೇ ರಜಸ್ವಲೆಯಾದಳು. ೨೧. ಎಸೆವ ಬಳಲಿದ ಮುಖ, ಉಷ್ಣವನ್ನು ಸೂಚಿಸುವ ಉಸಿರು, ಅನುರಾಗವೇರುವ ಕಣ್ಣುಗಳು, ಹೊಸ ಸೌರಭವನ್ನು ಸೂಸುವ ಕಕ್ಷ (ಕಂಕುಳು) ಗಳು, ತುಸು ಕರಗಿದ ತನುಲತೆಯಿಂದ ಮೇನಾದೇವಿ ಬೆಳಗಿದಳು. ೨೨. ಆ ಪಂಕಜವದನೆ, ಸೆಡೆವ ನಡೆ, ತೊಡೆಯ ತಡೆಗಾಲ್ ನಡುವಿಗೆ ಅತಿ ಬಿಗಿಯಾದ ಉಡಿಗೆ, ಸೊಂಕಿಗೆ ಎಡೆಗೊಡದ ಬಡತನು, ಮಾತು-ಮನಸ್ಸನ್ನು ಬಚ್ಚಿಡುವ ರೀತಿಗಳಿಂದ ಶೋಭಿಸಿದ್ದಳು. ೨೩. ಹೀಗೆ ನಾಲ್ಕು ದಿವಸಗಳನ್ನು ಕಳೆದು ಶುದ್ಧಸ್ನಾನವನ್ನು ಮಾಡಿ, ಗೃಹಲಕ್ಷ್ಮಿಯೆನಿಸಿದ ಆ ಮಾನಿನಿಯಾದ ಮೇನಾದೇವಿ

ಸ್ನಾನಾಂಗೀಕೃತವಿಮಳ
ಶ್ರೀನಿಧಿ ಮೇನಾ ಲತಾಂಗಿ ಕಣ್ಗೆಸೆದಿರ್ದಳ್ ॥ ೨೩

ಬೆಳಗಿದ ಮಣಿ ಮುಕುರದವೋಲ್
ಜಳದಂಗಳಗಲ್ದ ಚಂದ್ರಕಳೆವೋಲ್ ಪುಟವಿ ।
ಟ್ಟವಟ್ಟ ಮಿಸುನಿವೋಲ್ ಮಂ
ಗಳ ನಿರ್ಮಳ ರುಚಿರರೂಪೆಯೊಪ್ಪುತ್ತಿರ್ದಳ್ ॥ ೨೪

ಮ॥ ಸ್ರ॥ ಸುಲಿಪಲ್ ಬಿಂಬಾಧರಂ ರಾಜಿಪ ನಯನಯುಗಂ ಚಂಪಕಾಮೋದಿತಂ ನಿ
ರ್ಮಲವಕ್ತ್ರಂ ಶ್ರೀಲಲಾಮಂ ಸುರುಚಿರವರ ವಕ್ಷೋಜಯುಕ್ತಾಂಗರಾಗಂ ।
ವಿಲಸತ್ ಕಕ್ಷಾಂತದೊಳ್ ಪೂಸಿದ ಮೃಗಮದಮುದ್ಯದ್ದುಕೂಲಂ ಪ್ರಸೂನೋ
ಜ್ವಲ ಧಮ್ಮಿಲ್ಲಂ ಸರಾಗಂ ಮೆಱೆಯೆ ನಿಜಪತಿಧ್ಯಾನದೊಳ್ ಮೇನೆಯಿರ್ದಳ್ ॥ ೨೫

ಕಂ॥ ಇರೆ ಕುಸುಮಮಾಲೆಯಲ್ಲಿಗೆ
ವರಮಧುಕರನೆಯ್ದೆ ಬರ್ಪತೆಱದಿಂ ಬಂದಂ ।
ಗಿರಿರಾಜಂ ಸ್ಮರರಾಗಾ
ತುರಭರಭರಿತಂ ರತಾರ್ಥಿಮೂರ್ತಿ ವಿಳಾಸಂ ॥ ೨೬

ವ॥ ಅಂತು ಬಂದು ಸಜ್ಜನ ಸ್ನೇಹದಿಂ ಸಜ್ಜೆವನೆಯಂ ಪೊಕ್ಕು ಹಂಸತೂಳತಲ್ಪದ ಮೇಲೆ ಮೇನೆಯುಂ ತಾನುಂ ಕುಳ್ಳಿರ್ದು ಬಳ್ಳಿವರಿವ ನೇಹಂ ಕುಡಿವರಿದು ನಿಮಿರೆ ಸುಖ ಸೊಂಕು ವಿಕಾಸ ಮನೆಯ್ದೆ ಸಹಜಾಮೋದಂ ಸೊಗಸನೀಯೆ ನೀಡಾಗದೆ ಗಾಢಾಲಿಂಗನಕ್ಕಾತರಿಸುವಲ್ಲಿ

ಕಂಗೊಳಿಸಿದಳು. ೨೪. ಬೆಳಗಿದ ಮಣಿಮುಕುರ (ಕನ್ನಡಿ)ದಂತೆಯೂ, ಮೋಡಗಳನ್ನು ಬಿಟ್ಟ ಚಂದ್ರಕಳೆಯಂತೆಯೂ, ಪುಟಕ್ಕಿಟ್ಟ ಸುವರ್ಣದಂತೆಯೂ ಮಂಗಳವೂ ನಿರ್ಮಲವೂ ಮನೋಹರವೂ ಆದ ರೂಪುತಳೆದ ಮೇನೆ ಶೋಭಿಸಿದಳು. ೨೫. ಹಸನಾದ ಹಲ್ಲು, ತೊಂಡೆಹಣ್ಣು ತುಟಿ, ಸುಂದರನಯನ, (ಕಣ್ಣು) ಸಂಪಗೆಯಂತೆ ಸುವಾಸನೆಯುಳ್ಳ ನಿರ್ಮಲಮುಖ, ಮನೋಹರವಕ್ಷೋಜಗಳಿಗೆ ಲೇಪಿಸಿದ ಅಂಗರಾಗ, ಬೆಳಗುವ ಕಂಕುಳಲ್ಲಿ ಬಳಿದಕಸ್ತೂರಿ, ಸುಂದರದುಕೂಲ, ಹೂಮುಡಿದ ಕೇಶಪಾಶಗಳಿಂದ ಪ್ರಕಾಶಿಸುವ ಮೇನಾದೇವಿ ನಿಜಪತಿಯ ನೆನೆಹಿನಲ್ಲಿದ್ದಳು. ೨೬. ಹೀಗೆ ಮೇನೆ ಇರುವಾಗ ಹೂವಿನಮಾಲೆ ಇರುವಲ್ಲಿಗೆ ದುಂಬಿ ಬರುವಂತೆ ಗಿರಿರಾಜನ ಸ್ಮರರಾಗಾತುರದಿಂದ ರತಾರ್ಥಿಯಾಗಿ ಬಂದ. ವ॥ ಹೀಗೆ ರಾಜನು ನಲ್ಮೆಯಿಂದ ಶಯ್ಯಾಗಾರವನ್ನು ಪ್ರವೇಶಿಸಿ ಹಂಸತೂಲಿಕಾತಲ್ಪದಲ್ಲಿ ಮೇನೆಯೊಡನೆ ಕುಳಿತು, ಬಳ್ಳಿವರಿದ ಸ್ನೇಹವು ಕುಡಿಯಿಟ್ಟು, ಸುಖಸೊಂಕುವಿಕಾಸವಾಗಿ, ಪ್ರಕೃತಿ ಸಹಜವಾದ ಹರ್ಷದಿಂದ ಪುಳಕಿತನಾಗಿ ಗಾಢಾಲಿಂಗನಕ್ಕೆ ವಿಳಸುತ್ತಿರು

ಕಂ॥ ಲವಲವಿಸುವ ನೋಟಂ ಕೆ
ತ್ತುವ ತೋಳ್ ಕಂಪಿಸುವ ಪಸ್ತವೊಗೆವ ಬೆಮರ್ ಪೊ।
ಣ್ಮುವ ಪುಳಕಮುಣ್ಮುವಶ್ರುಗ
ಳವತರಿಸುವ ಗದ್ಗದಂ ಮನೋಹರಮಾಗಳ್ ॥ ೨೭

ಚಂ॥ ಬರೆತೆಗೆದಪ್ಪಿಯಪ್ಪಿ ಮುದದಿಂ ಮೊಗದೊಳ್ ಮೊಗಮಿಕ್ಕಿಯಿಕ್ಕಿ ಸು
ಯ್ಯೆರಲೆಡೆಯಾಡೆ ಜಿಹ್ವೆನಲಿದಾಡೆ ಸುಖ ಸುಳಿದಾಡೆ ಲೀಲೆ ಮೋ।
ಹರಿಸೆ ಗಳಂ ಚಮತ್ಕರಿಸೆ ಗದ್ಗದಮಾಂತಿರೆ ಕಂಪನಂ ಕೊನ
ರ್ತಿರೆ ಪುಳಕಂಗಳೆಳ್ದಿರೆ ಪರಸ್ಪರಮಾರ್ತದೊಳೊಲ್ದು ಕೂಡಿದರ್ ॥ ೨೮

ಕಂ॥ ಪ್ರಿಯದಿಂದೆ ಮನಂ ಮನದೊಳ್
ನಯನಂ ನಯನಂಗಳೊಳ್ ಮುಖಂ ಮುಖದೊಳಗಾ।
ಸುಯಿ ಸುಯ್ಯೊಳ್ ಕೆಯ್ ಕೆಯ್ಯೊಳ್
ಮೆಯಿ ಮೆಯ್ಯೊಳ್ ಬೆರಸೆ ಬೆರಸಿದರ್ ದಂಪತಿಗಳ್ ॥ ೨೯

ಅರಲುತಿರೆ ನಯನ ಕುಮುದಂ
ಪೊಜೆಯೇರುತ್ತಿರೆ ತನುಪ್ರಭಾ ಕೌಮುದಿ ಕಾ।
ಮರಸಾಬ್ಧಿ ಮಿಕ್ಕುಮಿಾಱು
ತ್ತಿರೆ ನೆರೆದರ್ ಭರಿತ ಸುರತ ಚಂದ್ರೋದಯದೊಳ್ ॥ ೩೦

ವಲ್ಲಿ ೨೭. ಲವಲವಿಸುವ ನೋಟ, ಸ್ಫುರಿಸು (ಅದಿರು)ವ ತೋಳು, ನಡುಗುವಹಸ್ತ, ಹೊಮ್ಮುತ್ತಿರುವ ಬೆವರು, ಮೂಡುವ ರೋಮಾಂಚ, ಉಕ್ಕಿಬರುವ ಆನಂದಾಶ್ರು, ಗದ್ಗದ ನುಡಿಗಳಿಂದ ಮೇನೆ ಮನೋಹರಳಾಗಿದ್ದಾಳೆ. ೨೮. ಸತಿಪತಿಗಳು ಪರಸ್ಪರವಾಗಿ ಬರಸೆಳೆದು ಮತ್ತೆಮತ್ತೆ ಬಿಗಿಯಪ್ಪಿ, ಮುದದಿಂದ ಮುಖದಲ್ಲಿ ಮುಖವನ್ನು ಮತ್ತೆಮತ್ತೆ ಇಟ್ಟು ಮುದ್ದಿಸಿ, ಸುಯ್ಯೆಲರು (ನಿಟ್ಟುಸಿರು) ಆಡುತ್ತಿರಲು, ಜಿಹ್ವೆನಲಿದಾಡಲು, ಸುಖವು ಸುಳಿದಾಡಲು, ಲೀಲೆ ಮೋಹರಿಸಲು, ಕಂಠರವವು ಚಮತ್ಕಾರವಾಗಿ ಗದ್ಗದವಾಗಿರಲು, ಕಂಪನವು ಮೂಡಿ, ನವಿರೆದ್ದು ಅವರು ಪರಸ್ಪರ ಒಲಿದು ಕೂಡಿದರು. ೨೯. ಆ ದಂಪತಿಗಳು ಮನಸ್ಸಿಗೆ ಮನಸ್ಸು, ಕಣ್ಣಿಗೆ ಕಣ್ಣು, ಮುಖಕ್ಕೆ ಮುಖ, ಸುಯ್ಯಿಗೆ ಸುಯ್, ಕೈಗೆ ಕೈ, ಮೈಗೆ ಮೈ ಮೇಳಯಿಸಿ ಸುಖಿಸಿದರು. ೩೦. ದಂಪತಿಗಳ ಸುರತವೆಂಬ ಚಂದ್ರೋದಯದಲ್ಲಿ ಅವರ ನಯನವೆಂಬ ಕುಮುದ (ನೈದಿಲೆ) ಗಳು ಅರಳುತ್ತಿದ್ದವು, ಅವರ ಶರೀರ ಪ್ರಭೆಯೆಂಬ ಬೆಳದಿಂಗಳು ಮೈಯುಬ್ಬಿ ಬೆಳಗುತ್ತಿತ್ತು, ಕಾಮರಸವೆಂಬ ಅಬ್ಧಿ (ಸಮುದ್ರ)ಯು

ಕಂ॥ ಸುರತಸುಖಂ ತವಿಲಱಿಯದೆ
ಭರದಿಂದಮರ್ದಪ್ಪಿದಪ್ಪು ಸಡಿಲದೆ ತಮ್ಮೊಳ್ ।
ಬೆರಸಿದ ಸುಯ್ ಬಿರ್ಚದೆ ಬೇ
ರ್ವರಿದ ಮನಂ ಬೇಱೆ ಪರಿಯದಿರೆ ನೆರೆದಿರ್ದರ್ ॥ ೩೧

ವ॥ ಇಂತು ಸಮಾನರಾಗ ಭೋಗ ಭರಿತ ಪರಮಸುಖದಿಂ ಸಂತುಷ್ಟ ಪುಷ್ಟಹೃದಯರಾಗಿ,

ಕಂ॥ ತಿಳಿದು ಸುರತಾಂತದೊಳ್ ಕ
ಣ್ಗೊಳಿಸುವ ಗಿರಿಪತಿಯುಮೆಸೆವಮೇನಾಸತಿಯುಂ ।
ಕಳೆಯೋಡಿದಿಂದು ಬೆಳ್ದಿಂ
ಗಳನಾಂತ ಚಕೋರಿಯೆಂಬಿನಂ ಮೆಱೆದಿರ್ದರ್ ॥ ೩೨

ವ॥ ಆ ಸಮಯದೊಳ್

ಕಂ॥ ಪದೆಪಿಂ ಮೇನೆಯ ಹೃತ್ಕಮ
ಲದ ಬೆಳಗಿಳಿತಂದು ಮಿಕ್ಕ ಶಕ್ತಿಸುಖದ ಸಂ ।
ಗದೊಳೊಂದಿ ಬಳೆಯುತ್ತಿರ್ದುದು
ಸದಮಳರೂಪಿ ಭವಾನಿಯುಜ್ವಳ ತೇಜಂ ॥ ೩೩

ಚಂ॥ ತೊಳಪ ಸರೋಜ ಗರ್ಭದೊಳಗೊಪ್ಪುವ ಬಾಲಮರಾಳ ಪಿಂಡದಂ
ತಳವಡೆ ಶಾರದಾಭ್ರದೊಳಗಿರ್ಪಲಸಚ್ಛಶಿಲೇಖೆಯಂತೆಯುಂ ।
ಜ್ವಳಿಸುವ ಬೀಜದೊಳ್ ಪೊಳೆವ ಪುಣ್ಯಸುಧಾಲತೆಯಂತೆ ನಾಡೆ ಕಣ್
ಗೊಳಿಸಿತು ಪುಣ್ಯಗರ್ಭಮತಿಶೈವ ಸುಖೋದರದಲ್ಲಿ ಮೇನೆಯಾ ॥ ೩೪

ಉಕ್ಕಿ ಬರುತ್ತಿತ್ತು. ೩೧. ಸುರತಸುಖವು ಮುಗಿಯದೆ, ಗಾಢಾಲಿಂಗನವು ಸಡಿಲವಾಗದೆ, ತಮ್ಮಲ್ಲಿ ಬೆರಸಿದ ಸುಯ್‌ಬಿಚ್ಚದೆ, ಮನಸ್ಸು ಬೇರೆಯಾಗದಂತೆ ಅವರು ನೆರೆದರು. ವ॥ ಹೀಗೆ ಸಮರತಿ ಸುಖಸಂತುಷ್ಟ ಹೃದಯರಾಗಿ ೩೨. ಸುರತಾಂತ್ಯದಲ್ಲಿ ಎಚ್ಚೆತ್ತ ಆ ಗಿರಿರಾಜ ಮತ್ತು ಮೇನೆಯರು ಸುಪ್ರಸನ್ನರಾಗಿ ಕಳಂಕವಿಲ್ಲದ ಚಂದ್ರ ಮತ್ತು ಬೆಳದಿಂಗ ಳನ್ನು ಪಡೆದ ಚಕೋರಿಯರಂತೆ ಪ್ರಕಾಶಿಸಿದರು. ವ॥ ಆ ಸಮಯದಲ್ಲಿ ೩೩. ಭವಾನಿಯ ಉಜ್ವಲ ತೇಜಸ್ಸು ಮೇನಾದೇವಿಯ ಹೃತ್ಕಮಲಕ್ಕೆ ಇಳಿದುಬಂದು ಮಿಕ್ಕ ಶಕ್ತಿಸುಖದ ಸಂಗದೊಳಗೆ ಸೇರಿ ಸದಮಲ ರೂಪಿನಿಂದ ಬೆಳೆಯುತ್ತಿತ್ತು. ೩೪. ಬೆಳಗುವ ಕಮಲ ಮಧ್ಯದಲ್ಲಿ ಪ್ರಕಾಶಿಸುವ ಹಂಸದ ಎಳೆಯ ಪಿಂಡದಂತೆಯೂ, ಶರತ್ಕಾಲದ ಮೇಘದಮರೆ ಯಲ್ಲಿರುವ ಶುಭ್ರ ಚಂದ್ರಲೇಖೆಯಂತೆಯೂ, ಉಜ್ವಲವಾದ ಬೀಜದಲ್ಲಿ ಹೊಳೆಯುವ ಪುಣ್ಯ ಅಮೃತಲತೆಯಂತೆಯೂ ಮೇನಾದೇವಿಯ ಸುಖೋದರಲ್ಲಿ ಪುಣ್ಯಗರ್ಭವು ಕಂಗೊಳಿ

ವ|| ಇಂತೊಪ್ಪುತ್ತುಮಿರ್ದು

ಕಂ|| ಒಂದೆರಡು ಮೂಱು ನಾಲ್ಕೆ
ಯ್ದಾಱೇೞೆಂಬ ಮಾಸಮಾಗಿರೆ ಗರ್ಭಂ ।
ಚಂದಂಬಡೆದೊಳಗೆಸೆದಾ
ನಂದದೆ ಬಳೆಯಿತ್ತಗಣ್ಯ ಪುಣ್ಯೋದರದೊಳ್ ॥ ೩೫

ಅಱಿವಿನಕಣಿ ಮುಕ್ತಿಯ ಮಣಿ
ಹೆಱೆಸೂಡಿದನಚ್ಚ ಸೊಗದ ಮೊಳೆ ಬೆಳೆಯುತ್ತುಂ ।
ತೆಱಪುಗೊಳುತ್ತಿರೆ ಮೇನೆಯ
ಹೊಱಗೊಗೆದುದು ಗರ್ಭಸೂಚನಾ ಸೌಂದರ್ಯಂ ॥ ೩೬

ವ|| ಅದೆಂತೆಂದೊಡೆ,

ತ್ರಿವಳಿಯುವಿಳತ್ತಮಾದುವು
ನವನಾಭಿ ನಿವಾರಿಸಿತ್ತು ಗುಣ್ಪಂ ಕುಚವಾಂ
ತುವು ಕುಡಿಗರ್ಪಂ ನೋಟಂ
ತವೆ ತಳೆದುವು ನಸು ಬಳಲ್ಕೆಯಂ ಮೇನಕೆಯಾ ॥ ೩೭

ನಡೆ ನಾಡೆ ಮಾಂದ್ಯದೊಳ್ ಪುಗೆ
ಮುಡಿ ಮೊಡೆ ಕವಲ್ತು ಕದಪು ಕಾಂತಿಯನುಗೆ ಮೆಲ್ ।
ನುಡಿ ನೀಡೆ ಮೃದುಮಧುರ ಮಂ
ನಡು ನೀಡುಂ ಪೊಂಗೆ ಮೇನೆಗೆಸೆದುದು ಗರ್ಭಂ ॥ ೩೮

ಸಿತು. ವ || ಹೀಗಿರುವಾಗ ೩೫. ಒಂದು, ಎರಡು, ಮೂರು, ನಾಲ್ಕು, ಐದು, ಆರು, ಏಳುತಿಂಗಳವರೆಗೆ ಮೇನಾದೇವಿಯ ಪುಣ್ಯಗರ್ಭದಲ್ಲಿ ಶೈವಪಿಂಡವು ಬೆಳೆಯುತ್ತಿತ್ತು. ೩೬. ಅರಿವಿನಗಣಿ, ಮುಕ್ತಿಯಮಣಿ, ಚಂದ್ರಶೇಖರನ ಅಚ್ಚಸುಖದ ಮೊಳಕೆಯು ಬೆಳೆಯುತ್ತಿರುವಾಗ ಮೇನೆಯ ಶರೀರದ ಹೊರಗೆ ಗರ್ಭಸೂಚನೆಯ ಸೌಂದರ್ಯ ಕಂಡಿತು. ೩೭. ಮೇನಾದೇವಿಯ ಉದರದ ಮೇಲಿನ ತ್ರಿವಳಿಗಳು ಕಾಣದಂತಾದವು, ನಾಭಿಯು ತನ್ನ ಆಳವನ್ನು ಕಳೆದುಕೊಂಡಿತ್ತು. ಸ್ತನಗಳ ಚೂಚುಕಗಳು ಕಪ್ಪಿಟ್ಟವು. ಕಣ್ಣುಗಳು ತುಸು ಬಳಲಿಕೆಯನ್ನು ತಳೆದವು. ೩೮. ಮೇನೆಗೆ ಗರ್ಭಬೆಳೆಯುತ್ತಿರುವಾಗ ಅವಳ ನಡೆ ಮಂದವಾಯಿತು, ಮುಡಿ ಟಿಸಿಲೊಡೆಯಿತು, ಕದಪು ಕಾಂತಿಸೂಸುತ್ತಿತ್ತು. ಮೆಲ್ನುಡಿ

ಕಂ॥ ಮಿಗೆ ಬಾಸೆ ಬಣ್ಣವೇಱಿತು
ಸೊಗಯಿಸಿದುದು ಮೊಗರಸಂ ತುಳುಂಕಾಡುತೆ ಮೆಲ್ ।
ನಗೆ ಸೂಸಿತ್ತು ಬಳಲ್ಕೆಯ
ನೊಗೆದುವು ನವನವ ಮನೋರಥಂ ಮೇನಕೆಯಾ ॥ ೩೯

ವ॥ ಇಂತು ತೀವಿದ ಗರ್ಭದಿಂ ಭಾವಭರಿತ ಪರಮ ಹರ್ಷಂ ನೆಲೆಗೊಂಡು ಸುಖದೊಳಿರ್ಪ ಮೇನಾದೇವಿಯಿರವನಂತಃಪುರದೊಳ್ ಕಳಾಪ್ರೌಢೆಯರಪ್ಪ ವಿಳಾಸಿನಿಯರ್ ಗಿರಿರಾಜಂಗೆ ತೋಱಿತ್ತುಮಿರ್ದರದೆಂತೆಂದೊಡೆ,

ಚಂ॥ ಮುಡಿಯ ಭರಕ್ಕುರೋಜದ ಭರಕ್ಕೆ ನಿತಂಬಭರಕ್ಕೆ ನಾಡೆ ಮೆ
ಲ್ಲಡಿಯಿಡಲೆತ್ತಲಾಱದಿವೆ ಮತ್ತಮದಲ್ಲದೆ ಪುಣ್ಯಗರ್ಭದಿಂ ।
ಕಡುಪಿರಿದಾದ ಭಾರದೊಳದೆಂತಡಿಯಿಟ್ಟಪಳೆಂತು ನಿಂದಪಳ್
ನುಡಿವಪಳೆಂತು ನೋಡುವಳದೆಂತು ಗಿರೀಶ್ವರ ನೋಡು ಮೇನೆಯಂ ॥ ೪೦

ವ॥ ಎಂದು ಬಿನ್ನವಿಸುತ್ತಿರೆ ಕೆಲವುಂ ದಿನದೊಳ್,

ಆದುದು ನವಮಾಸಂ ಪು
ಣ್ಯೋದರದೊಳ್ ಪಕ್ವಸಮಯಮುಲರ್ದುದು ಸುಪಥಂ ।
ವೇದಿಸಿದುದು ಸುಮುಹೂರ್ತಂ
ಕಾದಿರ್ದುವು ಭರದೊಳೆಮಗೆ ತಮಗೆನುತಾಗಳ್ ॥ ೪೧

ವ॥ ಆ ಸಮಯದೊಳ್

ಮಧುರವಾಯಿತು, ನಡು ಹಿಗ್ಗುತ್ತಿತ್ತು. ೩೯. ಮೇನಕೆಯ ಹೊಟ್ಟೆಯ ಮೇಲಿನ ರೋಮ ರಾಜಿ ಬಣ್ಣವೇರಿತು, ಅವಳ ಮುಖಕಾಂತಿಯು ಹರ್ಷರಸ ತುಳುಕಾಡಿ ಮೆಲ್‌ನಗೆ ಸೂಸಿತ್ತು ಮೇನಕೆಯ ಮನೋರಥವು ಹೊಸ ಹೊಸ ಮನೋರಥಗಳನ್ನು ಬಯಸುತ್ತಿತ್ತು. ವ॥ ಹೀಗೆ ಮೇನಾದೇವಿ ಬಳೆದ ಗರ್ಭದಿಂದ ಭಾವಭರಿತ ಪರಮ ಹರ್ಷದಿಂದ ಸುಖವಾಗಿರುವಾಗ, ಅಂತಃಪುರದ ಕಳಾಪ್ರೌಢೆಯರಾದ ವಿಳಾಸಿನಿಯರು ಗಿರಿರಾಜನಿಗೆ, ಹೀಗೆ ಸೂಚನೆ ನೀಡಿದರು. ೪೦. "ಎಲೈ ಗಿರೀಶ್ವರ, ಮೇನಾದೇವಿಗೆ ಮುಡಿಯಭಾರ, ಉರೋಜ (ಸ್ತನ) ಭಾರ, ನಿತಂಬಭಾರ ಇವುಗಳಿಂದಾಗಿ ಅವಳು ಮೊದಲೇ ಮೆಲ್ಲಡಿಯಿಡಲು ಅಸಮರ್ಥಳಾಗಿದ್ದಳು ? ಅದೂ ಅಲ್ಲದೆ ಈಗ ಪುಣ್ಯಗರ್ಭ ಧರಿಸಿರುವುದರಿಂದ ಇವೆಲ್ಲಕ್ಕೂ ಮಿಗಿಲಾದ ಭಾರವಾಗಿದೆ ಎಂದ ಮೇಲೆ ಅವಳು ಹೇಗೆ ತಾನೆ ಅಡಿಯಿಡುವಳು, ನಿಲ್ಲುವಳು, ನುಡಿವಳು, ನೋಡುವಳು ? ನೀನೇವಿಚಾರಮಾಡು" ಎಂದು ಅರಿಕೆ ಮಾಡಿದರು. ವ॥ ಮತ್ತೆ ಕೆಲವು ದಿನ ಕಳೆಯಲು—೪೧. ನವಮಾಸ ತುಂಬಿ ಬಂತು, ಪುಣ್ಯಗರ್ಭದಲ್ಲಿ ಪರಿಪಕ್ವತೆ ಕೂಡಿ ಬಂತು, ಸುಪಥವು ಏರ್ಪಟ್ಟಿತು,

ಚಂ॥ ಅಲರ್ದ ಸರೋಜದಿಂದಮೊಗೆತರ್ಪ ಲಸತ್ಕಳ ಹಂಸಿಯಂತೆ ನಿ
ರ್ಮಲತರ ಮೇರುವಿಂದೆ ಪೊಱಪೊಣ್ಮುವ ತನ್ಮಣಿಮಾಲೆಯಂತೆ ನಿ।
ಶ್ಚಲ ಪುರುಹೂತ ದಿಙ್ಮುಖದಿನೇಳ್ತರುತಿರ್ಪ ಮೃಗಾಂಕ ಬಿಂಬದಂ
ತಳವಡೆ ಗೌರಿ ಗರ್ಭದೊಳಗಿಂ ಬರುತೊಪ್ಪಿದಳಂದು ಮೇನೆಯಾ॥ ೪೨

ಕಂ॥ ಇಂದಿರೆ ಬಂದಿರೆ ಕೆಲದೊಳ್
ನಿಂದಿರೆಯನಸೂಯೆ ಸಪ್ತಮಾತೃಕೆಯರ್ ತಾ।
ವೊಂದಿರೆ ರೋಹಿಣಿ ತಣ್ಪಂ
ತಂದಿರೆ ಗಿರಿಜಾತೆಯೋತು ಪೊಱಮಡುತಿರ್ದಳ್॥ ೪೩

ತೆರೆ ಮಸಗೆ ಕಾಂತಿ ನಾಭೀ
ಸರೋಜಮಲ್ಲಾಡೆ ಜೀವಹಂಸಿ ಬೆದಱೆ ಬಂ।
ಧುರ ಕುಚ ಚಕ್ರಂ ನಡುಗು
ತ್ತಿರೆ ಮೇನೆಯ ಗರ್ಭಸರಸಿಯಿಂ ಪೊಱಮಟ್ಟಳ್॥ ೪೪

ರತಿ ನೆಲನುಗ್ಗಡಿಸೆಯರುಂ
ಧತಿ ಕೆಯ್ನೀಡೆ ಸುಖಮನೆಯ್ದೆ ಸಾವಿತ್ರಿ ಸರ।
ಸ್ವತಿ ಪೊಗಳೆ ಶಚಿ ನಲಿಯೆ ಪಾ
ರ್ವತಿ ಮೇನೆಯ ಗರ್ಭನಿಳಯಮದಿಂ ಪೊಱಮಟ್ಟಳ್॥ ೪೫

ಇಳೆಯೊಳ್ ಪಾರ್ವತಿಯುದಯಿಸೆ
ಕಳೆಯೇಱಿದನಿಂದು ಜೊನ್ನಮಲರ್ದುದು ಕಾಮಂ।

ಸುಮುಹೂರ್ತಗಳು ತಮತಮಗೆಂದು ಕಾಯ್ದಿದ್ದವು. ೪೨. ಅರಳಿದ ಕಮಲದಿಂದ ಹೊರಬರುವ ಪ್ರಕಾಶಿಸುವ ಕಲಹಂಸಿಯಂತೆಯೂ ನಿರ್ಮಲವಾದ ಮೇರುವಿನಿಂದ ಹೊರ ಹೊಮ್ಮುವ ಮಣಿಮಾಲೆಯೂ, ಪೂರ್ವದಿಙ್ಮುಖದಿಂದ ಹೊರಬರುತ್ತಿರುವ ಚಂದ್ರಬಿಂಬ ದಂತೆಯೂ ಮೇನಾದೇವಿಯ ಪುಣ್ಯಗರ್ಭದಿಂದ ಗೌರೀದೇವಿಯು ಹೊರಹೊಮ್ಮಿದಳು. ೪೩. ಭಕ್ತಪ್ರಿಯೆಯಾದ ಗಿರಿಜಾತೆಯು ಹೊರಬರುತ್ತಿರುವಾಗ ಲಕ್ಷ್ಮಿ ಪಕ್ಕದಲ್ಲಿದ್ದಾಳೆ, ಅನಸೂಯೆ ನಿಂತಿದ್ದಾಳೆ, ಸಪ್ತಮಾತೃಕೆಯರು ವಿನೀತೆಯರಾಗಿ ಕಾಯ್ದಿದ್ದಾರೆ, ರೋಹಿಣಿ ತಂದಿದ್ದಾಳೆ. ೪೪. ಕಾಂತಿ ಹೆಚ್ಚಿತು, ನಾಭಿಕಮಲವು ಕದಲಿತು, ಜೀವ ಹಂಸಿ ಬೆದರಿತು, ಬಂಧುಕುಚಚಕ್ರ ನಡುಗುತ್ತಿತ್ತು, ಮೇನೆಯ ಗರ್ಭದಿಂದ ಶಿಶು ಹೊರಬರುವಾಗ ೪೫. ಪಾರ್ವತಿಯು ಮೇನೆಯ ಗರ್ಭದಿಂದ ಹೊರಬರುತ್ತಿರುವಾಗ ರತಿದೇವಿ ಘೋಷಿಸುತ್ತಿದ್ದಾಳೆ, ಅರುಂಧತಿ ಹಸ್ತನೀಡಿದ್ದಾಳೆ, ಸಾವಿತ್ರಿ ಆನಂದಿಸುತ್ತಿದ್ದಾಳೆ, ಸರಸ್ವತಿ ಸ್ತುತಿಸುತ್ತಿದ್ದಾಳೆ; ಶಚಿ ನಲಿಯುತ್ತಿದ್ದಾಳೆ. ೪೬. ಪಾರ್ವತಿಯು ಬುವಿಯಲ್ಲಿ ಅವತರಿಸಿದಾಗ

ತಳೆದಂ ನಿಜಭುಜ ಬಲಮುಂ
ಪುಳಕಿತಮಾಯ್ತಿಂದುಧರನ ವರವಾಮಾಂಗಂ ॥ ೪೬

ಚಂ॥ ಮದನನ ಕರ್ವುವಿಲ್ಗೆ ಮದವೇಱಿ ವಸಂತನ ಸರ್ವಭಾಗ್ಯ ಸಂ
ಪದ ದಳವೇಱಿ ಲೋಕನಯನೋತ್ಪಳರಾಜಿ ವಿಕಾಸವೇಱಿ ಪ ।
ರ್ಚಿದವಿದ ಮೇನೆ ತತ್ಪತಿಗಳುತ್ಸವವಾರಿಧಿಯೇಱಿ ಗೌರಿ ತಾ
ನುದಯಿಸಿದಳ್ ಸುಧಾಂಶುಕಳೆ ಪಶ್ಚಿಮ ಭಾಗದೆ ಪುಟ್ಟಿದಂದದಿಂ ॥ ೪೭

ಜಡೆಮುಡಿ ಇಂದು ಬಾಹು ಬಳೆ ಫಾಳವಿಲೋಚನಮಕ್ಷಮಾಲೆಯೊ
ಳ್ಪುಡೆ ನವಕಾಂತಿ ಹಸ್ತಕಟಕಂ ಮೆಱೆಯುತ್ತಿರೆ ಪುಣ್ಯದಂತೆ ಕಂ ।
ಪಿಡಿದ ಸುರದ್ರುಮ ಪ್ರಸವದಂತೆ ಪರಾಪರಮುಕ್ತಿಯಂತೆ ಸಂ
ಗಡಿಸಿದ ಕಾಮಧೇನುವಿನವೋಲ್ ಗಿರಿರಾಜತನೂಜೆಯೊಪ್ಪಿದಳ್ ॥ ೪೮

ವ॥ ಇಂತೊಪ್ಪುತ್ತುಮಿರ್ದು,

ಕಂ॥ ಶಿವಲಿಂಗೇಕ್ಷಣ ಲೋಲುಪೆ
ಶಿವಪ್ರಸಾದಾತ್ತಚಿತ್ತೆ ಶಿವಭಕ್ತಿ ಶಿವೋ ।
ತ್ಸವೆ ಶಿವಪುಣ್ಯಾಂಭೋನಿಧಿ
ಶಿವನಂ ನೆಱೆನಚ್ಚಿ ಮಚ್ಚಿ ಕಣ್ಮುಚ್ಚಿರ್ದಳ್ ॥ ೪೯

ಇರೆ ಮೇನಾ ಮಾನಿನಿಯುಂ
ಗಿರಿರಾಜನುಮುಱೆಯುದಂಜ ಗುರುಶೈವಾಚಾ ।

ಚಂದ್ರನಿಗೆ ಕಳೆಯೇರಿತು, ಬೆಳದಿಂಗಳು ಹರಡಿತು, ಕಾಮನಿಗೆ ಭುಜಬಲ ಹೆಚ್ಚಿತು, ಪರಶಿವನ ಎಡಭಾಗ ರೋಮಾಂಚಿತವಾಯಿತು. ೪೭. ಗೌರಿಯು ಅವತರಿಸಿದ್ದರಿಂದ ಮದನನ ಕಬ್ಬಿನಬಿಲ್ಲಿಗೆ ಮದವೇರಿತು, ವಸಂತನ ಸರ್ವಭಾಗ್ಯ ಸಂಪತ್ತು ದಳವೇರಿತು, ಲೋಕದ ನಯನೋತ್ಪಳರಾಜಿ ವಿಕಾಸವಾಯಿತು, ಹರ್ಷಗೊಂಡ ಮೇನೆ ಮತ್ತು ಅವಳ ಪತಿಯರ ಉತ್ಸವ ಸಾಗರ ಉಕ್ಕಿತು, ಚಂದ್ರಕಲೆ ಪಶ್ಚಿಮದಲ್ಲಿ ಉದಯಿಸಿದಂತೆ ಗೌರಿ ಉದಯಿಸಿದಳು. ೪೮. ಜಡೆಮುಡಿ ಇಂದು ಬಾಹು ಬಳೆ ಹಣೆಗಣ್ಣು ಅಕ್ಷಮಾಲೆ ಒಳ್ಳೆಯ ಉಡುಗೆ, ನವಕಾಂತಿ, ಕೈಬಳೆಗಳು ಮೆರೆಯುತ್ತಿರಲು ಆ ಪುಣ್ಯಶಿಶು ಪುಣ್ಯದಂತೆ, ಸುವಾಸನೆಯುಳ್ಳ ಕಲ್ಪಕುಜದ ಚಿಗುರಿನಂತೆ, ಪರಾಪರಮುಕ್ತಿಯಂತೆ, ಜೊತೆಗೆ ಬಂದ ಕಾಮಧೇನುವಿನಂತೆ ಗಿರಿಜಾದೇವಿ ಒಪ್ಪಿದ್ದಳು. ೪೯. ಶಿವಭಕ್ತೆಯಾದ ಆ ಶಿಶುವಿಗೆ ಶಿವಲಿಂಗವನ್ನು ನೋಡುವುದರಲ್ಲಿ ಆಸಕ್ತಿ, ಶಿವಪ್ರಸಾದಕೊಂಬಲ್ಲಿ ಮನಸ್ಸು, ಶಿವೋತ್ಸವ, ಶಿವಪುಣ್ಯಾಂಬುಧಿಯೆನಿಸಿರುವ ಶಿಶು ಶಿವನನ್ನು ನಚ್ಚಿಮಚ್ಚಿ ಕಣ್ಣುಮುಚ್ಚಿದ್ದಳು. ೫೦. ಹೀಗೆ ಹುಟ್ಟಿದ ಮಗು

ರ್ಚಾರನಂದು ಕೇಳೆ ಶಿವ ಶಿವ
ಪರಮಶಿವಜ್ಞಾನದಿಂದಮವರಿಂತೆಂದರ್ ॥ ೫೦

ಚಂ॥ ಅನುನಯದಿಂದೆ ಮುನ್ನಮವನೀತಳದೊಳ್ ಖಗೆ ಬಾಣನೆಂಬವಂ
ಜನಿಯಿಸಿ ಕಣ್ಗಳಂ ತೆಱೆಯದಿರ್ದೊಡೆ ಲಿಂಗಮನಂದು ತೋಱೆ ಭೋಂ।
ಕನೆ ನಯನಂಗಳಂ ತೆಱೆದು ಕಂಡೊಲವಿಂ ಮೊಲೆಯುಂಡನಂತೆ ಸ
ಜ್ಜನೆ ಗಿರಿಜಾತೆ ಕಣ್ದೆಱೆಯದಿರ್ಪುದು ತಪ್ಪದಿದುತ್ತರೋತ್ತರಂ ॥ ೫೧

ಕಂ॥ ಎನೆ ಗಿರಿರಾಜಂ ದೇವಾ
ರ್ಚನಾ ನಿಕೇತನಕೆ ಬಂದು ಶಶಿ ರವಿ ಶಿಖಿ ಲೋ।
ಚನ ಶಿವಲಿಂಗಮನುತ್ಸವ
ಜನಿತಮನಂ ತಂದು ಮುಂದೆ ನಿಂದೊಲವಿಂದಂ ॥ ೫೨

ಅಮಮ ಪಯೋವಾರ್ಧಿಗೆ ಚಂ
ದ್ರಮನಂ ಪುಣ್ಯಕ್ಕೆ ಮುಕ್ತಿಯಂ ತೋರ್ಪಂತಾ।
ವಿಮಳೆಗೆ ಗಿರಿಜೆಗೆ ಶಿವಲಿಂ
ಗಮನಧಿಕ ಮನಃ ಪ್ರಮೋದದಿಂ ತೋಱುವುದುಂ ॥ ೫೩

ತೋಱಲೊಡಂ ಕಣ್ದೆಱೆದಳ್
ಪೇಱೆದಳೆರಡುಂ ಕರಂಗಳಂ ಸೊಸಲೊಳ್ ಸೊಂ।
ಪೇಱೆದಳಭವನೊಳಗೆ ಬೇ
ರೂಱೆದಳಂಕುರಿಸಿ ಪಲ್ಲವಿಸಿ ಫಲವಾದಳ್ ॥ ೫೪

ಕಣ್ಣು ತೆರೆಯದೆ ಇರುವಾಗ ಅದನ್ನು ನೋಡಿ ಮೇನಾ–ಗಿರಿರಾಜರು ಹೆದರಿದರು. ಕೂಡಲೆ ಕುಲಗುರು ಶಿವಾಚಾರ್ಯರಲ್ಲಿ ಬಿನ್ನವಿಸಿದಾಗ ಶಿವಜ್ಞಾನಿಗಳಾದ ಅವರು ಹೀಗೆಂದರು. ೫೧. ಶಿವಾಚಾರ್ಯರು ಗಿರಿರಾಜನಿಗೆ ಮಹಾಶಿವಭಕ್ತನಾದ ಬಾಣನ ಕಥೆಯನ್ನು ಹೇಳಿದರು–"ಹಿಂದೆ ಬಾಣನು ಉದಯಿಸಿದಾಗ ಅವನು ಮುಚ್ಚಿದ ಕಣ್ಣುಗಳನ್ನು ತೆರೆದಿರಲಿಲ್ಲ, ಆಗ ಅವನಿಗೆ ಶಿವಲಿಂಗವನ್ನು ತಂದು ತೋರಿಸಲು ಕೂಡಲೆ ಕಣ್ಣು ತೆರೆದು ಮೊಲೆಯುಂಡನಂತೆ, ಎಂದಮೇಲೆ ಸಜ್ಜನೆಯಾದ ಗಿರಿಜಾತೆ ಕಣ್ಣು ತೆರೆಯದಿರುವುದಕ್ಕೆ ಇದೇ ಕಾರಣವಿರಬೇಕು" ಎಂದರು. ೫೨. ಅದನ್ನು ಕೇಳಿದ ಗಿರಿರಾಜ ಶಿವಾರ್ಚನಾ ಮಂದಿರಕ್ಕೆ ಬಂದು ಸಂತೋಷದಿಂದ ಮುಕ್ಕಣ್ಣನಾದ ಪರಶಿವನ ಲಿಂಗಮೂರ್ತಿಯನ್ನು ತಂದು ಮುಂದೆ ನಿಂತನು. ೫೩. ಗಿರಿರಾಜನು ಗಿರಿಜೆಗೆ ಅಧಿಕಮನಸ್ಸಂತೋಷದಿಂದ ಶಿವಲಿಂಗವನ್ನು ತೋರಿದುದು ಸಮುದ್ರಕ್ಕೆ ಚಂದ್ರನನ್ನು ಪುಣ್ಯಕ್ಕೆ ಮುಕ್ತಿಯನ್ನು ತೋರಿಸಿದಂತಾಯಿತು. ೫೪. ಶಿವಲಿಂಗವನ್ನು ಕಂಡೊಡನೆಯೇ ಗಿರಿಜೆ ಕಣ್ಣು ತೆರೆದಳು, ಎರಡೂ

ಕಂ॥ ಆ ಕೆಯ್ಯೊಳ್ ಮೊಲೆಯುಂಡಳ್
ಸಾಕಾರೆ ಶಿವಪ್ರಸಾದ ನವನೀತಮುಮಂ ।
ಕೆಯ್ಕೊಂಡಳ್ ಗಿರಿಜಾವಧು
ಲೋಕೈಕಾರಾಧ್ಯೆ ಮೇನೆಯೊಡನೊಪ್ಪಿರ್ದಳ್ ॥ ೫೫

ವ॥ ಆ ಸಮಯದೊಳ್

ಉ॥ ಮೂಡಿದ ಶೀತದೀಧಿತಿಗೆ ಕಾಲಪಿತಂ ಪ್ರಸವೋತ್ಸವಂಗಳಂ
ಮಾಡುವ ಮಾಳ್ಕೆಯಿಂದಮರಭೂರುಹದಿಂ ನೆಗೆದಂಕುರಕ್ಕೆ ಕೊಂ ।
ಡಾಡಿ ವಸಂತಕಂ ಜನನ ಕರ್ಮವನೊಪ್ಪಿರೆ ಮಾಡುವಂದದಿಂ
ಮಾಡಿದನಳ್ಕಱಿಂದೆ ಗಿರಿರಾಜನ ಜಾತೆಗೆ ಜಾತಕರ್ಮಮಂ ॥ ೫೭

ವ॥ ಅಂತು ಮಾಡೆ

ಕಂ॥ ಬೆಳಗುವ ನಯನದ್ಯುತಿಯಿಂ
ಬೆಳಗುವ ಗಂಡಸ್ಥಳಂಗಳಿಂ ಬೆಳಗುವ ಕೋ ।
ಮಳ ತನುರುಚಿಯಿಂದಂ ತೊಳ
ತೊಳಗುತೆ ನಳನಳಿಸಿ ಪೊಳೆಯುತಂಬಿಕೆ ಎಸೆದಳ್ ॥ ೫೭

ಮಂಗಳಮುಖಿ ಮಾನಿನಿ ಶಿವ
ಲಿಂಗದ ಸುಖಲತೆ ಸಮಸ್ತ ಲಕ್ಷಣಯುತೆ ತಾ ।
ನಂಗೆಯ್ಯ ಪದ್ಮದಿಂ ಚರ
ಣಂಗಳ ಪದ್ಮಂಗಳಿಂದೆ ಗಿರಿಸುತೆಯೆಸೆದಳ್ ॥ ೫೮

ಕೈಗಳನ್ನು ಜೋಡಿಸಿ ಹಣೆಯಲ್ಲಿಟ್ಟು ಕೈಮುಗಿದಳು. ಅಭವನೊಳಗೆ ಸೊಂಪೇರಿದಳು, ಬೇರೂರಿದಳು, ಅಂತೆಯೇ ಪಲ್ಲವಿಸಿ ಫಲವಾದಳು. ೫೫. ಲೋಕೈಕಾರಾಧ್ಯೆಯಾದಕ್ಷಗಿರಿಜೆಯು ಶಿವಲಿಂಗದರ್ಶನಮಾಡಿದ ತರುವಾಯ ಮೊಲೆಯುಂಡಳು, ಶಿವಪ್ರಸಾದ ನವನೀತವನ್ನು ತೆಗೆದುಕೊಂಡು ಮೇನೆಯೊಡನಿದ್ದಳು. ೫೬. ಉದಯಿಸಿದ ಚಂದ್ರನಿಗೆ ಕಾಲಪಿತನು ಪ್ರಸವೋತ್ಸವಗಳನ್ನು ಮಾಡುವಂತೆ, ಕಲ್ಪವೃಕ್ಷದಿಂದ ಮೂಡಿದ ಚಿಗುರಿಗೆ ವಸಂತಕನು ಜನನ ಕರ್ಮವನ್ನು ಮಾಡುವಂತೆ ಗಿರಿರಾಜನು ಅಜಾತೆಯಾದ ಸುತೆಗೆ ಜಾತಕರ್ಮವನ್ನು ನೆರವೇರಿಸಿದನು. ೫೭. ಬೆಳಗುವ ಕಣ್ಣುಗಳ ಕಾಂತಿ, ಬೆಳಗುವ ಕಪೋಲಗಳು, ಬೆಳಗುವ ಕೋಮಲ ಶರೀರ ಕಾಂತಿಗಳಿಂದ ಅಂಬಿಕೆ ತೊಳತೊಳಗುತ್ತ ನಳನಳಿಸಿ ಹೊಳೆಯುತ್ತಿದ್ದಳು. ೫೮. ಮಂಗಳಕರವಾದ ಮುಖವುಳ್ಳವಳು, ಮಾನಿನಿ, ಶಿವಲಿಂಗದ ಸುಖಲತೆ, ಸಮಸ್ತ ಲಕ್ಷಣಯುತೆ ಗಿರಿಸುತೆಯು ಕರಕಮಲ ಮತ್ತು ಪಾದಪದ್ಮಂಗಳಿಂದ ಪ್ರಕಾಶಿಸಿ

ವ॥ ಆ ಪ್ರಸ್ತಾವದೊಳ್

ಕಂ॥ ಜಯ ಜಯ ಜಯ ಜಯತು ಶುಭೋ
ದಯೆ ವರನಿಧಿ ಮಾಯೆ ದೇವಿ ಶರ್ವಾಣಿ ಶಿವ ।
ಪ್ರಿಯೆ ಶಾಶ್ವತೆ ಶಾಂತೆ ಜಗ
ತ್ತ್ರಯಹಿತೆ ಶರಣೆನುತುಮಿರ್ದುದಬಳಾಲೋಕಂ ॥ ೫೯

ವ॥ ಎಂಬ ಪುಣ್ಯ ಕೀರ್ತಿಯಂ ತಳೆದಿರ್ಪ ಸಮಯದೊಳ್ ಸಕಳ ವಾದ್ಯಂಗಳ ಮಂಗಳ ಧ್ವನಿಗಳುಂ ಪಿಂಗದೆ ಸುರಿವ ಸುರಕುಜದ ಸುಮನೋವೃಷ್ಟಿಯುಂ ಪುಟ್ಟಿದುದೆಂತೆಂದೊಡೆ:

ಕಂ॥ ವರ ಶಂಖರವಂ ಕಹಳೆಗ
ಳ ರವಂ ಡಿಂಡಿಮ ರವಂಗಳಾನಕದ ರವಂ ।
ಕರಡೆಗಳ ರವಂ ನಿಸ್ಸಾ
ಳ ರವಂ ಭೇರೀ ರವಂ ಮೃದಂಗರವಂಗಳ್ ॥ ೬೦

ಎಳನನೆಗಳ ಮೆಲ್ಸರಿ ನನೆ
ಗಳ ಬಲ್ಸರಿ ಮುಗುಳ ತಂದಲಾ ಮೊಗ್ಗೆಯ ಪೆ ।
ರ್ಮಳೆಯಲರ್ಗಳ ಬಿಱುಮಳೆ ಎಸ
ಳ್ಗಳ ಸೋನೆ ಪರಾಗ ಪರಿಮಳದ ತುಂತುಱುಗಳ್ ॥ ೬೧

ವ॥ ಅಂತು ಪುಟ್ಟಿದ ವಾದ್ಯಧ್ವನಿಗಳುಮಂ ಗಿರಿರಾಜಂ ಕಂಡು ಮನಂಗೊಂಡು

ಚಂ॥ ಇಳೆಗತಿಶೀತಳಂ ಮಿಗೆ ಗಿರೀಶ್ವರನುತ್ಸವದಿಂದೆ ತುಷ್ಪದೋ
ಕುಳಿ ನವದುಗ್ಧದೋಕುಳಿ ಹಿಮಪ್ರಜದೋಕುಳಿ ಜೇನುತುಪ್ಪದೋ ।

ದಳು. ೫೯. ಅಲ್ಲಿದ್ದ ಅಬಲೆಯರೆಲ್ಲ ಕೈಜೋಡಿಸಿ ಶುಭೋದಯೇ, ವರನಿಧಿ, ಮಾಯೆ, ದೇವಿ, ಶರ್ವಾಣಿ, ಶಿವಪ್ರಿಯೆ, ಶಾಶ್ವತೆ, ಶಾಂತೆ, ಮೂರು ಲೋಕಕ್ಕೂ ಹಿತವೆಸಗುವ ಅಂಬಿಕೆ ಎಂದು ಶರಣಾಗಿ ಜಯಕಾರ ಮಾಡುತ್ತಿದ್ದರು. ವ॥ ಈ ಬಗೆಯ ಪುಣ್ಯ ಕೀರ್ತಿಯನ್ನು ತಳೆದಿರುವ ಸಮಯದಲ್ಲಿ ಸಕಲವಾದ್ಯಗಳ ಮಂಗಳ ಧ್ವನಿಗಳಾದವು, ಕಲ್ಪ ವೃಕ್ಷದಿಂದ ಪುಷ್ಪವೃಷ್ಟಿಯಾಯಿತು. ೬೦. ಶ್ರೇಷ್ಠ ಶಂಖಗಳ ನಾದ, ಕಹಳೆಗಳ ರವ, ಡಿಂಡಿಮ, ದುಂದುಭಿ, ಕರಡೆ ವಾದ್ಯರವ, ನಿಸ್ಸಾಳ–ಭೇರೀ ಮೃದಂಗರವಗಳು ಮೊಳಗಿದವು. ೬೧. ಎಳೆಮೊಗ್ಗುಗಳ ಮೃದುಮಳೆ, ಬಲಿತ ಮೊಗ್ಗುಗಳ ಬಲ್ಸರಿ, ಮುಗುಳು ತಂದಲು ಮೊಗ್ಗೆಗಳ ಪೆರ್ಮಳೆ, ಹೂವುಗಳ ಬಿರುಮಳೆ, ಎಸಳುಗಳ ಸೋನೆ, ಪರಾಗ ಪರಿಮಳಗಳ ತುಂತುರು ಸುರಿಯಿತು. ೬೨. ಪುತ್ರಿಯ ಜನನೋತ್ಸವದ ಅಂಗವಾಗಿ ಗಿರಿರಾಜನು ಓಕುಳಿಯಾಡಿದನು. ಅದರ ವರ್ಣನವಿದು–ಇಳೆಗೇ ಅತಿಶೀತಳನಾದವನು ಹಿಮವಂತ;

ಕುಳಿ ದಧಿಯೋಕುಳಿ ಪ್ರಸವದೋಕುಳಿ ಕತ್ತುರಿ ಚಂದನಂಗಳೋ
ಕುಳಿ ಪನಿನೀರ್ಗಳೋಕುಳಿಯನಾಡಿದನುಬ್ಬಿದನೊಕ್ಕಲಿಕ್ಕಿದಂ ॥ ೬೨

ವ॥ ಅಂತೋಕುಳಿಯನಾಡಿ ನವೀನ ಶೃಂಗಾರಮಂ ಮಾಡಿ

ಕಂ॥ ಆದರದಿಂ ಗೋದಾನಂ
ಸ್ತ್ರೀದಾನಂ ವಸ್ತ್ರದಾನಮಿಭಕುಲದಾನಂ ।
ಭೂದಾನಂ ಧನದಾನಂ
ಶ್ರೀದಾನಂಗುಡುತುವೊಪ್ಪಿದಂ ಗಿರಿರಾಜಂ ॥ ೬೩

ಗುಡಿಗಟ್ಟಿತು ಸೆಜ಼ೆ ಪುರದೊಳ್
ಮಡುಗಟ್ಟಿತ್ತಚಳ ನಾಥ ಸಂತೋಷರಸಂ ।
ಕುಡಿಯಿಟ್ಟುದು ಧೀಂಕಿಟ್ಟುದು
ಗಡಿಗೆಟ್ಟುದು ಪುಣ್ಯಕೀರ್ತಿಲತೆ ಧಾರಿಣಿಯೊಳ್ ॥ ೬೪

ವ॥ ಎಂಬ ಯಶಸ್ಸಿಂಗೆ ತಾವೆ ಭಾಜನರಾಗಿ ಗಿರಿರಾಜನುಂ ಮೇನಾದೇವಿಯುಂ ಪರಿಜನಮುಂ ಪುರಜನಮುಂ ಧರಾವಳಯಮುಂ ಪರಮಸುಖದಿಂದಿರ್ಪಲ್ಲಿ

ಚಂ॥ ತೊಲಗದ ಪುಣ್ಯವಾರಿಧಿಗಗಣ್ಯಮರೀಚಿಗೆ ಲೀಲೆಯಿಂದೆ ಬಂ
ದಿಳೆಯೊಳೆ ಪುಟ್ಟಿದಪ್ರತಿಮೆಗಾನತಲೋಕೆಗೆ ಶರ್ವನಾಮೆಗು ।
ಜ್ಜ್ವಳಿಪ ನಿಜಕ್ಕೆ ನಾಮಕರಣಂ ಗಿರಿಜಾತೆಯೆನಿಪ್ಪುದಾಗೆ ತೊ
ಟ್ಟಿಲೊಳಿಡುತಿರ್ದರೊಪ್ಪುವ ಸುವಾಸಿನಿಯರ್ ಮನದುತ್ಸವಂಗಳಿಂ ॥ ೬೫

ಆತ ಅತ್ಯಂತ ಸಂತೋಷದಿಂದ ತುಪ್ಪದೋಕುಳಿ, ನವದುಗ್ಧ (ಹಾಲು) ದೋಕುಳಿ, ಹಿಮಪ್ರಜ (ಆಲಿಕಲ್ಲು) ದೋಕುಳಿ, ಜೇನುತುಪ್ಪದೋಕುಳಿ, ದಧಿ (ಮೊಸರು) ಯೋಕುಳಿ, ನವಪ್ರಸವ (ಹೊಸ ಹೂವು) ದೋಕುಳಿ, ಕಸ್ತೂರಿ-ಶ್ರೀಗಂಧಗಳ ಓಕುಳಿ ಮತ್ತು ಪನ್ನೀರುಗಳ ಓಕುಳಿಯನ್ನು ಆಡಿದ. ೬೩. ಗಿರಿರಾಜ ಪುತ್ರಿಯ ಜನನೋತ್ಸವದ ಸಂತೋಷ ಸಂದರ್ಭದಲ್ಲಿ ಸತ್ಪಾತ್ರರಿಗೆ ಗೋದಾನ, ಕನ್ಯಾದಾನ, ವಸ್ತ್ರದಾನ, ಆನೆ, ಭೂ, ಹಿರಣ್ಯ (ಹಣ) ಮತ್ತು ಸಂಪದ್ದಾನಗಳನ್ನು ಮಾಡಿದನು. ೬೪. ಪರ್ವತರಾಜನ ಸಂತೋಷ ರಸವು ಗುಡಿಗಟ್ಟಿತು, ಮಡುಗಟ್ಟಿತು ; ಆತನ ಪುಣ್ಯಕೀರ್ತಿಲತೆ ಕುಡಿಯಿಟ್ಟಿತು. ಗಡಿ ಮೀರಿ ಭೂಲೋಕದಲ್ಲೆಲ್ಲಾ ಥಾಳಿಯಿಟ್ಟಿತು. ವ॥ ಹೀಗೆ ಕೀರ್ತಿಭಾಜನರಾದ ಗಿರಿರಾಜ ದಂಪತಿಗಳು ಪರಿಜನ, ಪುರಜನ ಮತ್ತು ಭೂಮಂಡಲವೆಲ್ಲ ಆನಂದ ಪಡುತ್ತಿರುವಾಗ– ೬೫. ಅಮಿತ ಪುಣ್ಯದಕಡಲು, ಅಗಣಿತಮರೀಚಿ, ಅನುಪಮೆ, ಶರಣಾದ ಸರ್ವಲೋಕೆ, ಶರ್ವೆಗೆ, ಭುವಿಯಲ್ಲಿ ಅವತರಿಸಿದ ಉಜ್ವಲ ನಿಜಕ್ಕೆ ಸುವಾಸಿನಿಯರು ' ಗಿರಿಜಾತೆ ' ಎಂದು

ಕಂ॥ ದಿಟದಿಂ ಜಗಕ್ಕೆ ತನ್ನುಂ
ಗುಟಮೇ ತಾಯ್ದೊಟ್ಟಿಲಾದ ಗಿರಿಸುತೆಯನತಿ ।
ಸ್ಫುಟಮಣಿಗಣಪ್ರಭಾ ಸಂ
ಪುಟಮೆನಿಸುವ ರನ್ನದೊಟ್ಟಿಲೊಳಗಿರಿಸುತ್ತುಂ ॥ ೬೬

ರಾಗಂ ಮಿಗೆ ಸಪ್ತರ್ಷಿ
ಸ್ತ್ರೀಗಣವೊಲವಿಂದೆ ಲಳಿತೆ ಬಂಗಾಳಂ ಶ್ರೀ ।
ರಾಗಂಗಳೊಗೆಯೆ ಪಾಡುತೆ
ತೂಗಿದರಖಿಳ ಪ್ರಪಂಚವಾಡಿಪ ಶಿಶುವಂ ॥ ೬೭

ಜೋ ಸಕಳ ತತ್ತ್ವಮಯೆ ಜೋ
ಜೋ ಸತ್ತ್ವಾದಿ ಗುಣರಹಿತೆ ಜೋ ನಿರ್ಮಳೆ ಜೋ ।
ಜೋ ಸದ್ಗುಣೆ ಜೋ ಶಾಶ್ವತೆ
ಜೋ ಸಂಪದೆ ಜೋ ವಿಶಾಲೆ ಜೋ ಶಿವೆ ಜೋಜೋ ॥ ೬೮

ಶಾ॥ ಜೋಜೋ ಶಂಕರನರ್ಧಮಂ ಕವರ್ದುಕೊಳ್ವತ್ಯಂತರೂಪಾನ್ವಿತೇ
ಜೋಜೋ ಸರ್ವಜಗಚ್ಛಿಶುಪ್ರಕರಮಂ ರಕ್ಷಿಪ್ಪ ಮಾತಾಮಹೇ ।
ಜೋಜೋ ಶೈವಸಮುದ್ರವರ್ಧನಕರ ಪ್ರಖ್ಯಾತ ಚಂದ್ರಾನನೇ
ಜೋಜೋ ರಕ್ಷಿಸೆನುತ್ತೆ ತೂಗಿ ನಲಿದರ್ ಶರ್ವಾಣಿಯಂ ಜಾಣೆಯರ್ ॥ ೬೯

ವ॥ ಅಂತು ತೂಗುವ ಜೋಗುಳದ ರಾಗದೊಳಂ, ವೊಲಿಯೂಡುವ ಮೇನೆಯ ಮಗ್ಗುಲೊಳಂ, ಸಾಗಿಸುವ ಸಾವಿತ್ರಿಯ ಸೋಗಿಲೊಳಂ, ಎತ್ತುವನಸೂಯೆಯ ಹಸ್ತದೊಳಂ, ಅಪ್ಪುವ

ಹೆಸರಿಟ್ಟು ತೊಟ್ಟಿಲಿಟ್ಟು ತೂಗಿದರು. ೬೬. ನಿಜವಾಗಿಯೂ ಲೋಕಕ್ಕೆ ತನ್ನ ಅಂಗುಷ್ಠವೇ ತಾಯ್ತೊಟ್ಟಿಲು ; ಅಂಥ ಗಿರಿಸುತೆಯನ್ನು ಮಣಿಗಣಪ್ರಭಾ ಸಂಪುಟವೆನಿಸುವ ರತ್ನದ ತೊಟ್ಟಿಲಲಿಟ್ಟು, ೬೭. ಅಖಿಲ ಪ್ರಪಂಚವನ್ನು ಆಡಿಸುವ ಶಿಶುವನ್ನು ಸಪ್ತರ್ಷಿಪತ್ನಿಯರು ಮೊದಲಾದ ಸ್ತ್ರೀಗಣವು ಲಳಿತೆ–ಶ್ರೀರಾಗ–ಬಂಗಾಳಿ ಮುಂತಾದ ರಾಗಗಳಲ್ಲಿ ಹಾಡಿ ತೂಗಿದರು. ೬೮. ಜೋಗುಳವನ್ನು ಹಾಡುವ ಸ್ತ್ರೀಯರು ಗಿರಿಜೆಯ ಗುಣಗಳನ್ನು ಹೇಳುತ್ತ ಸಕಲತತ್ವಮಯೆ, ಸತ್ವಾದಿಗುಣರಹಿತೆ, ನಿರ್ಮಳೆ, ಸದ್ಗುಣೆ, ಶಾಶ್ವತೆ, ಸಂಪದೆ, ವಿಶಾಲೆ, ಶಿವೆ ಎಂದು ಸ್ತುತಿಸಿದರು. ೬೯. ಜೋಗುಳ ಹಾಡುವ ಆ ಜಾಣೆಯರು, ಶರ್ವಾಣಿಯನ್ನು ಕುರಿತು 'ಶಂಕರನ ಅರ್ಧವನ್ನೇ ಕಸಿದುಕೊಳ್ಳುವರೂಪಸಿ, ಸಮಸ್ತ ಜಗತ್ತಿನ ಶಿಶುಗಳನ್ನೇ ರಕ್ಷಿಸುವ ಮಾತಾಮಹೆ, ಶಿವಭಕ್ತಿಸಮುದ್ರವನ್ನು ಉಕ್ಕೇರಿಸುವ ಚಂದ್ರಮುಖಿ ಕಾಪಾಡು' ಎಂದು ತೂಗಿ ನಲಿದರು. ವ॥ ಶಿಶುಗಿರಿಜೆಯ ಲಾಲನೆ ಪಾಲನೆಗಳ ಹೊಣೆ ಮೇನಾ

ರುಂಧತಿಯುರದೊಳಂ, ನೆಗಪುವ ಗಾಯತ್ರಿಯ ಸೊಗಸಿನೊಳಂ, ಮುಟ್ಟುವ ರೋಹಿಣಿಯ ತಣ್ಪಿನೊಳಂ, ಸೋಂಕುವ ಕಮಳೆಯ ಸಂಪದದೊಳಂ, ಮುದ್ದಾಡಿಸುವ ಸರಸ್ವತಿಯ ಮಧುರ ವಾಣಿಯೊಳಂ, ನೋಡುವ ಶಚಿಯ ಸಂತೋಷದೊಳಂ, ಪರಸುವ ಸಪ್ತಮಾತೃಕೆಯರ ಪರಕೆಯೊಳಂ, ಮಿಕ್ಕುನಲಿವಚಲಗತಿಯಳ್ಕಱೊಳಂ, ಸಾಮರ್ಥ್ಯದ ಬಿತ್ತಿನಂತೆ, ಸೌಂದರ್ಯದಂಕುರದಂತೆ, ಸೌಕುಮಾರ್ಯದ ಪಲ್ಲವದಂತೆ, ಸಾಹಿತ್ಯದ ಕುಸುಮದಂತೆ, ಸತ್ಯದ ಫಲದಂತೆ, ಭೂಮಿಯ ಬಿಣ್ಪನಂತೆ, ಸಲಿಲದ ತಣ್ಪಿನಂತೆ, ಗಗನದ ಪೆಂಪಿನಂತೆ, ಪಯೋನಿಧಿಯ ಗುಣ್ಪಿನಂತೆ, ಪವಮಾನನುಸಿರ ಪಾವಕನ ತೇಜದಂತೆ, ಚಂದ್ರನ ಬಲದಂತೆ, ದಿವಸೇಂದ್ರನ ಕಿರಣದಂತೆ, ಪರಮಾತ್ಮನ ಪರಿಣಾಮದಂತೆ, ಲೋಕದಾಲೋಕದಂತೆ, ಸಲ್ಲಕ್ಷಣದ ಲಾವಣ್ಯದಂತೆ, ಬೆಳ್ದಿಂಗಳ ಬಣ್ಣದಂತೆ, ವಸಂತನ ವಶ್ಯದಂತೆ, ಮಲಯಾನಿಲನ ಮಹಿಮೆಯಂತೆ, ಮಕರಧ್ವಜನ ಮದದಂತೆ, ಕುಸುಮಬಾಣದ ಕುಶಲದಂತೆ, ಪುಣ್ಯದ ಜೀವದಂತೆ, ಶಿವಜ್ಞಾನದ ದೇಹದಂತೆ, ಸಾಲೋಕ್ಯದ ಸವಿಯಂತೆ, ಸಾಮೀಪ್ಯದ ಸೀಮೆಯಂತೆ, ಸಾರೂಪ್ಯದ ಸುಧೆಯಂತೆ, ಸಾಯುಜ್ಯದ ನಿಲವಿನಂತೆ, ಶಿವನ ಸುಖದಂತೆ, ಮುಕ್ತಿಯ ಮುಖದಂತೆ, ಕಾಂತಿಯ ಲತೆಯಂತೆ, ನಿರುಪಾಧಿಕ ಜ್ಯೋತಿಯಂತೆ, ಸಕಲ ಜಗನ್ಮಾತೆಯಪ್ಪ ಗಿರಿಜಾತೆ ಶೈಶವ ಲೀಲೆಯನೊಳಕೊಂಡು ತೊಳತೊಳಗಿ ಬೆಳಬೆಳಗಿ ನಳನಳಿಸಿ ಬೆಳೆಯುತಿರ್ದಳಂತುಮಲ್ಲದೆಯುಂ,

ಕಂ॥ ಸರಸಿಜ ಕುಟ್ಮಳಮಲರ್ವಂ
ತಿರೆ ಕರುಣಾನಿಳಯ ಮೃದು ಕವಾಟಂದೆಗೆವಂ ।
ತಿರೆ ನಗೆ ಮೊಗಮಂ ಸವಿವಂ
ತಿರೆ ಗಿರಿಸುತೆ ಕಲ್ತಳಮರ್ದಿಸಗೆಯಂ ನಗೆಯುಂ ॥ ೭೦

ಘನರಜತ ಗಿರಿಯ ಸಿಂಹಾ
ಸನದೊಳ್ ನಲಿದಿರ್ಪ ಪರಿಯನಭವನ ತೊಡೆಯೊಳ್ ।
ಮನದೊಲವಿಂ ಕುಳ್ಳಿರ್ಪುದ
ನನುಕರಿಸುವ ತೆಱದೊಳಗಱೆ ಕುಳ್ಳಿರೆ ಕಲ್ತಳ್ ॥ ೭೧

ದೇವಿ, ಸಾವಿತ್ರಿ, ಅನಸೂಯೆ, ಅರುಂಧತಿ, ಗಾಯತ್ರಿ, ರೋಹಿಣಿ, ಲಕ್ಷ್ಮಿ, ಸರಸ್ವತಿ, ಶಚಿ, ಸಪ್ತಮಾತೃಕೆಯರು ಮೊದಲಾದವರದಾಗಿತ್ತು. ಸಾಮರ್ಥ್ಯದ ಬೀಜದಂತೆ, ಸೌಂದರ್ಯ, ಸೌಕುಮಾರ್ಯ, ಸಾಹಿತ್ಯ, ಸತ್ಯ, ಮುಂತಾದ ಶ್ರೇಷ್ಠ ವಸ್ತುಗಳ ಸಾಧರ್ಮ್ಯವನ್ನು ಹೊಂದಿ ಲೋಕಮಾತೆ ಗಿರಿಜಾತೆ ಶೈಶವಲೀಲೆಗಳಲ್ಲಿ ತೊಡಗಿ ಬೆಳೆಯುತ್ತಿದ್ದಳು.
೭೦. ಕಮಲದ ಮೊಗ್ಗು ಅರಳುವಂತೆ, ಕರುಣೆಯ ಮನೆಯ ಕದವನ್ನು ತೆರೆವಂತೆ, ನಗೆ ಮೊಗವನ್ನು ಸವಿಯುವಂತೆ ಅಮೃತದ ಅಗೆ (ಮೊಳಕೆ) ಯಂತಿರುವ ನಗೆಯನ್ನು ಕಲಿತಳು.
೭೧. ರಜತಗಿರಿಯ ಚಿಪ್ಪೀಠದಲ್ಲಿ ಮಂಡಿಸಿರುವ ಪರಶಿವನ ತೊಡೆಯ ಮೇಲೆ ಮನದೊಲವಿನಿಂದ ಕುಳಿತಿದ್ದುದನ್ನು ಅನುಕರಿಸುವಳೋ ಎಂಬಂತೆ ಅಗಜೆ ಕುಳಿತುಕೊಳ್ಳುವುದನ್ನು

ಕಂ॥ ತ್ರ್ಯಂಬಕನಂ ಬಲವರಲೆರ
ಡೆಂಬೀ ಪದವೆಯ್ದುವೆಂದು ನಾಲ್ಕುಂಕಾಲಿಂ।
ದಂ ಬಲವಂದಪಳೆಂಬಂ
ತಂಬಿಕೆಯಂಬಳಿಕಿಯಾಡುವಳ್ ॥ ೭೨

ಬೇರ್ಪಡೆ ಕೊಡೆ ತಾನೆಯ
ದರ್ಪಖಿಳಕ್ಕೆಂಬ ನೈಜಮಂ ಮೆಱೆಯಿಸುತಂ।
ದಾರ್ಪಿಂ ಭಿತ್ತಿಗಳಂ ನೆ
ಮ್ಮಿರ್ಪಳ್ ನಿಂದಗಜೆ ಬಾಲ್ಯಮಂ ನಟಿಯಿಸುತುಂ॥ ೭೩

ಅಡಿಗಳ ಕೋಮಲತೆಗೆ ಧರೆ
ಬಿಡಲಾಱದೆ ಪೊಡಮಡುತ್ತೆ ಬಿಡದಿರೆ ನಯದಿಂ।
ಬಿಡಿಸಿಕೊಳುತ್ತುಂ ಮೆಲ್ಲನೆ
ನಡೆದಪಳೆನೆ ಮೆಱೆದುವಗಜೆಯೊಳ್ ದಟ್ಟಡಿಗಳ್ ॥ ೭೪

ಒಡನೆಯ ಸತಿಯರ್ ನೆಲನು
ಗ್ಗಡಿಸೆ ಧರಾಕಾಂತೆ ಮೆಲ್ಲಡಿಗೆ ಮೃದುವಾಗು।
ತ್ತೆಡೆಗುಡುತುಂ ಪುಳಕಿಸುತಿರೆ
ನಡೆಗಲ್ತಳ್ ಗಿರಿಜೆ ಪರಮನರಮನೆಯುತ್ತಲ್ ॥ ೭೫

ರಸನೆಯ ಸುಧೆಯಂ ಮಿಗೆ ಸವಿ
ದುರವಿದು ಮುಗ್ಧತೆಯನೆಯ್ದಿ ಮಧುರಾಕ್ಷರಮು।

ಕಲಿತಳು. ೭೨. ಅಂಬಿಕೆ ಶೈಶವದಲ್ಲಿ ಪರಶಿವನನ್ನು ಪ್ರದಕ್ಷಿಣೆ ಮಾಡಿದರೆ ಧರ್ಮ–ಅರ್ಥ–ಕಾಮ–ಮೋಕ್ಷಗಳೆಂಬ ನಾಲ್ಕೂ ಪದರಗಳು ಕೈಸಾರುವುವೆಂಬುದನ್ನು ಸೂಚಿಸಲೋ ಎಂಬಂತೆ ನಾಲ್ಕು ಕಾಲುಗಳಿಂದ ಸುಳಿದಾಡುವಳು. ೭೩. ಶಿವನಿಂದ ಬೇರ್ಪಡದೆ ಎಂದರೆ ಶಿವನಲ್ಲಿ ಅವಿನಾಭಾವದಿಂದ ಇರುವ ತಾನು ಅಖಿಲ ಜಗತ್ತಿಗೂ ಆಧಾರ ಎಂಬ ನಿಜವನ್ನು ಸೂಚಿಸುವಳೋ ಎಂಬಂತೆ ಅವಳು ಸ್ವಶಕ್ತಿಯಿಂದ ಎದ್ದುನಿಂತು ಗೋಡೆಹಿಡಿದು ಬಾಲಲೀಲೆಗಳನ್ನು ನಟಿಸಿದಳು. ೭೪. ಅವಳ ಮೆಲ್ಲಡಿಗಳ ಸೌಕುಮಾರ್ಯವನ್ನು ಕಂಡು ಬಿಡಲಾರದೆ ಧರೆಯು ಪೊಡಮಟ್ಟು ಬಿಡದಿರುವಾಗ, ಅವಳು ನಯದಿಂದ ಅವುಗಳನ್ನು ಬಿಡಿಸಿಕೊಂಡು ಮೆಲ್ಲನೆ ನಡೆಯುತ್ತಿರುವಳೋ ಎಂಬಂತೆ ದಟ್ಟಡಿ ಇಡುತ್ತಿದ್ದಳು. ೭೫. ಒಡನಿದ್ದ ಸತಿಯರು ನೆಲವನ್ನು ಎಚ್ಚರಿಸುತ್ತಿರಲು, ಧರಾಕಾಂತೆಯು ಅವಳ ಮೆಲ್ಲಡಿಗಳಿಗೆ ಮೃದುವಾಗುತ್ತಾ, ಪುಳಕಿಸುತ್ತಿರಲು ಅಗಜೆಯು ಪರಮನ ಅರಮನೆ ಹತ್ತುವುದಕ್ಕಾಗಿಯೋ ಎಂಬಂತೆ ನಡೆಯಕಲಿತಳು. ೭೬. ರಸನೆ (ಜಿಹ್ವೆ)ಯ ಮಾಧುರ್ಯವನ್ನು

ಬ್ಬಸದಿಂ ಪೊರಳುತ್ತುರುಳು
ತ್ತೊಸರ್ದಪುದೆನೆ ಗಿರಿಜೆಯೊಳ್ ತೊದಳ್ನುಡಿಯೆಸೆಗುಂ ॥ ೭೬

ಕಂ॥ ಮನದೊಳಗೆ ಪುಟ್ಟಿ ಕಂಠದೊ
ಳನುನಯದಿಂ ಬಳೆದು ಜಿಹ್ವೆಯೊಳ್ ದಟ್ಟಡಿಯಿ ।
ಟ್ಟನಸುಂ ಸುಳಿಗೊಳುತುಂ ಗಿರಿ
ತನಯಳ ಮುಖದೊಳ್ ತೊದಳ್ನುಡಿಗಳೆಸೆದಿರ್ಕುಂ ॥ ೭೭

ವ॥ ಅಂತುಮಲ್ಲದೆಯುಂ

ಕಂ॥ ಮಂಗಳ ಮುಖಿಯರ್ ಸಖಿಯರ್
ಸಂಗಡದಿಂ ಕೊಂಡುಕೊನೆಯುತಾಡಿಸುವೆಡೆಯೊಳ್ ।
ಪಿಂಗದೆ ಭುಜಲತೆ ಶಿವನಾ
ಲಿಂಗನಮಂ ಪೇಳೆ ಬಾಲೆ ತೋಳಾಡಿಸುವಳ್ ॥ ೭೮

ಉಣ್ಮೆ ಶಶಿಧರನ ಬಗೆ ಮಿಗೆ
ಪೊಣ್ಮುವ ಪುಳಕಂಗಳಿಂದೆಯಂತಃಸ್ಥಳದೊಳಿ ।
ಲ್ಪಾಣ್ಮನನೀಕ್ಷಿಪ ತೆಱದಿಂ
ಕಣ್ಮುಚ್ಚುವಳಮಳೆ ವಿಮಳ ಕಮಳಾಕೃತಿಯಿಂ ॥ ೭೯

ಗಿರಿಸುತೆ ಹರನಂಘ್ರಿಯನಂ
ತರಂಗದೊಳ್ ಮುಚ್ಚಿ ಪೊಜಗೆ ನೋಳ್ಪಾಸೆಯೊಳಾ ।
ಚರಣಾರುಣೋದಯಕೆ ತಾ
ವರೆಯಲರ್ದಪೊಲಂದು ಮುಂದೆ ಕಣ್ದೆಱೆದಿರ್ದಳ್ ॥ ೮೦

ಚೆನ್ನಾಗಿ ಸವಿಸವಿದು ಮುಗ್ಧವಾಗಿ ಮಧುರ ಅಕ್ಷರಗಳು ನಾಲಗೆಯಲ್ಲಿ ಉಕ್ಕಿ ಹೊರಳುತ್ತಿವೆಯೋ ಎಂಬಂತೆ ಗಿರಿಜೆಯಲ್ಲಿ ತೊದಳ್ನುಡಿಗಳು ಎಸೆಯುತ್ತಿದ್ದವು. ೭೭. ಗಿರಿಜೆಯ ಮುಖದಿಂದ ಹೊರಬೀಳುತ್ತಿರುವ ತೊದಳ್ನುಡಿಗಳು ಅವಳ ಮನಸ್ಸಿನಲ್ಲಿ ಹುಟ್ಟಿ, ಕಂಠದಲ್ಲಿ ಅನುನಯದಿಂದ ಬಳೆದು, ನಾಲಗೆಯಲ್ಲಿ ದಟ್ಟಡಿಯಿಟ್ಟು ಸುಳಿದಾಡುವವೋ ಎಂಬಂತೆ ಅವಳಲ್ಲಿ ತೊದಳ್ನುಡಿಗಳು ಹೊರಡುತ್ತಿದ್ದವು. ೭೮. ಮಂಗಳಮುಖಿಯರಾದ ಜೊತೆಗಾರ್ತಿಯರು ಅವಳನ್ನೆತ್ತಿಕೊಂಡು ನಲಿಯುತ್ತಿರುವಾಗ ಅವಳ ಭುಜಲತೆ ಶಿವನ ಆಲಿಂಗನವನ್ನು ಪೇಳುವುದೋ ಎಂಬಂತೆ ಅವಳು ತೋಳು ಆಡಿಸುತ್ತಿದ್ದಳು ೭೯. ಶಶಿಧರನ ಕಡೆ ಮನಸ್ಸಾಗಿ, ಅವಳ ಪ್ರೀತಿಪುಳಕವೆದ್ದು ಅವಳ ಅಂತರಂಗದಲ್ಲಿರುವ ತನ್ನ ಆಣ್ಮ (ಮನಃಪ್ರಿಯ) ನನ್ನು ನೋಡುವಂತೆ ತನ್ನ ಕಮಲದಂತಿರುವ ಕಣ್ಣುಗಳನ್ನು ಮುಚ್ಚುವಳು. ೮೦. ಗಿರಿಸುತೆಯು ಅಂತರಂಗದಲ್ಲಿ ಶಿವನ ಪಾದಗಳನ್ನು ಮೆಚ್ಚಿ ಹೊರಗೆ ನೋಡುವ ಆಸೆ

ವ॥ ಮತ್ತಮಾ ಶೈಶವದಲ್ಲಿ,

ಕಂ॥ ವರಭಾಳಾಕ್ಷದ ಮೇಲೊಂ
ದುರುತರೆ ನಿಟಲಾಕ್ಷಮೊಗೆದುದೆಂಬಂತಿರೆ ಶಾಂ।
ಕರಿಗೆಸೆದುದು ಮುಂದಲೆಯೊಳ
ಗರಳಲೆ ಬಹುರತ್ನ ನೂತ್ನಕಾಂತಿ ಪ್ರಕರಂ॥ ೮೧

ನೋಡಭವವಲ್ಲಭೆಯ ಕಿವಿ
ಗೂಡಿದೆವತಿ ಸಫಲವಾದೆವೆನುತಂ ಕುಣಿವಂ।
ತಾಡುವ ಗಿರಿಜೆಯ ಮೊಗದೊಡ
ನಾಡುವ ಹೊನ್ನೋಲೆವಿಡಿದು ಪೊಸ ಮಾಗಾಯ್ಗಳ್॥ ೮೨

ಶಿವನಂ ಬಿಡದಪ್ಪುವ ತೋ
ಳಿವನಪ್ಪಿ ಕೃತಾರ್ಥರಪ್ಪೆವೆಂಬಂದದೊಳಾ।
ನವರತ್ನದ ರವೆಯುದ ಬಂ
ದಿ ವಿರಾಜಿಸುತಿರ್ದುದಪ್ಪಿಯಗಜೆಯ ತೋಳಂ॥ ೮೩

ಒದವಿರ್ದ ಸಕಲ ಲಾವ
ಣ್ಯದ ಸಿರಿ ಕೆಯ್ವಾಸಿರ್ದುದರ್ಕೆ ಕಂಕಣಮಂ ಕ।
ಟ್ಟಿದವೋಲ್ ಮೆಱೆದುವು ವರ ಹ
ಸ್ತದೊಳೆಸೆವಂಬಿಕೆಯ ಸುಕರ ಮಣಿಮಯಕಟಕಂ॥ ೮೪

ಯಿಂದ, ಅರುಣೋದಯಕ್ಕೆ ತಾವರೆಯು ಅರಳುವಂತೆ ಅವಳು ಕಣ್ಣು ತೆರೆದಳು. ೮೧. ಶ್ರೇಷ್ಠವಾದ ಫಾಲಾಕ್ಷನ ಮೇಲೆ ಮತ್ತೊಂದು ನಿಟಿಲಾಕ್ಷ (ಹಣೆಗಣ್ಣು) ಮೂಡಿದೆಯೊ ಎಂಬಂತೆ ಆ ಶಾಂಕರಿಗೆ ರತ್ನಮಯವಾದ ಅರಳೆಲೆ ಮುಂದಲೆಯಲ್ಲಿ ರಾಜಿಸಿತು. ೮೨. ಅವಳ ಕಿವಿಗಳಿಗೆ ಧರಿಸಿದ ಮಾಂಗಾಯ್ಗಳು–ಅವು ಅಭವ ವಲ್ಲಭೆಯ ಕಿವಿಯನ್ನು ಸೇರಿದೆವು, ನಮ್ಮ ಜನ್ಮ ಸಫಲವಾಯಿತು ಎಂದು ಕುಣಿದಾಡುವವೊ ಎಂಬಂತೆ ಗಿರಿಜೆಯ ಮೊಗದೊಡನಾಡುವ ಹೊನ್ನೋಲೆಯೊಡನೆ ಪೊಸಮಾಗಾಯಿಗಳು ಅಲುಗಾಡುತ್ತಿದ್ದವು. ೮೩. ಅಗಜೆಯ ತೋಳುಗಳಿಗೆ ನವರತ್ನಖಚಿತ ಬಂದಿತೊಡಿಸಲಾಗಿತ್ತು; ಅವು ಶಿವನನ್ನು ಅಪ್ಪುವ ತೋಳನ್ನು ತಾವು ಅಪ್ಪಿ ಕೃತಾರ್ಥರಾದೆವು ಎಂಬಂತೆ ವಿರಾಜಿಸುತ್ತಿದ್ದವು. ೮೪. ಅಗಜೆಯ ಮುಂಗೈಗೆ ಮಣಿಮಯ ಕಟಕ (ಬಳೆ) ತೊಡಿಸಲಾಗಿತ್ತು. ಒದಗಿ ಬಂದ ಸಕಲಲಾವಣ್ಯದ ಸಿರಿ ಕೈವಶವಾದುದಕ್ಕೆ ಕಂಕಣ ಕಟ್ಟಲಾಗಿದೆಯೋ ಎಂಬಂತೆ ಅವು

ಕಂ॥ ಪುರಮಥನನ ವರಕೀರ್ತ್ಯಂ
ಕುರವಿಾ ಗಿರಿಸುತೆಯ ವದನದೊಳ್ ಮೊಳೆತುದು ಸಾ ।
ದರದಿಂ ತಾನೆಂಬಂತಿರೆ
ಕರಮೆಸೆದುದು ವಿಮಳಮೌಕ್ತಿಕಂ ನಾಸಿಕದೊಳ್ ॥ ೮೫

ಅನವಧಿ ಗುಣನಿಧಿ ಪಾರ್ವತಿ
ಜನಿಯಿಸೆ ತಾನಱಿದು ಬಂದು ಚಂದ್ರಾಭರಣಂ ।
ಮನವೊಸೆದು ತಾಳಿಗಟ್ಟಿದ
ನೆನೆಮೆಱೆದುದು ಕೊರಲೊಳೇಕಮುಖ ರುದ್ರಾಕ್ಷಂ ॥ ೮೬

ಈ ಶಶಿಮುಖಿ ದಿಟದಿಂ ವ್ಯಾ
ಘ್ರಾಸುರ ಹರನನರಸಿಯೆಂಬುದರ್ಕಿದೆ ಕುಱುಪೆಂ ।
ಬಾ ಸ್ರೈಪನಱಿವಂತಿರೆ
ಭಾಸುರಮಾಯ್ತುರರೆ ಪುಲಿಯುಗುರ್ ನಗಸುತೆಯಾ ॥ ೮೭

ಹೆಱೆಸೂಡಿದನ ಮನವನೀ
ತೆಱದಿಂದಂ ಸುತ್ತುವಳ್ ಭವಾನಿಯೆನಿಪ್ಪಾ ।
ತೆಱನಂ ತೋಱುವ ತೆಱದಿಂ
ಮೆಱೆವುಡಿಗೆಯ ಮೇಲೆ ಸುತ್ತಿದುಡೆವಣಿ ತೋರ್ಕುಂ ॥ ೮೮

ಬಿಡೆವಿನ್ನೀ ಗಿರಿಜೆಯ ಮೆ
ಲ್ಲಡಿಗಳನೆಂದಖಿಳ ವೇದಮುಲಿವಂತೆ ವಲಂ ।

ರಂಜಿಸುತ್ತಿದ್ದವು. ೮೫. ಅವಳ ನಾಸಿಕದಲ್ಲಿ ನಿರ್ಮಲ ಮೂಗುತಿ ಬೆಳಗುತ್ತಿತ್ತು. ಅದನ್ನು ನೋಡಿದರೆ ತ್ರಿಪುರಹರನ ಕೀರ್ತಿಯ ಅಂಕುರವು ಗಿರಿಜೆಯ ವದನದಲ್ಲಿ ಮೊಳೆತಿದೆಯೋ ಎಂಬಂತೆ ಇತ್ತು. ೮೬. ಗಿರಿಜೆಯ ಕೊರಳಿಗೆ ಒಂದು ಏಕಮುಖ ರುದ್ರಾಕ್ಷವನ್ನು ಕಟ್ಟಲಾಗಿತ್ತು. ಅದನ್ನು ನೋಡಿದರೆ ಅಗಣಿತಗುಣಗಳಿಗೆ ನಿಧಿಯಾದ ಪಾರ್ವತಿಯು ಜನಿಸಿದ್ದಾಳೆ ಎಂಬುದನ್ನು ತಿಳಿದು ಸಾಕ್ಷಾತ್ ಚಂದ್ರಶೇಖರನೇ ಒಲಿದು ಬಂದು ಮಾಂಗಲ್ಯವನ್ನು ಧರಿಸಿರುವನೋ ಎಂಬಂತಿತ್ತು. ೮೭. ಬಾಲಕಿಯಾದ ಅಗಜೆಗೆ ದೃಷ್ಟಿಯಾಗಬಾರದೆಂದು ಹುಲಿಯ ಉಗುರು ಕಟ್ಟಿದ್ದರು. ಅದನ್ನು ನೋಡಿದರೆ ನಿಜವಾಗಿಯೂ ಇವಳು ವ್ಯಾಘ್ರಾಸುರನನ್ನು ಮರ್ದಿಸಿದ ಪರಶಿವನ ಅರ್ಧಾಂಗಿನಿ ಎಂಬುದನ್ನು ಸೂಚಿಸುವ ಕುರುಹು ಎಂಬಂತಿತ್ತು. ೮೮. ಪಾರ್ವತಿಯು ಉಟ್ಟಿದ್ದ ಉಡಿಗೆಯ ಮೇಲೆ ರತ್ನಮಯ ಕಾಂಚೀಧಾಮ ಪಟ್ಟಿಯನ್ನು ಸುತ್ತಿ ಕಟ್ಟಲಾಗಿತ್ತು. ಅದನ್ನು ನೋಡಿದರೆ ಈ ಭವಾನಿಯು ಹೆರೆ(ಚಂದ್ರ) ಸೂಡಿದವನ ಮನಸ್ಸನ್ನು ಈ ರೀತಿಯಿಂದ ಸುತ್ತುವಳು ಎಂಬುದನ್ನು ಸೂಚಿ

ನಡೆವೆಡೆಯೊಳಗುರ್ಬಿಂ ಬೊ
ಬ್ಬಿಡುವಂದುಗೆ ಗೆಜ್ಜೆ ಸಜ್ಜನೆಗೆ ಸೊಗಯಿಸುಗುಂ ॥ ೮೯

ವ॥ ಇಂತು ಸಕಲ ಸೌಂದರ್ಯಮಂ ಬೀಱುವ ಬಾಲದುಡಿಗೆವೆರಸು ಲೀಲೆ ಮಿಕ್ಕು

ಕಂ॥ ತರದಿಂ ಗೆಜ್ಜೆಗಳುಲಿಯು
ತ್ತಿರೆ ಮಾಂಗಾಯಲುಗೆ ಮೂಡೆ ಮೆಲ್ಲನೆ ನಲವಿಂ ।
ಪರಿಪರಿದು ಪೋಗಿ ಗಿರಿಸುತೆ
ಹರಿಸಂ ಮಿಗೆ ಹರನ ನಿಳಯದೊಳ್ ನೆಲೆಸಿರ್ದಳ್ ॥ ೯೦

ನಲಿವಳ್ ನಗುವಳ್ ರಾಗಿಪ
ಳುಲಿವಳ್ ಮುದ್ದಿಸುವಳಳುವಳಪ್ಪುವಳಂತಿಂ ।
ತೊಲೆವಳ್ ನಿಲ್ವಳ್ ಮೇನೆಯ
ಮೊಲೆಯುಂ ಮಱೆದಭವನಾಟದೊಳ್ ಸಂದಿರ್ದಳ್ ॥ ೯೧

ವ॥ ಇಂತಾರುಮಂ ಬಗೆಯದೆ ನೆರಮಂ ಪಾರದೆ ಪೋಗಿ ಪರಮ ಪ್ರೀತಿಯಿಂ ಹರನಾಲಯದೊಳ್ ಗಿರಿಜಾತೆಯಿರ್ಪುದುಂ ಗಿರಿರಾಜಂ ಕಂಡು ಮನಂಗೊಂಡು ಜಡೆಮುಡಿಯ ಜಾಣೆಗೆ ಭಾಳತಳದ ಭಾಮಿನಿಗೆ ತ್ರಿಲೋಚನದ ಲಲನೆಗೆ ಕರ್ಣಪಾಲಿಕೆಯ ಕಾಮಿನಿಗೆ ಕಪೋಲ ವಿವುಳೆಗೆ ನಗೆಗಣ್ಗಳ ನಲ್ಲೆಗೆ ನಾಸಿಕದ ನೀಱೆಗೆ ಬೆಳರ್ವಾಯ ಭಾಗ್ಯನಿಧಿಗೆ ಸಿರಿಮೊಗದರಸಿಗೆ ತೊದಳ್ನುಡಿಯ ಸದಮಳೆಗೆ ಕಂಬುಗ್ರೀವದ ಕಲ್ಯಾಣಿಗೆ ಪೇರುರದ ಪಾರಿಜಾತಕ್ಕೆ ನಳಿತೋಳ ನಿಜಕ್ಕೆ ಹಸ್ತಕಡಗದ ಹರಿಣಾಕ್ಷಿಗೆ ಬಡನಡುವಿನ ಬಾಲೆಗೆ ಸುಳಿನಾಭಿಯೆಳೆ ಯುಳ್ಗೆ ಎಸೆವುಡಿಗೆಯ ಪೊಸಚೆಲ್ವೆಗೆ ನುಣ್ದೊಡೆಯ ನೂತನೆಗೆ ಕಿಱುದೊಡೆಯ ಕಾಮಧೇನುಗೆ ಮೃದುತಳದ ಮಂದಯಾನೆಗೆ ಗೆಜ್ಜೆಗಳ ಸಜ್ಜನೆಗೆ ಅಂದುಗೆಯಾನಂದೆಗೆ ನೇವುರದ ಭಾವಕಿಗೆ ಪಾಡಗದ ಪರುಷಕ್ಕೆ ಉಡಿಗೆಯ ಮೃಡಾಣಿಗೆ ಉಡೆವಣಿಯುತ್ಸಾಹಕ್ಕೆ ಕರವಲಯದ ಪರಬೊಮ್ಮಕ್ಕೆ ಹೊಂಗಡಗದ ಲಿಂಗವಂತೆಗೆ ತೋಳಬಂದಿಯ ಬಾಲಕಿಗೆ

ಸುಪಂತಿತ್ತು. ೮೯. ಆ ಬಾಲಿಕೆಯ ಕಾಲಿಗೆ ಕಟ್ಟಿದ್ದ ಅಂದುಗೆ–ಗೆಜ್ಜೆಗಳು ಮಂಜುಳವಾಗಿ ದನಿಮಾಡುತ್ತಿದ್ದವು. ಇದನ್ನು ನೋಡಿದರೆ ಎಲ್ಲ ವೇದಗಳೂ ನಾವಿನ್ನು ಗಿರಿಜೆಯ ಅಡಿಗಳನ್ನು ಬಿಡೆವು ಎಂದು ಉಲಿವಂತೆ ಅವಳು ಹೆಜ್ಜೆಯಿಡುವಾಗ ಅವು ಬೊಬ್ಬಿಡುತ್ತಿದ್ದವು. ವ ॥ ಹೀಗೆ ಸುಂದರವಾದ ಬಾಲ್ಯದ ಉಡುಗೆ ತೊಟ್ಟು ಅವಳು–೯೦. ಗಿರಿಸುತೆ ಹರ್ಷದಿಂದ ಶಿವಾಲಯಕ್ಕೆ ಹೋಗುವಾಗ ನೆಲೆಸುವಾಗ ಗೆಜ್ಜೆಗಳು ಉಲಿಯುತ್ತಿವೆ, ಮಾಂಗಾಯಿಗಳು ಅಲುಗುತ್ತಿವೆ, ಮೆಲ್ಲನೆ ಮೂಡಿದೆ. ೯೧. ಗಿರಿಜೆಯಂ ಬಾಲಲೀಲೆಗಳಲ್ಲಿ ತೊಡಗಿ ನಲಿದು, ನಕ್ಕು, ರಾಗಿಸಿ, ಉಲಿದು, ಮುದ್ದಿಸಿ, ಅತ್ತು, ಅಪ್ಪಿ, ಅಂತಿಂತೊಲೆದು, ನಿಲ್ಲುವಂತಾದಳು, ಕಡೆಗೆ ಅವಳು ತಾಯಿ ಮೊಲೆಯನ್ನು ಮರೆತು ಅಭವನ ಆಟದಲ್ಲಿ ಮಗ್ನಳಾದಳು. ವ ॥ ಹೀಗೆ ಯಾರನ್ನೂ ಬಗೆಯದೆ, ನೆರವನ್ನು ನಿರೀಕ್ಷಿಸದೆ ಹೋಗಿ ಗಿರಿಜೆ ಶಿವಾಲಯದಲ್ಲಿರುವುದನ್ನು ಕಂಡ ತಂದೆ ಗಿರಿರಾಜನು, ವ್ಯಾಕುಲನಾಗಿ ಆ ಜಡೆ ಮುಡಿಯ

ಪುಲಿಯುಗುರ ಸುಲಲಿತೆಗೆ ನೇವಳದ ನಾಯಕಿಗೆ ರತ್ನದಾಳಿಯ ರಾಜಹಂಸೆಗೆ, ಮಾಗಾಯ್ಗಳ ಮುಗ್ಧೆಗೆ ಹೊನ್ನೋಲೆಯ ಚೆನ್ನೆಗೆ ಮೂಗುತಿಯ ಮುಗುಳ್ಗೆ ಅಂಜನದಮೃತಕ್ಕೆ ತಿಲಕದ ಲಲಿತೆಗೆ ಅರಳೆಲೆಯ ತರಳೆಗೆ ಸೂಸಕದ ಸುಮ್ಮಾನೆಗೆ ರುದ್ರಾಕ್ಷಿಯ ಭದ್ರಾಂಗಿಗೆ ವಿಭೂತಿಯ ವಿಳಾಸನಿಧಿಗೆ ಭಕ್ತಿಯ ಭಾವಕ್ಕೆ ಅಜಿನವಯವಕ್ಕೆ ಶಿವಜ್ಞಾನದ ಸೀಮೆಗೆ ವೈರಾಗ್ಯದ ಮೇರೆಗೆ ಪರಮೈಶ್ವರ್ಯದ ಪುಣ್ಯಕ್ಕೆ ಲೋಕದ ಲೋಚನಕ್ಕೆ ಸಾಕಾರದ ಸುಧೆಗೆ ಪಶುಪತಿಯ ಪಟ್ಟದ ಮಹಾದೇವಿಗೆ ಸಕಳ ಜಗನ್ಮಾತೆಗೆ ಸಕಳ ಬ್ರಹ್ಮಾಂಡಮಂ ರಕ್ಷಿಸುವ ರುದ್ರಾಣಿಗೆ ರಕ್ಷಣಾರ್ಥಂ ತಂದೆ ನಿಯಾಮಿಸಿ ಕೊಟ್ಟ ದಂಡಿಗೆಯ ಧವಳಛತ್ರದ ಅಂಗರಕ್ಷಕರ ಸಹವಾಸಿಗಳ ದಾದಿಯರ ಪಡಿಯಱತಿಯರ ಚಾಮರದ ಸೀಗುರಿಯ ಹಡಪದ ಮಡಿವರ್ಗದ ಅಂಜನದ ಕನ್ನಡಿಯ ಕಳಶದ ಸಿರಿಮುಡಿಯ ಸಿಂಗರದ ಸಾದಿನ ಕುಸುಮ ಕುಳದ ಕತ್ತುರಿಯ ಕರ್ಪೂರದ ಶ್ರೀಖಂಡದ ರಾಜಶುಕಪಠಣದ ಹಂಸರಕ್ಷಣದ ಮಯೂರ ನರ್ತನದ ಲೀಲಾಂಬುಜದ ರತ್ನಕಂತುಕದ ವಿಳಾಸಿನಿಯರ ಹರಿದ್ರಾಭರಣದ ಚರಣ ಪ್ರಕ್ಷಾಳನದ ಕದಂಬ ಫಲಭಾರದ ಮಂಗಳಾರತಿಯ ಮಾನಿನಿಯರಾದಿಯಾದ ಪುಣ್ಯಾಂಗಣ್ಯಲಾವಣ್ಯಮಯ ಸಾಮ್ರಾಜ್ಯ ಪರಿಚರ್ಯಾಪಟುಗಳೆನಿಸಿದ ಷೋಡಶ ಸಹಸ್ರ ವಿಳಾಸಿನಿಯರ್ವೆರಸು ನಡೆತಂದ ಪೂರ್ವ ಸರ್ವವಿದ್ಯೆಗಳನಭ್ಯಾಸಂಮಾಡದೊಡಂ ಮುನ್ನಿನಂತೆ ಸಹಜಮಾಗಿ ನೆಲಸಿನಿಲೆ ವಿಹಿತ ನವೀನ ಕ್ರೀಡೆ ಬಾಲ್ಯಮಂ ಸವಿದಪುದೆನೆ ಸಲ್ಲೀಲೆಯಿಂ ಶೈಲಾತ್ಮಜೆ ಕೇಳೀವನಂಗಳಂ ಪುಗುತಂದು,

ಉ॥ ಎಲ್ಲಿ ಸರೋಜಮೆಲ್ಲಿ ವಿಮಳೋತ್ಪಳಮೆಲ್ಲಿ ಲತಾನದೊ
ಳ್ಪೆಲ್ಲಿ ವನಂಗಳೆಲ್ಲಿ ಕೃತಕಾಚಳಮೆಲ್ಲಿ ವಿಶಾಲಮಪ್ಪತ ।
ಣ್ಪೆಲ್ಲಿ ತಟಾಕಮೆಲ್ಲಿ ಪುಳಿನಸ್ಥಳಮೆಲ್ಲಿ ನದೀನದಾಳಿ ತಾ
ನಲ್ಲಿ ಭವಾನಿ ಭಕ್ತಿಮಿಗೆ ಭಾವಿಸಿ ಭರ್ಗನನೊಲ್ದು ಪೂಜಿಪಳ್ ॥ ೯೨

ಕಂ॥ ಕಣ್ಮಲರಿಂದಶ್ರುಜಲಂ
ಪೊಣ್ಮುತ್ತಿರೆ ತನುವಿನಲ್ಲಿ ಪುಳಕಂ ಸಾಲ್ಗೊಂ ।

ಜಾಣೆಗೆ ಭಾಳತ್ರಳದ ಭಾಮಿನಿ, ತ್ರಿಲೋಚನದ ಲಲನೆ ಮುಂತಾದ ಅನುಪಮ ಗುಣಗಣ ವಿಭೂಷಿತಳಾದ ಸಕಳ ಬ್ರಹ್ಮಾಂಡವನ್ನು ರಕ್ಷಿಸುವ ರುದ್ರಾಣಿಗೆ ರಕ್ಷಣೆಗಾಗಿ ಕೆಲವರು ಅಂಗರಕ್ಷಕರನ್ನು ನಿಯಮಿಸಿದನು. ಅವರಲ್ಲಿ ಸಹದಾಸಿಗಳು, ದಾದಿಯರು, ಪಡಿಯರತಿಯರು ಚಾಮರದ, ಸೀಗುರಿಯ, ಹಡಪದ ಮುಂತಾದ ವಿವಿಧ ಸೇವಾವರ್ಗದಲ್ಲಿ ಷೋಡಶ ಸಹಸ್ರ ವಿಳಾಸಿನಿಯರಿದ್ದರು. ಅವಳು ಅಂತಹ ವೈಭವದಲ್ಲಿದ್ದು ಸರ್ವವಿದ್ಯೆಗಳನ್ನು ಅಭ್ಯಾಸಮಾಡದಿದ್ದರೂ ಆ ವಿದ್ಯೆಗಳೆಲ್ಲ ಸಂಸ್ಕಾರವಶವದಿಂದ ಅವಳಲ್ಲಿ ಸಹಜವಾಗಿ ಬಂದು ನೆಲೆಸಿದವು. ಆ ಶೈಲಾತ್ಮಜೆ ಸಲ್ಲೀಲೆಯಿಂದ ಕೇಳಿವನಗಳಲ್ಲಿ ವಿಹರಿಸುತ್ತಿದ್ದಳು. ೯೨. ಗಿರಿಜೆ ಸರೋವರ, ವಿಮಳೋತ್ಪಳ, ಲತಾವಿತಾನ, ವನಂಗಳು ಕೃತಕ ಪರ್ವತಗಳು ಎಲ್ಲೆಲ್ಲಿ ಕಂಡರೆ ಅಲ್ಲಿ ಅತ್ಯಂತ ಭಕ್ತಿಯಿಂದ ಭರ್ಗನನ್ನು ಒಲಿದು ಪೂಜಿಸುತ್ತಿದ್ದಳು. ೯೩. ಕಣ್ಣುಗಳಿಂದ ಆನಂದಾಶ್ರುಗಳು ಉಕ್ಕಿ ಬರುತ್ತಿರಲು, ತನುವಿನಲ್ಲಿ ಪುಳಕಂಗಳು ಉಣ್ಮುತ್ತಿರೆ,

ಪುಣ್ಯಾತ್ತಿರೆ ಗಿರಿಪತಿಸುತೆ
ನುಣ್ಮಳಲಿಂ ದಿವ್ಯಲಿಂಗಮಂ ವಿರಚಿಸುವಳ್ ॥ ೯೩

ವಿರಚಿಸುವ ಲಿಂಗದೊಳ್ ಮೃದು
ಕರಾಂಗುಲಿಸ್ಪರ್ಶಸುಖಮನೆಳಸುತೆ ಶರ್ವಂ ।
ಪರಿತಂದು ನಿಲ್ವನೆಂದೊಡೆ
ಗಿರಿಜೆಯ ಸೌಭಾಗ್ಯದಿರವನಾರ್ ಬಣ್ಣಿಸುವರ್ ॥ ೯೪

ವ॥ ಇಂತು ಸೌಕುಮಾರ್ಯ ಶೃಂಗಾರಮನಾಂತು,

ಕಂ॥ ಹಿಮಕರ ಕಿರಣಾವಳಿಗಳ್
ಕುಮುದದ ಸೋಂಕಿಂದೆ ಕಂಪನಪ್ಪುದುವೆನೆ ಎ ।
ಭ್ರಮು ಮಲ್ಲಿಕಾನಿಕಾಯದೆ
ಕಮಳಾನನೆ ವಿಮಳಲಿಂಗಮಂ ಪೂಜಿಸುವಳ್ ॥ ೯೫

ತರಣಿಯ ತರುಣಕಿರಣಮಂ
ಬುರುಹಪರಿಷ್ವಂಗದಿಂದೆ ಪರಿಮಳಮಂ ಪೊ ।
ತ್ತರಲ್ದಪುವೆನಿಸುವ ಸಂಪಗೆ
ಯರಲಿಂದಂ ಗಿರಿಜೆ ಹರನನೊಲ್ದರ್ಚಿಸುವಳ್ ॥ ೯೬

ತರಣಿಯ ಮಧುಕರನಿಕರದ
ಮರುತನ ಕಾಲ್ದುಳಿಯಿಖಿವೆಂದು ಪೂವಂ ಬಿಟ್ಟಾ ।
ಗಿರಿಸುತೆ ಮನಃಕುಸುಮದಿಂ
ಪರಮನನೇಕಾಂತಭೂಮಿಯೊಳ್ ಪೂಜಿಸುವಳ್ ॥ ೯೭

ಅಗಜೆ ನುಣ್ಮಳಲಿಂದ ದಿವ್ಯಲಿಂಗವನ್ನು ರಚಿಸಿ ಪೂಜಿಸುವಳು. ೯೪. ಅವಳು ರಚಿಸುವ ಲಿಂಗದಲ್ಲಿ ಅವಳ ಮೃದುವಾದ ಕರಾಂಗುಲಿಗಳ ಸ್ಪರ್ಶವನ್ನು ಬಯಸಿ ಶಿವನು ಬಂದು ನಿಲ್ಲುವನೆಂದ ಮೇಲೆ ಇನ್ನು ಗಿರಿಜೆಯ ಸೌಭಾಗ್ಯದ ಹೆಮ್ಮೆಯನ್ನು ಯಾರುತಾನೆ ವರ್ಣಿಸಲು ಸಾಧ್ಯ! ೯೫. ಚಂದ್ರನ ಕಿರಣಗಳು ನೈದಿಲೆಯನ್ನು ಸೋಂಕಿದುದರಿಂದ ಸುವಾಸನೆಯನ್ನು ಪಡೆದುವೋ ಎಂಬಂತೆ ಆ ಕಮಲಮುಖಿ ಗಿರಿಜೆ ಮಲ್ಲಿಗೆಯ ಕುಸುಮಗಳಿಂದ ಶಿವಲಿಂಗವನ್ನು ಪೂಜಿಸುವಳು. ೯೬. ರವಿಯ ತರುಣಕಿರಣವು ತಾವರೆಯ ಸಂಗದಿಂದ ಪರಿಮಳವನ್ನು ಹೊತ್ತು ಅರಳುವವೆನಿಸುವ ಸಂಪಿಗೆಯ ಹೂವುಗಳಿಂದ ಗಿರಿಜೆ ಹರನನ್ನು ಪೂಜಿಸುವಳು. ೯೭. ಲೋಕದಲ್ಲಿರುವ ಹೂವುಗಳು ರವಿಯ, ದುಂಬಿಗಳ ಹಾಗೂ ಗಾಳಿಯ ಕಾಲ್ತುಳಿತಕ್ಕೆ ಸಿಕ್ಕಿ ಮೈಲಿಗೆಯಾಗಿವೆ ಎಂದು ತಿಳಿದ ಅಗಸುತೆ ಹೂವುಗಳನ್ನು ಬಿಟ್ಟು ಕೇವಲ ಮನಃ ಕುಸುಮಗಳಿಂದಲೇ ಪರಶಿವನನ್ನು ಏಕಾಂತದಲ್ಲಿ ಅರ್ಚಿಸು

ಪುಲಿಯುಗುರ ಸುಲಲಿತೆಗೆ ನೇವಳದ ನಾಯಕಿಗೆ ರತ್ನದಾಳಿಯ ರಾಜಹಂಸೆಗೆ, ಮಾಗಾಯ್ಗಳ ಮುಗ್ಧೆಗೆ ಹೊನ್ನೋಲೆಯ ಚೆನ್ನೆಗೆ ಮೂಗುತಿಯ ಮುಗುಳ್ಗೆ ಅಂಜನದಮೃತಕ್ಕೆ ತಿಲಕದ ಲಲಿತೆಗೆ ಅರಳೆಲೆಯ ತರಳೆಗೆ ಸೂಸಕದ ಸುಮ್ಮಾನೆಗೆ ರುದ್ರಾಕ್ಷಿಯ ಭದ್ರಾಂಗಿಗೆ ವಿಭೂತಿಯ ವಿಳಾಸನಿಧಿಗೆ ಭಕ್ತಿಯ ಭಾವಕ್ಕೆ ಅಱಿವಿನವಯವಕ್ಕೆ ಶಿವಜ್ಞಾನದ ಸೀಮೆಗೆ ವೈರಾಗ್ಯದ ಮೇರೆಗೆ ಪರಮೈಶ್ವರ್ಯದ ಪುಣ್ಯಕ್ಕೆ ಲೋಕದ ಲೋಚನಕ್ಕೆ ಸಾಕಾರದ ಸುಧೆಗೆ ಪಶುಪತಿಯ ಪಟ್ಟದ ಮಹಾದೇವಿಗೆ ಸಕಳ ಜಗನ್ಮಾತೆಗೆ ಸಕಳ ಬ್ರಹ್ಮಾಂಡಮಂ ರಕ್ಷಿಸುವ ರುದ್ರಾಣಿಗೆ ರಕ್ಷಣಾರ್ಥಂ ತಂದೆ ನಿಯಾಮಿಸಿ ಕೊಟ್ಟ ದಂಡಿಗೆಯ ಧವಳಛತ್ರದ ಅಂಗರಕ್ಷಕರ ಸಹವಾಸಿಗಳ ದಾದಿಯರ ಪಡಿಯಱತಿಯರ ಚಾಮರದ ಸೀಗುರಿಯ ಹಡಪದ ಮಡಿವರ್ಗದ ಅಂಜನದ ಕನ್ನಡಿಯ ಕಳಶದ ಸಿರಿಮುಡಿಯ ಸಿಂಗರದ ಸಾದಿನ ಕುಸುಮ ಕುಳದ ಕತ್ತುರಿಯ ಕರ್ಪೂರದ ಶ್ರೀಖಂಡದ ರಾಜಶುಕಪಠಣದ ಹಂಸರಕ್ಷಣದ ಮಯೂರ ನರ್ತನದ ಲೀಲಾಂಬುಜದ ರತ್ನಕಂತುಕದ ವಿಳಾಸಿನಿಯರ ಹರಿದ್ರಾಭರಣದ ಚರಣ ಪ್ರಕ್ಷಾಳನದ ಕದಂಬ ಫಲಭಾರದ ಮಂಗಳಾರತಿಯ ಮಾನಿನಿಯರಾದಿಯಾದ ಪುಣ್ಯಾಗಣ್ಯಲಾವಣ್ಯಮಯ ಸಾಮ್ರಾಜ್ಯ ಪರಿಚರ್ಯಾಪಟುಗಳೆನಿಸಿದ ಷೋಡಶ ಸಹಸ್ರ ವಿಳಾಸಿನಿಯರ್ವೆರಸು ನಡೆತಂದ ಪೂರ್ವ ಸರ್ವವಿದ್ಯೆಗಳನಭ್ಯಾಸಂಮಾಡದೊಡಂ ಮುನ್ನಿನಂತೆ ಸಹಜಮಾಗಿ ನೆಲಸಿನಿಲೆ ವಿಹಿತ ನವೀನ ಕ್ರೀಡೆ ಬಾಲ್ಯಮಂ ಸವಿದಪುದೆನೆ ಸಲ್ಲೀಲೆಯಿಂ ಶೈಲಾತ್ಮಜೆ ಕೇಳೀವನಂಗಳಂ ಪುಗುತಂದು,

ಉ॥ ಎಲ್ಲಿ ಸರೋಜಮೆಲ್ಲಿ ವಿಮಳೋತ್ಪಳಮೆಲ್ಲಿ ಲತಾನದೊ
ಳ್ಪೆಲ್ಲಿ ವನಂಗಳೆಲ್ಲಿ ಕೃತಕಾಚಳಮೆಲ್ಲಿ ವಿಶಾಲಮಪ್ಪತ ।
ಣ್ಪೆಲ್ಲಿ ತಟಾಕಮೆಲ್ಲಿ ಪುಳಿನಸ್ಥಳಮೆಲ್ಲಿ ನದೀನದಾಳಿ ತಾ
ನಲ್ಲಿ ಭವಾನಿ ಭಕ್ತಿಮಿಗೆ ಭಾವಿಸಿ ಭರ್ಗನನೊಲ್ದು ಪೂಜಿಪಳ್ ॥ ೬೨

ಕಂ॥ ಕಣ್ಮಲರಿಂದಶ್ರುಜಲಂ
ಪೊಣ್ಮುತ್ತಿರೆ ತನುವಿನಲ್ಲಿ ಪುಳಕಂ ಸಾಲ್ಗೊಂ ।

ಜಾಣೆಗೆ ಭಾಳತಳದ ಭಾಮಿನಿ, ತ್ರಿಲೋಚನದ ಲಲನೆ ಮುಂತಾದ ಅನುಪಮ ಗುಣಗಣ ವಿಭೂಷಿತಳಾದ ಸಕಳ ಬ್ರಹ್ಮಾಂಡವನ್ನು ರಕ್ಷಿಸುವ ರುದ್ರಾಣಿಗೆ ರಕ್ಷಣೆಗಾಗಿ ಕೆಲಹರು ಅಂಗರಕ್ಷಕರನ್ನು ನಿಯಮಿಸಿದನು. ಅವರಲ್ಲಿ ಸಹದಾಸಿಗಳು, ದಾದಿಯರು, ಪಡಿಯರತಿಯರು ಚಾಮರದ, ಸೀಗುರಿಯ, ಹಡಪದ ಮುಂತಾದ ವಿವಿಧ ಸೇವಾವರ್ಗದಲ್ಲಿ ಷೋಡಶ ಸಹಸ್ರ ವಿಳಾಸಿನಿಯರಿದ್ದರು. ಅವಳು ಅಂತಹ ವೈಭವದಲ್ಲಿದ್ದು ಸರ್ವವಿದ್ಯೆಗಳನ್ನು ಅಭ್ಯಾಸಮಾಡದಿದ್ದರೂ ಆ ವಿದ್ಯೆಗಳೆಲ್ಲ ಸಂಸ್ಕಾರವಶವದಿಂದ ಅವಳಲ್ಲಿ ಸಹಜವಾಗಿ ಬಂದು ನೆಲೆಸಿದವು. ಆ ಶೈಲಾತ್ಮಜೆ ಸಲ್ಲೀಲೆಯಿಂದ ಕೇಳಿವನಗಳಲ್ಲಿ ವಿಹರಿಸುತ್ತಿದ್ದಳು. ೬೨. ಗಿರಿಜೆ ಸರೋವರ, ವಿಮಳೋತ್ಪಳ, ಲತಾವಿತಾನ, ವನಂಗಳು ಕೃತಕ ಪರ್ವತಗಳು ಎಲ್ಲೆಲ್ಲಿ ಕಂಡರೆ ಅಲ್ಲಿ ಅತ್ಯಂತ ಭಕ್ತಿಯಿಂದ ಭರ್ಗನನ್ನು ಒಲಿದು ಪೂಜಿಸುತ್ತಿದ್ದಳು. ೬೩. ಕಣ್ಣುಗಳಿಂದ ಆನಂದಾಶ್ರುಗಳು ಉಕ್ಕಿ ಬರುತ್ತಿರಲು, ತನುವಿನಲ್ಲಿ ಪುಳಕಂಗಳು ಉಣ್ಮುತ್ತಿರೆ,

ಪುಣ್ಮುತ್ತಿರೆ ಗಿರಿಪತಿಸುತೆ
ನುಣ್ಮಳಲಿಂ ದಿವ್ಯಲಿಂಗಮಮಂ ವಿರಚಿಸುವಳ್ ॥ ೯೩

ವಿರಚಿಸುವ ಲಿಂಗದೊಳ್ ಮೃದು
ಕರಾಂಗುಲಿಸ್ಪರ್ಶಸುಖಮನೆಳಸುತೆ ಶರ್ವಂ ।
ಪರಿತಂದು ನಿಲ್ವನೆಂದೊಡೆ
ಗಿರಿಜೆಯ ಸೌಭಾಗ್ಯದಿರವನಾರ್ ಬಣ್ಣಿಸುವರ್ ॥ ೯೪

ವ॥ ಇಂತು ಸೌಕುಮಾರ್ಯ ಶೃಂಗಾರಮನಾಂತು,

ಕಂ॥ ಹಿಮಕರ ಕಿರಣಾವಳಿಗಳ್
ಕುಮುದದ ಸೋಂಕಿಂದೆ ಕಂಪನಪ್ಪದುವೆನೆ ವಿ ।
ಭ್ರಮ ಮಲ್ಲಿಕಾನಿಕಾಯದೆ
ಕಮಳಾನನೆ ವಿಮಳಲಿಂಗಮಂ ಪೂಜಿಸುವಳ್ ॥ ೯೫

ತರಣಿಯ ತರುಣಕಿರಣಮಂ
ಬುರುಹಪರಿಷ್ವಂಗದಿಂದೆ ಪರಿಮಳಮಂ ಪೊ ।
ತ್ತರಲ್ದಪುವೆನಿಸುವ ಸಂಪಗೆ
ಯರಲಿಂದಂ ಗಿರಿಜೆ ಹರನನೊಲ್ದರ್ಚಿಸುವಳ್ ॥ ೯೬

ತರಣಿಯ ಮಧುಕರನಿಕರದ
ಮರುತನ ಕಾಲ್ತುಳಿಯುವೆಂದು ಪೂವಂ ಬಿಟ್ಟಾ ।
ಗಿರಿಸುತೆ ಮನಃಕುಸುಮದಿಂ
ಪರಮನನೇಕಾಂತಭೂಮಿಯೊಳ್ ಪೂಜಿಸುವಳ್ ॥ ೯೭

ಅಗಜೆ ನುಣ್ಮಳಲಿಂದ ದಿವ್ಯಲಿಂಗವನ್ನು ರಚಿಸಿ ಪೂಜಿಸುವಳು. ೯೪. ಅವಳು ರಚಿಸುವ ಲಿಂಗದಲ್ಲಿ ಅವಳ ಮೃದುವಾದ ಕರಾಂಗುಲಿಗಳ ಸ್ಪರ್ಶವನ್ನು ಬಯಸಿ ಶಿವನು ಬಂದು ನಿಲ್ಲುವನೆಂದ ಮೇಲೆ ಇನ್ನು ಗಿರಿಜೆಯ ಸೌಭಾಗ್ಯದ ಹೆಮ್ಮೆಯನ್ನು ಯಾರುತಾನೆ ವರ್ಣಿಸಲು ಸಾಧ್ಯ! ೯೫. ಚಂದ್ರನ ಕಿರಣಗಳು ನೈದಿಲೆಯನ್ನು ಸೋಂಕಿದುದರಿಂದ ಸುವಾಸನೆಯನ್ನು ಪಡೆದುವೋ ಎಂಬಂತೆ ಆ ಕಮಲಮುಖಿ ಗಿರಿಜೆ ಮಲ್ಲಿಗೆಯ ಕುಸುಮಗಳಿಂದ ಶಿವಲಿಂಗವನ್ನು ಪೂಜಿಸುವಳು. ೯೬. ರವಿಯ ತರುಣಕಿರಣವು ತಾವರೆಯ ಸಂಗದಿಂದ ಪರಿಮಳವನ್ನು ಹೊತ್ತು ಅರಳುವವೆನಿಸುವ ಸಂಪಿಗೆಯ ಹೂವುಗಳಿಂದ ಗಿರಿಜೆ ಹರನನ್ನು ಪೂಜಿಸುವಳು. ೯೭. ಲೋಕದಲ್ಲಿರುವ ಹೂವುಗಳು ರವಿಯ, ದುಂಬಿಗಳ ಹಾಗೂ ಗಾಳಿಯ ಕಾಲ್ತುಳಿತಕ್ಕೆ ಸಿಕ್ಕಿ ಮೈಲಿಗೆಯಾಗಿವೆ ಎಂದು ತಿಳಿದ ಆಗಸುತೆ ಹೂವುಗಳನ್ನು ಬಿಟ್ಟು ಕೇವಲ ಮನಃ ಕುಸುಮಗಳಿಂದಲೇ ಪರಶಿವನನ್ನು ಏಕಾಂತದಲ್ಲಿ ಅರ್ಚಿಸು

ವ॥ ಅಂತುಮಲ್ಲದೆಯುಂ,

ಕಂ॥ ವನರುಹನಾಳಂ ದಂಡಂ
ವನರುಹ ನವಪತ್ರವೊಂದೆ ಪೊಸಸೋರೆ ಮತ್ತಾ ।
ವನರುಹ ಸೂತ್ರಂ ತಂತ್ರಿಗ
ಳೆನೆ ಶಿವನಂ ಜಾಣೆ ಬೀಣೆಯಂ ಕೇಳಿಸುವಳ್ ॥ ೯೮

ವ॥ ಇಂತು ಬಾಲಲೀಲೆ ಶಿವಲೀಲೆಯಾಗಿ ಕೆಲನಱಿಯದೆ ಬಲನಱಿಯದೆ ಪಸಿವನಱಿಯದೆ ತೃಷೆಯನಱಿಯದೆ ದೆಸೆಯುಱಿಯದಿರುಳ್ ಪಗಲಱಿಯದೆ ಪರಿಜನಮುಂ ಪರೀಕ್ಷಿಸದೆ ಶಿವನಂ ಮರುಳ್ಗೊಂಡು ಭವಾನಿಯಿರೆ ಕಂಡು ಕೌತುಕಂಗೊಂಡು ಸಹಚರಿಯರ್ ತಮತಮಗಂಜಿ ಭಾರತಿಗೋರನ್ನಳೆನಿಪ್ಪನಾರಿಯೊರ್ವಳಂ ಗಿರಿರಾಜನಲ್ಲಿಗೆ ಭರದಿಂ ಕಳುಪಿದೊಡಾ ತರುಣಿ ಭೀತಿಯಿಂ ಪರಿತಂದರಮನೆಯಂ ಪೊಕ್ಕೋಲಗದೊಳ್ ನಿಂದು ನಗಾಧಿಪಂಗೆ ನಯಂಮಿಗೆ ಭಯಭಕ್ತಿಯಿಂ ಮೆಯ್ಯಿಕ್ಕಿ ಕೆಯ್ಮುಗಿದು ನಿಂದು,

ಉ॥ ದೇವಕುಮಾರಿಬಾಲೆ ಸುಕುಮಾರಿ ಸಮರ್ಥೆಯತಿ ಸ್ವತಂತ್ರೆ ನಾ
ನಾವಿಧ ಶೈಲರಾಜಿ ನವರಾಜಿ ಸರೋವರರಾಜಿ ಸಲ್ಲತಾಂ ।
ತಾವಳಿ ಸೈಕತಾವಳಿ ಲತಾವಳಿಯೆಂಬಿವಱಲ್ಲಿ ಸಂತತಂ
ದೇವರ ದೇವನಂ ಶಿವನನರ್ಚಿಸುತಿರ್ದಪಳೊಲ್ಲಳೇನುಮಂ ॥ ೯೯

ಕಂ॥ ದೇವಿಯ ಮೊಲೆವಾಲಂ ಪರಿ
ಭಾವಿಸಲಾರಯ್ಯಳಂಜಳಕ್ಕಳ್ ವನದೊಳ್ ।
ತೀವಿರ್ದ ಗುಲ್ಮಲತೆ ವೃ
ಕ್ಷಾವಳಿಯೊಳ್ ಲಿಂಗಪೂಜೆಯೊಳ್ ಸಂದಿರ್ಪಳ್ ॥ ೧೦೦

ವಳು ೯೮. ಕಮಲನಾಳವೆ ವೀಣೆಯದಂಡ, ಕಮಲಪತ್ರವೆ ವೀಣೆಗೆ ಜೋಡಿಸಿದ ಸೋರೆ ಬುರುಡೆ, ಕಮಲದಂಟಿನಲ್ಲಿರುವ ಎಳೆಗಳೆ ವೀಣೆಯ ತಂತಿಗಳೋ ಎಂಬಂತೆ ಆ ಜಾಣೆ ಶಿವನಿಗೆ ವೀಣೆಯನ್ನು ಕೇಳಿಸುವಳು. ವ ॥ ಹೀಗೆ ಬಾಲಲೀಲೆ ಶಿವಲೀಲೆಯಾಗಿ, ಕೆಲ ಬಲಗಳನ್ನರಿಯದೆ, ಹಸಿವು ತೃಷೆಗಳನ್ನರಿಯದೆ, ದೆಸೆಯರಿಯದೆ, ರಾತ್ರಿಹಗಲೆಂಬ ಭೇದವಿಲ್ಲದೆ, ಪರಿಜನರನ್ನು ಪರೀಕ್ಷಿಸದೆ, ಭವಾನಿಯು ಶಿವನಿಗೆ ಮರುಳಾಗಿರಲು, ಅವಳ ಸಖಿಯರು ಕಂಡು ಆಶ್ಚರ್ಯಗೊಂಡು ಸಹಚರಿಯರು ಬೆದರಿ, ಭಾರತಿಗೆ ಸಮಳಾದ ತರುಣಿಯೊಬ್ಬಳನ್ನು ಗಿರಿರಾಜನ ಬಳಿಗೆ ಕಳುಹಿಸಿಕೊಟ್ಟರು. ಅವರು ಓಲಗಕ್ಕೆ ಧಾವಿಸಿ ಬಂದು ಗಿರಿರಾಜನಿಗೆ ಭಯಭಕ್ತಿಯಿಂದ ವಂದಿಸಿ ಕೈಮುಗಿದು ನಿಂತು, ೯೯. ಮಹಾರಾಜ, ಸುಕುಮಾರಿಯಾದ ಅಗಜೆ ಸಮರ್ಥೆ, ಅತಿ ಸ್ವತಂತ್ರೆ ; ಅವಳು ಬೆಟ್ಟ ಗುಡ್ಡಗಳು, ಸರೋವರ ಮರಳುದಿಬ್ಬ ಮುಂತಾದ ಎಡೆಗಳಲ್ಲೆಲ್ಲ ಯಾವಾಗಲೂ ದೇವದೇವನಾದ ಪರಶಿವನನ್ನು ಅರ್ಚಿಸುತ್ತಿದ್ದಾಳೆ ; ಆಕೆ ಮತ್ತೇನನ್ನೂ ಬಯಸುತ್ತಿಲ್ಲ. ೧೦೦. ಆಕೆ ತಾಯಿಯ ಸ್ತನ್ಯ

ಕಂ॥ ಕಲ್ಲೆನ್ನಳ್ ಮುಳ್ಳೆನ್ನಳ್
ಮೆಲ್ಲಿತ್ತಿದು ಬೆಟ್ಟಿತ್ತೆನ್ನಳತಿ ಭಕ್ತಿಯೊಳಂ।
ತೆಲ್ಲಿ ಸುಖಿಸ್ಥಳಮುಂಟಾ
ದಲ್ಲಿ ವಿರೂಪಾಕ್ಷ ಪೂಜೆಗೀಡಾಗಿರ್ಪಳ್ ॥ ೧೦೧

ಬರೆದರೊ ಬೈತರೊ ಪೊಲ್ದರೊ
ಪೊರೆದರೊ ಬೆಚ್ಚರೊ ಮಗುಳ್ದಿ ಕರುವಿಟ್ಟರೊ ಕಂ।
ಡರಸಿದರೊ ಕಡೆದರೋ ಎನೆ
ಗಿರಿರಾಜತನೂಜೆ ಪೂಜೆಯೊಳ್ ರಾಜಿಸುವಳ್ ॥ ೧೦೨

ಬೇಡೆಂದೊಡೆ ಮಾಣಳ್ ನಲಿ
ದಾಡುವಳಪ್ಪುವಳಮರ್ಚುವಳ್ ಪುಳಕಿಪ್ಪಳ್ ।
ಮಾಡುವ ಲಿಂಗಾರ್ಚನೆಯೊಳ್
ನೋಡಳ್ ನುಡಿಯಳ್ ಭವಾನಿಯೇನೆಂದಱಿಯಳ್ ॥ ೧೦೩

ವ॥ ಎಂದು ಬಿನ್ನವಿಸೆ ಕೇಳ್ದು ಗಿರಿರಾಜಂ ನಿಜಾತ್ಮಜಾವಲೋಕನ ಹರ್ಷವದನಂ ಭದ್ರಾಸನದಿಂ ಭೋಂಕನೇಳ್ದು ಪೊಜಿಮಡುತ್ತೆ ಆರಾಧಿತಾರ್ಯ ಪ್ರಕರನುಂ, ದಾನಪ್ರಮೋದಿತ ನಾನಾದ್ವಿಜನುಂ, ತ್ಯಾಗಪರಿಪೋಷಿತ ವಂದಿವ್ರಜನುಂ, ಅವಷ್ಟಂಭಿತ ಕುಂಭಿ ಕುಂಭಸ್ಥಳಪೂರ್ವಾಸನನುಂ,

ವನ್ನು ಆಶಿಸುತ್ತಿಲ್ಲ, ಕಾಡಿನಲ್ಲಿ ಹೆದರಿಕೆ ಅವಳಿಗಿಲ್ಲ, ದಟ್ಟವಾಗಿ ಬೆಳೆದ ಪೊದೆಗಳಲ್ಲೆಲ್ಲ ಪ್ರವೇಶಿಸಿ ಲಿಂಗಪೂಜೆಯಲ್ಲಿ ನಿರತಳಾಗುತ್ತಾಳೆ. ೧೦೧. ಕಲ್ಲು ಮುಳ್ಳು ; ಮೆದುಗಟ್ಟಿಗಳೆನ್ನದೆ ಅವಳು ಕೇವಲ ಭಕ್ತಿಯಿಂದ ತನಗೆ ಮನಸೊಪ್ಪಿದಂತೆ ಶಿವಪೂಜೆಗೆ ತೊಡಗಿದ್ದಾಳೆ. ೧೦೨. ಗಿರಿಜೆ ಪೂಜೆಯಲ್ಲಿ ತೊಡಗಿರುವಾಗ ಅವಳ ಮೂರ್ತಿಯು ಬರೆದರೂ, ಗಟ್ಟಿಯಾಗಿ ಕೂಡಿಸಿರುವರೋ, ಪೊಲ್ದರೊ, ಪೊರೆದರೊ, ಬೆಚ್ಚರೊ, ಕೆತ್ತಿರುವರೊ, ಕಂಡರಸೆದರೊ, ಕಡೆದರೊ ಎಂಬಂತೆ ನಿಶ್ಚಲವಾಗಿ ಪ್ರಕಾಶಿಸುತ್ತಿದೆ. ೧೦೩. ಬೇಡವೆಂದರೆ ಬಿಡುವುದಿಲ್ಲ, ನಲಿದಾಡುವಳು, ಅಪ್ಪುವಳು, ರೋಮಾಂಚಿತಳಾಗುವಳು ; ತಾನು ಮಾಡುವ ಲಿಂಗಾರ್ಚನೆಯಲ್ಲಿ ತೊಡಗಿದ ಅವಳು ಯಾರನ್ನೂ ನೋಡಳು ನುಡಿಯಳು ಏನೆಂದೂ ಅರಿಯಳು. ವ॥ ಎಂದು ವಿಜ್ಞಾಪಿಸಲು ಗಿರಿರಾಜನು ತನ್ನ ಮಗಳನ್ನು ಕಾಣಬೇಕೆಂದು ಹರ್ಷದಿಂದ ಭದ್ರಾಸನದಿಂದ ಎದ್ದು ಹೊರಟನು. ಮಗಳನ್ನು ನೋಡ ಹೊರಟ ರಾಜನ ವರ್ಣನವಿದು–ರಾಜ ಹಿರಿಯರನ್ನು ಗೌರವಿಸಿದ್ದಾನೆ, ದಾನದಿಂದ ಅನೇಕ ದ್ವಿಜರನ್ನು ಸಂತೋಷಗೊಳಿಸಿದ್ದಾನೆ; ವಂದಿ ಮಾಗಧರಿಗೆ ಉದಾರವಾಗಿ ಪಾರಿತೋಷಕಗಳನ್ನುಕೊಟ್ಟು ಸಂತೃಪ್ತಿಪಡಿಸಿದ್ದಾನೆ, ಆನೆಯ ಕುಂಭಸ್ಥಳದಲ್ಲಿ ಪೂರ್ವಾಸನದಲ್ಲಿ ಕುಳಿ

ಸಮಸ್ತ ಮುಕ್ತಾನೀತ ಮೌಕ್ತಿಕಾತಪತ್ರನುಂ, ಪಾರ್ಶ್ವಯುಗನರ್ತಿತ ಚಮರ ವಿಭ್ರಮನುಂ, ನವೀನನರ್ತಕೀ ನರ್ತನಲೀಲಾವಿಲಾಸೇಕ್ಷಣನುಂ, ಬಹಳ ಕಹಳಾರವಬಧಿರೀಕೃತದಿಙ್ಮಂಡಲನುಂ, ನಿಸ್ಸೀಮೋದ್ಧತ ನಿಸ್ಸಾಳನಾದನುಂ, ಮಕರಾಯಮಾನದ್ವಿರದ ಕುಲತರಂಗಾಯಮಾನ ತುರಂಗೌಘ ಮೇಘಾಯಮಾನರಥಯುತ ಸೇನಾಸಮುದ್ರನುಮಾಗಿ ನಡೆತರುತ್ತುಂ ಮುಂದೆನಿಂದು ಬಹಿರ್ವನದೊಳಗಣ ಹಾಲಚೂತಾಂಕುರಮಂ ಬಲವಂದು ಭಾವಿಸಿ ನೋಡಿ ತೀವಿದ ನೇಹದಿಂದೋವಿಯೋವಿ ನಸುಕರ್ದುಂಕಿ ನವರಸಮಂ ಸವಿಸವಿದು ಸೊರ್ಕಿ ಪಕ್ಕಮಂ ಬಿರ್ಚಿ ಮಿಕ್ಕು ನೆಗೆದೆಳದಳಿರ ಬಳಗದೊಳ್ ಪೊರಳ್ದು ಪಾರ್ದು ನಲಿ ನಲಿದು ನೋಡಿ ನೋಡಿ ಮಲೆತುನಿಂದು ಮೇಲಣ ತರುಶಾಖಿಮನೇಱಿ ವಿರಹಿಗಳತ್ತಲ್ ಬರಲಾಗ ಕಾಮದೇವನ ತೋಟ ಬೇಡೆಂದು ಬಿರುದೆತ್ತಿ ಕರೆವ ಕಂದರ್ಪನ ಕಹಳೆಗಳೆಂಬಂತೆ ತಂಡ ತಂಡದಿಂ ಕೂಗುವ ಗಂಡುಗೋಗಿಲೆಗಳಂ, ಮತ್ತಮಲರ್ದಿರದೆ ಮುಕುಳಿತಮಾಗದುಳ್ಳಲರ್ದ ಬಿರಿಮುಗುಳೊಳ್ ಭರದಿಂ ಪೊಕ್ಕು ಪೊಸಕಂಪನೆಸೆಯೆ ಪೀರ್ದು ತಣಿ ತಣಿದಣಿಯುಪದಿಂದುರ್ಕಿ ಸೊರ್ಕಿ ಮೊರೆದ ನೆರೆದು ಮೇಗಣ್ಗೆ ನೆಗೆದು ಸಾಲ್ಗೊಂಡೇಱಿ ವನಲಕ್ಷ್ಮಿ ಪಾರ್ವತಿಗೆ ಲೀಲೆಯಿಂದೋಲಗಿಸಲೆಂದೆತ್ತಿದ ನೀಲದ ಮಾಲೆಯಂತೆ ನೆಱೆಮೆಱೆವ ಮಧುಕರ ಪ್ರಕರಮಂ, ಮತ್ತಂ ಸೆಳೆಗೊಂಬಿನ ತನಿವಣ್ಣಂ ತವಕದೊಳಪ್ಪಿ ರಸದೊಱತೆಯ ಸೆಱೆಯಂತಿರ್ಪ ಪಣ್ಣ ಸೆರೆಯಂ ಕಂಡು ಕಣ್ಗೊಳಾಲಿಂಗಿಸುವಂತೆ ಸವಿ ಸವಿದು ನೋಡಿ ಚಂಚುಪುಟ

ತಿದ್ದಾನೆ. ಮುತ್ತಿನ ಸತ್ತಿಗೆ (ಛತ್ರ) ಹಿಡಿಯಲಾಗಿದೆ, ಎರಡು ಪಕ್ಕಗಳಲ್ಲಿಯೂ ಚಾಮರ ವೀಜನವಾಗುತ್ತಿದೆ. ಹೊಸ ನರ್ತಕಿಯರ ನರ್ತನಲೀಲೆಯನ್ನು ಗಮನಿಸುತ್ತಿದ್ದಾನೆ. ಏಕ ಕಾಲದಲ್ಲಿ ಅನೇಕ ಕಹಳೆಗಳು ಮೊಳಗಿದುದರಿಂದ ದಿಙ್ಮಂಡಲಗಳೆ ಕಿವುಡಾಗಿವೆ ! ದೊಡ್ಡ ನಗಾರಿಗಳು ಧ್ವನಿ ಮಾಡುತ್ತಿವೆ, ಚತುರಂಗ ಸೇನಾ ಸಮುದ್ರವೇ ಆತನ ಜೊತೆ ಬರುತ್ತಿದೆ. ಆ ಸೇನಾ ಸಮುದ್ರಕ್ಕೆ ಆನೆಗಳೇ ಮಕರಗಳು, ಕುದುರೆಯ ಸಮೂಹಗಳೇ ಅಲೆಗಳು, ಮೇಘದಂತಿರುರಥಗಳು ; ಹೀಗೆ ಮುನ್ನಡೆದು ಬಂದರೆ ನಗರೋದ್ಯಾನ, ಅಲ್ಲೊಂದು ಮಾವಿನಮರ, ಅದರ ಎಳೆಯ ಚಿಗುರು, ಅದನ್ನು ನೋಡಿ ಅತ್ಯಾಸೆಯಿಂದ ನಸುಕುಕ್ಕಿ ನವರಸವನ್ನು ಸವಿದು ಸೊಕ್ಕಿ, ರೆಕ್ಕೆಯನ್ನು ಬಿಚ್ಚಿ, ಎಳೆತರಿಳಿನ ಬಳಗದಲ್ಲಿ ಹೊರಳಾಡಿ, ನಲಿದು ನೋಡಿ, ಮಲೆತು, ತರುಶಾಖೆಯನ್ನೇರಿ, ವಿರಹಿಗಳು ಈ ಕಡೆ ಬರಬಾರದು ಎಂದು ಮದನನನೊಡನೆ ಕದನ ಬೇಡವೆಂದು ಬಿರುದೆತ್ತಿಕರೆವ ಕಂದರ್ಪನ ಕಹಳೆಗಳೊ ಎಂಬಂತೆ ತಂಡತಂಡವಾಗಿ ಗಂಡು ಕೋಗಿಲೆಗಳು ಕೂಗುತ್ತಿವೆ, ಮತ್ತೊಂದೆಡೆ ದುಂಬಿಗಳು, ಅವು ಅರಳಲಿರುವ ಮುಗುಳುಗಳಲ್ಲಿ ಹೊಕ್ಕು ಹೊಸ ಕಂಪನ್ನು ಚೆನ್ನಾಗಿ ಹೀರಿ, ತಣಿದು ವೇಗವಾಗಿ ಉಕ್ಕಿಸೊಕ್ಕಿಮೊರೆದು ನೆರೆದು ಮೇಲೆ ನೆಗೆದು ಸಾಲುಸಾಲಾಗಿ ವನಲಕ್ಷ್ಮಿ ಪಾರ್ವತಿಗೆ ಓಲಗಿಸಲು ಎತ್ತಿದ ನೀಲಮಾಲೆಯೊ ಎಂತಿವೆ ಆ ಮಧುಪಗಳು; ಮತ್ತೆಲ್ಲಿರುವ ರಾಜಕಾರ್ಯಗಳು, ಅವು ಸೆಳೆಗೊಂಬಿನಲ್ಲಿ ಮಾಗಿರುವ ಹಣ್ಣುಗಳನ್ನು ಅಪ್ಪಿ ಉಕುತ್ತಿರುವ ರಸವತ್ತಾದ ಅವುಗಳನ್ನು ತವಕದಿಂದ ಕಣ್ಣಿನಿಂದಲೆ. ಆಲಿಂಗಿಸಿ, ಚನ್ನಾಗಿ ಸವಿದು ನೋಡಿ, ಚಂಚುಪುಟದಿಂದ ಕುಕ್ಕಿ ಸೋರುವ ರಸಧಾರೆಗೆ ನಾಲಗೆಯೊಡ್ಡಿ ನಲಿದು ಊಂಟ ತಣಿದು ಹರಟೆ

ದೊಳೀಡಿಜಿೞದೆಚ್ಚು ಪಾಯ್ವ ರಸಧಾರೆಗೆ ನಾಲಗೆಯನೊಡ್ಡಿ ನಲಿನಲಿದೀಂಟ ತಣಿದು ತೂಗಿ ತೊಂಡುಗೆಡೆದು ವಸಂತ ರಾಜನ ಪಡಿಯಱರಂತೆ ವಿರಹಿಗಳಂ ಚಪ್ಪರಿಪ ರಾಜಕೀರಂಗಳಂ ಮತ್ತಮಗಲ್ದ ಪೆಣ್ಣಂಚೆಯಂ ಪುಳಿನಸ್ಥಳದ ಕುಸುಮರಜದ ಪೊಸಪಜ್ಜೆವಿಡಿದಱಸಿ ಪೋಗಿ ಕೊಳನಂ ಪೊಕ್ಕು ಘಳಿಲನೆ ಕಂಡಮರ್ದಪ್ಪಿ ಕಮಲವನದೆಲೆದುಱುಗಲಿಱುಂಬಿನೊಳನುರಾಗದಿಂ ನೆರೆವ ರಾಜಹಂಸ ಮಿಥುನಂಗಳಂ, ಮತ್ತಂ ಕಳ್ತಲಿಪ ತಮಾಲ ವನದೊಳ್ ವಿರಹಿಗಳನಱಸಲೆಂದು ಕಾಮದೇವನೆತ್ತಿಸಿದ ಕೆಯ್ದೀವಿಗೆಗಳಂತೆ ಪಲ್ಲವರಾಗದಿಂ ಪಲ್ಲವಿಸಿ ತೋರ್ಪಶೋಕದ್ರುಮಂಗಳಂ, ನಿಂದ ಲತೆಗಳನಲ್ಲಾಡಿಪ ಮಂದಾನಿಳನಂ, ಕುಣಿವ ನವಿಲ್ಗಳಂ ಕರೆವ ಕೊಳರ್ವಕ್ಕಿಗಳಂ, ನೆರೆವ ಚಕ್ರಮಿಥುನಂಗಳಂ, ಕಂಡು ಗಿರಿರಾಜಂ ಕೊಂಡಾಡುತಂ ಬಂದು ಮುಂದೆ ಪುಂಡರೀಕ ಪ್ರಕರ ಪರಿಮಳಾಸಕ್ತ ಭ್ರಮರಕುಲ ವಿಲಸಿತಮಾದ ಕಾಸಾರತಟದೊಳ್ ಮಂದಾನಿಳನಿಂ ಪರೆದ ಪರಾಗದ ಪೀಠದ ಮೇಲಣ ನುಣ್ಮಣಲ ಶಿವಲಿಂಗಮನಗಣಿತ ಪ್ರೇಮದಿಂ ಸೊಗಮಿಕ್ಕು ಮಿಗೆ ಪೂಜಿಸುತ್ತಿರ್ದ ಮಗಳಂ ಕಂಡು,

ಬಿಡದೇಳ್ವ ಪುಳಕತತಿಯೊಡ
ನೊಡನಾನಂದಾಶ್ರುವೊಗೆಯೆ ಬಗೆವೆರ್ಚುತ್ತಿ ।
ರ್ಮಡಿ ಮೂವಡಿ ನಾಲ್ವಡಿಯ
ಯ್ವಡಿ ಸಂತಸದಿಂದೆ ತಂದೆ ಮಗಳಂ ಕರೆದಂ ॥ ೧೦೪

ಯಾಡುತ್ತಾ ವಸಂತರಾಜನ ಪ್ರತೀಹಾರಿಯರಂತೆ ವಿರಹಿಗಳನ್ನು ಗೋಳುಹೊಯ್ದು ಕೊಳ್ಳುತ್ತಿವೆ ; ಮತ್ತೊಂದು ಕಡೆ ರಾಜಹಂಸ ಮಿಥುನಗಳು, ಅವುಗಳಲ್ಲಿ, ಗಂಡು ಹಂಸೆಯೊಂದು ಅಗಲಿದ ಹೆಣ್ಣು ಹಂಸವನ್ನು ಮರಳದಿಬ್ಬಗಳಲ್ಲಿ, ಕುಸುಮಮಂಜರಿಗಳಲ್ಲಿ, ಹೊಸಹೊಸ ಹೆಜ್ಜೆಗಳನ್ನು ಗುರ್ತಿಸಿ ಹುಡುಕುತ್ತ ಹೋಗಿ ಕೊಳದಲ್ಲಿ ಕಂಡಕೂಡಲೆ ಅಮರ್ದಪ್ಪಿ ದಟ್ಟವಾದ ಕಮಲದೆಲೆಗಳಲ್ಲಿ ಅನುರಾಗದಿಂದ ನೆರೆಯುತ್ತಿವೆ ; ಮತ್ತೊಂದೆಡೆ ಅಶೋಕವೃಕ್ಷಗಳು, ಅವು ಹೊಂಗೆಯವನದಲ್ಲಿ ವಿರಹಿಗಳನ್ನು ಹುಡುಕಲು ಕಾಮದೇವನು ಹೊತ್ತಿಸಿದ ಕೈದೀವಿಗೆಗಳಂತೆ ಪಲ್ಲವಿಸಿ ಕಂಗೊಳಿಸುತ್ತಿವೆ. ಮಂದಮಾರುತನಿಂದ ಲತೆಗಳನ್ನು ಅಲ್ಲಾಡಿಸುತ್ತಿದೆ ; ಅಗಲಿದವನನ್ನು ನಗುವಂತೆ ಮಾಡುವ ನಸುಬಿರಿದ ದಾಳಿಂಬಗಳು, ಸುಳಿವ ವಿದ್ಯಾಧರಿಯರು, ಕುಣಿವ ನವಿಲುಗಳು, ಕರೆವಕೊಳದ ಹಕ್ಕಿಗಳು, ನೆರೆವಚಕ್ರವಾಕಗಳು ಮುಂತಾದವುಗಳನ್ನೆಲ್ಲ ಗಿರಿರಾಜನು ಕಂಡು, ಹರ್ಷದಿಂದ ಬರುತ್ತಿದ್ದಾನೆ. ಅರಳಿದ ಕಮಲಗಳುಳ್ಳ, ಅವುಗಳ ಪರಿಮಳಕ್ಕೆ ಬಂದೆರಗಿದ ದುಂಬಿಗಳುಳ್ಳ ಕೊಳದ ದಡದಲ್ಲಿ, ಪುಷ್ಪದೂಳಿವಿಡಿದ ಪೀಠದ ಮೇಲೆ ಪೂಜೆಗೊಂಡ ಶಿವಲಿಂಗ, ಪೂಜಾಮಗ್ನಳಾದ ಮಗಳು ಗಿರಿಜೆ ಈ ದೃಶ್ಯವನ್ನು ಕಂಡ ರಾಜ—೧೦೪. ಅವಳನ್ನು ಕಂಡೊಡನೆಯೆ ಮೈರೋಮಾಂಚಿತವಾಯಿತು ರಾಜನಿಗೆ, ಆನಂದಾಶ್ರುಗಳು ಕೋಡಿವರಿಯುತ್ತಿವೆ, ಸಂತಸವು ಉಕ್ಕಿಬರುತ್ತಿದೆ, ಈ ಸ್ಥಿತಿಯಲ್ಲಿ ಆತ

ಶಾ॥ ಬಾರೆನ್ನಾಯುವೆ ಬಾರ ಪುಣ್ಯತತಿಯೇ ಬಾರೆನ್ನ ಸೌಂದರ್ಯವೇ
ಬಾರೆನ್ನಾದಿಯೆ ಬಾರ ಶೈವ ನಿಧಿಯೇ ಬಾರೆನ್ನಯ ಪ್ರಾಣವೇ ।
ಬಾರೆನ್ನೊಲ್ಮೆಯೆ ಬಾರತತ್ತ್ವಸುಖಮೇ ಬಾರೆನ್ನ ಮಾತಾಮಹೇ
ಬಾರೆನ್ನಾಳ್ದಳೆನುತ್ತುಮೊಲ್ದು ಕರೆದಂ ಶರ್ವಾಣಿಯಂ ಶೈಳಪಂ ॥ ೧೦೫

ವ॥ ಇಂತು ಕರೆದ ನಿಜ ಜನಕ ಜನಿತ ಸ್ನೇಹರಸಾರ್ದ್ರಮಧುರಾಕ್ಷರ ಸಮ್ಮಿಳಿತ ಸಾತ್ವಿಕ ಸಕಮಂ ಕೇಳ್ದು ಪುತ್ರೀಭಾವಮಂ ನಟಿಸಲೆಂದು ಶಿವಲಿಂಗಮಂ ಬೀಳ್ಕೊಂಡು ತಿರುಗಿನೋಡಿ,

ನಿಂದಿರ್ದು ನಗುತೆ ನಲಿಯು
ತ್ತಂದುಗೆ ಪೊಂಗೆಜ್ಜೆಯುಲಿಪು ನೆಲಸುಗ್ಗಡಿಸು ।
ತ್ತಂದೆಸೆಯೆ ಮಂದಯಾನದೊ
ಳಿಂದು ಪ್ರಭೆ ಮುಂದೆ ಮುಂದೆ ನಡೆತರುತಿರ್ದಳ್ ॥ ೧೦೬

ಅರಳೆಳೆ ಭಾಳದೊಳಾಡು
ತ್ತಿರೆ ಮಾಂಗಾಯ್ಗಂಡಯುಗಳಮಂ ಮುಂಡಾಡು ।
ತ್ತಿರೆ ಕುರುಳ್ಗಳ್ ಕುಣಿದಾಡು
ತ್ತಿರೆ ಸತಿಯರ ನಡುವೆ ಗಿರಿಜೆ ನಡೆತರುತಿರ್ದಳ್ ॥ ೧೦೭

ನವಿಲಾಟಂ ಹಂಸೆಯ ನಡೆ
ತವೆ ಮಂದಾನಿಳನ ಸುಗತಿ ಮದಗಜಗಮನಂ ।
ತವತವಗಡಂಗುತಿರ್ದುವು
ನವೀನ ಬಾಲಕಿಯ ಮಧುರ ಮೃದುಪದಗತಿಯೊಳ್ ॥ ೧೦೮

ಮಗಳನ್ನು ಕರೆದ–೧೦೫. ನನ್ನ ಆಯುಷ್ಯವೇ, ಪುಣ್ಯತತಿಯೇ, ಸೌಂದರ್ಯವೇ, ಆದಿಯೇ ಶೈವನಿಧಿಯೇ, ಪ್ರಾಣವೇ, ಒಲ್ಮೆಯೇ, ತತ್ತ್ವಸುಖವೇ, ಮಾತಾಮಹೇ ಎಂದು ಮುಂತಾದ ಮುದ್ದು ಮಾತುಗಳಿಂದ ಕರೆದನು. ವ॥ ಹೀಗೆ ತಂದೆಯ ಸಹಜ ಪುತ್ರೀ ಸ್ನೇಹದ ಮಧುರ ನುಡಿಯನ್ನು ಕೇಳಿ ಪುತ್ರೀಭಾವವನ್ನು ನಟಿಸಿಶಿವಲಿಂಗವನ್ನು ಬೀಳ್ಕೊಂಡು ತಿರುಗಿನೋಡಿ, ೧೦೬. ನಗುತ್ತಾ ನಲಿಯುತ್ತಾ ಅಂದುಗೆ ಪೊಂಗೆಜ್ಜೆಗಳು ಧ್ವನಿಮಾಡುತ್ತಿರಲು ಅವಳು ಮಂದಗಮನದಿಂದ ನಡೆತರುತ್ತಿದ್ದಳು. ೧೦೭. ಹಣೆಯಲ್ಲಿ ಅರಳೆಲೆ ಆಡುತ್ತಿದೆ, ಮಾಂಗಾಯಿಗಳು ಕೆನ್ನೆಗಳ ಮೇಲೆ ಮುಂಡಾಡುತ್ತಿವೆ, ಮುಂಗುರುಳು ಕುಣಿದಾಡುತ್ತಿರಲು ಗಿರಿಜೆ ಕೆಳದಿಯರ ನಡುವೆ ನಡೆತರುತ್ತಿದ್ದಾಳೆ. ೧೦೮. ಅವಳ ಮೃದು ಗಮನದಲ್ಲಿ ನವಿಲ ನಡೆ,ಹಂಸೆಯ ಗಮನ, ಮಂದಮಾರುತ ಗತಿ,ಮದಗಜಗಮನಗಳ ಹೋಲಿಕೆಯಿತ್ತು.

ಎಂದೆನಿಪ ವಿಳಾಸಂ ಮಿಗೆ
ಮುಂದಾಡುತೆ ತೊಳಪ ಬೆಳಪ ಬೆಳತಿಗೆಗಣ್ಗಳ್ ।
ಮಂದೈಪ ಮೆಲ್ನಗೆಯನುಗೆ
ಬಂದಪ್ಪಿದಳಗಜೆ ಸೋಗಯಿಸುತ್ತಿರೆ ಪಿತನಂ ॥ ೧೦೯

ವ॥ ಅಂತು ಬಂದಪ್ಪಿದಾಗಳ್,

ಮಾಣಿಕವೆ ಮೌಕ್ತಿಕವೆ ಮತ್
ಪ್ರಾಣವೆ ಪೊನ್ನೊಱೆಯೆ ಪರುಷವೇ ಮುಕ್ತಿಯ ನಿ ।
ರ್ಮಾಣವೆ ಎಸುತುಂ ಮೂರ್ಧ್ನಾ
ಘ್ರಾಣಂ ಬೆರಸಗಲಪ್ಪಿದಂ ಗಿರಿರಾಜಂ ॥ ೧೧೦

ಸುತ್ತಿದ ಪರಮ ಸ್ನೇಹದೆ
ಮತ್ತಂ ಮತ್ತಪ್ಪಿ ಪುಳಕಿಸುತ್ತುಂ ಪುಟವೇ ।
ಱುತ್ತುಂ ಪೊಣ್ಮುತ್ತುಂ ನಲಿ
ಯುತ್ತೆ ಗಜಾರೂಢನಾಗುತುಂ ಗಿರಿರಾಜಂ ॥ ೧೧೧

ಪೂರ್ವಾಸನದೊಳ್ ಪದೆಪಿಂ
ಪಾರ್ವತಿಯಂ ಹರ್ಷವೇಱೆ ಬಿಜಯಂಗೆಯ್ಯು ।
ತ್ತುರ್ವುತೆ ಕೊರ್ವುತೆ ಪರ್ವುತೆ
ಪರ್ವತರಾಜಂ ಪುರಕ್ಕೆ ತಿರುಗಿದನಾಗಳ್ ॥ ೧೧೨

ಮ॥ ಸ್ರ॥ ಒಸೆದೆತ್ತಲ್ ತನ್ನ ಬೆನ್ನೊಳ್ ಬರುತಿರೆ ಚತುರಂಗಂ ಮಹಾದೇವಿ ಶರ್ವಾ
ಣಿ ಸಮಸ್ತಾಧಿಕ್ಯೆ ಪೂರ್ವಾಸನದೊಳಿರೆ ಬರುತ್ತೊಪ್ಪಿದಂ ಶೈಳಪಂ ಸಂ ।
ತಸದಿಂ ಭೂಭಾಗಮಂ ನೋಳ್ಪತಿಭರವಶದಿಂ ಪೂರ್ವಗೋತ್ರಾಗ್ರದೊಳ್ತಾಂ
ಶಶಿಯಂ ಮುಂತಿಟ್ಟು ಬರ್ಪುಜ್ವಳ ವಿಮಲ ವಸಂತಂಬೊಲಾನಂದದಿಂದಂ ॥ ೧೧೩

೧೦೯. ಹೊಳೆವ ಕಣ್ಣುಗಳು, ನಸುನಗೆಯಿಂದ ಬಂದ ಗಿರಿಜೆ ತಂದೆಯನ್ನು ಅಪ್ಪಿದಳು. ೧೧೦. ಮಾಣಿಕ್ಯವೆ, ಮುತ್ತೆ, ಮತ್ ಪ್ರಾಣವೆ, ಹೊನ್ನ ಒರೆಯೇ, ಪರುಷವೇ, ಮುಕ್ತಿಯನಿರ್ಮಾಣವೆ ಎಂದು ಗಿರಿರಾಜ ಅವಳನ್ನು ಆಲಿಂಗಿಸಿ ಮುಂದಲೆ ಮೂಸಿದನು. ೧೧೧. ಸುತ್ತುವರಿದ ಸ್ನೇಹದಲ್ಲಿ ಮಗಳನ್ನು ಮತ್ತೆ ಮತ್ತೆ ಆಲಿಂಗಿಸಿ ಪುಳಕಿತನಾಗಿ ನಲಿದು ಗಿರಿರಾಜ ಆನೆಯನ್ನೇರಿದನು. ೧೧೨. ಮುಂದಿನ ಆಸನದಲ್ಲಿ ಮಗಳನ್ನು ಕೂಡಿಸಿ ಹರ್ಷನಿರ್ಭರನಾಗಿ ಗಿರಿರಾಜನು ಪುರಕ್ಕೆ ಹಿಂದಿರುಗಿದನು. ೧೧೩. ರಾಜನ ಹಿಂದೆ ಚತುರಂಗಬಲ, ಮುಂದೆ ಶರ್ವಾಣಿ, ಕುಳಿತಿದ್ದಾಳೆ; ಆಗ ಗಿರಿರಾಜನು, ಅಖಿಲಭೂಭಾಗವನ್ನು

ಚಂ॥ ಬರುತಿರೆ ಮುಂದೆ ಪಟ್ಟಣದೆರಳ್ದೆಸೆಯೊಪ್ಪುವ ರಾಜವೀಧಿಯೊಳ್
ನೆರೆದ ಶಶಾಂಕವಕ್ತ್ರೆಯರ ಕಣ್ಗಳ ಕಾಂತಿ ಶರೀರ ಕಾಂತಿಯಾ।
ಭರಣದ ಕಾಂತಿ ರತ್ನಕುಲಕಾಂತಿ ದರಸ್ಮಿತಕಾಂತಿಯೆಂಬ ವಿ
ಸ್ಫುರಿತ ಸುಖಾಬ್ಧಿಯಂ ಸುಖದೊಳೀಸುತೆ ಬಂದನಗೇಂದ್ರವಲ್ಲಭಂ॥ ೧೧೪

ವ॥ ಅಂತು ಬಂದು ಸಕಲ ರಾಜಲೋಕಂ ಬೆರಸು ಗಿರಿರಾಜಂ ರಾಜಧಾನಿತಿಳಕಮೆನಿಪ ರಾಜಮಂದಿರದ ಮುಂದೆ ನಿಂದು,

ಪೊಳೆವ ಗಜದಿಂದಮವನೀ
ತಳಕ್ಕೆ ನಿಜತನುಜೆವೆರಸು ಬಿಜಯಗೆಯ್ದು।
ಗ್ಗಳಿಪ ಶಶಿಸೂರ್ಯ ವಂಶೋ
ಜ್ಜ್ವಳರಂ ಕಳಿಪುತ್ತೆ ಬಂದನಗಕುಲರಾಜಂ॥ ೧೧೫

ಪರಿಜನಮೊಡನೊಡನೊಲ್ದೊ
ಪ್ಪಿರೆ ಕೆಲ ಬಲ ಪಡಿತಳಾವಧಾರುಯೆನುತ್ತುಂ।
ಬರುತಿರೆ ತನೂಜೆ ಸಹಿತಂ
ಗಿರಿರಾಜಂ ಸಿಂಹ ವಿಷ್ಟರಸ್ಥಿತನಾದಂ॥ ೧೧೬

ಉ॥ ಹಾರಮರೀಚಿ ತತ್ಕುಚಮರೀಚಿ ಕಪೋಳ ಮರೀಚಿಯಾನನ
ಸ್ಮೇರಮರೀಚಿ ಲೋಚನ ಮರೀಚಿ ಲಲಾಟ ಮರೀಚಿ ದಂತವಿ।
ಸ್ತಾರ ಮರೀಚಿಗಳ್ ತೊಳಗುವಾರತಿಗಾರತಿವೆತ್ತು ಸುತ್ತಿ ನಿಂ
ಹಾರತಿಯೆತ್ತಿದರ್ ಗಿರಿಜೆಗಂ ಜನಕಂಗಮನಂತಕಾಂತೆಯರ್॥ ೧೧೭

ನೋಡುವ ಸಂತಸದಿಂದ ವಸಂತನು ಶಶಿಯನ್ನು ಮುಂದಿಟ್ಟುಕೊಂಡು ಬರುವಂತಿತ್ತು. ೧೧೪. ಬರುವಾಗ ಮುಂದೆ ಪಟ್ಟಣದ ಎರಡೂ ಕಡೆ ರಾಜವೀಥಿಯಲ್ಲಿ ಇಂದುಮುಖಿಯರು ನಿಂತಿದ್ದಾರೆ. ಅವರ ಕಣ್ಣುಗಳ ಕಾಂತಿ, ಶರೀರ ಕಾಂತಿ, ಆಭರಣಗಳ ಕಾಂತಿ, ರತ್ನಗಳ ಕಾಂತಿ, ನಸುನಗೆಯ ಕಾಂತಿ, ಎಂಬ ಸುಖಸಾಗರವನ್ನು ಈಜಿಕೊಂಡು ರಾಜ ಬರುತ್ತಿದ್ದಾನೆ. ವ॥ ಹಾಗೆ ಬಂದು ಸಕಲ ರಾಜಸಮೂಹದೊಂದಿಗೆ ಗಿರಿರಾಜನ ರಾಜಧಾನಿಯ ತಿಲಕದಂತೆ ಶೋಭಿಸುವ ರಾಜಮಂದಿರದ ಮುಂದೆ ನಿಂತು ೧೧೫. ಆನೆಯಿಂದಿಳಿದು, ಮಗಳನ್ನೂ ಇಳಿಸಿದ ರಾಜನು ಸಾಮಂತರಾಜರೊಡನೆ ಅರಮನೆಗೆ ಬಂದನು. ೧೧೬. ಪರಿಜನರೊಡನೆ ರಾಜ ಅರಮನೆ ಪ್ರವೇಶಿಸಿದಾಗ ಪ್ರತೀಹಾರಿಗಳು ಅವಧಾರು! ಅವಧಾರು! ಎಂದು ಘೋಷಿಸುತ್ತಿದ್ದರು; ಗಿರಿರಾಜ ಮಗಳೊಡನೆ ಬಂದು ಸಿಂಹಾಸನದಲ್ಲಿ ಮಂಡಿಸಿದನು. ೧೧೭. ಅರಮನೆಯಲ್ಲಿನ ಅನೇಕ ಕಾಂತೆಯರು ಗಿರಿಜೆ-ಗಿರಿರಾಜರಿಗೆ ಆರತಿಯೆತ್ತಿದರು. ಅವರ ಹಾರಗಳ ಮರೀಚಿಗಳು, ಅವರ ಕುಚಮರೀಚಿಗಳು, ಅವರ ಕಪೋಲ, ಆನನ,

ವ॥ ಅಂತೆತ್ತುವಾರತಿಗಳಂ ಕೆಯ್ಕೊಂಡು ಗಿರಿರಾಜಂ ನಾನಾ ಹರ್ಷದಿಂ ಮೇನಾದೇವಿಯುಂ ಕರೆಯಿಸೆ ಬರುತ್ತಿರ್ದಳದೆಂತೆಂದೊಡೆ,

ಚಂ॥ ಎಡಬಲವಂಕದೊಳ್ ನೆಲನನುಗ್ಗಡಿಪಾಳಿಯರಿಂ ವಿಳಾಸದಿಂ
ದಡಿಯಿಡುವಲ್ಲಿ ನೇವುರದ ನುಣ್ದನಿಗಾಡುವ ಹಂಸೆವಿಂಡಿನಿಂ ।
ಬಿಡದೆ ಮುಖಾಬ್ಜ ಸೌರಭವನುಣ್ಬ ಮದಾಳಿಗಳಿಂ ವಿನೂತನಂ
ಬಡೆದತಿಮಾನಿ ಮೇನೆ ನಡೆತಂದು ನಿರೀಕ್ಷಿಸುತಂ ಭವಾನಿಯುಂ ॥ ೧೧೮

ಶಾ॥ ಏನೆನ್ನಾಯುವೆ ಎನ್ನಪಾರಸುಖಮೇ ಏನೆನ್ನ ಪುಣ್ಯಾಬ್ಧಿಯೇ
ಏನೆನ್ನುತ್ಸವಮೇ ವಿಳಾಸ ನಿಧಿಯೇ ಏನೆನ್ನ ಸೌಂದರ್ಯಮೇ ।
ನಾನಾ ಪರ್ವತದೊಳ್ ವನ ಪ್ರಕರದೊಳ್ ಸಂಪೂರ್ಣಕಾಸಾರದೊಳ್
ನೀನೇಕಿಂತಿರಲೇಕೆ ತಾಯೆ ಎನುತುಂ ಬಂದಪ್ಪಿಕೊಂಡಪ್ಪಿದಳ್ ॥ ೧೧೯

ವ॥ ಇಂತು ಮೊಲೆಯೊಡನೆ ಕಣ್ ತೊಳಿಯೆ, ಪುಳಕದೊಡನೆ ಗದ್ಗದಂ ಪೊಣ್ಮೆ, ಸ್ವೇದ ದೊಡನೆ ಕಂಪನಂ ಕನರೆ, ಸಿಂಹ ಪೀಠದ ಸಿಂಗರದ ಶಿಶುವಂ ಮೊಗೆದಪ್ಪಿ ತೆಗೆದಪ್ಪಿ ಮೂರ್ಧ್ನಾಘ್ರಾಣಮಂ ಮಾಡಿ ಮೊಲೆಯೂಡಿ, ಮೇನೆಯುಂ ಗಿರಿರಾಜನುಂ, ಕಣ್ ತೀವಿ ನೋಡಿ, ಮೆಯ್ ತೀವಿಯಪ್ಪಿ, ಮನಂತೀವಿ ನೆನೆಹಿನೊಳಿಟ್ಟು ಶಶಿಕಲೆಯಂ ಸಲಹುವಂತೆ ಸೌಕುಮಾರ್ಯಮಂ ಸುಯಿಧಾನಂ ಮಾಳ್ಪಂತೆ ಸೊಬಗಂ ಸಂವರಿಸುವಂತೆ ಬೆಳ್ದಿಂಗಳಂ ಬಣ್ಣವಿಡುವಂತೆ, ಭೋಗಮಂ ಸಾಗಿಸುವಂತೆ, ಚೆಲ್ವಂ ಚಮತ್ಕರಿಸುವಂತೆ, ಸಾಹಿತ್ಯಮಂ ಸಯ್ತಿಡುವಂತೆ, ಪ್ರಾಣಮಂ ಪರಿರಕ್ಷಿಪಂತೆ, ಜ್ಞಾನಮಂ ಬಳೆಯಿಸುವಂತೆ, ಶಾಂತಿಯಂ ಕಾಂತಿಯಿಡುವಂತೆ,ಸತ್ಯಮಂ ಸಂತವಿಡುವಂತೆ, ನಿತ್ಯಮಂ ಪ್ರತ್ಯಕ್ಷಮಂ ಮಾಳ್ಪಂತೆ, ಪುಣ್ಯಮಂ ಪುಟವಿಡುವಂತೆ, ಮುಕ್ತಿಯುಂ ಮೂರ್ತಿಗೊಳಿಸುವಂತೆ, ಪಾರ್ವತಿಯಂ ಸಲಹುತ್ತುಮಿರೆಯಿರೆ,

ಲೋಚನ, ಲಲಾಟ, ದಂತಮರೀಚಿಗಳು ತೊಳಗುವ ಆರತಿಯಾಗಿರಲು ಅವರು ಆರತಿಎತ್ತಿದರು. ವ || ಮೇನಾದೇವಿ ಆ ಸಮಯಕ್ಕೆ ಆಗಮಿಸುತ್ತಿದ್ದಾಳೆ—೧೧೮. ಎರಡು ಪಕ್ಕಗಳಲ್ಲಿಉದ್ಘೋಷಿಸುವ ಸಖಿಯರು, ಅವಳು ಅಡಿಯಿಡುವಾಗ ನೇವುರದ ನುಣ್ದನಿಗೆ ಆಡುವ ಹಂಸಗಳು, ಅವಳ ಮುಖಕಮಲ ಸೌರಭಕ್ಕೆ ಎಳಸಿ ಬಂದ ದುಂಬಿಗಳು, ಇಂತಿರುವಾಗ ಮೇನಾದೇವಿ ನಡೆತಂದು ಮಗಳನ್ನು ನೋಡಿದಳು. ೧೧೯. ಎನ್ನಾಯುವೆ, ಅಪಾರ ಸುಖವೆ, ಪುಣ್ಯದಕಡಲೆ, ಉತ್ಸವವೆ, ವಿಳಾಸನಿಧಿಯೇ, ಸೌಂದರ್ಯವೆ, ನೀನು ಈ ಪರ್ವತದಲ್ಲಿ, ಕೊಳದತಡಿಯಲ್ಲಿ ಏಕಿರುವೆ ಎಂದು ಮೇನಾದೇವಿ ಮಗಳನ್ನು ಆಲಿಂಗಿಸಿಕೊಂಡಳು. ವ || ಮಗಳನ್ನು ನೋಡಿ ಮೇನಾದೇವಿಯ ಮೊಲೆ-ಕಣ್ಣುಗಳು ತೊಯ್ದುವು, ಗದ್ಗದ-ಸ್ವೇದಗಳು ಪೊಣ್ಮಿದವು, ಮೈಕಂಪಿಸಿತು, ಸಿಂಗರದ ಶಿಶುವನ್ನು ಅಪ್ಪಿದಳು. ತಲೆಮೂಸಿದಳು, ದಂಪತಿಗಳಿಬ್ಬರೂ ಮಗಳನ್ನು ಮನಸಾರೆ ನೋಡಿ ತಣಿದರು. ಅವರು ಅವಳನ್ನು ಅಕ್ಕರೆಯಿಂದ ಸಲಹುತ್ತಿದ್ದರು.

ಇದು ಸಮಸ್ತ ಸುರಾಸುರಮಕುಟ ಖಚಿತ
ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪುಂಜರಂಜಿತಚರಣ
ನೆನಿಪ ಪಂಪಾವಿರೂಪಾಕ್ಷ ಶ್ರೀಪಾದಕಮಲ
ಮಕರಂದ ಮಧುಕರಾಯಮಾಣ
ಸತ್ಕವೀಶ್ವರ ಹಂಪೆಯ
ಹರಿಹರದೇವ ವಿರಚಿತಮಪ್ಪ

ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ಹೈಮವತೀ ಶೈಶವ ವರ್ಣನಂ
ತೃತೀಯಾಶ್ವಾಸಂ

# ಚತುರ್ಥಾಶ್ವಾಸಂ

## ಪಾರ್ವತೀಯೌವನ ರಾತ್ರಿವಿಹಾರವರ್ಣನಂ

ಕಂ॥ ಶ್ರೀಸಕಳಸುರ ಮುನೀಶ್ವರ
ವಾಸವ ಪರಿಕಮಲ ಪುತ್ರಪೂಜಿತಚರಣಂ।
ಭಾಸುರತೇಜಂ ಭಕ್ತಿವಿ
ಳಾಸಮನೆಮಗೀಗೆ ಹಂಪೆಯ ವಿರೂಪಾಕ್ಷಂ॥ ೧

ಶಿವ ಶಿವ ನಳ ನಳಿಸುವ ಶೈ
ಶವದೊಳ್ ಬಳೆಯುತ್ತುಮಿರ್ಪ ಗಿರಿಜೆಗೆ ರೂಪೋ।
ತ್ಸವದೊಡನೆ ಮೆಱೆವ ದಶವ
ರ್ಷವದಾಯ್ತುಲರ್ಗಣೆಗೆ ಕೂರ್ಪು ಕೂಡುವ ತೆಱದಿಂ॥ ೨

ಇಂತಾಗೆ ಮೇನೆಯುಂ ತತ್
ಕಾಂತನುಮತಿಹರ್ಷ ಪುಳಕಯುತರಾಗುತ್ತುಂ।
ಮುಂತಿರ್ದ ತನುಜೆಯಂ ಮನ
ದಿಂ ತೂಪಿಱಿಯುತ್ತೆ ತಮ್ಮೊಳೊಲ್ದಿಂತೆಂದರ್॥ ೩

ಅಸಪದ್ಯಂ ಚರಿತಂ ಮು
ನ್ನಿನ ಸರಿ ತಾನಲ್ಲ ಬಾಲ್ಯಮಿಾಪೋಮದೆ ಯೌ।
ವನಮಿಾ ಸಾರ್ದುದೆ ಬಣ್ಣಿಸು
ವನ ಜಾಣ್ಮೆಗತರ್ಕ್ಯಮತುಳಮನುಪಮಮಧಿಕಂ॥ ೪

೧. ಎಲ್ಲ ಸುರರು, ಮುನೀಶ್ವರರು ಮಾತ್ರವಲ್ಲದೆ ಇಂದ್ರ–ವಿಷ್ಣು–ಬ್ರಹ್ಮಾದಿಗಳಿಂದ ಪೂಜಿಸಲ್ಪಟ್ಟ ಪಾದಕಮಲವುಳ್ಳವನೂ, ದಿವ್ಯತೇಜಸ್ಸುಳ್ಳವನೂ ಆದ ಹಂಪೆಯ ವಿರೂಪಾಕ್ಷನು ನಮಗೆ ಅತಿಶಯ ಭಕ್ತಿಯನ್ನು ಕರುಣಿಸಲಿ. ೨. ಗಿರಿಜೆಗೆ ಹತ್ತುವರ್ಷ ತುಂಬಿಬಂದಿತ್ತು. ನಳನಳಿಸುವ ಆ ಶೈಶವದೆಶೆಯಲ್ಲಿ ವಯಸ್ಸಿನಜೊತೆಗೆ ಅವಳ ಲಾವಣ್ಯವೂ ಬಳೆಯುತ್ತಿತ್ತು. ಅದು ಮನ್ಮಥನ ಕುಸುಮ ಬಾಣಕ್ಕೆ ಒಂದು ನೂತನ ಶಕ್ತಿಕೂಡಿ ಬಂದಂತಾಗಿತ್ತು. ೩. ಇದರಿಂದ ಮೇನೆ ಮತ್ತು ಗಿರಿರಾಜರು ಹರ್ಷಪುಳಕಿತರಾದರು. ಅವರು ಎದುರಿಗಿದ್ದ ಮಗಳನ್ನು ಕಂಡು ಮನಸ್ಸಿನಲ್ಲಿ ಧ್ವನಿಯಿಂದ ನಿವಾಳಿಸಿ ತೆಗೆನಂತೆ ತಮ್ಮಲ್ಲೇ ಹೀಗೆಂದುಕೊಂಡರು. ೪. ನಡೆ ಪರಮ ಪವಿತ್ರ, ಇದು ಎಲ್ಲರಂತಲ್ಲ! ಈ ಬಾಲ್ಯಕಳೆದದ್ದು ಹಾಗೂ ಯೌವನವು ತುಂಬಿಬಂದದ್ದು ಅತ್ಯಂತ ಸೋಜಿಗ! ಇದು ವರ್ಣನೆಗೆ ಮಿಾರಿದ್ದು, ಊಹೆಗೂ ನಿಲುಕದ್ದು, ಅನುಪಮ, ಅತುಲ, ಅನಿರ್ವಚನೀಯ!

ಚಂ॥ ನಗೆ ನಸುಲಜ್ಜೆಯೊಳ್ ತೊಡರಲಿರ್ದುದೆ ಬಲ್ನಡೆ ಮಾಂದ್ಯ ಭಾವದೊಳ್
ಪುಗಲಿದೆ ಬಾಸೆ ಸಾಲಜಿತಲರ್ದುದೆ ಸೂಸುವ ನೋಟವಾಸೆಯೊಳ್ ।
ಮಿಗಲಿದೆ ತತ್ಕುಚಂ ನಿಜದ ಸೀಮೆಗೆ ರೇಖೆಯನೊತ್ತಿ ಲಜ್ಜಿಸಲ್
ಬಗೆದಿವೆ ಯೌವನೋದಯುವೊ ಬಾಲ್ಯವಿಮೋಚನವೋ ಭವಾನಿಯಾ ॥ ೫

ಕಂ॥ ಅಳಕಂ ತೆಱಪುಗೊಡಲ್ಕವೆ
ತಿಳಕಕ್ಕೆ ತದಾಸ್ಯಬಿಂಬಮಾದರ್ಶದೊಳಂ ।
ಪೊಳೆಯಲಿದೆ ನಾಭಿಮಂಡಲ
ವೊಳೆಪುಗಲಿದೆ ನೋಡು ಮೇನೆಯಂಬಿಕೆಯಿರವಂ ॥ ೬

ದಂತಂ ಮುಸುಂಕುಗಳೆಯ
ಲ್ಕಾಂತಿವೆ ನಡು ತನುವನೆಳಸದಿದೆ ನುಡಿ ಮೌನ ।
ಪ್ರಾಂತಮನೊತ್ತುಗೊಳಲ್ಕಿದೆ
ಕಾಂತಿ ಶರೀರಮನಮರ್ಚಲಿದೆ ಪಾರ್ವತಿಯಾ ॥ ೭

ವ॥ ಎಂದಿಂತು ಮಗಳ ವಯಸ್ಸಂಧಿಯಂ ವಯಃ ಪರಿಣತರಪ್ಪ ಮಾತಾ ಪಿತೃಗಳ್ ಬಣ್ಣಿಸುತಿರ್ಪಿನಮನುಕ್ರಮದಿಂ ಪಲಕೆಲವು ದಿನಕ್ಕೆ ಬನಮಂ ಸಹಕಾರಂ ಸಹಕಾರಮಂ ವಸಂತಂ ವಸಂತನಂ ಕಾಮಂ ಕಾಮನಂ ಇಕ್ಷುಚಾಪಂ ಇಕ್ಷುಚಾಪಮಂ ನನೆಗಣೆ ಸಾರ್ವಂತೆ ಪಾರ್ವತಿಯಂ ನವಯೌವನಂ ಸಾರ್ವಲ್ಲಿ,

ಎಂದುಕೊಂಡರು. ೫. ಅವಳ ಸರ್ವಸಾಧಾರಣವಾದ ನಗೆ ಈ ನಸುಲಜ್ಜೆಯಲ್ಲಿ ತೊಡರುತ್ತಿದೆ. ಬಾಲ್ಯದ ಬಲ್ನಡೆ ಮಾಂದ್ಯಭಾವದಲ್ಲಿ ಪರಿಣಮಿಸುತ್ತಿದೆ. ಎಂದರೆ ನಡೆಯಲ್ಲಿ ಗಾಂಭೀರ್ಯಕಾಣುತ್ತಿದೆ. ಬಾಸೆ (ಹೊಟ್ಟೆಯ ಮೇಲಣ ರೋಮರಾಜಿ) ಸಾಲುಗಟ್ಟುತ್ತಿದೆ. ಅವಳ ನೋಟದಲ್ಲಿ ಆಸೆಮೂಡುತ್ತಿದೆ. ಇನ್ನು ಕುಚಗಳು ತಮ್ಮ ಎಲ್ಲೆ ಮೀರಿ ಲಜ್ಜಿಸಲೆಳಸಿವೆ! ಇದೇನು, ಯೌವನೋದಯವೊ, ಇಲ್ಲವೆ ಬಾಲ್ಯ ವಿಮೋಚನವೊ! ಎಂದು ಶಂಕಿಸಿದರು. ೬. ಎಲೌ ಮೇನೆ, ಅಂಬಿಕೆಯ ಇರವನ್ನು ನೋಡು. ಅವಳ ಮುಂಗುರುಳು ತೆರಪುಗೊಡತೊಡಗಿವೆ. ತಿಲಕವಿಡುವಾಗ ಅವಳ ಮುಖಬಿಂಬವು ಕನ್ನಡಿಯಲ್ಲಿಯೂ ಹೊಳೆಯುತ್ತಿದೆ. ನಾಭಿ ಮಂಡಲವೊ ವೊಳೆವುಗಲಿದೆ ಎಂಬುದನ್ನಾದರೂ ಗಮನಿಸು. ೭. ಅವಳ ದಂತ ಪಂಕ್ತಿ ತಮ್ಮ ಮುಸುಕು ಕಳೆಯಲು ಹಾತೊರೆಯುತ್ತಿವೆ. ನಡು ಕೃಶವಾಗಹತ್ತಿದೆ, ನುಡಿ ಮೌನವಾಗುತ್ತಿದೆ, ಇನ್ನು ಕಾಂತಿಯು ಪಾರ್ವತಿಯ ಶರೀರವನ್ನೆಲ್ಲ ವ್ಯಾಪಿಸುತ್ತಿದೆ. ವ॥ ಎಂದು ಅನುಭವಶಾಲಿಗಳಾದ ತಂದೆತಾಯಿಯರು ಅವಳ ವಯಸ್ಸಂಧಿಯನ್ನು ಕುರಿತು ಮಾತನಾಡುತ್ತಿರುವಾಗ ಕ್ರಮಕ್ರಮವಾಗಿ ದಿನಗಳೆದಂತೆ ವನಕ್ಕೆ ಸಹಕಾರ (ಮಾವು)ವೂ, ಸಹಕಾರಕ್ಕೆ ವಸಂತಋತುವೂ, ವಸಂತನಿಗೆ ಕಾಮನೂ, ಕಾಮನಿಗೆ ಕಬ್ಬಿನಬಿಲ್ಲೂ, ಆ ಬಿಲ್ಲಿಗೆ ಹೂ ಬಾಣಗಳೂ ಸೇರುವಂತೆ

ಕಂ॥ ನವಕುಚಕಳಶಂಗಳಿನೊ
ಪ್ಪುವ ಮುಖದರ್ಪಣದಿನಳಕತೋರಣದಿಂ ಪೊ।
ಣ್ಮುವ ಮುಡಿ ಗುಡಿಯಿಂದಂ ಮಿ
ಕ್ಕವಯವದಿಂದಗಜೆ ಯೌವನಮನಿದಿರ್ಗೊಂಡಳ್ ॥ ೮

ಎಂಬಂತೆ ತೀವಿ ಪರ್ವಿದ
ಚುಂಬಿತಮುದಿತೋದಿತ ಪ್ರಕಾಶಿತ ಗಿರಿಶಾ।
ಲಂಬಿತ ಗಿರಿಜಾಯೌವನ
ಮಂ ಬಣ್ಣಿಪೊಡುರಗ ಖಚರ ಭೂಚರರಳವೇ ॥ ೯

ಶರ್ವಾಣಿಯ ಸೌಂದರ್ಯಮ
ನೊರ್ವಂ ಬಣ್ಣಿಸುವೆನೆಂಬವಂ ಗಾಂಪಂ ಪ।
ನ್ನಿರ್ವರ್ ಭಾರತಿಯರ್ ಸಾ
ಸಿರ್ವರ್ ಫಣಿರಾಜರಾದೊಡಂ ತೀರ್ದಪುದೇ ॥ ೧೦

ಮ॥ ಮದಮಂ ವಿಭ್ರಮಮಂ ವಿಲಾಸದೊದವಂ ಸೌಂದರ್ಯಮಂ ಸೌಖ್ಯಮಂ
ಸದಲಂಕಾರತೆಯಂ ಸಲಕ್ಷಣಮನಾಂತಿರ್ದಂಬಿಕಾ ಯೌವನ।
ಪದೆಪಿಂ ಪೇಳ್ವೊಡದತ್ಯನೂನಪದಮತ್ಯಾಶ್ಚರ್ಯಮತ್ಯುಜ್ವಲ
ಪ್ರದಮತ್ಯೂರ್ಜಿತಮತ್ಯಸಾಧ್ಯಗುಣಮತ್ಯಾನಂದಮತ್ಯುನ್ನತಂ ॥ ೧೧

ಪಾರ್ವತಿಗೆ ನವಯೌವನವು ತುಂಬಿಬಂತು. ೮. ಆಗ ಗಿರಿಜೆಯು ನವ ಕುಚಕಳಶಗಳು, ಅವಕ್ಕೆ ಒಪ್ಪುವ ಮುಖದರ್ಪಣ, ಮುಂಗುರುಳ ತೋರಣ, ಪೊಣ್ಮುವ ಮುಡಿಗುಡಿಗಳು ಹಾಗೂ ಅದಕ್ಕೆ ಅನುಗುಣವಾದ ಉಳಿದ ಅವಯವಗಳಿಂದ ನವಯೌವನವನ್ನು ಪಡೆದಳು. ೯. ಹೀಗೆ ಸಾಕ್ಷಾತ್ ಪರಶಿವನನ್ನೇ ಅವಲಂಬಿಸಿದ ಗಿರಿಜೆಯ ಯೌವನವು ಅವಳ ಅಂಗಾಂಗಗಳನ್ನು ವ್ಯಾಪಿಸಿ ಚುಂಬಿತ-ಮುದ್ರಿತ ಪ್ರಕಾಶಿತ ಸ್ಥಿತಿಯಲ್ಲಿ ಬೆಳಗುತ್ತಿದೆ ಎಂದ ಮೇಲೆ ಅದನ್ನು ವರ್ಣಿಸುವುದಕ್ಕೆ ಯಾರಿಗೆ ತಾನೆ ಸಾಧ್ಯ! ೧೦. ಶರ್ವಾಣಿಯ ಸೌಂದರ್ಯವನ್ನು ಯಾವನಾದರೊಬ್ಬನು ವರ್ಣಿಸುತ್ತೇನೆ ಎಂದು ಹೇಳಿದರೆ ಅವನೊಬ್ಬ ದಡ್ಡನೇ ಸರಿ! ಏಕೆಂದರೆ ಅವಳ ಸೌಂದರ್ಯವನ್ನು ವರ್ಣಿಸಬೇಕಾದರೆ ಹನ್ನೆರಡುಜನ ಶಾರದೆಯರಾಗಲಿ, ಸಾವಿರ ಜನ ಆದಿಶೇಷರಾದರೂ ಸಾಧ್ಯವಿಲ್ಲ. ೧೧. ಮದ, ವಿಭ್ರಮ, ವಿಲಾಸ, ಸೌಂದರ್ಯ, ಸೌಖ್ಯ, ಸದಲಂಕಾರ, ಸಲಕ್ಷಣತೆಗಳನ್ನು ಪಡೆದಿದ್ದ ಆ ಅಂಬಿಕೆಯ ಯೌವನವನ್ನು ಹೇಳಬೇಕಾದರೆ ಸಾಮಾನ್ಯವಲ್ಲ! ಅದು ಅನೂನಪದ, ಆಶ್ಚರ್ಯಕರವೂ ಅತ್ಯುಜ್ವಲಪ್ರದವೂ ಅಸಾಧ್ಯವೂ, ಆನಂದಪ್ರದವೂ ಆಗುತ್ತದೆ!

ಕಂ॥ ಅತಿಮಧುರಮತಿಮನೋಹರ
ಮತಿಮಂಗಳ ಮತಿವಿಚಿತ್ರಮತಿಬಂಧುರಮಂ ।
ತತಿಸಂಭ್ರಮಮತಿವಿಭ್ರಮ
ಮತಿಯೌವನಮತಿವಿಲಾಸಮತಿ ಪಾರ್ವತಿಯಾ ॥ ೧೨

ವ॥ ಮತ್ತಮಾ ಪಾರ್ವತಿಯ ನವಯೌವನಂ ವಸಂತನಂತೆ ರಾಗೋದಯಂ ಮಕರ ಧ್ವಜನ ಮತ್ತಗಜದಂತೆ ಮಂದಯಾನಂ ಕಂದರ್ಪನ ಶಿಳೀಮುಖಕಲಾಪದಂತೆ ಜಗನ್ಮೋಹನಂ ಝಷಕೇತನ ನಿಕೇತನ ತೋರಣ ರತ್ನ ಸ್ತಂಭಗಳಂತೆ ಕಾಂತಿಮಯಂ ಶಶಿಕಾಂತ ಕೃತಕಾಚಳದಂತೆ ನಿರ್ಮಳೀಕೃತಂ ಕ್ಷೀರಾಬ್ಧಿಯ ತರಂಗದಂತುತ್ತರೋತ್ತರಂ ಕಮಲಾಕರದಂತೆ ಪ್ರಸನ್ನ ಗಂಭೀರಂ ಬಿಸಜನಾಳದಂತೆ ಭುವನಾಲಂಕಾರಂ ವನಲತೆಯಂತೆ ಸುಕೋಮಲಂ ಸುವರ್ಣಕಳಶದಂತೆ ರಮಣೀಯಂ ಸುರದ್ರುಮಶಾಖೆಯಂತೆ ಸರ್ವವಾಂಛಿತ ಫಲಪ್ರದಂ ಕಂಬುವಿನಂತೆ ತ್ರಿರೇಖಾನ್ವಿತಂ ಪೂರ್ಣಚಂದ್ರನಂತೆ ಕಲಾಭರಿತಂ ವ್ಯೋಮದಂತೆ ಘನಚಿತ್ರಮೆನಿಸಿರ್ದುದಂತುಮಲ್ಲದೆಯುಂ,

ಕಂ॥ ತೀವಿದ ಜವ್ವನಮಂ ಪರಿ
ಭಾವಿಸೆ ಮಾಧುರ್ಯ ಚರಿತಮೆಡೆಗೊಂಡುದು ಸದ್ ।
ಭಾವಂ ಚಂದ್ರಾಭರಣನ
ಜೀವಂ ಬಣ್ಣಿಪ್ಪನಾವನೇ ದೇವಂ ॥ ೧೩

ವ॥ ಅದೆಂತೆಂದೊಡೆ,

ಕಂ॥ ಮನದಾಸೆ ವದನದೊಳ್ ಲೋ
ಚನದೊಳ್ ನುಡಿನಗೆ ಕಪೋಳದೊಳ್ ಕೋಪಂ ಪು ।

೧೨. ನವಯೌವನವತಿಯಾದ ಆ ಪಾರ್ವತಿಯಲ್ಲಿನ ಮಾಧುರ್ಯ, ಮನೋಹರತೆ-ಮಂಗಳ ವೈಚಿತ್ರ್ಯ, ಬಂಧುರತೆ, ಸಂಭ್ರಮ, ವಿಭ್ರಮಗಳಲ್ಲಿ ಅವಳು ಮಿತಿಮೀರಿ ವಿಲಾಸವತಿಯಾಗಿದ್ದಾಳೆ. ವ॥ ಆ ಪಾರ್ವತಿಯ ನವಯೌವನವು ವಸಂತನಂತೆ ರಾಗೋ (ಅನುರಾಗ-ಬಣ್ಣ) ದಯವುಳ್ಳದ್ದು, ಮನ್ಮಥನ ಮದಗಜದಂತೆ ಮಂದಗಮನ (ಮೆಲ್ನಡೆ) ವುಳ್ಳದ್ದು. ಕಾಮನ ಕುಸುಮಬಾಣಗಳಂತೆ ಜಗನ್ಮೋಹಕವಾದದ್ದು, ಮೀನಕೇತನನ ತೋರಣರತ್ನ ಸ್ತಂಭಗಳಂತೆ ಕಾಂತಿಮಯ, ಚಂದ್ರಕಾಂತಗಳ ಕೃತ್ರಿಮಪರ್ವತದಂತೆ ನಿರ್ಮಲವಾದದ್ದು, ಹಾಲು ಕಡಲಿನ ತೆರೆಗಳಂತೆ ಉತ್ತರೋತ್ತರ, ಕಮಲಮಡುವಿನಂತೆ ಪ್ರಸನ್ನಗಂಭೀರ, ಕಮಲದ ದಂಟಿನಂತೆ ಭುವನ (ನೀರು-ಜಗತ್ತು)ಕ್ಕೆ ಅಲಂಕಾರ, ವನ ಲತೆಯಂತೆ ಕೋಮಲ, ಸುವರ್ಣಕಳಶದಂತೆ ರಮಣೀಯ, ಕಲ್ಪವೃಕ್ಷ ಶಾಖೆಯಂತೆ ಇಷ್ಟಾರ್ಥವನ್ನು ಕೊಡುವಂತಹುದು, ಶಂಖದಂತೆ ಮೂರುರೇಖೆಗಳುಳ್ಳದ್ದು, ಪೂರ್ಣ ಚಂದ್ರನಂತೆ ಕಲಾಭರಿತ, ಗಗನದಂತೆ ಅತಿ ವಿಚಿತ್ರವಾಗಿತ್ತು. ೧೩. ಚಂದ್ರಾಭರಣನಾದ ಪರಶಿವನ ಜೀವವೆನಿಸಿರುವ ಗಿರಿಜೆಯ ಆ ಯೌವನ, ಮಾಧುರ್ಯ, ಮತ್ತು ಸದ್ಭಾವಗಳನ್ನು

ಬಿರ್ನೊಳಱಿವು ಬುದ್ಧಿಯೊಳ್ ಭಾ
ವನೆ ಚಿತ್ತದೊಳಮರ್ದುವಂಬಿಕೆಗೆ ಯೌವನದೊಳ್ ॥ ೧೪

ಮ॥ ಸ್ರ॥ ನುಡಿಯೊಳ್ ಜಾಣ್ನೋಟದೊಳ್ ವಕ್ರತೆ ಪೊಸನಡೆಯೊಳ್ ವಿಭ್ರಮಂ ಸಾರ್ದುದೆಯ್ದಿ
ತ್ತಡಿಯಿಟ್ಟಿತ್ತಾಹ ಕರ್ಣಾಮೃತಮತಿರುಚಿರಂ ಕಣ್ಣ ಪುಣ್ಯಂ ದಿಟಕ್ಕಿ ।
ರ್ಮಡಿ ವಾಣೀದೇವಿಗಂ ನೂರ್ಮಡಿ ಕುಸುಮಶರಕ್ಕಂಚೆವಿಂಡಿಂಗೆ ಸಾಸಿ
ರ್ಮಡಿ ಸಾಹಿತ್ಯಂ ವಿಳಾಸಂ ಗಮಕಮಮರ್ದುದಾರ್ಯಾಂಗದೊಳ್ ಕಣ್ಗೆ ಚಿತ್ರಂ ॥ ೧೫

ವ॥ ಇಂತೊಪ್ಪುವ ನವಯೌವನದೊಳ್ ಸಕಲಲೀಲಾವಿಲಾಸೆಯಪ್ಪ ಪಾರ್ವತೀದೇವಿ ನಲವಿಂ ಜಲಕ್ರೀಡೆಗೆಂದು ಷೋಡಶ ಸಹಸ್ರ ವಿಳಾಸಿನಿಯರ್ವೆರಸು ಕೇಳೀವನಮಂ ಪುಗುತರ್ಪಾಗಳ್,

ಚಂ॥ ವಿದಲಿತ ಪದ್ಮ ಸೌರಭಕೆ ಸಂದಣಿಗೊಳ್ವ ಮಧುವ್ರತ ಪ್ರತಾ
ನದಿನೆಸೆವುತ್ಪಳ ಪ್ರಕರದೊಳ್ ನೆಱೆಸಿಲ್ಕಿ ಜಿನುಂಗುತಿರ್ಪ ಷ ।
ಟ್ಪದ ಶಿಶುವೃಂದದಿಂ ಕಮಲ ತಂಡುಲಮಂ ಕೊಳುತಿರ್ಪ ಹಂಸೆಯಿಂ
ಮದನ ಸುಖಾಬ್ಧಿಯೊಳ್ ನೆರೆವ ಚಕ್ರದಿನೊಪ್ಪುವುದೊಂದು ಪೂಗೊಳಂ ॥ ೧೬

ವ॥ ಕೊಳನಂ ಕಂಡು ವಿಳಾಸಿನೀ ನಿಕರಮುದ್ಯಚ್ಛಂದನಂ ಕುಂಕುಮಂ
ವಿಳಸನ್ನೂತನ ಪುಷ್ಪರಾಜಿ ಮೃಗನಾಭಿವ್ರಾತಂ ತಂದು ನಿ ।

ಯಾರಾದರೂ ವರ್ಣಿಸಿದಲ್ಲಿ ಅವನೇ ದೇವ ಎನ್ನಬೇಕಾಗುತ್ತದೆ. ೧೪. ಅಂಬಿಕೆಗೆ ಯೌವನೋದಯವಾದಾಗ ಅವಳ ಮುಖದಲ್ಲಿ ಮನದ ಆಸೆ, ಕಣ್ಣುಗಳಲ್ಲಿ ಮಾತು, ಕಪೋಲದಲ್ಲಿ ನಗೆ, ಹುಬ್ಬಿನಲ್ಲಿ ಕೋಪ, ಬುದ್ಧಿಯಲ್ಲಿ ಅರಿವು, ಚಿತ್ತದಲ್ಲಿ ಭಾವನೆಗಳು ಅಳವಟ್ಟುವು. ೧೫. ನುಡಿಯಲ್ಲಿ ಜಾಣ್ಮೆ, ನೋಟದಲ್ಲಿ ವಕ್ರತೆ, ಆ ಹೊಸ ನಡೆಯಲ್ಲಿ ವಿಳಾಸಗಳು ಒಪ್ಪಿದ್ದವು ಎಂಬುದು ಅತ್ಯಂತ ಸೋಜಿಗ! ಅತಿವಿಚಿತ್ರವೇನೆಂದರೆ, ಈ ವಿಷಯ ಕೇಳಲಿಕ್ಕೆ ಅಮೃತಪ್ರಾಯ, ನೋಡುವ ಕಣ್ಣುಗಳ ಪುಣ್ಯ, ಆ ಆರ್ಯೆಯ ಅಂಗಾಂಗಗಳಲ್ಲಿ ಮೂಡಿದ್ದ ಸೌಂದರ್ಯ ಶಾರದೆಗೆ ಇಮ್ಮಡಿ, ಕುಸುಮ ಶರನಿಗೆ ನೂರ್ಮಡಿ, ಹಂಸ ಸಮೂಹಕ್ಕೆ ಸಾಸಿರ್ಮಡಿ. ಅಧಿಕವಾಗಿ ಅವಳಲ್ಲಿ ಸಾಹಿತ್ಯ, ವಿಳಾಸ, ಗಮಕಾದಿಗಳು ಒಪ್ಪಿದ್ದವು. ವ॥ ಇಂಥ ನವಯೌವನದಲ್ಲಿ ಸಕಲಲೀಲಾವಿಲಾಸೆ ಆಗಜೆ, ಹದಿನಾರುಸಾವಿರ ವಿಳಾಸಿನಿಯರೊಂದಿಗೆ ಜಲಕ್ರೀಡೆಗಾಗಿ ಕೇಳಿವನಕ್ಕೆ ಬರುತ್ತಿದ್ದಾಳೆ. ೧೬. ಅಲ್ಲಿ ಒಂದು ಹೂವಿನಕೊಳ. ಅದು ಅರಳಿದ ಕಮಲಗಳ ಸುವಾಸನೆಗೆ ಮುತ್ತಿ ಬರುತ್ತಿರುವ ದುಂಬಿಗಳಿಂದಲೂ, ನೈದಿಲೆಗಳಲ್ಲಿ ಸಿಕ್ಕಿ ಜಿನುಗುತ್ತಿರುವ ಮರಿದುಂಬಿಗಳಿಂದಲೂ, ತಾವರೆಯ ಅಕ್ಕಿಯನ್ನು ಕೊಳುತ್ತಿರುವ ಹಂಸೆಗಳಿಂದಲೂ, ಮದನ ಸುಖದಲ್ಲಿ ನೆರೆವ ಚಕ್ರವಾಕಗಳಿಂದಲೂ ಒಪ್ಪುತ್ತಿದೆ. ೧೭. ಆ ಕೊಳವನ್ನು ಕಂಡು ವಿಳಾಸಿ

ರ್ಮಳಕಾಸಾರದೊಳೊಂದುಗೂಡಿ ಶಿವೆ ಬಾ ಸರ್ವಜ್ಞೆ ಬಾ ದೇವಿ ಬಾ
ಕಳನಾದಪ್ರಿಯೆ ಬಾರೆನುತ್ತ ಕರೆದರ್ ಶರ್ವಾಣಿಯಂ ಜಾಣೆಯರ್ ॥ ೧೭

ವ॥ ಅಂತು ಕರೆಯೆ,

ಕಂ॥ ವನಲಕ್ಷ್ಮಿ ಕೆಯ್ಗುಡುತ್ತಿರೆ
ಯನಸೂಯಾದೇವಿಯಾದಿಯಾದಂಗನೆಯರ್ ।
ಜನನಿ ಜಗಜ್ಜೀವನೆ ಮೆ
ಲ್ಲನೆ ಪಾಯವಧಾರು ದೇವಿಯೆನೆ ನಡೆತಂದಳ್ ॥ ೧೮

ನೇವುರದ ಮುದ್ರಿಕೆಯ ಹಾ
ರಾವಳಿಗಳ ಮಧುರನಾದಮಬ್ಜಾಕರಮಂ ।
ತೀವುತ್ತಿರೆ ಸಕಲಕ್ರೀ
ಡಾವಾರಿಧಿ ಎಳಸಿ ಬಳಸಿ ಕೊಳನಂ ಪೊಕ್ಕಳ್ ॥ ೧೯

ತೊಳಗುವ ವಿಮಳಾಕಾಶದೊ
ಳೆಳವೆಚ್ಚಿ ಪುಗುವಂತೆ ಮುಂತೆ ನಿರ್ಮಳ ಶಶಿಮಂ ।
ಡಳದಧಿದೇವತೆ ಬೆಳ್ದಿಂ
ಗಳೊಳಗೆ ಪುಗುವಂತೆ ಪೊಕ್ಕಳಂಬಿಕೆ ಕೊಳನೊಳ್ ॥ ೨೦

ಗಿರಿಜೆ ಶಶಿವದನೆ ಕೊಳನಂ
ಭರದಿಂ ಪುಗೆ ನೆಯ್ದಿಲೆಯ್ದಿದುವು ವಿಕಸನಮಂ ।

ನಿಯರಲ್ಲಿ ಕೆಲವು ಜಾಣೆಯರು ಶ್ರೇಷ್ಠವಾದ ಚಂದನ, ಕುಂಕುಮ, ಹೊಸಹೂಗಳು ಮತ್ತು ಕಸ್ತೂರಿಗಳನ್ನು ತಂದು ಎಲ್ಲರೂ ಸೇರಿ 'ಶಿವೆ ಬಾ, ಸರ್ವಜ್ಞೆ ಬಾ, ದೇವಿ ಬಾ,' ಮುಂತಾಗಿ ಶರ್ವಾಣಿಯನ್ನು ಅಕ್ಕರೆಯಿಂದ ಕರೆದರು. ೧೮. ಶರ್ವಾಣಿ ಬರುವಾಗ ವನಲಕ್ಷ್ಮಿ ಹಸ್ತಲಾಘವ ಕೊಡುತ್ತಿದ್ದಾಳೆ. ಅನಸೂಯಾದೇವಿ ಮುಂತಾದವರು ' ಜನನಿ, ಜಗಜ್ಜೀವೆ, ಮೆಲ್ಲನೆ ಮುಂದಡಿಯಿಡು ! ಅವಧಾರು ! ಮುಂತಾದ ಗೌರವವಾಚಕ ಪದಗಳಿಂದ ಸಂಬೋಧಿಸುತ್ತಿರಲು ದೇವಿ ನಡೆತಂದಳು. ೧೯. ವಿಳಾಸಿನಿಯರ ನೂಪುರ, ಉಂಗುರ, ಹಾರಗಳು ಇವುಗಳ ಮಧುರನಾದ ಆ ಕೊಳದಲ್ಲಿ ವ್ಯಾಪಿಸಿರುವಾಗ ಸಕಲ ಕ್ರೀಡೆ (ಲೀಲೆ) ಗಳಿಗೂ ನಿಧಿಯೆನಿಸಿರುವ ಜಲಕ್ರೀಡೆಗೆ ಬಯಸಿ ಆ ದೇವಿ ಆ ಕೊಳವನ್ನು ಹೊಕ್ಕಳು. ೨೦. ಬೆಳಗುವ ವಿಮಳಾಕಾಶದಲ್ಲಿ ಎಳೆಶಶಿ ಪುಗುವಂತೆ, ನಿರ್ಮಲ ಶಶಿ ಮಂಡಳಕ್ಕೇ ಅಧಿದೇವತೆ ಬೆಳ್ದಿಂಗಳನ್ನು ಪೊಗುವಂತೆ, ಅಂಬಿಕೆ ಆ ಕೊಳವನ್ನು ಪ್ರವೇಶಿಸಿದಳು. ೨೧. ಶಶಿವದನೆ ಗಿರಿಜೆ ಕೊಳವನ್ನು ಪ್ರವೇಶಿಸಿದೊಡನೆಯೇ ಹಗಲಿನಲ್ಲಿಯೂ ಕೂಡ

ವಿರಹಮನಾಂತುವು ಕೋಕಂ
ಸರಸಿರುಹಂ ಮುಗಿದುವರರೆ ಪಗಲೊಳ್ ಚಿತ್ರಂ ॥ ೨೧

ವ॥ ಇಂತು ಜಲಕ್ರೀಡೆಗೆಂದು ಕೊಳನಂ ಪೊಕ್ಕಲ್ಲಿ ನನೆದೊಡಿಗೆಯ ನಾಯಕಿಯರುಂ, ತಿಲಕದ ಲಲನೆಯರುಂ, ಪೂದುಱುಂಬಿನ ಪುಣ್ಯವತಿಯರಂದುಗೆಯ ಭಂಗಿಯರುಂ, ನಗೆಗಣ್ಗಳ ನೀಱೆಯರುಂ, ಗಿರಿಜೆಯ ಚರಣಕಮಲಕ್ಕೆ ಭರದಿಂದೆಱಗುತ್ತುಂ ನತಮುಖಿಯರ್ ಸನ್ನದ್ಧೆಯರಾಗಿ

ಕಂ॥ ಬಗೆ ಮಿಗೆ ಸತಿಯರ್ ಜಲಕೇ
ಳಿಗೆ ಚಿತ್ತಂ ಗೊಟ್ಟು ದೇವಿಯುವಧಾರೆನುತುಂ ।
ಪುಗುತುಂ ಮಿಗುತುಂ ನಗುತುಂ
ಸೊಗಯಿಸಿದರ್ ಸೆಣಸಿದರ್ ಸಮಂತಿದಿರಾದರ್ ॥ ೨೨

ಆಳಿಗಳಳಕಂಗಳೊಡನು
ತ್ಪಳ ಮಕ್ಷಿಗಳೊಡನೆ ಕಮಳಮಾಸ್ಯದೊಡನೆ ನಿ ।
ರ್ಮಳ ಚಕ್ರಂ ಕುಚದೊಡನೆ
ಗ್ಗಳಿಸಿದುವಿದಿರಾದುವಮರ್ದುವುರ್ಬಿದುವಾಗಳ್ ॥ ೨೩

ಮೃದುಕರತಳದಿಂದಬಲೆಯ
ರುದಕಂಗಳನೆತ್ತಿ ಸುತ್ತಿ ಸೂಸುವ ಪದದೊಳ್ ।
ಮುದದಿಂ ಕುಡುವಂತಿರ್ದುದು
ಮೊದಲೊಳ್ ಮದನಂಗೆ ಮೆಱೆವ ರತ್ನಾಂಜಲಿಯಂ ॥ ೨೪

ನೈದಿಲೆಗಳು ಅರಳಿದವು, ಕೋಕಗಳು ವಿರಹವನ್ನು ತಳೆದವು, ತಾವರೆಗಳು ಮುಚ್ಚಿಕೊಂಡವು, ಇದು ಸೋಜಿಗ! ವ || ಜಲಕ್ರೀಡೆಗೆ ಆಗಮಿಸಿದ ಆ ವಿಳಾಸಿನಿಯರಲ್ಲಿ ನನೆ (ಮೊಗ್ಗು) ದೊಡಿಗೆಯ ನಾಯಕಿಯರು, ತಿಲಕದ ಲಲನೆಯರು, ಹೂವಿನ ತುರುಬಿನ ಪುಣ್ಯವತಿಯರು, ಅಂದುಗೆಯ ಭಂಗಿಯರು, ನಗಕಣ್ಣುಗಳ ನೀರೆಯರು ಇದ್ದರು. ಅವರೆಲ್ಲ ಗಿರಿಜೆಗೆ ವಂದಿಸಿ ಸಿದ್ಧರಾದರು. ೨೨. ಆ ಸತಿಯರೆಲ್ಲ ಜಲಕೇಳಿಯಲ್ಲಿ ಆಸಕ್ತರಾಗಿ ದೇವಿ, ಅವಧಾರು, ಎಂದು ಅಗಜೆಗೆ ಬಿನ್ನೈಸಿ ಕೊಳದಲ್ಲಿ ನಗುನಗುತ್ತಾ ಕ್ರೀಡೆಗಿಳಿದರು. ಇಳಿದು ನಗುತ್ತ ಗಿರಿಜೆಯೊಡನೆ ಆಟದಲ್ಲಿ ಶೋಭಿಸಿದರು. ೨೩. ಆಗ ಅವರ ಮುಂಗುರುಳುಗಳೊಡನೆ ದುಂಬಿಗಳೂ, ಕಣ್ಣುಗಳೊಡನೆ ನೈದಿಲೆಗಳೂ, ಮುಖಗಳೊಡನೆ ತಾವರೆಗಳೂ, ಕುಚಗಳೊಡನೆ ನಿರ್ಮಲ ಚಕ್ರವಾಕಗಳೂ ಅಗ್ಗಳಿಸಿದವು, ಇದಿರಾದುವು, ಅಮರ್ದುವು, ಉರ್ಬಿದವು. ಎಂದರೆ ಅವರ ಮುಂಗುರುಳು ಮುಂತಾದ ಆಯಾ ಅಂಗಾಂಗಗಳು ಆಯಾ ವಸ್ತುಗಳೊಡನೆ ಸ್ಪರ್ಧಿಸುತ್ತಿದ್ದವು ಎಂದರೆ ಹೋಲುತ್ತಿದ್ದವು ಎಂದು ಭಾವ. ೨೪. ಆ ಅಬಲೆಯರು ಕ್ರೀಡೆಯ ಪ್ರಾರಂಭದಲ್ಲಿ ತಮ್ಮ ಕೋಮಲವಾದ ಕೈಗಳಿಂದ ನೀರನ್ನು ಎತ್ತಿ

ಕಂ॥ ಓರೋರ್ವರೊಳೋರೋರ್ವರ್
ವಾರಿಗಳಂ ಚಿಲ್ಲುವಲ್ಲಿ ಜಲದೇವತೆಯರ್ ।
ಕಾರೊಳಗಾಡುವೊಲಿರ್ದುದು
ಹಾರಯ್ಸುತೆ ನಲಿಯುತಾಲಿವರಲೋಕುಳಿಯಂ ॥ ೨೫

ವ॥ ಮತ್ತಮಲ್ಲದೆ
ಆಳಕಾಳಿಗಳಿಂ ನಯನೋ
ತ್ಪಳದಿಂ ಮುಖಕಮಳದಿಂದೆ ಕುಚಚಕ್ರದಿ ನು ।
ಜ್ಜ್ವಳಕಾಂತಿಸಲಿಲದಿಂದಾ
ಕೊಳನೊಳ್ ಕೊಳನಾಡುವಂತಿರೊಪ್ಪಿದರಾಗಳ್ ॥ ೨೬

ವ॥ ಅಲ್ಲದೆ ತಮ್ಮೊಳ್ಮೆಚಿವಚ್ಚಿಕೊಂಡು ಮತ್ಸರಂಗೆಯ್ದು
ಕಂ॥ ಕಮಳದಳಂಗಳೊಳಗೆ ಕುಂ
ಕುಮಜಳಮಂ ತೀವಿ ಚಕ್ರಕುಚೆಯರ್ ಚಲದಿಂ ।
ವಿಮಳೇಂದು ಮುಖಿಯರಂ ವಿ
ಭ್ರಮದಿಂ ನಡೆದಿಟ್ಟು ಕಚಿದರೆಳವಿಸಿಲೊಳ್ಪಂ ॥ ೨೭

ಇಡೆ ಶಶಿಮುಖಿಯರ್ ಕಂಡಾ
ಗಡೆ ಧವಳೋತ್ಪಳದ ನಡುವೆ ಚಂದನರಸಮಂ ।
ಬಿಡೆ ತೀವಿಕೊಂಡು ನಡೆನಡೆ
ದೊಡನೊಡನಿಟ್ಟಿಟ್ಟು ಜೊನ್ನಮಂ ಪಸರಿಸಿದರ್ ॥ ೨೮

ಚೆಲ್ಲುತ್ತಿದ್ದರು; ಅದು ಆಟದ ಮೊದಲಲ್ಲಿ ಮನ್ಮಥನಿಗೆ ಅವರು ರತ್ನಾಂಜಲಿ ಕೊಡುವಂತಿತ್ತು! ೨೫. ಆ ನೀರೆಯರು ಒಬ್ಬರಿಗೊಬ್ಬರು ನೀರು ಚೆಲ್ಲುತ್ತಿದ್ದರು. ಇದನ್ನು ನೋಡಿದರೆ ಜಲದೇವತೆಯರು ನಲಿಯುತ್ತ ಓಕುಳಿಯಿಂದ ಹಾರಯಿಸುತ್ತ ಮುಂಗಾರಿನಲ್ಲಿ ಆಡಿದಂತೆ ಇತ್ತು. ೨೬. ಆ ನೀರೆಯರು ಕೊಳದಲ್ಲಿ ಆಟವಾಡುತ್ತಿದ್ದಾರೆ. ಒಂದು ಕೊಳದೊಡನೆ ಮತ್ತೊಂದು ಕೊಳ ಆಟವಾಡುವಂತೆ ಇತ್ತು. ಹೇಗೆಂದರೆ ಕೊಳದ ದುಂಬಿಗಳು ಇವರ ಮುಂಗುರುಳೂ, ಇವರ ಕಣ್ಣುಗಳು–ಕೊಳದ ನೈದಿಲೆಗಳು ಹಾಗೂ ಮುಖಕ್ಕೆ ಕಮಲ, ಕುಚಕ್ಕೆ ಚಕ್ರವಾಕ, ಕಾಂತಿಗೆ ಸಲಿಲ ಇವುಗಳಿಗೆ ಬಲವಾದ ಹೋಲಿಕೆ ಇದ್ದುದರಿಂದ "ಕೊಳನೊಳ್ ಕೊಳನಾಡುವಂತೆ" ಇತ್ತು! ವ॥ ತಮ್ಮತಮ್ಮಲ್ಲಿಯೇ ಗುಂಪುಕಟ್ಟಿ ಸ್ಪರ್ಧೆಹೂಡಿ, ೨೭. ಚಕ್ರಕುಚೆಯರಾದ ಆ ನೀರೆಯರು ಕಮಲದಳಗಳಲ್ಲಿ ಕುಂಕುಮ ಜಲವನ್ನು ತುಂಬಿ ಚಲದಿಂದ ನೀರೆರಚುತ್ತಿದ್ದರೆ ಅದು ಎಳೆಬಿಸಿಲನ್ನು ಕರೆಸಂತೆ ಇತ್ತು. ೨೮. ಅವರಲ್ಲಿ ಕೆಲವರು ಬಿಳಿ ನೈದಿಲೆಯಲ್ಲಿ ಚಂದನರಸವನ್ನು ತುಂಬಿ ಎರಚುತ್ತಿದ್ದಾರೆ. ಅದು ಬೆಳದಿಂಗಳನ್ನು ಪಸರಿಸಿದಂತಿತ್ತು.

ವ|| ಇಂತಾಡುವಲ್ಲಿ

ಕಂ|| ಅಂಬುವಿನೊಳಗೆ ನಿಜಪ್ರತಿ
ಬಿಂಬವನೀಕ್ಷಿಸುತೆ ತರುಣಿ ಪೋಗದಿರೆನುತುಂ ।
ಬೆಂಬತ್ತಿ ನಡೆದು ಕಾಣದೆ
ಡಂ ಬಲಸಂ ನೋಡಿ ಮುಗ್ಧೆ ನಗಿಸಿದಳಾಗಳ್ ॥ ೨೯

ಮಡದಿಯರಾಡುವ ಪದದೊಳ್
ಸಡಿಲ್ದ ಘನಕುಂತಳಾಳಿ ಪೋಲ್ದುದು ಚಲದಿಂ ।
ದುಡುಪತಿ ಬಿಂಬಂಗಳ ಬೆಂ
ಬಿಡದೆಯ್ದುವ ರಾಹುಮಂಡಲಂಗಳ ತೆಱನಂ ॥ ೩೦

ಉರವಣಿಸಿ ಚೆಲ್ಲೆ ಸತಿಯರ್
ಕರಂಗಳಂ ವದನವೃಂದಮಂ ಮುಚ್ಚಿರೆ ತ ।
ಳ್ತರವಿಂದಂ ಶಶಿಬಿಂಬೋ
ತ್ಕರಮಂ ಮುತ್ತಿದುದೆನಿಪ್ಪ ತೆಱನಾಯ್ತಾಗಳ್ ॥ ೩೧

ನೋಡುಪ ಪಾರ್ವತಿ ಮುದಮಂ
ಕೂಡುತ್ತಿರೆ ತುಂಬಿವಿಂಡು ಪಾಡುತ್ತಿರೆ ತು ।
ಳ್ಳಾಡಿದರಿಟ್ಟಾಡಿದರೀ
ಸಾಡಿದರಮರ್ದಾಡಿದರ್ ಸರೋಜಾನನೆಯರ್ ॥ ೩೨

ವ|| ಇಂತಾಡುವ ಸತಿಯರ್ಗೆ ಸಂತಸದಿಂ ಮುಯ್ಯಾಂತು

೨೯. ಹೀಗೆ ಆಡುತ್ತಿರುವಾಗ ಒಬ್ಬಳು ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಭ್ರಾಂತಿಯಿಂದ ಎಲೌ ತರುಣಿ, ಹೋಗದಿರು! ಎಂದು ಅವಳನ್ನು ಬೆಂಬತ್ತಿ ನಡೆದು ಕಾಣದೆ ತನ್ನ ಹುಚ್ಚಾಟದಿಂದ ಎಲ್ಲರನ್ನೂ ನಗಿಸಿದಳು. ೩೦. ನೀರಾಟವಾಡುವ ಕಾಲದಲ್ಲಿ ಸಡಲಿದ ಆ ಚಂದ್ರಮುಖಿಯರ ಕೇಶಪಾಶಗಳು ಚಂದ್ರಬಿಂಬಗಳನ್ನು ಚಲದಿಂದ ಬೆಂಬತ್ತಿದ ರಾಹುಮಂಡಲಗಳಂತೆ ಕಂಡವು. ೩೧. ಹೀಗೆ ರಸಾವೇಶದಿಂದ ಸತಿಯರು ನೀರೆರಚುತ್ತಿರುವಾಗ ಎದುರು ಇದ್ದ ನೀರೆಯರು ತಮ್ಮ ಕರಕಮಲಗಳಿಂದ ಶಶಿವದನಗಳನ್ನು ಮುಚ್ಚಿಕೊಂಡರು; ಅದು ಅರಳಿದ ಕಮಲಗಳು ಶಶಿಬಿಂಬಗಳನ್ನು ಮುತ್ತಿದಂತೆ ಇತ್ತು. ೩೨. ಈ ಸೋಜಿಗವನ್ನೆಲ್ಲ ನೋಡುತ್ತಿದ್ದ ಪಾರ್ವತಿ ಹರ್ಷಗೊಂಡಳು. ಆಗ ತುಂಬಿವಿಂಡು ಹಾಡುತ್ತಿತ್ತು. ಸರೋಜಮುಖಿಯರಾದ ಆ ನೀರೆಯರು ತುಳ್ಳಾಡಿದರು, ಇಟ್ಟಾಡಿದರು,

ಕಂ॥ ಓರೋರ್ವರೊಳೋರೊರ್ವರ್
ವಾರಿಗಳಂ ಚೆಲ್ಲುವಲ್ಲಿ ಜಲದೇವತೆಯರ್ ।
ಕಾರೊಳಗಾಡುವೊಲಿರ್ದುದು
ಹಾರಯ್ಸುತೆ ನಲಿಯುತಾಲಿವರಲೋಕುಳಿಯಂ ॥ ೨೫

ವ॥ ಮತ್ತಮಲ್ಲದೆ
ಅಳಕಾಳಿಗಳಿಂ ನಯನೋ
ತ್ಪಳದಿಂ ಮುಖಕಮಳದಿಂದೆ ಕುಚಚಕ್ರದಿ ನು ।
ಜ್ಜ್ವಳಕಾಂತಿಸಲಿಲದಿಂದಾ
ಕೊಳನೊಳ್ ಕೊಳನಾಡುವಂತಿರೊಪ್ಪಿದರಾಗಳ್ ॥ ೨೬

ವ॥ ಅಲ್ಲದೆ ತಮ್ಮೊಳೆಱೆವಚ್ಚಿಕೊಂಡು ಮತ್ಸರಂಗೆಯ್ದು
ಕಂ॥ ಕಮಳದಳಂಗಳೊಳಗೆ ಕುಂ
ಕುಮಜಳಮಂ ತೀವಿ ಚಕ್ರಕುಚೆಯರ್ ಚಲದಿಂ ।
ವಿಮಳೇಂದು ಮುಖಿಯರಂ ವಿ
ಭ್ರಮದಿಂ ನಡೆದಿಟ್ಟು ಕಱೆದರೆಳವಿಸಿಲೊಳ್ಪಂ ॥ ೨೭

ಇಡೆ ಶಶಿಮುಖಿಯರ್ ಕಂಡಾ
ಗಡೆ ಧವಳೋತ್ಪಳದ ನಡುವೆ ಚಂದನರಸಮಂ ।
ಬಿಡೆ ತೀವಿಕೊಂಡು ನಡೆನಡೆ
ದೊಡನೊಡನಿಟ್ಟಟ್ಟು ಜೊನ್ನಮಂ ಪಸರಿಸಿದರ್ ॥ ೨೮

ಚೆಲ್ಲುತ್ತಿದ್ದರು; ಅದು ಆಟದ ಮೊದಲಲ್ಲಿ ಮನ್ಮಥನಿಗೆ ಅವರು ರತ್ನಾಂಜಲಿ ಕೊಡುವಂತಿತ್ತು! ೨೫. ಆ ನೀರೆಯರು ಒಬ್ಬರಿಗೊಬ್ಬರು ನೀರು ಚೆಲ್ಲುತ್ತಿದ್ದರು. ಇದನ್ನು ನೋಡಿದರೆ ಜಲದೇವತೆಯರು ನಲಿಯುತ್ತ ಓಕುಳಿಯಿಂದ ಹಾರಯಿಸುತ್ತ ಮುಂಗಾರಿನಲ್ಲಿ ಆಡಿದಂತೆ ಇತ್ತು. ೨೬. ಆ ನೀರೆಯರು ಕೊಳದಲ್ಲಿ ಆಟವಾಡುತ್ತಿದ್ದಾರೆ. ಒಂದು ಕೊಳದೊಡನೆ ಮತ್ತೊಂದು ಕೊಳ ಆಟವಾಡುವಂತೆ ಇತ್ತು. ಹೇಗೆಂದರೆ ಕೊಳದ ದುಂಬಿಗಳು ಇವರ ಮುಂಗುರುಳೂ, ಇವರ ಕಣ್ಣುಗಳು–ಕೊಳದ ನೈದಿಲೆಗಳು ಹಾಗೂ ಮುಖಕ್ಕೆ ಕಮಲ, ಕುಚಕ್ಕೆ ಚಕ್ರವಾಕ, ಕಾಂತಿಗೆ ಸಲಿಲ ಇವುಗಳಿಗೆ ಬಲವಾದ ಹೋಲಿಕೆ ಇದ್ದುದರಿಂದ "ಕೊಳನೊಳ್ ಕೊಳನಾಡುವಂತೆ" ಇತ್ತು! ವ|| ತಮ್ಮ ತಮ್ಮಲ್ಲಿಯೇ ಗುಂಪುಕಟ್ಟಿ ಸ್ಪರ್ಧೆಹೂಡಿ, ೨೭. ಚಕ್ರಕುಚೆಯರಾದ ಆ ನೀರೆಯರು ಕಮಲದಳಗಳಲ್ಲಿ ಕುಂಕುಮ ಜಲವನ್ನು ತುಂಬಿ ಚಲದಿಂದ ನೀರೆರಚುತ್ತಿದ್ದರೆ ಅದು ಎಳೆಬಿಸಿಲನ್ನು ಕರೆಸಂತೆ ಇತ್ತು. ೨೮. ಅವರಲ್ಲಿ ಕೆಲವರು ಬಿಳಿ ನೈದಿಲೆಯಲ್ಲಿ ಚಂದನರಸವನ್ನು ತುಂಬಿ ಎರಚುತ್ತಿದ್ದಾರೆ. ಅದು ಬೆಳದಿಂಗಳನ್ನು ಪಸರಿಸಿದಂತಿತ್ತು.

ವ॥ ಇಂತಾಡುವಲ್ಲಿ

ಕಂ॥ ಅಂಬುವಿನೊಳಗೆ ನಿಜಪ್ರತಿ
ಬಿಂಬವನೀಕ್ಷಿಸುತೆ ತರುಣಿ ಪೋಗದಿರೆನುತುಂ।
ಬೆಂಬತ್ತಿ ನಡೆದು ಕಾಣದೆ
ಡಂ ಬಲಸಂ ನೋಡಿ ಮುಗ್ಧೆ ನಗಿಸಿದಳಾಗಳ್ ॥ ೨೯

ಮಡದಿಯರಾಡುವ ಪದದೊಳ್
ಸಡಿಲ್ದ ಘನಕುಂತಳಾಳಿ ಪೋಲ್ದುದು ಚಲದಿಂ।
ದುಡುಪತಿ ಬಿಂಬಂಗಳ ಬೆಂ
ಬಿಡದೆಯ್ದುವ ರಾಹುಮಂಡಲಂಗಳ ತೆಱನಂ ॥ ೩೦

ಉರವಣಿಸಿ ಚೆಲ್ಲೆ ಸತಿಯರ್
ಕರಂಗಳಂ ವದನವೃಂದಮಂ ಮುಚ್ಚಿರೆ ತ।
ಳ್ತರವಿಂದಂ ಶಶಿಬಿಂಬೋ
ತ್ಕರಮಂ ಮುತ್ತಿದುದೆನಿಪ್ಪ ತೆಱನಾಯ್ತಾಗಳ್ ॥ ೩೧

ನೋಡುಜ ಪಾರ್ವತಿ ಮುದಮಂ
ಕೂಡುತ್ತಿರೆ ತುಂಬಿವಿಂಡು ಪಾಡುತ್ತಿರೆ ತು।
ಳ್ಳಾಡಿದರಿಟ್ಟಾಡಿದರೀ
ಸಾಡಿದರಮರ್ದಾಡಿದರ್ ಸರೋಜಾನನೆಯರ್ ॥ ೩೨

ವ॥ ಇಂತಾಡುವ ಸತಿಯರ್ಗೆ ಸಂತಸದಿಂ ಮುಯ್ಯಾಂತು

೨೯. ಹೀಗೆ ಆಡುತ್ತಿರುವಾಗ ಒಬ್ಬಳು ನೀರಿನಲ್ಲಿ ತನ್ನ ಪ್ರತಿಬಿಂಬವನ್ನು ನೋಡಿ ಭ್ರಾಂತಿಯಿಂದ ಎಲೌ ತರುಣಿ, ಹೋಗದಿರು! ಎಂದು ಅವಳನ್ನು ಬೆಂಬತ್ತಿ ನಡೆದು ಕಾಣದೆ ತನ್ನ ಹುಚ್ಚಾಟದಿಂದ ಎಲ್ಲರನ್ನೂ ನಗಿಸಿದಳು. ೩೦. ನೀರಾಟವಾಡುವ ಕಾಲದಲ್ಲಿ ಸಡಲಿದ ಆ ಚಂದ್ರಮುಖಿಯರ ಕೇಶಪಾಶಗಳು ಚಂದ್ರಬಿಂಬಗಳನ್ನು ಚಲದಿಂದ ಬೆಂಬತ್ತಿದ ರಾಹುಮಂಡಲಗಳಂತೆ ಕಂಡವು. ೩೧. ಹೀಗೆ ರಸಾವೇಶದಿಂದ ಸತಿಯರು ನೀರೆರಚುತ್ತಿರುವಾಗ ಎದುರು ಇದ್ದ ನೀರೆಯರು ತಮ್ಮ ಕರಕಮಲಗಳಿಂದ ಶಶಿವದನಗಳನ್ನು ಮುಚ್ಚಿಕೊಂಡರು; ಅದು ಅರಳಿದ ಕಮಲಗಳು ಶಶಿಬಿಂಬಗಳನ್ನು ಮುತ್ತಿದಂತೆ ಇತ್ತು. ೩೨. ಈ ಸೋಜಿಗವನ್ನೆಲ್ಲ ನೋಡುತ್ತಿದ್ದ ಪಾರ್ವತಿ ಹರ್ಷಗೊಂಡಳು. ಆಗ ತುಂಬಿವಿಂಡು ಹಾಡುತ್ತಿತ್ತು. ಸರೋಜಮುಖಿಯರಾದ ಆ ನೀರೆಯರು ತುಳ್ಳಾಡಿದರು, ಇಟ್ಟಾಡಿದರು,

ಕಂ॥ ಈತೆರದಿಂ ಜಲಕೇಳಿಯೊ
ಳೋತು ಮನಂಗೊಡಿ ನೋಡಿಯಾಡುತ್ತೆ ಜಗ।
ನ್ಮಾತೆ ಗಿರಿಜಾತೆ ಸುಖಿಸಂ
ಭೂತೆ ನುತಖ್ಯಾತೆ ಸರಸಿಯಂ ಪೊಱಮಟ್ಟಳ್ ॥ ೩೩.

ವ॥ ಅಂತು ಪೊಱಮಟ್ಟು ನವ್ಯದುಕೂಲಮನುಟ್ಟು ದಿವ್ಯಾಭರಣಮಂ ತೊಟ್ಟು ಸಂತಸಮಂ ಮುಂತಿಟ್ಟು ಸಕಳಕಳೆಗಳನೊಚ್ಚತಂಗೊಂಡು ನಿಶ್ಚಲಿತ ಚಿತ್ತೆಯುಚ್ಚಾಸನಮನೇಱಿ ವಿಲಾಸಿನಿಯರ್ ಕೆಲಬಲದೊಳ್ ನೆಲಸುಗ್ಗಡಿಸೆ ಪುರಾಭಿಮುಖಿಯಾಗಿ ಬರುತ್ತಮಿರೆ,

ಕಂ॥ ಇತ್ತಲ್ ತಮ್ಮೊಳ್ ನುಡಿದರ್
ವೃತ್ತಸ್ತನೆ ಗಿರಿಜೆಗುತ್ತರೋತ್ತರ ರೂಪಂ।
ಚಿತ್ತ ಘನಯೌವನ ಸಾ
ರುತ್ಪಿರ್ದಪುದೀ ವರಾಂಗನೆಗೆ ವರನಾರೋ ॥ ೩೪

ಈ ರೂಪಿಂಗೀಯೌವನ
ಕೀ ರಮಣೀಯಾಂಗಪತಿಗೆ ಮಿಗೆ ಸೌಂದರ್ಯ।
ಕ್ಕೀರಾಜಿಪ ಗಿರಿಜೆಯ ವಿ
ಸ್ತಾರಕ್ಕಂ ವರನನಿಂದುಧರನೇ ಬಲ್ಲಂ ॥ ೩೫

ವ॥ ಎಂದಿಂತು ನುಡಿಯುತ್ತೆ ಶರ್ವಾಣಿಯ ರೂಪಾತಿಶಯಕ್ಕೆ ಬೆಱಗಾಗಿ ಮೇನೆಯ ತಪಕ್ಕೆ ದಾಕ್ಷಾಯಿಣಿ ಕರುಣಿಸಿ ಬಂದಳೆಂಬುದನತ್ಯಾಶ್ಚರ್ಯದಿಂ ಮಱೆದು

ಈಸಾಡಿದರು. ೩೩. ಹೀಗೆ ಜಲಕೇಳಿಯಾಡಿ ನೋಡಿ ಸಂತಸಗೊಂಡ ಜಗನ್ಮಾತೆ ಗಿರಿಜೆ ಸರೋವರದಿಂದ ಹೊರಬಂದಳು. ವ॥ ಹೀಗೆ ಹೊರಬಂದು ಹೊಸ ಉಡುಪುಧರಿಸಿ ದಿವ್ಯಾಭರಣಗಳನ್ನು ಧರಿಸಿ ಸಂತಸದಿಂದ ಸಕಲಕಲಾವಿಭೂಷಿತೆಯಾಗಿ ನಿಶ್ಚಲಚಿತ್ತೆಯಾದ ಗಿರಿಜೆ ಯಾನದ (ಮೇನೆಯ) ಉಚ್ಚಾಸನದಲ್ಲಿ ಮಂಡಿಸಿ ವಿಲಾಸಿನಿಯರೊಡನೆ ಪುರಾಭಿಮುಖಿಯಾಗಿ ಬರುತ್ತಿದ್ದಾಳೆ. ೩೪. ಹೀಗೆ ಬರುತ್ತಿರುವಾಗ ಅವಳನ್ನು ಕಂಡ ಜನ ತಮ್ಮತಮ್ಮಲ್ಲಿ ಮಾತನಾಡಿಕೊಳ್ಳುತ್ತಿದ್ದರು. "ದಿನೇದಿನೇ ವೃತ್ತಸ್ತನೆ ಗಿರಿಜೆಗೆ ರೂಪ ಯೌವನ ಸಂಪತ್ತು ಬೆಳೆಯುತ್ತಿದೆ. ಈವರಾಂಗನೆಗೆ ತಕ್ಕ ವರನು ಯಾರು ?" ಎಂಬ ಚಿಂತೆ ಅವರದು. ೩೫. ಅವರು ಈ ರೂಪು, ಈ ಯೌವನ, ಈ ರಮಣೀಯವಾದ ಅಂಗಸೌಷ್ಠವ, ಈ ಸೌಂದರ್ಯಲಾವಣ್ಯಗಳಿಂದ ತುಂಬಿದ ಗಿರಿಜಾದೇವಿಗೆ ತಕ್ಕ ವರನು ಎಲ್ಲಿರುವನು ? ಅದನ್ನು ಪರಶಿವನೇ ಬಲ್ಲ ! ಎಂದು ಆಡಿಕೊಂಡರು. ವ॥ ಹೀಗೆಂದು ಶರ್ವಾಣಿಯ ರೂಪಾತಿಶಯಕ್ಕೆ ಬೆರಗಾದ ಆ ತಾಯಿ ತಂದೆಯರು ಹಿಂದೆ ಮೇನೆಯ ತಪಸ್ಸಿಗೆ ಮೆಚ್ಚಿದ ದಾಕ್ಷಾಯಿಣಿ ತಮ್ಮ ಉದರದಲ್ಲಿ ಅವತರಿಸಿರುವ ವಿಷಯವನ್ನೇ ಮರೆ

ಕಂ॥ ತಿಳಿಯದೆ ಮೇನಾಸತಿಯುಮ
ಚಳಪತಿಯುಂ ಚಿಂತಿಸುತ್ತುಮಿರೆಯಿರೆ ತೋಱ ।
ತ್ತಳವಲ್ಲದೆ ನಳನಳಿಸುತೆ
ತಳ ತಳಿಸುತೆ ಪೊಳೆದು ಬಳೆವ ಬೆಳಗಾಗಸದೊಳ್ ॥ ೩೬

ಚಂ॥ ಅಮೃತಮಯೂಖಮಂಡಲದಿನೇಳ್ತರುತಿರ್ಪ ಶಶಾಂಕಮೂರ್ತಿಯೋ
ಅಮರನದೀ ಪ್ರವಾಹದೊಳಗಿಂದೊಗೆತರ್ಪ ವಿಶಾಲ ಪುಣ್ಯಮೋ ।
ಪ್ರಮುದಿತ ಶೈವಕೀರ್ತಿ ಬರುತಿರ್ದಪುದೋ ಎನೆ ಬಂದನಳ್ಕಱಂ
ವಿಮಳ ವಿಶಾರದಂ ಘನಶರದ್ಘನ ಸನ್ನಿಭನೊಲ್ದು ನಾರದಂ । ೩೭

ಕಂ॥ ಇಳಿವ ಜಡೆ ಬಳೆವ ವೀಣಾ
ಕಳಸ್ವನಂ ಭಸಿತಗಾತ್ರಮುಜ್ವಳ ತೇಜಂ ।
ವಿಳಸನ್ಮಂಜುಳ ಮುಖಮಂ
ಡಳ ಚಂದ್ರಿಕೆಯೊಪ್ಪೆ ನಾರದಂ ನಡೆತಂದಂ ॥ ೩೮

ಬರೆ ಗಿರಿಪತಿಯುಂ ಸತಿಯುಂ
ವರಮುನಿಗತಿ ವಿನತರಾಗಿ ಭದ್ರಾಸನದೊಳ್ ॥
ಭರದಿಂ ಕುಳ್ಳಿರಿಸುತ್ತುಂ
ಚರಣಂದೊಳೆಯುತ್ತೆ ತೀರ್ಥಜಳಮಂ ತಳೆದರ್ ॥ ೩೯

ವ॥ ಅಂತು ತಳೆದು
ಕಂ॥ ಗುರುಮೂರ್ತಿ ಶೈವನಿಧಿ ಶಂ
ಕರಮೂರ್ತಿ ಕೃಪಾಪರೈಕವರ ಶಾಂತಿ ಸುಧಾ ।

ತರು, ಇದು ಸೋಜಿಗ, ೩೬. ಹೀಗೆ ಮೇನೆ ಮತ್ತು ಗಿರಿರಾಜರು ಯೋಚಿಸುತ್ತಿರುವಾಗ ಆಕಾಶದಲ್ಲಿ ಒಂದು ಬೆಳಕು ಕಾಣಿಸಿತು. ಆ ಬೆಳಗಿನೊಳಗೆ, ೩೭. ನಿರ್ಮಲನೂ,ಶರತ್ಕಾಲದ ಮೇಘದಂತೆ ಶುಭ್ರನೂ ಆದ ನಾರದನು ಸಂತೋಷದಿಂದ ಬಂದನು. ಬಂದ ರೀತಿಯನ್ನು ಕವಿ ಉತ್ಪ್ರೇಕ್ಷಿಸಿದ್ದಾನೆ. ನಾರದನು ಬಂದದ್ದು ಅಮೃತಕಿರಣಗಳ ಮಂಡಲದಿಂದ ಎದ್ದು ಬರುತ್ತಿರುವ ಚಂದ್ರಬಿಂಬವೋ,ದೇವಗಂಗೆಯ ಪ್ರವಾಹದೊಳಗಿನಿಂದ ಹುಟ್ಟಿಬರುವ ವಿಶೇಷ ಪುಣ್ಯವೊ, ಹರ್ಷಿತವಾದಶೈವ ಕೀರ್ತಿಯೇ ಬರುತ್ತಿದೆಯೋ ಎಂಬಂತೆ ಇತ್ತು. ೩೮. ಇಳಿಬಿದ್ದ ಜಡೆಗಳು, ಭಸ್ಮ ಧರಿಸಿದ ಶರೀರ, ಉಜ್ವಲ ತೇಜಸ್ಸು, ಮಂಜುಳ ಮುಖಮಂಡಲ, ಚಂದ್ರಿಕೆ ಒಪ್ಪಿ ವೀಣಾಕಲಸ್ವನ ಕೇಳುತ್ತಿರಲು ನಾರದ ಮುನಿ ಆಗಮಿಸಿದನು. ೩೯. ಮುನಿಯ ಆಗಮನದಿಂದ ಗಿರಿರಾಜದಂಪತಿಗಳು ಆನಂದಿಸಿದರು. ಅವರು ನಾರದನನ್ನು ಭದ್ರಾಸನದಲ್ಲಿ ಕುಳ್ಳಿರಿಸಿ, ಆತನ ಪಾದಗಳನ್ನು ತೊಳೆದು ತೀರ್ಥವನ್ನು ಶಿರಸ್ಸಿನಲ್ಲಿ ಪ್ರೋಕ್ಷಿಸಿಕೊಂಡರು. ೪೦. " ಗುರುಮೂರ್ತಿ, ಶೈವನಿಧಿ, ಕೃಪಾಕರ, ವರಶಾಂತಿ ಸುಧಾಕರಮೂರ್ತಿ,

ಕರಹಮೂರ್ತಿ ದೇವ ನಿಮ್ಮಯೆ
ಬರವಿಂದೆ ಕೃತಾರ್ಥರಾದೆವೆಂದಿಂತೆಂದರ್ ॥ ೪೦

ಮ॥ ಜಲವೆಂತಾದುದು ನಾಕಲೋಕಸುಖಮಂ ಬಿಟ್ಟೀ ಧರಾಮಂಡಲ
ಕ್ಕಿರದೀಂದೆಮ್ಮಯೆ ಪುಣ್ಯವೆಮ್ಮಜನನಂ ಸಾಫಲ್ಯಮೆಮ್ಮಿಂದೆ ವಿ ।
ಸ್ತರ ಸೌಖ್ಯಾಕರರಾರೆನುತ್ತೆ ನಲವಿಂ ಬಿನ್ನಯ್ಸುತಿರ್ಪನ್ನೆಗಂ
ಬರುತಿರ್ದಳ್ ಗಿರಿಜಾತೆ ಷೋಡಶ ಸಹಸ್ರ ಸ್ತ್ರೀಪರಿಸ್ಪಂದದೊಳ್ ॥ ೪೧

ಮ॥ ಸ್ರ॥ ಇದು ವಿದ್ಯುನ್ಮಾಲೆಯೋ ಚಂದ್ರಮನ ಕಮನ ಪೀಯೂಷ ದೀಪ್ತಿಸ್ವರೂಪೋ
ಮದನಾಸ್ತ್ರವ್ರಾತವೋ ನೂತನವನಲತಿಕಾನೀಕವೋ ನಾಕಲೋಕಾ ।
ಸ್ಪದ ನಾರೀಕ್ಷೀರವಾರಾಶಿಯೊ ಸುರುಚಿರ ಸೌಂದರ್ಯ ಸಂಘಾತವೋ ನೋ
ಡಿದು ತಾನೆಂಬಂತೆ ತೀವಿರ್ದಬಲೆಯರೊಳಗಿರ್ದಂಬಿಕಾ ಕಾಂತೆ ಬಂದಳ್ ॥ ೪೨

ಚಂ॥ ಸರಸಿಜ ನೇತ್ರೆ ಪುಣ್ಯಮಯಗಾತ್ರೆ ಸದಾಶಿವನಂಗ ಪಾತ್ರೆಯ
ತ್ಯುರುತರದಾನಿ ನಿರ್ಮಲ ಭವಾನಿ ನಿರಂತರಮಾನಿ ನವ್ಯಸೌಂ ।
ದರವರ ಮೂರ್ತಿ ಶರ್ವನ ಸುಕೀರ್ತಿ ಮಹೇಶ್ವರನರ್ತಿ ಬಂದಳೊ
ಪ್ಪಿರೆ ಗಿರಿಜಾತೆ ಲೋಕಚಯಮಾತೆ ಜಗಕ್ಕೆ ವಿನೂತೆಯಳ್ಕಱಿಂ ॥ ೪೩

ವ॥ ಇಂತು ಬಂದು ತಾರೆಗಳ ನಡುವಣ ತಾರಾಪತಿಯ ಕಳೆಯಂತೆ ಲತೆಗಳ ನಡುವಣ ಕಲ್ಪಲತೆಯಂತೆ ರತ್ನಂಗಳ ನಡುವಣ ಚಿಂತಾರತ್ನದಂತೆ ಧೇನುಗಳ ನಡುವಣ ಕಾಮಧೇನುವಿನಂತೆ ರುದ್ರಾಕ್ಷಗಳ ನಡುವಣೇಕಮುಖ ರುದ್ರಾಕ್ಷಿಯಂತೆ ಸಕಲಸ್ತ್ರೀಯರ ನಡುವೆ ಗಿರಿರಾಜತನೂಜೆ ವಿರಾಜಿಸುತಿರ್ದು

ಸ್ವಾಮಿ ನೀವು ದಯೆಮಾಡಿದುದರಿಂದ ನಾವು ಕೃತಾರ್ಥರಾದೆವು ಎಂದು ರಾಜದಂಪತಿಗಳು ಬಿನ್ನೈಸಿದರು. ೪೧. "ತಾವು ನಾಕಲೋಕ ಸುಖವನ್ನು ಬಿಟ್ಟು ಈ ಭೂಲೋಕಕ್ಕೆ ಬಂದ ಕಾರಣವೇನು ? ತಮ್ಮ ಆಗಮನದಿಂದ ನಮ್ಮ ಜನ್ಮ ಸಫಲವಾಯಿತು ; ನಾವೇ ಪುಣ್ಯವಂತರು ; ಈ ವಿಷಯದಲ್ಲಿ ನಮಗಿಂತ ಪುಣ್ಯವಂತರು ಇನ್ನಾರು ಇದ್ದಾರೆ?" ಎಂದು ವಿನಯದಿಂದ ನಿವೇದಿಸುತ್ತಿರುವಾಗ ಗಿರಿಜಾತೆ ಸ್ತ್ರೀಪರಿವಾರದೊಡನೆ ಬಂದಳು. ೪೨. ಬರುತ್ತಿರುವ ಅಬಲೆಯರ ಮಧ್ಯದಲ್ಲಿ ಬರುತ್ತಿದ್ದ ಅಂಬಿಕೆ ಮಿಂಚುಗಳ ಮಾಲೆಯೊ, ಚಂದ್ರನ ಅಮೃತದೀಪ್ತಿಯೊ, ಮನ್ಮಥನ ಅಸ್ತ್ರವೊ ನೂತನ ವನಲತೆಗಳ ಸಮೂಹವೊ, ನಾಕಲೋಕಕ್ಕೆ ಅರ್ಹವಾದ ಸ್ತ್ರೀಯರ ಪಾಲ್ಗಡಲೊ, ಸೌಂದರ್ಯ ಸಂದಣಿಯೊ ಎಂಬಂತೆ ಕಂಡಳು. ೪೩. ಕಮಲನೇತ್ರೆ, ಪುಣ್ಯಗಾತ್ರೆ, ಸದಾಶಿವನ ಪ್ರೇಯಸಿ, ಇಷ್ಟಾರ್ಥವನ್ನು ಕೊಡುವದಾನಿ, ವಿನೂತನ ಸುಂದರಿ, ಪರಶಿವಸುಕೀರ್ತಿ ಪವಿತ್ರಳಾದ ಭವಪತ್ನಿ ಜಗನ್ಮಾತೆ ಬಂದಳು. ವ॥ ನಾರಿಯರ ಮಧ್ಯದಲ್ಲಿದ್ದ ಅಗಜಾತೆ ತಾರೆಗಳ ಮಧ್ಯೆ ಇರುವ ಚಂದ್ರ

ಕಂ॥ ಸುರುಚಿರ ಪೂರ್ವಾಚಳದೊಳ್
ಗುರುತರ ಪೂರ್ಣೇಂದುವುದಯಿಪಂತಿರೆ ರಾತ್ರೀ ।
ಶ್ವರವದನೆ ಗಿರಿಜೆ ಭರದಿಂ
ಗಿರಿರಾಜನ ತೊಡೆಯ ಮೇಲೆ ಬಿಜಯಂಗೆಯ್ದಳ್ ॥ ೯೪

ವ॥ ಆ ಸಮಯದೊಳ್

ಸ್ರ॥ ಕಂಡಷ್ಟಾಂಗಪ್ರಣಾಮಂಬೆರಸು ಹರಿಸದಿಂ ನಾರದಂ ಭೀತಿಯಂ ಕೆಯ್
ಕೊಂಡಿಷ್ಟಾರ್ಥಪ್ರದೈಕಪ್ರಭೆಗೆ ವಿಭವದಿಂದಂ ನವಾಶ್ಚರ್ಯ ಪೂರ್ವಂ ॥
ಹಿಂಡೆಳ್ವಾನಂದ ರೋಮಾಂಚದ ಪೊದಕೆಗಳಂ ತಾಳ್ದು ನಿಂದಿರ್ದು ತಾಯೇ
ಚಂಡಾಂಶುವ್ರಾತ ತೇಜೋನಿಧಿ ಶರಣೆನುತಂ ಸ್ತೋತ್ರಮಂ ಮಾಡುತಿರ್ದಂ ॥ ೪೫

ಕಂ॥ ಶ್ರೀನಿಧಿ ಶಾಂಕರಿ ಶೈವ
ಜ್ಞಾನಿ ಸದಾವರದೆ ಭುವನ ಭರಿತೆ ಭವಾನೀ ।
ಮಾನಿನಿ ಮಾತೆ ಮಹೇಶ
ಧ್ಯಾನಿ ಮಹಾದಾನಿ ನೀನೆ ಶರಣೆನುತಿರ್ದಂ ॥ ೪೬

ಇಂತಿಂತು ಬಣ್ಣಿಸುತ್ತುಂ
ಮುಂತಿರ್ದಗರಾಜ ಸುತೆಯನುಚ್ಚಾಸನದೊಳ್ ।
ಸಂತಂ ಬಿಜಯಂಗೆಯ್ಸು
ತ್ತುಂ ತಣಿಯದೆ ಮತ್ತೆ ನಾರದಂ ನುತಿಗೆಯ್ದಂ ॥ ೪೭

ಕಳೆಯಂತೆ, ಲತೆಗಳ ನಡುವೆ ಇರುವ ಕಲ್ಪಲತೆಯಂತೆ, ರತ್ನಗಳ ಮಧ್ಯದ ಚಿಂತಾರತ್ನದಂತೆ, ಆಕಳುಗಳ ನಡುವೆ ಕಾಮಧೇನುವಿನಂತೆ, ರುದ್ರಾಕ್ಷಿಗಳ ನಡುವೆ ಏಕಮುಖ ರುದ್ರಾಕ್ಷದಂತೆ ವಿರಾಜಿಸುತ್ತಿದ್ದಳು. ೪೪. ಮುದ್ದು ಕುವರಿ ಇಂದುಮುಖಿ ಅಗಜೆ ಬಂದು ಗಿರಿರಾಜನ ತೊಡೆಯ ಮೇಲೆ ಕುಳಿತಳು. ಅದು ಪೂರ್ವಾಚಲದ ಮೇಲೆ ಪೂರ್ಣಚಂದ್ರನು ಉದಯಿಸಿದಂತೆ ಇತ್ತು. ೪೫. ಅಂಬಿಕೆಯನ್ನು ಕಂಡಕೂಡಲೇ ನಾರದ ಮುನಿ ಎದ್ದು ಕೈಮುಗಿದು ಭಕ್ತಿಯಿಂದ ಸಾಷ್ಟಾಂಗಪ್ರಣಾಮ ಮಾಡಿದನು. ಆಗ ಅವನಿಗೆ ಉಂಟಾದ ಹರ್ಷದಿಂದ ಮೈರೋಮಾಂಚಿತವಾಯಿತು. ಭಯಭಕ್ತಿಯಿಂದ " ತಾಯೇ, ತೇಜೋನಿಧಿ, ಶರಣು " ಎಂದು ಮುಂತಾಗಿ ಸ್ತುತಿಸುತ್ತಿದ್ದನು. ೪೬. ಹೇದೇವಿ, ನೀನು ಮಂಗಳಕ್ಕೆ ಗಣಿ, ಶಂಕರಪ್ರಿಯೆ, ಶಿವಜ್ಞಾನಿ, ಸದಾ ವರವನ್ನು ನೀಡುವವಳು, ಜಗತ್ತನ್ನೆಲ್ಲ ತುಂಬಿರುವವಳು, ಮಹೇಶಧ್ಯಾನಶೀಲೆ, ಶರಣು " ಎಂದು ಸ್ತುತಿಸುತ್ತಿದ್ದನು ನಾರದ. ೪೭. ಹೀಗೆ ಬಗೆ ಬಗೆಯಾಗಿ ಸ್ತುತಿಸಿ ಅಗಸುತೆಯನ್ನು ಉಚ್ಚಾಸನದಲ್ಲಿ ಬಜಯಂಗೆಯ್ಸಿ ನಾರದ ಮತ್ತೆ ಸ್ತುತಿಸ

ಕಂ॥ ತಾಯೇ ಶವರೇ ತ್ರಿಭುವನ
ದಾಯುವೆ ಜಗದುಸಿರೆ ಜಗದ ಕಣ್ಣೆ ಜಗನ್ನಿ ॥
ರ್ಮಾಯಾನಿಧಿಯೇ ಸುಧಿಯೇ
ಕಾಯೆನ್ನಂ ಕರುಣದಿಂದೆ ಫಲಹೆನುತಿರ್ದಂ ॥ ೪೮

ವ॥ ಎಂದಿಂತಾರ್ತದಿಂ ಸ್ತೋತ್ರಂಗೆಯ್ಯೆ ಕೇಳ್ದು ಕೌತುಕಂದಾಳ್ದು ಗಿರಿರಾಜನುಂ ಮೇನೆಯುವಿರ್ದಲೆಲೆ ಮುನೀಂದ್ರಾ ನಿಮ್ಮಡಿಗಳು ನೊಚ್ಚತಂಗೊಂಡುಚ್ಚಾಸನದೊಳಿರಿಸಿ ಪಾದೋದಕಮನಾದರದಿಂ ಕೊಂಡು ಅತಿ ಪರ್ಷದಿಂ ಕೃತಾರ್ಥರಾದೆವಲ್ಲದೆಮ್ಮ ಮಗಳ್ಗೆ ನಿಮ್ಮಡಿಗಳ್ ವಂದನಂಗೆಯ್ವುದತ್ಯಾಶ್ಚರ್ಯವೆಂದಜ್ಞಾನದಿಂ ನುಡಿಯೆ ದಿವ್ಯಜ್ಞಾನಿ ನಾರದಂ ನಸುನಗುತ್ತುಮಿಂತೆಂದಂ

ಕಂ॥ ಸುರರಱಿಯರಿಂದ್ರನಱಿಯಂ
ಹರಿಕಮಲಜರಱಿಯರಖಿಲ ಮನುಗಳ್ ಮುನಿಗಳ್ ।
ಕರಮಱಿಯರೆಂದೊಡಗಜೆಯ
ಚರಣಾಬ್ಜಕ್ಕೆಱಗಲಿಳೆಯೊಳಾನೆನಿತಱವಂ ॥ ೪೯

ಮ॥ ಸ್ರ॥ ನೆವದಿಂದಂ ನಿಮ್ಮ ಪುಣ್ಯೋದರದೊಳೊಗೆದೊಡೀ ಬಾಲೆಯುಂ ಪುತ್ರಿಯೆಂಬೊಂ
ದವಿಚಾರಂ ಬೇಡ ನೀವೇ ಜನನಿಜನಕರಲ್ಲಲ್ಲದಂತಿರ್ಕೆ ತಾಯೇ ।
ನವರತ್ನಕ್ಕಬ್ಧಿ ಚಿಂತಾಮಣಿಗೆ ವೊರಡಿ ಮುತ್ತಿಂಗೆ ಸಿಂಪಿಂದುವಿಂಗಂ
ರವಿಗಂ ಪೂರ್ವಾಶೆ ಲಿಂಗಕ್ಕವನಿ ಸುಧೆಗೆ ದುಗ್ಧಾಬ್ಧಿ ಪದ್ಮಕ್ಕೆ ಪಂಕಂ ॥ ೫೦

ವ॥ ಮತ್ತಮಲ್ಲದೆ

ತೊಡಗಿದನು. ೪೮. ಪಾರ್ವತಿಯನ್ನು ಸಾರ್ಥಕವಾದ ಬಹುವಿಧ ವಿಶೇಷಣಗಳಿಂದ ಸ್ತುತಿಸಿದನು. ವ || ಹೀಗೆ ನಾರದನು ತಮ್ಮ ಮಗಳು ಅಗಜೆಗೆ ವಂದಿಸಿ ಸ್ತುತಿಸಿದುದನ್ನು ಕಂಡ ತಂದೆತಾಯಿಗಳಿಗೆ ಸೋಜಿಗವಾಯಿತು. ಅವರು "ಎಲೆಮುನೀಂದ್ರಾ ನೀವು ಹಿರಿಯರು, ತಪಸ್ವಿಗಳು, ಮೇಲಾಗಿ ದಿವ್ಯಜ್ಞಾನಿಗಳು; ನಿಮ್ಮನ್ನು ಮೇಲೆ ಕೂಡಿಸಿ, ಪಾದತೊಳೆದು ನಾವು ತೀರ್ಥ ತೆಗೆದುಕೊಳ್ಳುವುದು ಉಚಿತ, ಆದರೆ ನೀವೇ ನಮ್ಮ ಮಗಳಿಗೆ ಹೀಗೆ ವಂದನಾದಿಗಳನ್ನು ಮಾಡುತ್ತಿರುವುದು ಅತ್ಯಾಶ್ಚರ್ಯ!" ಎಂದು ಅವರು ಅಜ್ಞಾನದಿಂದ ಬೆಸಗೊಂಡರು. ೪೯. "ಅಯ್ಯ ಗಿರಿರಾಜ, ಈ ದೇವಿಯ ರಹಸ್ಯವನ್ನು ದೇವತೆಗಳಾಗಲಿ, ಇಂದ್ರಹರಿಬ್ರಹ್ಮಾದಿಗಳಾಗಲಿ, ಮನುಗಳಾಗಲಿ ಅರಿಯರು. ಅಂದ ಮೇಲೆ ಈಕೆಯ ಪಾದಕಮಲಗಳಿಗೆ ಎರಗಲು ನಾನು ಎಷ್ಟರವನು." ಎಂದು ನಾರದನು ದೇವಿಯ ಮುಂದೆ ವಿಜ್ಞಾಪಿಸಿದನು. ೫೦. "ಗಿರಿರಾಜ, ಯಾವುದೊ ಒಂದು ನೆಪದಿಂದ ಈಕೆ ನಿಮ್ಮ ಪುಣ್ಯೋದರದಲ್ಲಿ ಜನಿಸಿದಳು. ಆದರೆ ಈಕೆ ನಮ್ಮ ಮಗಳು ಎಂಬ ಭ್ರಾಂತಿ

ಕಂ॥ ಮೇನೆಯೆ ನಿನ್ನ ತಪಕ್ಕತಿ
ಮಾನಿ ಮಹಾದೇವಿ ಕರುಣದಿಂ ನಿನ್ನುದರ।
ಸ್ಥಾನದೊಳಂ ಜನಿಯಿಸೆ ಸು
ಜ್ಞಾನಿಯನೆಲೆ ಪುತ್ರಿಯೆಂಬರೇ ಧಾಶಿಣಿಯೊಳ್ ॥ ೫೧

ಶಿವನ ಸುಧೆ ಶಿವನ ಜೀವಂ
ಶಿವನಾನಂದಂ ಸದಾಶಿವವ ಘನಪುಣ್ಯಂ।
ಶಿವನ ಸುಖಂ ಶಿವನ ಮುಖಂ
ಶಿವನಾಯು ಗಿರೀಂದ್ರ ಗಿರಿಜೆಯಂ ಸುತೆಯೆಂಬಯ್ ॥ ೫೨

ದಕ್ಷನ ಶಿವನಿಂದೆಗೆ ಕಮ
ಲಾಕ್ಷಿಮಹಾದೇವಿ ಸೆಡೆದು ನಿಜಯೋಗದೊಳಿಂ।
ತಕ್ಷಯ ನಿಧಿ ಮೇನೆಗೆ ಕರು
ಣೇಕ್ಷಣೆಯಾಗುತ್ತೆ ಬಂದುದಂ ಭಾವಿಸಿರೇ ॥ ೫೩

ಅದುಕಾರಣದಿಂ ಮುನ್ನಮೆ
ಮೊದಲಿಂ ಹರನರಸಿ ಗಿರಿಶನರ್ಧಾಂಗಿ ವರ।
ಪ್ರದೆ ವರನೀಶ್ವರನೀಕೆಗೆ
ಮುದದಿಂ ಶಿವನಲ್ಲಿಗಿರದೆ ಕಳಿಪುವುದುಚಿತಂ ॥ ೫೪

ನಿಮಗೆ ಬೇಡ, ನೀವು ಈಕೆಗೆ ಜನನೀ–ಜನಕರು ಎಂಬುದು ಕೇವಲ ಒಂದು ಸಂಕೇತ–ಹೇಗೆ ನವರತ್ನಗಳ ಉದಯಕ್ಕೆ ಸಮುದ್ರವೂ, ಚಿಂತಾಮಣಿಗೆ ಕಲ್ಲುಮೊರಡಿಯೂ, ಮುತ್ತಿಗೆ ಚಿಪ್ಪೂ, ರವಿ–ಶಶಿಗಳಿಗೆ ಪೂರ್ವದಿಕ್ಕೂ, ಲಿಂಗಕ್ಕೆ ನೆಲವೂ, ಅಮೃತಕ್ಕೆ ಪಾಲ್ಗಡಲೂ, ಕಮಲಕ್ಕೆ ಕೆಸರೂ ಕಾರಣವಾಗಿರುವುವೋ ಆ ಮಟ್ಟದಲ್ಲಿ ಮಾತ್ರವೇ ನೀವೂ ಆಕೆಯ ತಂದೆತಾಯಿಯರು." ಎಂದ. ೫೧. ಎಲೌ ಮೇನೆ, ನಿನ್ನ ತಪಸ್ಸಿಗೆ ಮೆಚ್ಚಿ ಸಾಕ್ಷಾತ್ ಜ್ಞಾನನಿಧಿಯಾದ ಮಹಾದೇವಿಯೇ ನಿನ್ನ ಉದರದಲ್ಲಿ ಜನಿಸಿದ್ದಾಳೆ. ಅವಳನ್ನು ಮಗಳು ಎಂದು ಭ್ರಮಿಸಬಹುದೆ? ೫೨–೫೩. ಶಿವನ ಜೀವ, ಶಿವನ ಆನಂದ, ಸದಾಶಿವನ ಪುಣ್ಯ, ಶಿವನ ಆಯುಪಾಗಿರುವ ಈಕೆಯನ್ನು ನಿನ್ನ ಮಗಳು ಎಂದು ಹೇಳುವಿಯ? ಹಿಂದೆ ದಕ್ಷ ತಾನು ಕೈಕೊಂಡ ಯಾಗಕ್ಕೆ ಕರೆಯದೆ ತನ್ನ ಸುತೆ ಬಂದ ಭವಾನಿಯನ್ನು ಕಂಡು ಶಿವನಿಂದೆ ಮಾಡಿದ. ಪತಿನಿಂದೆಯನ್ನು ಕೇಳಲಾರದೆ ಶಿವೆ ನಿಜಯೋಗಾಗ್ನಿಗೆ ತನ್ನ ತನುವನ್ನು ಈಡಾಡಿದಳು. ಮತ್ತೆ ಈ ಮೇನೆ ಆ ದೇವಿಯನ್ನು ಕುರಿತು ತಪಸ್ಸು ಮಾಡಲು ಆಗ ಪ್ರತ್ಯಕ್ಷಳಾದ ದೇವಿ ನಿನ್ನ ಉದರದಲ್ಲಿ ಜನಿಸುವುದಾಗಿ ಅಭಯವನ್ನು ಇತ್ತುದನ್ನು ನೆನೆ. ೫೪. ಆ ಕಾರಣದಿಂದ ಪರಶಿವನ ಅರ್ಧಾಂಗಿ, ಪರಪ್ರದೆ, ಈಕೆಗೆ ಪರಶಿವನೇ ವರ; ಆದ್ದರಿಂದ ಇವಳನ್ನು ಶಿವ

ಕಂ॥ ಗಿರಿಸುತೆ ಬಳೆವನ್ನವರಂ
ಹರನಿರ್ದಪನೊಲ್ದು ಹೇಮಕೂಟಸ್ಥಳದೊಳ್ ।
ಪರಿಪೂರ್ಣಪರಂಜ್ಯೋತೀ
ಸ್ವರೂಪ ನಿಜಯೋಗ ಭೋಗರಾಗೋನ್ನತಿಯಂ ॥ ೫೫

ವ॥ ಎಂದಿಂತತರ್ಕ್ಯ ಮುನಿಹಿತೋಪದೇಶಮಂ ಪೇಳ್ದು ಗಿರಿಜೆಯ ಪರಮ ಲಾವಣ್ಯಾವಯವಂಗಳಂ ಕಂಡು ನೋಡಲಣ್ಮದೆ ಪೊಡಮಡುತ್ತೆ ಮತ್ತಮಿಂತೆಂದಂ,

ಕಂ॥ ಈ ಗಿರಿಜೆಯ ನವಯೌವನ
ಮೀಗಿರಿಜೆಯ ರೂಪವಿಭವಮೀ ಗಿರಿಜೆಯ ಸೌ
ಖ್ಯಾಗಮವೀ ಗಿರಿಜೆಯ ನಿಜ
ರಾಗಂ ಶಂಕರನ ಚಿತ್ತಮಂ ಚಿಗುರಿಸದೇ ॥ ೫೬.

ಚಂ॥ ಪರನ ಮನೋಹರಂ ಗಿರಿಜೆಯೀನಡೆಯೀ ನುಡಿಯೀ ವಿಳಾಸವೀ
ತರಳಕಟಾಕ್ಷವೀ ಪರಿಮಳಾಕೃತಿಯೀ ದರಹಾಸವೀ ಸುಖಾ ।
ವರಣತೆಯೀ ಸಲಕ್ಷಣತೆಯೀ ಸೊಬಗೀ ಮಧುರಸ್ವಭಾವವೀ
ಸುರುಚಿರಕಾಂತಿಯೀ ಪರೆಯವೀ ಸುಕುಮಾರತೆಯೀ ಸುಧಾಮಯಂ ॥ ೫೭.

ಮ॥ ಉರಮಿಂಬಿಲ್ಲ ಪಯೋಧರದ್ವಯದಕೊರ್ಬಿಂಗಾಸ್ಯಮಿಂಬಿಲ್ಲ ಭಾ
ಸುರ ನೇತ್ರದ್ವಿತಯ ಪ್ರಚಾರತೆಗೆ ಬೆನ್ನಿಂಬಿಲ್ಲ ಧಮ್ಮಿಲ್ಲ ಬಂ ।
ಧುರ ಸೀಮಾವಳಯಕ್ಕೆ ನೋಡ ನಡುವಿಂಬಿಲ್ಲೊಪ್ಪುವೀ ಬಾಸೆಗೆ
ಗಿರಿಜಾಯೌವನ ಸಂಪದಕ್ಕೆ ತನುವೆಂತಿಪ್ಪುದೋ ರುದ್ರನಾ ॥ ೫೮

ನಲ್ಲಿಗೇ ಕಳುಹಿಸುವುದು ಉಚಿತ ಎಂದನು. ೫೫. ಈಕೆ ಬೆಳೆದು ದೊಡ್ಡವಳಾಗುವರೆಗೆ ಪರಿಪೂರ್ಣ, ಪರಂಜ್ಯೋತಿ, ಸ್ವರೂಪನಾದ ಹರನು ನಿಜಯೋಗ ಭೋಗರಾಗೋನ್ನತಿಯಲ್ಲಿ ಹೇಮಕೂಟದಲ್ಲಿರುತ್ತಾನೆ ವ॥ ಹೀಗೆ ನಾರದನು ಅವರಿಗೆ ಹಿತೋಪದೇಶವನ್ನು ಮಾಡಿ, ಅವಳ ಅಂಗ ಸೌಷ್ಠವವನ್ನು ಕಂಡು ಮತ್ತೆ ನಮಿಸಿ ಹೀಗೆಂದನು: ೫೬. ಈ ಅಗಜೆಯ ನವಯೌವನ,ಇವಳ ರೂಪ ವೈಭವ, ಈಕೆಯ ಸೌಂದರ್ಯಾತಿಶಯವನ್ನು ಶಂಕರನಚಿತ್ತವನ್ನು ಚಿಗುರಿಸದೆ ಬಿಡುವುದೆ! ಎಂದುಕೊಂಡ. ೫೭. ಪರಶಿವನಿಗೆ ಅತಿಮನೋಹರವಾದ ಇವಳ ನಡೆ–ನುಡಿ, ವಿಲಾಸ, ಚಂಚಲ ಕಟಾಕ್ಷ, ಪವಿತ್ರವಾದ ಆಕಾರ, ನಸುನಗೆ, ಸಲಕ್ಷಣತೆಗಳು ಈ ಸೊಬಗು, ಈ ಮಧುರ ಸ್ವಭಾವ, ಸುರುಚಿರಕಾಂತಿ ಮತ್ತು ಎಳೆಪ್ರಾಯ ಹಾಗೂ ಸುಧಾಮಯವಾದ ಸೌಕುಮಾರ್ಯಗಳು ಹರನಿಗೆ ಮನೋಹರವಲ್ಲವೆ? ೫೮. ಛೆ! ಇವಳ ಪಯೋಧರದ್ವಯದ ಉಬ್ಬಿಗೆ ಎದೆಯೇ ಸಾಲದು! ಪ್ರಕಾಶಿಸುವ ನೇತ್ರದ್ವಯದ ವಿಸ್ತಾರಕ್ಕೆ ಮುಖಕಮಲವೂ ಸಾಲದು! ಇವಳ ಕೇಶಪಾಶಗಳು ಹರ

ಕಂ॥ ಇಂತೊಪ್ಪುವ ಜವ್ವನೆಯುಂ
ಶಾಂತೆಯನಖಿಳೈಕಮಾತೆಯುಂ ಶಂಕರವೇ ।
ಕಾಂತದ ಸುಖಮಂ ಸ್ತ್ರೀಮಾ
ತ್ರಂ ತನುಜೆಯೆನಿಪ್ಪ ಬಗೆಯನುಳಿ ಗಿರಿರಾಜಾ ॥ ೫೯

ನಿನಗಱಿಪಲ್ ಬಂದೆಂ ಶ
ರ್ವನ ವಧು ಶರ್ವಾಣಿಯೆಂದು ನಗಜೆಯ ನಗರಾ ।
ಜನೆ ಕೇಳ್ ಭರದಿಂ ಕೈಲಾ
ಸನಗಕ್ಕಾಂ ಪೋದಪೆನೆಂದು ನಾರದನೆಂದಂ ॥ ೬೦

ಎನೆ ಕೇಳ್ದು ಶೈಳರಾಜಂ
ವಿನಯುಂ ಬೆರಸಗಜೆಗೆಂದು ಕೆಯ್ಮುಗಿಯುತ್ತುಂ ।
ಮನದೊಳ್ ಬೆಱಗಾಗುತ್ತುಂ
ಘನ ಶೈವಾಂಬುನಿಧಿಗೆ ನಾರದಂಗಿಂತೆಂದಂ ॥ ೬೧

ಶಾ॥ ನೀವೆಂದಂತೆ ಭವಾನಿಯುಂ ಮಱೆದು ಪುತ್ರೀಭಾವಮಂ ತಾಳ್ದಿವಿ
ನ್ನೀವೇಳ್ವಿಂ ಮರುಳಾಗುತಿರ್ದೆಮಗೆ ನಿಮ್ಮಾಬೋಧೆಯಿಂ ಜ್ಞಾನ ಸ
ದ್ಭಾವಂ ಪುಟ್ಟಿದುದಿಂಪಿನಿಂ ಪರಸುತಂ ಪಂಪಾವಿರೂಪಾಕ್ಷನಿ
ರ್ಪಾವಾಸಕ್ಕಿರದುಯ್ದು ತೋಱಿದಪೆನೀ ಶರ್ವಾಣಿಯಂ ಜಾಣೆಯಂ ॥ ೬೨

ಡಲು ಬೆನ್ನು ಏನೇನೂ ಸಾಲದು! ರೋಮ ರಾಜಿಯ ವ್ಯಾಪ್ತಿಗೆ ನಡು ಏನೇನೂ ಸಾಲದು! ಅಂದಮೇಲೆ ಈಕೆಯ ಯೌವನ ಸಂಪದಕ್ಕೆ ಆ ರುದ್ರನ ತನು ಹೇಗೆ ತಾನೆ ಸುಮ್ಮನೆ ಇದ್ದೀತು ! ಎಂದುಕೊಂಡ ನಾರದ. ೫೯. ಎಲೈ ಗಿರಿರಾಜ, ಇಂಥ ಯೌವನವತಿ, ಲೋಕಮಾತೆ, ಪರಶಿವನ ಏಕಾಂತ ಸುಖವೆನಿಸಿರುವ ಈಕೆಯನ್ನು ಉಳಿದ ಸ್ತ್ರೀಯರಂತೆ ಮಗಳೆಂದು ಬಗೆಯುವುದೇ ? ೬೦. ಈ ವಿಷಯವನ್ನು ನಿನಗೆ ತಿಳಿಸುವುದಕ್ಕಾಗಿಯೇ ನಾನು ಬಂದದ್ದು. ಈಕೆ ಶರ್ವನ ವಧು ಶರ್ವಾಣಿ ! ಎಂದು ತಿಳಿದುಕೊ ! ನಾನು ಈಗಲೇ ಕೈಲಾಸಪರ್ವತಕ್ಕೆ ತೆರಳುತ್ತಿದ್ದೇನೆ ಎಂದು ನಾರದ ಹೇಳಿದ. ೬೧. ಅದನ್ನು ಕೇಳಿ ಗಿರಿರಾಜನು ವಿನಯದಿಂದ ಅಗಜೆಗೆ ಕೈಮುಗಿದ. ಮನದಲ್ಲಿ ಸೋಜಿಗಗೊಂಡು ನಾರದನಿಗೆ ಹೀಗೆಂದ. ೬೨. “ ನಿಜ, ನೀವು ಹೇಳಿದಂತೆ ನಾವು ಭವಾನಿ ಎಂಬುದನ್ನು ಮರೆತಿದ್ದೆವು. ಅವಳು ನಮ್ಮ ಮಗಳೆಂದೇ ಭ್ರಮಿಸಿದ್ದೆವು. ನಿಮ್ಮ ಬೋಧೆಯಿಂದ ನಮಗೆ ಜ್ಞಾನೋದಯವಾಯಿತು. ಈಗ ಜಾಣೆಯಾದ ಈಕೆಯನ್ನು ಪಂಪಾವಿರೂಪಾಕ್ಷನಿರುವ

ಕಂ॥ ನೀವಿಂದೆಮ್ಮರಮನೆಯೊಳ್
ದೇವಾರ್ಚನಂಗೆಯ್ದು ನಾಳೆಪೋಪುದೆನುತ್ತುಂ ।
ತೀವಿರ್ದ ಮೃದು ಮಧುರ ವಾ
ಕ್ಯಾವಳಿಯಿಂ ನಾಡೆ ಬೇಡಿಕೊಂಡಂ ಭೂಪಂ ॥ ೬೩

ವ॥ ಇಂತು ಬೇಡಿಕೊಳುತ್ತುವಿರೆ,

ಚಂ॥ ನಗಪತಿಯೆಂದುದಂ ಸಲಿಸಿ ನಾರದನಾತನ ಕೂಡೆ ರುದ್ರನಂ
ಮೃಗಧರ ಚೂಡನಂ ಶಿವನನರ್ಚಿಸಿ ತತ್ಪರಮಪ್ರಸಾದದಿಂ ।
ಮಿಗೆ ತಣಿದಿರ್ದರುಂ ಕನಕ ಪೀಠದೊಳಿರ್ಪಿನಮಿತ್ತಲತ್ತಲಾ
ಖಗನ ತುರಂಗಮಯ್ದಲಣಮಿರ್ದುವು ಪಶ್ಚಿಮ ಪರ್ವತಾಗ್ರಮಂ ॥ ೬೪

ವ॥ ಆ ಸಮಯದೊಳ್

ಅದು ಪೂರ್ವಾಂಗನೆಯಿಡೆ ನೆಗೆ
ದೊದೆವುತೆ ಬೆಳ ಬೆಳಗುತೆಯ್ದಿ ಪಶ್ಚಿಮಶೈಲಾ ।
ಗ್ರದ ಮೇಲೆ ಬಿಳ್ದ ಮಾಣಿ
ಕ್ಯದ ಕಂತುಕದಂತಿರೆಸೆದುದರ್ಕನ ಬಿಂಬಂ ॥ ೬೫

ವ॥ ಆ ಸಮಯದೊಳ್

ಚಂ॥ ಅರೆಮುಗಿವಬ್ಜಮುಳ್ಳಲರ್ವಕೈರವಮಾಕುಲಿಪಾ ಮಧುವ್ರತಂ
ಕೊರಗುವ ಕೋಕಮುತ್ಸವಿಪ ಜಾರತೆಯರೊಂದೆರಡೇಳ್ವಮಿನ್ಗಳಂ ।
ಕುರಿಪ ತಮಂಧಮಳ್ಕುಱೊಳೆ ಪಕ್ಕೆಗೆಸಾರ್ವವಿಹಂಗವೀಥಿ ಚೇ
ತರಿಸುವ ಮಾರುತಂ ನಸುಕಲಂಕುವ ಸಾಂಧ್ಯಮಯೂಖಲೇಖೆಗಳ್ ॥ ೬೬

ಹೇಮಕೂಟಕ್ಕೆ ಕೊಂಡೊಯ್ಯುವೆನು." ೬೩. ನೀವು ಈ ದಿನ ನಮ್ಮ ಅರಮನೆಯಲ್ಲಿ ಶಿವಾರ್ಚನೆಮಾಡಿ ನಾಳೆ ದಯೆಮಾಡಿಸಬೇಕು ಎಂದು ರಾಜನು ನಾರದ ಮುನಿಗಳನ್ನು ಮೃದು ಮಧುರವಾದ ಮಾತುಗಳಿಂದ ಕೇಳಿಕೊಂಡನು. ೬೪. ಗಿರಿರಾಜನ ಅಪೇಕ್ಷೆಯಂತೆ ನಾರದನು ಆ ದಿನ ಅಲ್ಲಿಯೇ ಉಳಿದು ರಾಜನೊಂದಿಗೆ ಶಿವಾರ್ಚನೆಯೆಸಗಿ ಶಿವ ಪ್ರಸಾದವನ್ನು ಸ್ವೀಕರಿಸಿದನು. ತರುವಾಯ ಇಬ್ಬರೂ ಕನಕ ಪೀಠಗಳಲ್ಲಿ ಕುಳಿತಿರುವಾಗ ಸಂಜೆಯಾಯಿತು. ಸೂರ್ಯನ ಕುದುರೆಗಳು ಆಗಲೇ ಪಶ್ಚಿಮ ಗಿರಿಯನ್ನು ಏರಿದ್ದವು! ೬೫. ಸೂರ್ಯಬಿಂಬವು ಪಶ್ಚಿಮ ಶೈಲದ ಶಿಖರದ ಮೇಲೆ ಇದ್ದುದನ್ನು ನೋಡಿದರೆ ಅದು ಪೂರ್ವದಿಗಂಗನೆಯು ಎಸೆದ ಮಾಣಿಕ್ಯದ ಚೆಂಡು ಪುಟನೆಗೆದು ಬೆಳಬೆಳಗುತ್ತ ಬಂದು ಪಶ್ಚಿಮ ಶಿಖರದ ಮೇಲೆ ಬಿದ್ದಿದೆಯೊ ಎಂಬಂತೆ ಇತ್ತು. ೬೬. ಅರ್ಧಮುಚ್ಚಿದ ತಾವರೆ ಅರಳುವುವರಲ್ಲಿರುವ ನೈದಿಲೆ, ವ್ಯಾಕುಲಗೊಂಡಿರುವ ದುಂಬಿಗಳು, ಕೊರಗುವ ಕೋಕಪಕ್ಷಿ

ಕಂ॥ ಅತ್ತಿತ್ತಂ ಮಿಸುಕದೆ ಮ
ಯ್ವೆತ್ತಿದ ಮನ್ಮಥ ಸುಖೋತ್ತಮಾಂಗದೊಳಿರುತುಂ ।
ಮುತ್ತಿನ ಕಾಂತಿಗೆ ಭಯಮಂ
ಪೊತ್ತಿನ ವಕ್ತ್ರಮನೆ ನೋಡಿ ಸುಯ್ದುದು ಕೋಕಂ ॥ ೬೭

ಕಾಲ್ಗೆ ಗೆಯೆ ಬಿಳ್ದಿನಂ ಮಿಗೆ
ಸಾಲ್ದೆಗೆದುದು ವಿಹಗವೀಥಿ ಮುಗಿಯುತ್ತಬ್ಜಂ ।
ಜೋಲ್ದುವು ನೊಂದು ರಥಾಂಗಂ
ಕೀಲ್ದೆಗೆದವೊಲಗಲೆ ಸಾರ್ದು ಕೊರಗಿದುವಾಗಳ್ ॥ ೬೮

ಬಗೆಗುಂದಿ ಚಕ್ರಮಿಥುನಂ
ಮಿಗೆ ನೊಂದೊಂದೊಂದನಗಲಲಾಱದೆ ನೋಟಂ ।
ದೆಗೆಯುತ್ತಳಲು ತ್ತೊರಲು
ತ್ತಗಲ್ದುವು ಉಱೆ ಪಗಲನರಸಿ ತಿರುಗುವ ತೆಱದಿಂ ॥ ೬೯

ಮುಗಿವ ಸರಸಿರುಹಷಂಡಮ
ನಗಲ್ವ ಚಕ್ರಪ್ರತಾನಮಂ ಕೋಟರದೊಳ್ ।
ಪುಗುವ ವಿಹಗಂಗಳಂ ಮಿಗೆ
ನಗುವಂತಿರೆ ನೆಯ್ದಿಲೆಯ್ದಿದುವು ವಿಕಸನಮಂ ॥ ೭೦

ಗಳು, ಸಂತಸಗೊಂಡ ಜಾರೆಯರು. ಒಂದೆರಡು ಏಳುವ ಮೀನುಗಳು, ಅಂಕುರಿಸುತ್ತಿರುವ ಕತ್ತಲೆ, ಅಕ್ಕರೆಯಿಂದ ಪಕ್ಕಕ್ಕೆ ಸರಿಯುವ ಪಕ್ಷಿಪಂಕ್ತಿ, ಜೀತರಿಸಿಕೊಳ್ಳುತ್ತಿರುವ ಮಂದ ಮಾರುತ ನಸುಕಪ್ಪಾಗುತ್ತಿರುವ ರವಿಕಿರಣಗಳು ಹಬ್ಬುತ್ತಿವೆ. ೬೭. ಅಲ್ಲೊಂದು ಕೋಕ ಪಕ್ಷಿ, ಹಗಲು ಕಳೆದುದರಿಂದ ಅದಕ್ಕೆ ಸಹಿಸಲಸದಳವಾದ ವಿರಹ ತಾಪ! ಅದು ಅತ್ತಿತ್ತ ಮಿಸುಕದೆ ಮದನ ಸುಖದಲ್ಲಿ ಮಗ್ನವಾಗಿ, ಮುತ್ತಿನಕಾಂತಿಯನ್ನು ನೋಡಿ ಸೂರ್ಯೋದಯವಾಯಿತೆಂದು ಭ್ರಮಿಸಿ, ನಿಟ್ಟುಸಿರುಬಿಟ್ಟಿತು. ೬೮. ಹಗಲು ಕಾಲ್ತೆಗೆಯಿತು, ಹಕ್ಕಿಗಳು ಸಾಲ್ದೆಗೆದು ತಮ್ಮ ಗೂಡು ಸೇರಿದವು. ತಾವರೆ ಮುಚ್ಚಿಕೊಂಡಿತು. ಚಕ್ರವಾಕ ಪಕ್ಷಿಗಳು ಕೀಲುತೆಗೆದಂತೆ ಪರಸ್ಪರ ಅಗಲಿ ನೊಂದು ಜೋಲುಮುಖ ಹಾಕಿಕೊಂಡವು. ೬೯. ಚಕ್ರವಾಕ ಮಿಥುನಗಳು ಮನಸ್ಸು ಕುಂದಿ ಅವು ಒಂದನ್ನೊಂದು ಅಗಲಲಾರದೆ ನೋಟವನ್ನು ಹಿಂದೆಗೆಯುತ್ತ ಅಳಲುತ್ತ ಒರಲುತ್ತಾ ಹಗಲನ್ನು ಅರಸಿ ತಿರುಗಲೋ ಎಂಬಂತೆ ಅಗಲಿದವು. ೭೦. ಆ ಸಂಧ್ಯಾಸಮಯದಲ್ಲಿ ತಾವರೆಗಳು ಮುಚ್ಚಿದವು. ಚಕ್ರವಾಕಗಳು ಅಗಲುತ್ತಿದ್ದವು, ಹಕ್ಕಿಗಳು ಗೂಡು ಸೇರುತ್ತಿದ್ದವು. ನೆಯ್ದಿಲೆ

ವ॥ ಇಂತು ಮುಗಿವ ಕಮಲಂಗಳನಗಲ್ವ ಚಕ್ರಮಿಥುನಂಗಳಂ ನೋಡಲಾಱದಿಳಿವಂತೆ ಜಳಜಸಖಂ ಪಶ್ಚಿಮಾಬ್ಧಿಯೊಳಿಳಿಯೆ ನಾನಾ ಶಿವಾಲಯಾಂತರಂಗ ಸಂಧ್ಯಾಸಮಯ ಸಮುದ್ಭೂತ ಮೃದು ಮೃದಂಗಪಟಹಶಂಖಭೇರೀ ನಿನಾದಮಂ ವಾರನಾರೀ ಸಂಗೀತನೃತ್ಯ ಚಟುಳತರರವಭರಿತ ಪುರವಳಯ ವಿಳಸಿತ ಬಹುರತ್ನರಚಿತಸಹಸ್ರವೀಥೀ ಪ್ರತಿನಿಳಯಂಗಳೊಳ್ ಪತಂಗನ ಕಿರಣಂಗಳಂ ಕಳ್ತಲೆ ಸೆಱೆವಿಡಿದಂತೆ ಪೊತ್ತಿಸಿದ ದೀಪಿಕಾನಿಕಾಯಂ ನಾಡೆಮೆಱೆಯೆ, ಕಡುಗಳ್ತಲೆ ಕವಿತರ್ಪಾಗಳೊರ್ವಜಾರೆ ಮನೆಯರ್ಗಂಜಿ ಮಹೋತ್ಸಾಹದಿಂ ಪುದಿದ ತಮಮಂ ಪದಿರಿಂಪಾಡಿದಳದೆಂತೆಂದೊಡೆ

ಕಂ॥ ಅಳಿಯಂ ಕತ್ತುರಿಯಂ ಕೋ
ಕಿಳನಂ ಕಾಳಿಂದಿಯಂ ವಿನೀಳಾಂಬುದಮಂ ।
ಬಳನನುಜನನುಱೆಪಾಡಿದ
ಳಳವಟ್ಟತಿಜಾರೆ ಧೀರೆ ರಜನೀಮುಖದೊಳ್ ॥ ೭೧

ವ॥ ಮತ್ತಮಲ್ಲದೆ

ಕಂ॥ ಪರಸಿದರಿದಿರ್ಗೊಂಡರಲಂ
ಕರಿಸಿದರಾದರಿಸಿದರ್ ಕರಂ ನುತಿಗೆಯ್ದರ್ ।
ಬೆರಸಿದರೆಳಸಿದರಪ್ಪಿದ
ರೆರೆದರ್ ನಲಿನಲಿದು ಜಾರೆಯರ್ ಕಳ್ತಲೆಯಂ ॥ ೭೨

ವ॥ ಆಗಳಭಿಸಾರಿಕಾನಿಕಾಯದುತ್ಸವಂ ಪೆರ್ಚುವಂತೆ,

ಗಳು ನಗುತ್ತಿವೆಯೊ ಎಂಬಂತೆ ಅರಳುತ್ತಿದ್ದವು. ವ ॥ ಕಮಲಗಳು ಮುಚ್ಚಿಕೊಂಡದ್ದು, ಚಕ್ರವಾಕಗಳು ಅಗಲಿದ್ದು ಕಂಡು ಸಹಿಸಲಾರದೆಯೊ ಎಂಬಂತೆ ಕಮಲ ಮಿತ್ರನಾದ ರವಿ ಪಶ್ಚಿಮಸಮುದ್ರಕ್ಕೆ ಇಳಿದ; ಎಲ್ಲ ದೇವಾಲಯಗಳಲ್ಲಿ ಸಂಧ್ಯಾಪೂಜಾಸಮಯವಾದ್ದರಿಂದ ಮೃದು ಮೃದಂಗ ಪಟಹ ಶಂಖ ಭೇರಿಗಳು ಮೊಳಗಿದವು. ನಾರನಾರಿಯರ ಸಂಗೀತ ನೃತ್ಯಗಳು ಬಹುರತ್ನರಚಿತವಾದ ಬೀದಿ ಬೀದಿಗಳಲ್ಲಿನ ಪ್ರತಿಯೊಂದು ಮನೆಗಳಲ್ಲಿ ನೆರೆದವು. ಸೂರ್ಯನ ಕಿರಣಗಳನ್ನು ಕತ್ತಲೆ ಸೆರೆಹಿಡಿಯಿತೊ ಎಂಬಂತೆ ದೀಪಗಳು ಹೊತ್ತಿಸಲ್ಪಟ್ಟವು; ಕಗ್ಗತ್ತಲೆ ಕವಿಯುತ್ತಿರುವ ಸಮಯದಲ್ಲಿ ಒಬ್ಬಳು ಪಾಣ್ಬೆ (ಜಾರೆ) ಅವಳ ಮನೆಯವರಿಗೆ ಹೆದರಿ ಉತ್ಸಾಹ ಭರಿತಳಾಗಿ ಕವಿವ ಕತ್ತಲೆಯನ್ನು ಕುರಿತು ವ್ಯಂಗಾರ್ಥ ತೋರುವಂತೆ ಹಾಡಿದಳು ೭೧. ಆ ಸಂಜೆಯಲ್ಲಿ ಆವಳು ದುಂಬಿ, ಕಸ್ತೂರಿ, ಕೋಗಿಲೆ, ಯಮುನಾ ನದಿ, ಕಪ್ಪುಮೋಡ, ಶ್ರೀಕೃಷ್ಣರನ್ನು ಕುರಿತು ಹಾಡತೊಡಗಿದಳು. ೭೨. ಕತ್ತಲೆ ಕವಿದುದು ಜಾರೆಯರಿಗೆಲ್ಲ ಸಂತೋಷವನ್ನು ಉಂಟುಮಾಡಿತು. ಅವರು ಕತ್ತಲೆಯನ್ನು ಹರಸಿದರು, ಇದಿರ್ಗೊಂಡರು, ಅಲಂಕರಿಸಿದರು, ಆದರಿಸಿದರು, ನುತಿಸಿದರು, ಬೆರಸಿದರು,

ಕಂ॥ ನಸುಗಳ್ತಲೆಯರೆಗಳ್ತಲೆ
ಮುಸುಂಕುಗಳ್ತಲೆ ಪೊಗಳ್ದ ಪೆರ್ಗಳ್ತಲೆ ನಾ ।
ಲ್ದೆಸೆಗಳ್ತಲೆ ಪೊಸಗಳ್ತಲೆ
ರಸೆಗಳ್ತಲೆಯೆನಿಸಿ ಕೂಡೆ ತೀವಿತು ತಿಮಿರಂ ॥ ೭೩

ದಿವಸುಧೆಯಬ್ಧಿಯನೊಲವಿಂ
ತವೆ ಜನರಿಚ್ಛೆಯನೆ ಪಡೆಯಲೆಂದುಱೆ ಕಡೆಯಲ್ ।
ಹವಣಿಸಿದ ವಿಷಮನನುಕರಿ
ಸುವ ತೆಱದಿಂದುದಯಮುಳಿದು ತಳೆದುದು ತಮಮಂ ॥ ೭೪

ಅಱೆಯೆಂ ಪಿರಿದಂ ಪೊಗಳಲ್
ಪೆಱತೇಂ ಮುಚ್ಚಿದೊಡೆ ಮುಚ್ಚಿದಂತಲ್ಲದೆ ಕಣ್ ।
ತೆಱೆದೊಡೆ ತೆಱೆದಂತಲ್ಲದೆ
ಮಱೆದಂತೆನೆಯಿಕ್ಕಲೀಯದಿಡಿದ ತಮಂಧಂ ॥ ೭೫

ಮ॥ ಉಗುರಿಂದಂಟಿಬೆಱಂಟಿಯಂಜನಮದಕ್ಕುಂ ಚೌಕಮಂಕೀಱುತುಂ
ತೆಗೆದಾಚ್ಛಾದಿಸೆ ಕೇಳ ನೀಳಪಟಮಕ್ಕುಂ ಬಟ್ಟಿತಂ ಮಾಡಿ ಸು
ತ್ತುಗಳೆತ್ತಲ್ಕಸಿತಾತಪತ್ರಮೆನಲಕ್ಕುಂ ತಾನಿದೆಂಬಂತಿರೀ
ಜಗದೊಳ್ ಕಣ್ಗೆ ವಿಚಿತ್ರಮಾಗೆ ನೆರೆದಟ್ಟೈಯ್ಸಿತ್ತನಿತ್ತಂ ತಮಂ ॥ ೭೬

ಎಳಸಿದರು, ಅಪ್ಪಿದರು, ನಲಿದರು. ವ॥ ಆಗ ಸ್ವೈರಿಣಿಯರ ಗುಂಪಿನ ಸಂತೋಷ ಹೆಚ್ಚುವಂತೆ ೭೩. ಕ್ರಮಕ್ರಮವಾಗಿ ಗಾಢವಾಗಿ ಹಬ್ಬಿ ಕಗ್ಗತ್ತಲೆ ಎಲ್ಲೆಲ್ಲಿಯೂ ಕವಿಯಿತು. ೭೪. ಜನರ ಇಷ್ಟಗಳನ್ನು ಪಡೆಯಲೊ ಎಂಬಂತೆ ಹಗಲು (ದಿನವು) ಹಾಲಿನ ಕಡಲನ್ನು ಒಲವಿನಿಂದ ಕಡೆಯಿತು. ಆಗ ಹೊರಟ ವಿಷವನ್ನು ಅನು ಕರಿಸುವಂತೆ ಉದಯುದವರೆಗೆ ಕತ್ತಲನ್ನು ತಳೆಯಿತು. (ಕವಿಯಿತು) ೭೫. ಹೆಚ್ಚು ಹೊಗಳಲು ನನಗೆ ತಿಳಿಯದು; ಹೆಚ್ಚು ಹೇಳುವುದಿನ್ನೇನು! ಕಣ್ಣು ಮುಚ್ಚಿದರೆ ಮುಚ್ಚಿಯೇ ಇರಬೇಕು, ಕಣ್ಣು ತೆರೆದ ಪಕ್ಷದಲ್ಲಿ ತೆರೆದೇ ಇರಬೇಕೆ ಹೊರತು ರೆಪ್ಪೆಹೊಡೆ ಯಲು ತೆರಹಿಲ್ಲದಷ್ಟು ಕತ್ತಲು ಕವಿದಿತ್ತು. ೭೬. ಕತ್ತಲೆ ಎಷ್ಟು ದಟ್ಟವಾಗಿತ್ತು ಎಂಬುದು ಈ ಪದ್ಯದ ಆಶಯ-ಎಂದರೆ ಉಗುರ್ಗೊನೆಯಿಂದ ಕೆರೆದರೆ ಅದು ಅಂಜನ ವಾಗುತ್ತಿತ್ತು. ಚೌಕಾಕಾರವಾದ ವಸ್ತ್ರವನ್ನು ಕತ್ತರಿಸಿ ಮುಚ್ಚಲು ಅದು ನೀಲ ವಸ್ತ್ರ ವಾಗುತ್ತಿತ್ತು. ವೃತ್ತಾಕಾರವಾಗಿ ಕುಯ್ದು ತೆಗೆದರೆ ಕಪ್ಪುಬಣ್ಣದ ಛತ್ರಿಯೆಂಬಂತಿತ್ತು. ಹೀಗೆ ಈ ಜಗತ್ತಿನಲ್ಲಿ ನೋಡುವವರ ಕಣ್ಣಿಗೆ ಬಹಳ ವಿಚಿತ್ರವಾಗಿ ದಟ್ಟವಾಗಿ ಕತ್ತಲೆ

ಕಂ॥ ಇದು ಮಧುಕರಮಿದು ಮಲ್ಲಿಗೆ
ಯಿದು ಕೋಕಿಳಮಿದು ಮರಾಳಮಿದು ಮದಗಜಮಿಂ।
ತಿದು ಕಂಠೀರವಮಿದು ಕರಿ
ದಿದು ಬಿಳಿದೆಂದಱಿಯಬಾರದುರ್ವಿದ ತಮದೊಳ್ ॥ ೭೭

ಮನದೊಳಗಂ ಪೊಱಗಂ ತೆ
ಕ್ಕನೆ ತೀವಿದ ಮರ್ಬಿನಲ್ಲಿ ಮನಸುಂ ನೆನಸುಂ।
ಕನಸುಂ ತಾನುಂ ಕಳ್ತಲೆ
ಯೆನಿಸಿರ್ದುದು ತಮದ ಘನಮನದನೇನೆಂಬೆಂ ॥ ೭೮

ನೆಲಸಿ ನೆಲೆಗೊಂಡ ಪೆರ್ಗ
ಳ್ತಲೆಯೊಳ್ ತೊಳ ತೊಳಗಿ ಮಿನಿ ಮಿನಿಸುತ್ತುಂ।
ಪಲವುಂ ದೀವಿಗೆಗಳ್ ಕ
ಳ್ತಲೆ ಪೂತಂತೊಪ್ಪುತಿರ್ದುವಾ ಮನೆ ಮನೆಯೊಳ್ ॥ ೭೯

ವ॥ ಅಂತೊಪ್ಪುತ್ತುಮಿರೆಯಿರೆ,

ಕಂ॥ ರಸೆಯಂ ನಭಃಸ್ಥಳಮನೆ
ಣ್ದೆಸೆಯಂ ದಟ್ಟಯ್ಸುತಮರ್ದ ತಮದೊಳ್ ಜಾರ।
ಪ್ರಸರಂ ಪೊಱಮಟ್ಟುದು ಶಂ
ಕಿಸದೊಲ್ದಲ್ಲಲ್ಲಿ ಕುಟಿಲ ಪಥ ಸಮತಳದೊಳ್ ॥ ೮೦

ಒದವಿದ ಕಳ್ತಲೆಯೊಳ್ ಸ
ಮ್ಮದದಿಂ ಪೊಱಮಟ್ಟ ಜಾರಮಿಥುನಾಳಿಗೆ ಕಂ।

ಕವಿದಿತ್ತು. ೭೭. ಆ ಕಗ್ಗತ್ತಲೆಯಲ್ಲಿ ಕಪ್ಪುಬಿಳುಪುಗಳಿಗೆ ವ್ಯತ್ಯಾಸವೇ ತಿಳಿಯುತ್ತಿರದಷ್ಟು ದಟ್ಟವಾಗಿ ಕವಿದಿತ್ತು. ಇದು ದುಂಬಿ–ಇದು ಮಲ್ಲಿಗೆ, ಇದು ಕೋಗಿಲೆ–ಇದು ಹಂಸೆ, ಇದು ಮದಗಜ–ಇದು ಸಿಂಹ, ಇದು ಕಪ್ಪು–ಇದು ಬಿಳುಪು ಎಂಬ ಭೇದವೇ ತಿಳಿಯುತ್ತಿರಲಿಲ್ಲ. ೭೮. ಮನೆಯೊಳಗೆ–ಮನದೊಳಗೆ ಹೇಗೋ ಹಾಗೆ ಹೊರಗೂ ಕತ್ತಲೆ ಕವಿದಿದೆ. ಆ ಮಬ್ಬಿನಲ್ಲಿ ಮನಸ್ಸು, ನೆನಸು, ಕನಸು, ತಾನು ಎಲ್ಲವೂ ಕತ್ತಲೆ ತುಂಬಿತ್ತು ಎಂದ ಮೇಲೆ ಆ ಕತ್ತಲೆಯ ಘನೀ ಭಾವವನ್ನು ಹೆಚ್ಚು ಹೇಳುವುದೇನು? ೭೯. ಕತ್ತಲೆ ಕವಿದ ಮನೆ ಮನೆಗಳಲ್ಲಿಯೂ ಹೊತ್ತಿಸಿದ ದೀಪಗಳೆಲ್ಲ ಕತ್ತಲೆ ಲೇಪಿಸಿದಂತೆ ಮಂದ ಪ್ರಕಾಶದಿಂದ ಬೆಳಗುತ್ತಿದ್ದವು. ೮೦. ನೆಲ–ಮುಗಿಲು–ಎಂಟು ದಿಕ್ಕುಗಳನ್ನೆಲ್ಲ ದಟ್ಟವಾಗಿ ಕವಿದಿರುವ ಕಗ್ಗತ್ತಲೆಯಲ್ಲಿ ಜಾರರು ತಮ್ಮ ತಮ್ಮ ಪ್ರಿಯ–ಪ್ರೇಯಸಿಯರನ್ನು ಅರಸಿಕೊಂಡು ಕಳ್ಳ ಹಾದಿ ಹಿಡಿದು ಹೊರಟರು. ೮೧. ಕವಿದ ಕತ್ತಲೆಯಲ್ಲಿ ಸಂತೋಷದಿಂದ ಹೊರಟ ಜಾರ

ಡುದೆ ಬರವೆಳಸಿತೆ ಮನಮಿ
ರ್ದುದೆ ಮನೆ ಪಟ್ಟಿದುದೆ ಪಾಸುಮುಟ್ಟಿತೆ ಮರ್ಮಂ ॥ ೮೧

ದಾರಿಯೊಳಿಡುಕುಱಿೊಳೋಣಿಯೊ
ಳಾರವೆಗಳ ತಳದೊಳಂಗಡಿಗಳೊಳ್ ಮನೆಯೊಳ್ ।
ಕೇರಿಯೊಳಾವಿಗೆಗಳೊಳಂ
ಬೇರೂಱಿತು ಜಾರರನುಭವಂ ಕಳ್ತಲೆಯೊಳ್ ॥ ೮೨

ವ॥ ಅದೆಂತೆಂದೊಡೆ

ಕಂ॥ ತಾಗದ ಚುಂಬನಮುಱಿ ಸೊ
ಪ್ಪಾಗದ ಕರಘಾತಮಗಲದಿರ್ಪನುಭವದೊಳ್ ।
ಸಾಗಿಸುವ ಸರಭಸಂ ಮಿಗೆ
ರಾಗಿಸುವ ಮನಂ ಮನೋಹರಂ ಜಾರೆಯರೊಳ್ ॥ ೮೩

ಆರ್ದ್ರೈವ ಮನಂ ಸುಖದೊಳ್
ಪೂರ್ಣೈಪ ಶರೀರಮುಸಿರದುಸಿರ್ಪಡಕಂ ।
ಸ್ಮೇರಾಸ್ಯಂ ಮೊಳೆನುಡಿಗಳ
ಸೌರಂಭಂ ಸುರತ ಸಂಭ್ರಮಂ ಜಾರೆಯರಾ ॥ ೮೪

ಪುಳಕಿಪ ತನು ಪೊಣ್ಮುವ ಸುಯ್
ಬಳೆವ ರತಂ ಬೆಮರ್ವ ಗಂಡಮಿಳಿವಶ್ರು ಸುಖಂ ।

ಮಿಥುನ (ಸ್ವೈರವಿಹಾರಿ)ಗಳಿಗೆ ಕಂಡದ್ದೆ ಬರವು, ಅಪೇಕ್ಷಿಸಿದ್ದೆ ಮನಸ್ಸು, ಇದ್ದ ಎಡೆಯೆ ಮನೆ, ಮಲಗಿದ ನೆಲೆಯೇ ಹಾಸಿಗೆ, ಮುಟ್ಟಿದ ಸ್ಥಳವೆ ಮರ್ಮವೆಂಬಂತಿತ್ತು. ೮೨. ದಾರಿಯಲ್ಲಿ, ಇಕ್ಕಟ್ಟಿನ ಓಣಿಗಳಲ್ಲಿ, ಆರಾಮ ತೋಟಗಳ ಸ್ಥಳಗಳಲ್ಲಿ, ಅಂಗಡಿಗಳಲ್ಲಿ, ಮನೆಯಲ್ಲಿ, ಕೇರಿ, ಆವಿಗೆ ಮೊದಲಾದ ಎಡೆಗಳಲ್ಲೆಲ್ಲ ಕತ್ತಲೆ ಕವಿದಿದ್ದುದರಿಂದ ಅಲ್ಲೆಲ್ಲ ಜಾರರ ಅನುಭವ ಬೇರೂರಿತು. ೮೩. ಜಾರೆಯರ ಈ ಬಗೆಯ ಅನುಭವದ ಆ ಕದರೇ ಬೇರೆ! ಅಲ್ಲಿ ಸೋಂಕಿಯೂ ಸೋಂಕದ ಚುಂಬನ! ಶಬ್ದವಾಗದೇ ಇರುವ ಕರತಾಡನ! ಅಗಲದೆ ಇರುವ ಆಲಿಂಗನಾದಿಗಳು! ಹೀಗೆ ರಭಸದಿಂದ ರಾಗಿಸುವ ಸಾಗಿಸುವ ಅನುಭವ ಅದೇನು ಮನೋಹರವೊ! ೮೪. ಜಾರೆಯರ ಸುರತ ಸಂಭ್ರಮ ಬಣ್ಣಿಸಲು ಸಾಧ್ಯವೆ! ಅಲ್ಲಿಯ ಆರ್ದ್ರವ ಮನಸ್ಸು, ಸುಖದಲ್ಲಿ ತನ್ಮಯವಾದ ಶರೀರ, ಉಸಿರದೆಯೇ ಉಸಿರ್ಪಡಕ, ಕಮನೀಯವಾದ ಮುಖ, ಮಿದುನುಡಿಗಳ ಸ್ವಾರಸ್ಯದ ಪರಿಯೇ ಬೇರೆ! ಅದು ಅನುಭವ ಮಾತ್ರಗಮ್ಯ ಎಂದು ಭಾವ. ೮೫. ಈ ಅಸತಿ (ಜಾರೆ)ಯರಲ್ಲ ರತಿಕಾಲದಲ್ಲಿ ಆಗುವ ನವಿರೆದ್ದ ತನು, ಹೊಮ್ಮುವ ನಿಟ್ಟುಸಿರು, ಮುಂದುವರೆವ, ರತ, ಬೆಮರುವ ಕಪೋಲ, ಇಳಿ

ದಳಿವ ಮನಂ ಕಂಪಿಪ ಕೆಯ್
ತಳವಳಿಸುವ ಗಳಮನೂನಮಸತೀಕುಳದೊಳ್ ॥ ೮೫

ಕಲ್ಲೆನ್ನದೆ ಮುಳ್ಳೆನ್ನದೆ
ಸಲ್ಲಲಿತಾಸ್ಥಾನಮೆನ್ನದಿರ್ದಿರ್ದೆಡೆಯೊಳ್ ।
ಪಲ್ಲವಿಸಿತು ಪೂತುದು ಫಲ
ವಲ್ಲರಿಯಂ ಪಡೆದುದರರೆ ಜಾರರ ಸುರತಂ ॥ ೮೬

ಒರ್ಬುಳಿಸಿದ ಸಮಸುಖದೊಳ್
ಗುರ್ಬಿಸುತಂತೊಲಿದು ನಲಿದು ಪಲತೆಱದಿಂ ನಿಂ ।
ದುರ್ಬುತೆ ಕೊರ್ಬುತೆ ಪರ್ಬುತೆ
ಗರ್ಬಿಸಿತಭಿಸಾರಿಕಾನಿಕಾಯಂ ನಿಶಿಯೊಳ್ ॥ ೮೭

ವ॥ ಮತ್ತಮಲ್ಲದೆ

ಚಂ॥ ಇಳೆಯನಮರ್ಚಿ ಮುಚ್ಚಿ ಮುಸುಕಿರ್ದ ತಮಂಧಮನಳ್ತಿಯಿಂದೆ ಕಂ
ಡಳಿಕುಳಮೆಂದು ಕಾಳಿಮತರಂಗಿಣಿಯೆಂದು ವಿನೀಳ ಮೇಘಮಂ ।
ದಳಕದೊಳೊತ್ತುತುಂ ಸಲಿಲಕೇಳಿಯುಮಂ ನವಿಲಾಟದೇಳ್ಗೆಯಂ
ತಳೆದಭಿಸಾರಿಕಾನಿಕರವೊಪ್ಪಿದುದಾತ್ತ ರತಾಂತಲೀಲೆಯೊಳ್ ॥ ೮೮

ಕ॥ ಅಂತೊಪ್ಪುವಿರ್ಪಸಮಯದೊಳ್

ಕಂ॥ ಗಗನಂ ಪೂತುದೊ ತಮಮಂ
ಮಿಗೆ ನೋಡುವ ಭರದೊಳಂಬರಂ ತಾನೆಂತ ।

ಯುತ್ತಿರುವ ಆನಂದಬಾಷ್ಪ, ಸುಖಿಸುವ ಮನಸ್ಸು, ನಡುಗುವಕ್ಕೈ, ಕಳಕಳಿಸುವ ಕಂಠಸ್ವನಗಳು ಇವೆಲ್ಲ ಮಾತಿಗೆ ನಿಲುಕುವುವಲ್ಲ. ೮೬. ಇದು ಕಲ್ಲು, ಇದು ಮುಳ್ಳು, ಇದು ಆಸ್ಥಾನ ಎಂಬ ಭೇದವಿಲ್ಲದೆ ಅವರವರಿದ್ದೆಡೆಗಳಲ್ಲಿಯೇ ಆ ಜಾರರ ಸುರತ ಲತೆಯು ಚಿಗುರಿ ಹೂಬಿಟ್ಟು ಫಲಿಸಿತ್ತು. ೮೭. ತಮ್ಮ ತಮ್ಮ ಪ್ರಿಯರನ್ನು ಅರಸಿ ಹೊರಟ ಅಭಿಸಾರಿಕೆಯರು ಆ ರಾತ್ರಿಯಲ್ಲಿ ಅವರವರ ಪ್ರಿಯರೊಡಗೂಡಿ ಒಟ್ಟುಗೂಡಿದ ಸಮಸುಖದಲ್ಲಿ ಉಬ್ಬಿ, ಒಲಿದು ನಲಿದು ಪಲತೆರದಿಂದ ನಿಂದು ಉಬ್ಬುತ್ತ ಕೊಬ್ಬುತ್ತ ಹಬ್ಬುತ್ತ ನಲಿದರು. ೮೮. ಅಭಿಸಾರಿಕೆಯರು ತಮಗೆ ಲಭಿಸಿದ ರತಿಯ ಕಡೆಯಲ್ಲಿ ಇಳೆಯನ್ನು ಕವಿದ ಆಕಾಶ ಕಗ್ಗತ್ತಲೆಯನ್ನು ಅಳ್ತಿ (ಪ್ರೀತಿ)ಯಿಂದ ಕಂಡು ಇದು ದುಂಬಿ ಎಂದು, ಕಾಳಿಂದಿನದಿ, ನೀಲಮೇಘ ಎಂದು ತಮ್ಮ ಅಂಕಗಳಿಂದ ಒತ್ತುತ್ತ ಜಲಕ್ರೀಡೆ, ನವಿಲಾಟಗಳ ಲೀಲೆಯನ್ನು ತಳೆದರು. ೮೯. ಅಷ್ಟು ಹೊತ್ತಿಗೆ ನಭದಲ್ಲಿ ತಾರೆಗಳು ಮೂಡಿದವು. ಅದು

ಕ್ಷಿಗಳಂ ಪಡೆದುದೊ ಪೇಳೆನೆ
ಸೊಗಯಿಸಿದುವು ತೊಳಗಿ ಬೆಳಗಿ ತಾರಗೆ ನಭದೊಳ್ ॥ ೮೯

ದಿನಕರನೆಸೆವಾಕಾಶಾ
ವನಿಯೊಳ್ ದಶಶತಕರಾನುಕೂಲಂ ಮನದೊಂ ।
ದನುನಯದಿಂ ಬಿತ್ತಿದ ಬೆಳ
ಗಿನ ಬೀಜಾಂಕುರಮಿವೆನಿಸಿದುವು ತಾರಗೆಗಳ್ ॥ ೯೦

ಅಂಬುಜ ನಿಜಸಖನಸ್ತಮ
ಯಂಬರಮಂಬರದ ನಡುವೆ ಬಹುತರದಿಂ ನೆ ।
ಯ್ದಂಬರದೊಳ್ ಕೆಯ್ಗೊಳಿಸಿದ
ಚುಂಬಿತರತ್ನಂಗಳಂತೆ ತಾರಗೆ ಮೆಱೆಗುಂ ॥ ೯೧

ನೆಟ್ಟನೆ ಬಂದಪನೆನ್ನಯೆ
ನಿಟ್ಟೆಯ ನಿಧಿ ಚಂದ್ರನೆಂದು ರಾತ್ರೀವಧು ತಾ ।
ಕಟ್ಟಿದ ಬಹುರತ್ನದ ಮೇ
ಲ್ಕಟ್ಟೆನಿಸಿದುದಂಬರಂ ಸುತಾರಾಗಣದಿಂ ॥ ೯೨

ಅಂದಂಬರ ಗಂಗೆಯ ಮುಳಿ
ಸಿಂದಂ ಕಾಳಿಂದಿ ಕಲಕೆ ಕರ್ಪಾಗಲ್ಕ ।
ಲ್ಪೊಂದಿದ ಮುಕ್ತಾವಳಿಯಿಂ
ಬಂದದಿ ತಾರಗೆಗಳೆಸೆದುವಾ ನಭದೆಡೆಯೊಳ್ ॥ ೯೩

ಗಗನವೇ ಹೂಬಿಟ್ಟಿತೋ, ಈ ಕಗ್ಗತ್ತಲನ್ನು ಚೆನ್ನಾಗಿ ನೋಡಬೇಕು ಎಂದು ಬಯಸಿದ ಅಂಬರವು ಅನೇಕ ಕಣ್ಣುಗಳನ್ನು ಪಡೆಯಿತೊ ಎಂಬಂತೆ ಇತ್ತು. ೯೦. ಗಗನದಲ್ಲಿ ಮೂಡಿದ ಈ ತಾರೆಗಳನ್ನು ನೋಡಿದರೆ, ಸೂರ್ಯನು ಆಕಾಶವೆಂಬ ನೆಲದಲ್ಲಿ ತನ್ನ ಸಾವಿರ ಕಿರಣಗಳಿಗೆ ಅನುಗುಣವಾಗಿ ಮನಃಪೂರ್ವಕವಾಗಿ ಬಿತ್ತಿದ ಬೆಳಕಿನ ಬೀಜಗಳ ಮೊಳಕೆಗಳೋ ಎಂಬಂತೆ ಇತ್ತು. ೯೧. ನೀಲ ಗಗನತಲದಲ್ಲಿ ಮೂಡಿದ ಈ ನಕ್ಷತ್ರಗಳನ್ನು ನೋಡಿದರೆ ರವಿಯು ತಾನು ಮುಳುಗುವವರೆಗೆ ಆಕಾಶದ ಮಧ್ಯದಲ್ಲಿ ಬಹುತರವಾಗಿ ನೆಯ್ದ ನೀಲವಾದ ಅಂಬರ (ಬಟ್ಟೆ) ಮಧ್ಯದಲ್ಲಿ ಅಲ್ಲಲ್ಲಿ ಪೋಣಿಸಿದ ರತ್ನಗಳೊ ಎಂಬಂತೆ ಬೆಳಗುತ್ತಿವೆ. ೯೨. ಅನಂತ ನಕ್ಷತ್ರಗಳಿಂದ ರಂಜಿತವಾದ ಆಕಾಶವನ್ನು ನೋಡಿದರೆ ರಾತ್ರಿ ಎಂಬ ವಧುವು ತನ್ನ ನಿಷ್ಠೆಯ ನಿಧಿ ಚಂದ್ರಮನು ನೇರವಾಗಿ ಬರುವನೆಂಬ ಮಮತೆಯಿಂದ ಸಂತೋಷಾರ್ಥವಾಗಿ ಕಟ್ಟಿದ ಬಹುರತ್ನ ಖಚಿತವಾದ ಮೇಲ್ಕಟ್ಟೋ ಎಂಬಂತೆ ಇತ್ತು ! ೯೩. ಹಿಂದೆ ಆಕಾಶಗಂಗೆಯು ಕೋಪಿಸಿಕೊಂಡಾಗ ಕಾಳಿಂದಿ

ವ॥ ಅಂತೆಸೆವ ನಕ್ಷತ್ರೋದಯ ಸಮನಂತರದೊಳ್

ಮ॥ ಇದು ಸಂಕ್ರಂದನ ದಿಗ್ವಧೂ ನಿಟಿಲ ಸಿಂಧೂರಾಂಶುವೊ ನೋಡು ನೋ
ಡಿದು ಪುಷ್ಪಾಯುಧ ಪದ್ಮರಾಗಮುಕುರ ಪ್ರದ್ಯೋತಮೋ ಪೇಳ್ವೊಡಿಂ ।
ತಿದು ವಿಸ್ಫಾರಿತ ಕಾಮಹೋಮಹುತಭುಕ್ಪ್ರಜ್ವಾಲೆಯೋ ಎಂಬ ಸಂ
ಪದಮಂ ಬೀಱಿದುದಿಂದ್ರದಿಗ್ವಿವರದೊಳ್ ಚಂದ್ರದ್ಯುತಿಪ್ರಾಭವಂ ॥ ೯೪

ವ॥ ಆಗಳ್

ಚಂ॥ ಕರಮೆಸೆದತ್ತು ಕೌಮುದಿಯ ಬಿತ್ತು ಚಕೋರಿಯ ತುತ್ತು ನೀರಜೋ
ತ್ಕರದ ವಿಪತ್ತು ತಾರೆಗಳತುತ್ತು ಸುಧಾಂಬುಧಿಯೊತ್ತು ಮತ್ತಮಂ ।
ಬರದ ಪುಳಿಂದಿ ತಾಳ್ದಿಸೆವ ಮೂಗಿನ ಮುತ್ತು ಮಗುಳ್ದು ನೋಡಲ
ಚ್ಚರಿಯೆನಿಸಿತ್ತು ಮೂಡದೆಸೆಯಿಂದೊಗೆತರ್ಪ ಹಿಮಾಂಶುಮಂಡಲಂ ॥ ೯೫

ಮ॥ ಸ್ರ॥ ಮುದದಿಂ ತಂದಿರ್ಕೆ ಪೂರ್ವಾಂಗನೆ ಗಿರಿಶಿರದೊಳ್ ಪೀಠಮಂ ಸತ್ಪ್ರಭಾಸಂ
ಪದಮಂ ಕೆಯ್ಗೊಟ್ಟು ಚೈತ್ರಂ ನಡೆತರೆ ವದನಂ ಪುಷ್ಪಬಾಣಂಗಳಂ ಪೂ ॥
ಡಿದ ಬಿಲ್ಲಂ ಪೊತ್ತು ಪಿಂದಂ ಬರೆ ನವಕುಮುದಾಮೋದ ಮಾಧುರ್ಯದಿಂ ಪ
ಟ್ಟದ ಗಾನಬೊಣ್ಮಸುತ್ತುಂ ಶಶಿಯುದಯದೊಳೊಪ್ಪಿತ್ತು ರಾಜೋಪಚಾರಂ ॥ ೯೬

ವ॥ ಅಂತೊಪ್ಪುತ್ತುಮಿರೆ

(ಯಮುನೆ) ಕಲಕಿತು. ಆಗ ಅಲ್ಲಿ ಕಪ್ಪಾದ ಮುಕ್ತಾವಳಿಯೋ ಎಂಬಂತೆ ತಾರೆಗಳು ನೀಲ ಗಗನದಲ್ಲಿ ಎಸೆದುವು. ೯೪. ಹೀಗಿರುವಾಗ ಪೂರ್ವದಿಗಂತದಲ್ಲಿ ಚಂದ್ರನ ಬೆಳಕುಮೂಡಿತು. ಅದನ್ನು ನೋಡಿದರೆ, ಇದೇನು ಪೂರ್ವದಿಕ್‌ವನಿತೆಯು ತನ್ನ ಹಣೆಯಲ್ಲಿ ಧರಿಸಿರುವ ಕುಂಕುಮದ ಅಂಶವೊ, ಅಥವಾ ಕುಸುಮಾಯುಧನಾದ ಮನ್ಮಥನ ಪದ್ಮರಾಗಮಣಿ ಮುಕುರದ ಪ್ರಕಾಶವೊ, ಇಲ್ಲದಿದ್ದರೆ ಕಾಮನೆಂಬ ಹೋಮಾಗ್ನಿಯ ಜ್ವಾಲೆಯೊ ಎಂಬಂತೆ ಇತ್ತು. ೯೫. ಮೂಡಲು ದಿಕ್ಕಿನಿಂದ ಮೇಲೇಳುತ್ತಿರುವ ಚಂದ್ರಮಂಡಲವನ್ನು ನೋಡಿದರೆ ಅದು ಬೆಳದಿಂಗಳ ಬಿತ್ತು (ಬೀಜ) ಬೆಳದಿಂಗಳನ್ನೇ ಉಣ್ಣುವ ಚಕೋರಿಗಳ ಬಾಯಿತುತ್ತು, ತಾವರೆಗಳಿಗೆ ವಿಪತ್ತು. ಏಕೆಂದರೆ ರಾತ್ರಿಯು ಕಮಲಗಳಿಗೆ ಅನುಕೂಲ ವಲ್ಲ ಎಂದು ತಾತ್ಪರ್ಯ. ತಾರೆಗಳಿಗೆ ಆಶ್ರಯ, ಪಾಲ್ಗಡಲಿಗೆ ಒತ್ತು, ಅಂಬರವೆಂಬ ಬೇಡಿತಿಯು ಧರಿಸಿರುವ ಮೂಗುನತ್ತು ಎಂಬಂತೆ ಇತ್ತು. ೯೬ ಚಂದ್ರನ ಉದಯ ಕಾಲದಲ್ಲಿ ಅವನಿಗೆ ಎಲ್ಲ ರಾಜೋಪಚಾರವೂ ನಡೆದಿತ್ತು. ಚಂದ್ರನು ಉದಯಿಸಿದಾಗ ಪೂರ್ವಾಂಗನೆಯು ಗಿರಿಶಿಖರದಲ್ಲಿ ಅವನಿಗೆ ಪೀಠವನ್ನು ಕಲ್ಪಿಸಿದಳು. ಚೈತ್ರನು ಸತ್ಪ್ರಭಾ ಸಂಪತ್ತಿನಿಂದ ಕೈಗೊಟ್ಟು ನಡೆತಂದನು, ಮದನನು ಹೂಬಾಣಗಳನ್ನು ಹೂಡಿದ ಬಿಲ್ಲನ್ನು ಹೊತ್ತು ಬೆಂಗಾವಲಾಗಿ ಬಂದನು, ಹೊಸ ನೈದಿಲೆಗಳು ಅರಳಿದ್ದರಿಂದ ಅವುಗಳ ಸುಗಂಧ

ಮ॥ ವಿದಳತ್ ಕೈರವತಾಜಿ ರಾಜಬಲದಿಂ ಸಂತೋಷಮಂ ಮುಟ್ಟಿ ಸಂ
ಪುದಮಂ ತಾವರೆಯೆತ್ತಿ ಕಟ್ಟಿ ತಮಮಂ ಶೀತಾಂಶುವೆಳ್ಪಟ್ಟಿಪೆ ।
ರ್ಚಿದಗುರ್ವಿಂ ವಿರಹಾಳಿಯಂ ಕುಸುಮಬಾಣಂ ಕಾಯ್ದು ಬೆನ್ನಟ್ಟಿಮೆ
ಟ್ಟಿದನಿಂದ್ರಾಚಲ ಚೂಡಮಂ ಕಿರಣ ವೀಥೀ ಸಾಂದ್ರಮಂ ಚಂದ್ರಮಂ ॥ ೯೭

ವ॥ ಮತ್ತಮಲ್ಲದೆ,

ಕಂ॥ ಅದು ಪೊಸಪವಳದ ಬಂಧೂ
ಕದ ಕೆಂದಾವರೆಯ ದಾಸಣದ ಪೂವಿನ ವ ।
ರ್ಣದ ಸಂಪದದಿಂ ಮುದದಿಂ
ಮುದದಿಂದೊಪ್ಪಿತ್ತು ಚಂದ್ರಬಿಂಬವಿಡಂಬಂ ॥ ೯೮

ಇದು ವಿರಹವಾರ್ಧಿಮಧ್ಯ
ಪ್ರದೇಶದಿಂದೊಗೆದ ರಾಗವಡಬಾನಳ ಪಿಂ ।
ಡದವೋಲ್ ವಿರಹಿಗೆ ತೋಱಿದು
ದುದಯಾದ್ರಿಯ ಮೇಲೆ ಮೆಱೆವ ಹಿಮಕರಬಿಂಬಂ ॥ ೯೯

ವ॥ ಅನಂತರಂ,

ಕಂ॥ ಅದಿರದೆ ವಿರಹಿಗಳತಿಸಂ
ಮುದದಿಂ ಬರ್ಪಾಗಳೊಲ್ದು ಮಧು ಮದನಂಗೆ ।
ತ್ತಿದ ಮುತ್ತಿನ ಸತ್ತಿಗೆಯೆನಿ
ಸಿದುದಿಂದ್ರಾಶಾ ನಿವೇಶದೊಳ್ ಶಶಿಬಿಂಬಂ ॥ ೧೦೦

ಮಿಶ್ರಿತ ಮಕರಂದಪಾನ ಮಾಡಿದ ದುಂಬಿಗಳು ಸುಮಧುರವಾದ ಸಂಗೀತಕಛೇರಿಯನ್ನು ನಡೆಸಿದವು ಎಂದ ಮೇಲೆ ಎಲ್ಲ ರಾಜೋಪಚಾರವೂ ಪೂರ್ಣವಾದಂತೆಯೇ ಆಯಿತು. ೯೭. ಚಂದ್ರಕಿರಣವೀಥೀಸಾಂದ್ರವಾದ ಇಂದ್ರಾಚಲ (ಪೂರ್ವಾಚಲ) ಶಿಖರವನ್ನು ಏರಿದನು–ಎಂದರೆ–ರಾಜನ ಅಭ್ಯುದಯದಲ್ಲಿ ಹೊಗಳುಭಟ್ಟರು ಹರ್ಷಿಸುವಂತೆ ರಾಜ(ಚಂದ್ರ)ನ ಉದಯಕಾಲದಲ್ಲಿ ನೈದಿಲೆ ಅರಳಿದವು. ತಾವರೆಗಳು ಮಸಕಾದವು, ಚಂದ್ರನು ಕತ್ತಲೆಯನ್ನು ಓಡಿಸಲು,ವಿರಹಿಗಳನ್ನು ಮದನನು ದರ್ಪದಿಂದ ಬೆನ್ನಟ್ಟಿದನೊ ಎಂಬಂತೆ ಚಂದ್ರೋದಯವಾಯಿತು. ೯೮. ಉದಯಿಸಿದ ಚಂದ್ರಬಿಂಬವು ಹೊಸಹವಳ, ಹಿಪ್ಪೆಯಹೂ, ಕೆಂಪು ತಾವರೆ ಅಥವಾ ದಾಸವಾಳದ ಹೂವು ಇವುಗಳ ಕಾಂತಿಯನ್ನು ತಳೆದು ಸೊಗಸಿತ್ತು. ೯೯. ಉದಯಾದ್ರಿಯ ಮೇಲೆ ಪ್ರಕಾಶಿಸುವ ಹಿಮಕರಬಿಂಬವು ವಿರಹಿಗಳಿಗೆ ಹೀಗೆ ಕಂಡಿತು–ವಿರಹಸಮುದ್ರದ ಮಧ್ಯದಿಂದ ಒಗೆದ ರಾಗವೆಂಬ ಬಡಬಾಗ್ನಿಯೊ ಎಂಬಂತೆ ಚಂದ್ರಬಿಂಬವು ಕಾಣಿಸಿತು. ೧೦೦. ಇಂದ್ರದಿಕ್ಕಿನಲ್ಲಿ ಕಾಣುವ ಶಶಿಬಿಂಬವು ವಿರಹಿಗಳಿಗೆ ಸಂತಾಪವನ್ನು ಉಂಟುಮಾಡಿ ಸಮ್ಮುದದಿಂದ ಬರುವ ಮನ್ಮಥನನ್ನು ನೋಡಿ

ಉ॥ ಮುಂದೆ ತಮಂಧ ಮಿಟ್ಟಣಿಸಿ ರಾಹುವಿನಂತಿರೆ ಪೂರ್ವವೈರಮಂ
ಮುಂದುಗೊಳುತ್ತೆ ಎನ್ನನಿದು ಮಾಡುವ ಮಾಳ್ಕೆಯನಿಂದು ಮಾಳ್ಪೆನಾ ।
ನೆಂದು ತದೀಯರೂಪನುಱೆ ನುಂಗೆ ತನುಚ್ಛವಿಯಿಂದೆ ತೋಱಿತೆಂ
ಬಂದದೊಳೊಪ್ಪುತಿರ್ದುದು ನಿಶಾಕರಮಂಡಲದಲ್ಲಿ ಲಾಂಛನಂ ॥ ೧೧೧

ಕಂ॥ ಒಡವುಟ್ಟಿದ ಬಿಸಮಿದನಾಂ
ಕಡೆನೂಂಕಲದೇಕೆ ಕೂಡಿ ನಡೆವೆನೆನುತ್ತಂ ।
ದೊಡಲೊಳಗಿಂಬಿಟ್ಟಯ್ದುವ
ಪಡಿಯೆನಲೊಪ್ಪಿದುದು ಲಾಂಛನಾಂಕಿತ ಚಂದ್ರಂ ॥ ೧೧೨

ವ॥ ಇಂತಾದ ಚಂದ್ರೋದಯಮುಮಂ ಕಂಡು ಭೋಗಸಹಾಯರಪ್ಪ ನಾಗರಿಕ ವಿಟವಿದೂಷಕ ಪೀಠಮರ್ದಕರ್ ಭರದಿಂ ಪರಿತಂದು ಆಸ್ಥಾನದೊಳಿರ್ದ ಗೋತ್ರರಾಜಂಗೆ ಮೆಯ್ಯಿಕ್ಕಿನಿಂದು ಕೆಯ್ಯಂ ಮುಗಿದು ದೇವಾ, ಪತಂಗಂ ಪಶ್ಚಿಮಾಬ್ಧಿಯೊಳಿಳಿದಂ, ಸರಸಿರುಹಂ ಸುರುಳ್ದುವು, ಕುಮುದಕುಲಂ ರಮಣೀಯಮಾದುವು, ಕೋಕಂಗಳಗಲ್ದು ಶೋಕಮನೆಯ್ದಿದುವು, ಪಕ್ಕಿಗಳ್ ಪಕ್ಕೆಗೆ ಸಾರ್ದುವು, ಮೃಗಂಗಳ್ ನಗಮನೆತ್ತುಗೊಂಡುವು, ಇಳೆಯಜನಂ ನಿಳಯಮಂ ಪೊಕ್ಕುದು ಕಳ್ತಲೆಯೊತ್ತರಿಸಿತ್ತು, ಜಾರೆಯರ್ ಹಾರಯ್ಸಿದರ್, ಗಗನದೊಳ್ ಭಗಣಂ ನೆಗೆದುದು, ಚಂದ್ರಂ ಶೈಳೇಂದ್ರಮನೇಱಿದಂ, ಬೆಳ್ದಿಂಗಳ್ ಬೀದಿವರಿದುದು, ಅಸತಿಯರ್ ದೆಸೆಗೆಟ್ಟೋಡಿದರ್,

ಮಧು ಪ್ರೀತಿಯಿಂದ ತನ್ನ ಒಡೆಯನಿಗೆ ಎತ್ತಿಹಿಡಿದ ಮುತ್ತಿನಕೊಡೆಯೊ ಎಂಬಂತೆ ಇತ್ತು. ೧೧೧. ಹಾಗೆ ಮೂಡಿದ ಚಂದ್ರಮಂಡಲದಲ್ಲಿ ಕಳಂಕವು ಕಾಣಿಸಿತು. ಅದನ್ನು ನೋಡಿದರೆ ಚಂದ್ರನ ಮುಂದೆ ಇಟ್ಟಣಿಸಿದ್ದ ತಮಂಧವು ರಾಹುವಿನಂತೆ ಇತ್ತು. ಅದನ್ನು ಕಂಡ ಚಂದ್ರನು ಪೂರ್ವವೈರವನ್ನು ನೆನೆದು, ಹೇಗಿದ್ದರೂ ಈ ರಾಹು ಮುಂದೆ ನನ್ನನ್ನು ನುಂಗುವನು, ಅದಕ್ಕಿಂತ ಮೊದಲು ನಾನೇ ಅವನನ್ನು ನುಂಗುವೆನು ಎಂದು ಚಂದ್ರನು ನುಂಗಿದನು. ಆಗ ಆ ರಾಹುಚ್ಛಾಯೆಯೇ ಹೊರಗೆ ಕಳಂಕವಾಗಿ ಕಾಣುತ್ತಿದೆಯೊ ಎಂಬಂತಿತ್ತು. ೧೧೨. ಲಾಂಛನ (ಕಳಂಕ) ದಿಂದ ಅಂಕಿತವಾದ ಚಂದ್ರನನ್ನು ನೋಡಿದರೆ–ವಿಷವು ಚಂದ್ರನಿಗೆ ಒಡಹುಟ್ಟಿದ್ದು, ಆದ್ದರಿಂದ ಒಡಹುಟ್ಟಿದವನನ್ನು ಹೊರನೂಕುವುದು ಸರಿಯಲ್ಲ; ಜೊತೆಗೆ ಒಯ್ಯುವೆನು ಎಂದು ಚಂದ್ರ ತನ್ನ ಒಡಲಲ್ಲಿ ಅದನ್ನು ಇಟ್ಟುಕೊಂಡಿರುವನೊ ಎಂಬಂತೆ ಇತ್ತು. ವ॥ ರಾಜನಿಗೆ ಭೋಗಸಹಾಯರಾದವರು ನಾಗರಿಕ ವಿಟ ವಿದೂಷಕ ಪೀಠಮರ್ದಕರು. ಅವರು ಚಂದ್ರೋದಯವಾದೊಡನೆಯೇ ಆಸ್ಥಾನಕ್ಕೆ ಬಂದು ಗಿರಿರಾಜನಿಗೆ ವಂದಿಸಿ ಬಿನ್ನೈಸಿದರು: ಸ್ವಾಮಿ, ಸೂರ್ಯಮುಳುಗಿದ, ತಾವರೆಗಳು ಮುಗಿದುವು, ನೈದಿಲೆ ಅರಳಿದುವು, ಚಕ್ರವಾಕಗಳು ವಿರಹಕ್ಕೆ ಸಿಕ್ಕಿದುವು. ಹಕ್ಕಿಗಳು ಗೂಡುಸೇರಿದವು, ಚಿಗರಿಗಳು ಕಾಡುಹೊಕ್ಕವು, ಜನ ಮನೆ ಸೇರಿತು, ಕತ್ತಲೆ

ಚಕೋರಮುಖಂ ವಿಕಸಿತಮಾದುದು, ಮನ್ಮಥಂ ನನೆಗಣೆಯಂ ಹೂಡಿದಂ, ವಿರಹಿಗಳ್ ವಿರಥರಾದರ್, ದೇವಾ ಇಂದಿನ ದಿನಂ ಬೆಳತಿಗೆ ಬೆಳ್ದಿಂಗಳೊಳ್ ಪುರವೀಥಿಯ ವಿಳಾಸಮಂ ಕೆಯ್ಮಿಕ್ಕು ನೋಡಿ ರಾತ್ರೀ ವಿಹಾರಮಂ ಮಾಡಲ್ವೇಳ್ಪುದೆಂದು ಬಿನ್ನಯ್ಸಿದ ಮನ್ನಣೆಯ ರಸಿಕರ್ಗೆ ಪಸಾಯನಮನಿತ್ತೋಲಗಮಂ ಪರೆಯಲ್ವೇಳ್ದು ನಾರದನೊಡಗೂಡಿ ನಗರಾಜಂ ನಿರ್ಮಳೀಕೃತ ಕರಚರಣನುಂ, ಭಸಿತಾವಯವನುಂ, ರುದ್ರಾಕ್ಷಮಾಲಾಲಂಕೃತನುಂ, ಶಿವಲಿಂಗೇಕ್ಷಣ ನಿತ್ಯ ನಿಯಮ ಸಂಪನ್ನನುಂ, ಪ್ರಸಾದ ಭರಿತ ಶರೀರನುಂ, ಸುಗಂಧಮಯ ತಾಂಬೂಲಮುಖನುಂ, ಕುಸುಮಾವಳೀ ಪರಿವೃತ ಕಬರೀಭರನುಂ, ಯಕ್ಷಕರ್ದಮ ಕಕ್ಷಪುಟನುಂ, ನವ್ಯ ವಸ್ತ್ರ ಪರಿವ್ರತನುಂ, ದಿವ್ಯಾಭರಣಸರ್ವಾಂಗನುಮಾಗಿ ದಕ್ಷಿಣಾನುಕೂಲ ಧೃಷ್ಟಶಠನಾಯಕರೆಂಬ ರಾಜಪುತ್ರರಂ ಕೂಡಿಕೊಂಡು ಸಕಲ ಸುಕುಮಾರ ಭೋಗನಿಯೋಗ ನಿರತರ್ ಪಿಂತೆಬರೆ ನಾರದ ಮುನೀಂದ್ರ ಸಹಿತಂ ಗಿರಿರಾಜಂ ತನ್ನರಮನೆಯಂ ಪೊಱಮಟ್ಟು ರಾಜವೀಥಿಯೊಳ್ ನಿಂದು ಪೂರ್ವದಿಶಾವಲೋಕನನಾಗಿ ಕಟ್ಟಿದಿರೊಳಿಟ್ಟಣಿಸಿದ ಬೆಳಗಿಂ ದಟ್ಟಯ್ಸಿ ತೋರ್ಪ ಚಂದ್ರಬಿಂಬಮಂ ನೋಳ್ಪಾಗಳ್.

ಕಂ॥ ಸರಸನೆನಿಸಿರ್ದ ಸಖ ನಾ
ಗರಿಕಂ ಕೆಲಸಾರ್ದು ನಿಂದು ಕೆಯ್ಮುಗಿಯುತ್ತುಂ ।
ಪರಿಪೂರ್ಣಚಂದ್ರಮಂಡಲ
ದಿರವಂ ಕಂಡಾಗಳವನಿಪಂಗಿಂತೆಂದಂ ॥ ೧೦೩

ಕವಿಯಿತು, ಜಾರೆಯರು ಹರ್ಷಗೊಂಡರು, ಗಗನದಲ್ಲಿ ತಾರೆಗಳು ಮೂಡಿದವು, ಚಂದ್ರನುದಿಸಿದನು, ಬೆಳದಿಂಗಳು ಹಬ್ಬಿತು, ಪಾಣ್ಬೆಯರು ದಿಗಿಲುಗೊಂಡರು. ಜೊನ್ನವಕ್ಕಿಗಳು ಹರ್ಷಗೊಂಡವು, ಮನ್ಮಥ ಹೂಬಾಣ ಹಿಡಿದು ಯುದ್ಧಸನ್ನದ್ಧನಾದ, ವಿರಹಿಗಳು ವಿರಥರಾದರು (ಸೋತರು) ಈಗ ತಾವು ರಾತ್ರಿವಿಹಾರಕ್ಕೆ ಚಿತ್ತೈಸಬೇಕು ಎಂದು ಬಿನ್ನೈಸಿದರು. ರಾಜನು ಆ ರಸಿಕರಿಗೆ ಮೆಚ್ಚನಿತ್ತು ಓಲಗವನ್ನು ಮುಕ್ತಗೊಳಿಸಿ ನಾರದನೊಡನೆ ಕೈಕಾಲ್ತೊಳೆದು ಭಸ್ಮರುದ್ರಾಕ್ಷಗಳನ್ನು ಧರಿಸಿ, ಶಿವಾರ್ಚನೆಯೆಸಗಿ, ಪ್ರಸಾದವನ್ನು ಸ್ವೀಕರಿಸಿ, ತಾಂಬೂಲಚರ್ವಣವನ್ನು ಮಾಡಿ, ಮುಡಿತುಂಬಿ ಸುಗಂಧ ಪುಷ್ಪಮಾಲೆಗಳನ್ನು ಧರಿಸಿ, ಕಸ್ತೂರೀ ಪುನಗುಗಳನ್ನು ಲೇಪಿಸಿಕೊಂಡು ನೂತನ ವಸ್ತ್ರಾಭರಣಗಳನ್ನು ಸಿಂಗರಿಸಿಕೊಂಡು ದಕ್ಷಿಣ–ಅನುಕೂಲ–ಧೃಷ್ಟ–ಶಠ–ನಾಯಕರೆಂಬ ರಾಜಪುತ್ರರಂ ಕೂಡಿಕೊಂಡು ರಸಿಕರು ಹಿಂಬಾಲಿಸುತ್ತಿರಲು ನಾರದ ಮುನಿಯೊಡನೆ ಅರಮನೆಯಿಂದ ಹೊರಟು ರಾಜಬೀದಿಗೆ ಬಂದು ಪೂರ್ವದಿಕ್ಕಿನಲ್ಲಿ ಕಾಣುವ ಚಂದ್ರಬಿಂಬವನ್ನು ನೋಡುತ್ತಾ ೧೦೩. ಅವರಲ್ಲಿ ಸರಸಿಯೆನಿಸುವ ಒಬ್ಬ ಮಿತ್ರನಾಗರಿಕನು ರಾಜನ ಪಕ್ಕಕ್ಕೆ ಬಂದು ಕೈಮುಗಿದು ಪರಿಪೂರ್ಣ ಚಂದ್ರಮಂಡಳವನ್ನು ಕಂಡು ಅರಸನಿಗೆ ಬಿನ್ನೈಸಿದ.

ಉ॥ ಇಂದು ಸುಧಾಂಶುರಾಜನತಿ ಶೀತಳ ಶೀಲನನೂನದಾನಿಯೋ
ಳ್ತಂದೊಡೆ ಕೈರವಕ್ಕೆ ಶಶಿಕಾಂತದ ಕಲ್ಗೆ ಚಕೋರಮಾಲೆಗಾ ।
ನಂದಮದಾಯ್ತು ಪಂಕಜಕೆ ಚಕ್ರಯುಗಕ್ಕಸತೀಕುಲಕ್ಕೆ ಪೋ
ದಂದುಗಮಾಯ್ತು ಸರ್ವಜನಸಮ್ಮತನಾವ ನಗಾಧಿನಾಯಕಾ ॥ ೧೦೪

ವ॥ ಮತ್ತಮಲ್ಲದೆ,

ಕಂ॥ ಕಮಲಂಗಳೊಡನೆ ಧಾತ್ರೀ
ಕುಮುದಂ ಮುಗಿದಿರ್ದುವರಸ ಕುಮುದದೊಡನೆ ತತ್ ।
ಕಮಲಂ ಮಿಕ್ಕಲರ್ದುವು ಚಂ
ದ್ರಮನುದಯದೊಳೆಂದೊಡಿಳೆಗದೇಂ ಕೌತುಕವೋ ॥ ೧೦೫

ವ॥ ಮತ್ತಮಲ್ಲದೆ ದೇವಾ, ಪರ್ಬಿದ ಬೆಳ್ದಿಂಗಳಗುರ್ಬನೇನಂ ಬಣ್ಣಿಪೆಂ

ಕಂ॥ ಮುನ್ನಂ ಪಯೋಧಿ ಪಡೆದೊಡೆ
ತನ್ನಂ ಶಶಿ ಪಡೆದನಾ ಪಯೋಧಿಯನೆಂಬಂ ।
ತುನ್ನತಿವೆತ್ತುದು ರಾಜೋ
ತ್ಪನ್ನಮಭಿನ್ನಂ ಪ್ರಸನ್ನಮೊಪ್ಪುವ ಜೊನ್ನಂ ॥ ೧೦೬

ಮ॥ ಹರನುದ್ಧೂಳಿಸಿದತ್ಯನೂನಭಸಿತ ಪ್ರದ್ಯೋತಮೋ ಚಂದ್ರಶೇ
ಖರನಾನಂದಮಯಾಟ್ಟಹಾಸರುಚಿಯೋಸರ್ವೇಶ ಸತ್ಕೀರ್ತಿಯೋ ।
ಪರಮೋತ್ತುಂಗ ಮರುನ್ನದೀ ಪ್ರಬಳ ಗೌರಚ್ಛಾಯೆ ಭೂಭಾಗದೊಳ್
ಪರೆದತ್ತೋ ಎನೆ ಪರ್ವಿತುರ್ವಿಯನಗುರ್ವಿಂ ಸಾಂದ್ರಚಂದ್ರಾತಪಂ ॥ ೧೦೭

೧೦೪. ಹೇ ನಗರಾಜ, ಈ ಸುಧಾಂಶುರಾಜನು ಅತಿಶೀತಲ ಶೀಲ, ಮೇಲಾಗಿ ಅನೂನ ದಾನಿ; ಇವನ ಉದಯದಿಂದ ನೈದಿಲೆಗೆ, ಚಂದ್ರಕಾಂತಶಿಲೆಗೆ, ಚಕೋರಗಳಿಗೆ ಆನಂದ ವಾದೀತು; ಆದರೆ ತಾವರೆಗೆ ಚಕ್ರವಾಕಗಳಿಗೆ ಅಸತಿಯರಿಗೆ ತೊಂದರೆಯೂ ಆಯಿತು. ಎಂದ ಮೇಲೆ ಲೋಕದಲ್ಲಿ ಸರ್ವಸಮ್ಮತನಾದವನು ಯಾವನಿದ್ದಾನೆ! ೧೦೫. ಚಂದ್ರೋದಯ ಕಾಲದಲ್ಲಿ ಕಮಲಗಳ ಜೊತೆಗೆ ಜಗತ್ತೆಂಬ ನೈದಿಲೆ (ಕುಮುದ)ಯೂ ಮುಚ್ಚಿಕೊಂಡಿತು. ಇನ್ನು ಕುಮುದದೊಡನೆ ಜಾರೆಯರ ನೇತ್ರಕಮಲಗಳು ಅರಳಿದವು ಎಂದರೆ ಏನು ಆಶ್ಚರ್ಯ! ೧೦೬. ಹಿಂದೆ ಕಡಲು ಚಂದ್ರನನ್ನು ಪಡೆಯಿತು. ಈಗ ಚಂದ್ರನೇ ಕಡಲನ್ನು ಪಡೆದನೋ ಎಂಬಂತೆ ರಾಜ (ಚಂದ್ರ)ನಿಂದ ಉದಿಸಿದ ಬೆಳದಿಂಗಳು ಪ್ರಸನ್ನ ಗಂಭೀರವಾದ ಕಡಲಿನಂತೆ ಬೆಳಗಿತು. ೧೦೭. ಆ ಬೆಳ್ದಿಂಗಳು–ಪರಶಿವನು (ಎಬ್ಬಿಸಿದ) ಉದ್ಧೂಳನವೆಸಗಿದ ಭಸಿತವೆಂಬ ಧೂಳಿನ ಬೆಳಕೋ, ಚಂದ್ರಶೇಖರನ ಆನಂದಮಯ

ಚಂ॥ ಮುಡಿವೊಡೆ ಮಲ್ಲಿಕಾಪ್ರತತಿ ಪೂಸುವೊಡುತ್ತಮ ನವ್ಯಚಂದನಂ
ತುಡುವೊಡೆ ಮೌಕ್ತಿಕಾಭರಣವೀಸುವೊಡಂತಮೃತಾಬ್ಧಿ ಪೊರ್ದುಕೊ।
ಳ್ವೊಡೆ ಧವಳೋತ್ತರೀಯಮೊಸೆದೀಂಟುವೊಡಾನವದುಗ್ಧಮೊಲ್ದು ನೋ
ಳ್ಪೊಡೆ ರಜತಾದ್ರಿಯೆಂದೆನಿಸಿ ತೋಱಿತು ಮಿಱಿದ ಚಂದ್ರಿಕೋಜ್ವಳಂ॥ ೧೦೮

ಕಂ॥ ಸರಳಜನಂ ಕೌಮುದಿಯಿಂ
ದೆ ಕಡೆದು ಕಂಡರಿಸಿತೆಂಬ ನುಡಿ ಚಿತ್ರಮೆ ಕೌ।
ತುಕಮರಸ ಚಂದ್ರಮಂ ಚಂ
ದ್ರಿಕೆ ಕವಿದ ಕಳಂಕ ಚಂದ್ರನಂತೆಸೆದಿರ್ದಂ॥ ೧೦೯

ಶಿಹಕೀರ್ತಿರಸದೆ ಬೊಮ್ಮಂ
ತವೆ ತೊಳೆದನೊ ಜಗಮನಮೃತವಾರ್ಧಿಯ ಬೆಳಗಿಂ।
ಧವಳಿಸಿದನೊ ಪೇಳೆನೆ ಭೂ
ಭುವನಮನೆಡೆಗೊಂಡುದಚ್ಚ ಪೊಸವೆಳ್ದಿಂಗಳ್॥ ೧೧೦

ವ॥ ಇಂತೊಪ್ಪುವ ಸಾಂದ್ರಚಂದ್ರಿಕಾ ಸಂಪದಮಂ ನಗೇಶ್ವರಂಗೆ ನಾಗರಿಕಂ ನಲಿನಲಿದು ತೋಱುತ್ತುಂ ಮಿಱಿ ಬರೆವರೆ ಪಟ್ಟಣದ ದಟ್ಟಯಿಸಿದ ಪಲವು ವೀಥಿಗಳ ವಿಚಿತ್ರ ವಿಭ್ರಮಮಂ ಶೈಲಪತಿಯಾಲೋಕಿಸುತ್ತುಂ ಕೇಳುತ್ತುಂ ಬಾಳುತ್ತುಂ ಕೇಳೀವನಮಂ ಪುಗುತರ್ಪಾಗಳ್,

ಅಟ್ಟಹಾಸ (ನಗೆ)ದ ರುಚಿ (ಬೆಳಕು)ಯೋ, ಸರ್ವೇಶ್ವರನಾದ ಶಿವನ ಸತ್ಕೀರ್ತಿಯೋ, ಅತಿ ಶ್ರೇಷ್ಠವಾದ ದೇವಗಂಗೆಯ ಗೌರಚ್ಛಾಯೆ (ಬಿಳುಪು) ಭೂಲೋಕದಲ್ಲಿ ಹರಡಿದೆಯೊ, ಎಂಬಂತೆ ದಟ್ಟವಾಗಿ ಹಬ್ಬಿತ್ತು. ೧೦೮. ಆ ಬೆಳದಿಂಗಳು ವಿವಿಧ ರೀತಿಯಾಗಿ ಕಂಡಿತು. ಮುಡಿಯುವವರಿಗೆ ಅದು ಮಲ್ಲಿಗೆಹೂ, ಲೇಪಿಸಿಕೊಳ್ಳುವವರಿಗೆ ನವ್ಯಚಂದನ, ತೊಡುವುದಕ್ಕೆ ಮುತ್ತಿನ ಆಭರಣ, ಈಜಬೇಕು ಎಂದರೆ ಹಾಲು ಕಡಲು, ಹೊದ್ದುಕೊಳ್ಳೋಣ ಎಂದರೆ ಬಿಳಿಯ ಉತ್ತರೀಯ, ಕುಡಿಯೋಣ ಎಂದರೆ ಹೊಸಹಾಲು, ಒಲಿದು ನೋಡೋಣ ಎಂದರೆ ರಜತಾದ್ರಿ, ಎಂಬಂತೆ ಕಂಡಿತು. ೧೦೯. ಸಕಲಜನವೂ ಕೌಮುದಿ (ಬೆಳದಿಂಗಳು) ಯಿಂದೆ ಕಡೆದ ರೂಪುಗೊಳಿಸಿತು ಎಂಬ ಮಾತು ಆಶ್ಚರ್ಯವೆ ? ಎಲೈಅರಸನೆ, ಚಂದ್ರನು ಬೆಳದಿಂಗಳು ಮುಚ್ಚಿಕೊಂಡಿರುವ ಕಳಂಕಯುಕ್ತ ಚಂದ್ರನಂತೆ ಕಾಣುತ್ತಿದ್ದಾನೆ. ೧೧೦. ಸ್ವಚ್ಛವಾದ ಹೊಸ ಬೆಳದಿಂಗಳು ಭುವನವನ್ನೆಲ್ಲ ವ್ಯಾಪಿಸಿತ್ತು. ಅದನ್ನು ನೋಡಿದರೆ ಬ್ರಹ್ಮನು ಶಿವನ ಕೀರ್ತಿರಸದಿಂದ ಜಗತ್ತನ್ನು ತೊಳೆದನೋ, ಅಥವಾ ಅಮೃತಸಾಗರ ಬೆಳಗಿನಿಂದ ಬಿಳುಪು ಮಾಡಿದನೊ ಎಂಬಂತಿತ್ತು. ವ॥ ಹೀಗೆ ನಾಗರಿಕನು ಗಿರಿರಾಜನಿಗೆ ಬೆಳ್ದಿಂಗಳ ಸಂಪದವನ್ನು ಬಿನ್ನೈಸುತ್ತಿರುವಾಗ ರಾಜನು ಮುನ್ನಡೆದು ಪಟ್ಟಣದ ದಟ್ಟಯಿಸಿದ ಬೀದಿಗಳ ವೈಚಿತ್ರ್ಯಗಳನ್ನು ನೋಡುತ್ತಾ ಕೇಳೀ ವನವನ್ನು ಹೊಕ್ಕನು.

ಕಂ॥ ಸುಗಿದಿವೆ ಕಮಳಂ ಕುಮುದಂ
ನಗುತಿವೆ ಕೋಕದ್ವಯಂ ರತೀಶ್ವರನೆಸುವಿಂ ।
ದುಗಿ ಬಗಿಯಾಗುತ್ತಿವೆ ಮಿಗೆ
ಬಗೆವೆರ್ಚುತ್ತಿವೆ ಸರಾಗಪೂರ ಚಕೋರಂ ॥ ೧೧೧

ಉ॥ ಚೂತಮನಪ್ಪಿ ಪುಷ್ಪವತಿಯಾದುದು ಮಲ್ಲಿಗೆ ಶೀತಕೃತ್ಕರ
ವ್ರಾತಮನಪ್ಪಿಯೊಪ್ಪೆ ಕರಗಿತ್ತು ಹಿಮೋಪಲವೋತು ತುಂಬಿಯಂ ।
ಪ್ರೀತಿಯೊಳಪ್ಪಿ ಗರ್ಭಿಣಿಯದಾಯ್ತು ಸರೋರುಹಮುತ್ಪಲಂ ಪ್ರಸೂ
ತಾತುರೆಯಾಗಿ ಪೆತ್ತುದಳಿಯಂ ನವಚಂದ್ರಿಕೆಯೊಳ್ ನಗೇಶ್ವರಾ ॥ ೧೧೨

ವ॥ ಮತ್ತಮಲ್ಲದೆ,

ಕಂ॥ ಎಳದಳಿರೊಳರಲೊಳಾಮ್ರದ
ನೆಳಲೊಳ್ ಪುಳಿನಂಗಳೊಳಗೆ ಶಶಿಕಾಂತ ಶಿಲಾ ।
ತಳದೊಳ್ ಕೊಳದೊಳ್ ವನದೊಳ್
ತಳರದ ವಿರಹಿಗಳ ವೀಥಿಯಿದೆ ಗಿರಿರಾಜಾ ॥ ೧೧೩

ಉ॥ ಒತ್ತುವ ಪದ್ಮಪತ್ರಕದಳೀದಳ ಸಂಕುಳಮೆಯ್ದೆ ಬೆಂದು ಸೀ
ಯುತ್ತಿವೆ ದೂರದಿಂದೆ ಸಖಿಯರ್ ತವೆ ಚೆಲ್ಲುವ ಶೀತವಾರಿಯು ।
ರ್ಕುತ್ತಿವೆ ಬೀಸುತಿರ್ಪ ಕುಸುಮೋಜ್ವಳ ವೀಜನ ವೃಂದವೋವೊ ಪೊ
ತ್ತುತ್ತಿವೆ ತನ್ವಿಯೋ ವಿರಹವಹ್ನಿಗೆ ಪುಟ್ಟಿದದೊಂದು ಮೂರ್ತಿಯೋ ॥ ೧೧೪

೧೧೧. ಕಮಲಗಳು ಸಂಕೋಚಗೊಂಡಿವೆ. ನೈದಿಲೆಗಳು ನಗುತ್ತಿವೆ. ಮನ್ಮಥನ ಬಾಣದ ಹೊಡೆತದಿಂದ ಪ್ರೇಮಪ್ರವಾಹದಿಂದ ಕೂಡಿದ ಕೋಕ (ಚಕೋರ)ಗಳ ಜೋಡಿ ಉತ್ಸಾಹಗೊಳ್ಳುತ್ತಿವೆ. ೧೧೨. ಎಲೈನಗರಾಜನೆ, ನವಚಂದ್ರಿಕೆಯಲ್ಲಿ ಈ ಮಲ್ಲಿಗೆ ಚೂತವೃಕ್ಷವನ್ನು ಅಪ್ಪಿ ಪುಷ್ಪವತಿಯಾಯಿತು. ಚಂದ್ರಕಾಂತವು ಚಂದ್ರಕಿರಣಗಳನ್ನು ಅಪ್ಪಿಕರಗಿತು. ತಾವರೆಯು ತುಂಬಿಯನ್ನು ಪ್ರೀತಿಯಿಂದ ಆಲಿಂಗಿಸಿ ಗರ್ಭಿಣಿಯಾಯಿತು. ಈ ನೈದಿಲೆಯಾದರೂ ಪ್ರಸೂತಿಯ ಆತುರದಿಂದ ಅಳಿ (ದುಂಬಿ)ಯನ್ನು ಹೆತ್ತಿತು. ೧೧೩. ಎಲೈ ನಗಾಧಿಪನೆ, ಎಳೆ ಚಿಗುರುಗಳಲ್ಲಿ, ಹೂವಿನ ಹಾಸಿಗೆಗಳಲ್ಲಿ, ಮಾವಿನಮರ ದಡಿಯಲ್ಲಿ, ಮರಳುದಿಬ್ಬಗಳಲ್ಲಿ, ಚಂದ್ರಕಾಂತಶಿಲಾತಳಗಳಲ್ಲಿ, ಕೊಳದಲ್ಲಿ ವನದಲ್ಲೆಲ್ಲ ಚಲಿಸಿ ವಿರಹಿಗಳನೇಕರು ತಾಪಶಮನ ಮಾಡಿಕೊಳ್ಳುತ್ತಿದ್ದಾರೆ. ೧೧೪. ತನ್ವಿಯ ವಿರಹ ತಾಪವನ್ನು ಉಪಶಮನಮಾಡಲು ಒತ್ತುವ ಕಮಲದ ಎಲೆ ಮತ್ತು ಕದಳೀದಳಗಳು ಬೆಂದು ಸೀದುಹೋದುವು, ಸಖಿಯರು ದೂರದಿಂದ ಚೆಲ್ಲುವ ತಣ್ಣೀರು ಉಕ್ಕುತ್ತಿವೆ. ಓಹೊ, ಗಾಳಿ ಬೀಸುವ ಹೂವಿನ ಬೀಸಣಿಗೆಗಳು ಹೊತ್ತಿಕೊಂಡವು ! ಇದೇನು ಇವಳು ತನ್ವಿಯೋ ಅಥವಾ ವಿರಹಾಗ್ನಿಗೆ ಹುಟ್ಟಿದ ಒಂದು ಮೂರ್ತಿಯೋ ಏನೋ ! ೧೧೫. ಎಲೈ ಅರಸನೆ, ಈ ಸಖಿಯರು ವಿರಹಸಂತಪ್ತಳಾದ ಈ ಲಲನೆಗೆ ಮಾಡುವ ಶೈತ್ಯೋಪಚಾರವು

ಕಂ॥ ಸಂದಣಿಸಿ ಮಾಣದಾಳೀ
ವೃಂದಂ ಶಿಶಿರೋಪಚಾರಮಂ ಲಲನೆಗೆ ಮಾ।
ಳ್ಪಂದಂ ಘೃತದಿಂ ಕಿರ್ಚಂ
ನಂದಿಪ ತೆಱನಾಗಿ ತೋಱುತಿದೆ ನೋಡರಸಾ॥ ೧೧೫

ತಾಳ್ದಿದ ವಿರಹದೊಳೀಕೆಗೆ
ಬೆಳ್ದಿಂಗಳ್ ಬಿಳಿಯ ಕಿರ್ಚು ಸಸಿ ಬಿಸಿ ಕಾವಂ।
ತೂಳ್ದುವ ದಾವಂ ಚೈತ್ರಂ
ಸೀಳ್ದಿಕ್ಕುವ ಕುಂಭಿ ಕವಳಿ ಕದಳೀಘಾತಂ॥ ೧೧೬

ವ॥ ಎಂದಿಂತು ವಿರಹಾತಿಶಯಮಂ ಬಿನ್ನವಿಸುತ್ತುಂ ಬರೆವರೆ ಮುಂದೊಂದೆಡೆಯೊಳ್

ಕಂ॥ ಮಿಗೆ ಸೌಕುಮಾರ್ಯ ನವ ವ
ಸ್ತುಗಳಂ ಪೆಸರ್ಗೊಂಡೊಡುಳಿಯಳವಳೆನುತುಂ ಸು।
ತ್ತುಗವಳಲುತ್ತುಂ ಸಂಜ್ಞೋ
ಕ್ತಿಗಳಂ ತೋಱುತ್ತುಮಿರ್ದುದಬಳಾನೀಕಂ॥ ೧೧೭

ಚಂ॥ ಇದೆ ಪಿಕನೆಳ್ಚು ಹಂಸೆ ಬರುತಿರ್ದುದೆ ನೂಂಕು ಮಧುವ್ರತಾಳಿ ಮುಂ
ದಿದೆಯಿಡು·ಚಂಪಕಪ್ರಸವದಿಂ ಗಿಳಿವಿಂಡಿದೆ ಸೋವು ಮಾರುತಂ।
ಮದ ಮುಖದಿಂದೆ ತೀಡುತಿದೆಯೊಡ್ಡುಸೆಱಂಗನೆನಿಪ್ಪ ತಮ್ಮ ಹ
ಸ್ತದ ನಿಜಸಂಜ್ಞೆಯಿಂ ಸುದತಿಯರ್ ನುಡಿದರ್ ಶಿಶಿರೋಪಚಾರದೊಳ್॥ ೧೧೮

ವ॥ ಮತ್ತಮೊಂದೆಡೆಯೊಳೊರ್ವ ತರುಣಿಗತ್ಯಧಿಕ ವಿರಹತಾಪಂ ಒಳಗಂ ಪೊಱಗಂ

ತುಪ್ಪದಿಂದ ಬೆಂಕಿಯನ್ನು ಅಡಗಿಸಹೊರಟಂತೆ ಆಗಿದೆ. ೧೧೬. ವಿರಹಗೊಂಡ ಈಕೆಗೆ ಅನುಕೂಲ ವಸ್ತುಗಳೇ ವೈರಿಗಳಾಗಿವೆ. ಬೆಳಂದಿಗಳು ಬಿಳಿಯಕಿಚ್ಚು, ಶಶಿಯು ಬಿಸಿ, ಕಾಮನು ದಾಳಿಮಾಡುವ ಕಾಡ್ಗಿಚ್ಚು, ಚೈತ್ರವು ಸೀಳುವ ಮದ್ದಾನೆ, ಕದಳಿಯು ಕದಳೀ ಘಾತವಾದಂತಾಗಿದೆ. ವ॥ ಹೀಗೆ ಅವರ ಅತಿಶಯವಾದ ವಿರಹವೇದನೆಯನ್ನು ಬಿನ್ನವಿಸುತ್ತ ಬರುತ್ತಿರಲು ಮುಂದೆ ಒಂದು ಕಡೆಯಲ್ಲಿ ೧೧೭–೧೧೮. ಆ ವಿರಹಿಣಿಯರು ಪಕ್ಕದಲ್ಲಿ ಶೈತ್ಯೋಪಚಾರವನ್ನು ಮಾಡುತ್ತಿದ್ದ ಸಖಿಯರು ಹೇ ಸಖಿ, ಇದೊ ಇದು ಕೋಗಿಲೆ, ಇದನ್ನು ಎಬ್ಬಿಸು; ಹಂಸೆ ಹತ್ತಿರಬರುತ್ತಿದೆ ಅದನ್ನು ದೂರನೂಕಿ; ದುಂಬಿವಿಂಡು ಮುಂಪೆಯೇ ಇದೆ, ಅದಕ್ಕೆ ಸಂಪಿಗೆ ಹೂವಿನಿಂದ ಹೊಡೆ, ಈ ಗಿಳಿವಿಂಡನ್ನೂ ಸೋವು, ಬೀಸಿ ಬರುವ ಮಂದಮಾರುತಕ್ಕೆ ಸೆರಗನ್ನು ಅಡ್ಡಗಟ್ಟು, ಎಂದು ಅವರು ಕೈಸನ್ನೆಯಿಂದ ಶೈತ್ಯೋಪಚಾರವನ್ನು ನುಡಿಯುತ್ತಿದ್ದರು. ವ॥ ಒಂದೆಡೆಯಲ್ಲಿ ಓರ್ವತರುಣಿ; ಅವಳಿಗೆ ವಿರಹತಾಪ ಅಧಿಕವಾಗಿದೆ. ಅವಳ ಒಳಗೆ ಮತ್ತು ಹೊರಗೆ ವಿರಹತಾಪದಿಂದವನ್ನು ಕಾಯ್ದಿದೆ;

**ತಕ್ಕನೆ ತೀವೆ ತಳತಳಸಿಕಾಯ್ದು ಘುಳುಘುಳಿಸುವಯಃಪಿಂಡವೆಂದು ಶಶಿಮಂಡಲಮಂ ನೋಡ ಲಂಜಿ ಕಣ್ಮುಚ್ಚಿ ಬೆದಱುತ್ತುಂ, ಬಿಸಿಯ ಬೆಳಗೆಂದು ಬೆಳ್ದಿಂಗಳ ಸೋಂಕಿಂಗೆ ಮೆಯ್ದೆಗೆದು ಸುಗಿ ಯುತ್ತುಂ ಬಾಳಬಾಯ್ದಾರೆಯ ಸೋಂಕೆಂದು ಕದಳೀದಳ ಸ್ಪರ್ಶನಕ್ಕೆ ದರ್ಪಣಂಗೆಟ್ಟೊಪ್ಪಂಗುಂ ದುತ್ತುಂ, ವಸಂತನೆಂಬ ಕಮ್ಮಱಂ ಶಶಿಬಿಂಬದ ಪೊಸಸಾಣೆಯೊಳೊತ್ತಿ ಮಸೆವ ಕಾಮದೇವನ ಕೂರಲಗಿನ ದನಿಯೆಂದು ಕೋಕಿಲಧ್ವನಿಗಾಕಂಪನಂಗೊಳುತ್ತುಂ ಮಕರ ಧ್ವಜವೇತ್ರಧರ ಮುಖ ಜನಿತ ಮುಖರ ಗರ್ಜನಾರವಮೆಂದು ಚಪ್ಪರಿಪ ಗಿಳಿಗಳ ಬಳಗಕ್ಕೆ ಧರೆಗಿಳಿಯುತ್ತುಂ, ಬಿಡದಿಸುವ ಕುಸುಮಕೋದಂಡ ಚಂಡಪ್ರಸವ ಬಾಣಭೀಂಕಾರ ಘೋರಧ್ವನಿಯೆಂದುಱೆ ಝೇಂಕರಿಸುವ ತುಂಬಿಗಳ ಝೇಂಕಾರಕ್ಕೆ ಭೋಂಕನೆ ನಡುಗಿ ಸಂಕಿಸುತ್ತುಂ, ಚೈತ್ರ ರಾಜತೇಜಃ ಪ್ರತಾಪದುರಿಯ ಪಳವಿಗೆಯ ಪೊಯ್ಲೆಂದು ಬೀಸುವ ಪೊಂಬಾಳೆಯ ಚಾಮರದೆಲರ್ಗೆ ಕೊಱಗಿ ಕಳೆಗುಂದುತುಂ ಸಖೀಜನಂ ಕೆಯ್ಗೊಟ್ಟೆಯ್ತಂದು ಕೊಳನಂ ಪುಗಿಸೆ ಮೆಯ್ಯ ಬೆಂಕಿಯಿಂ ಚುಯ್ಯೆಂದು ನೊರೆಗಟ್ಟಿ**

ಆದರಿಂದ ತಳಮಳಗೊಂಡ ಅವಳ ದೃಷ್ಟಿಗೆ ಚಂದ್ರಮಂಡಲವೂ ಘುಳುಕಾಯ್ದಿರುವ ಕಬ್ಬಿಣದ ಗುಂಡಿನಂತಿದೆ.ಅಂಥದನ್ನು ನೋಡುವುದಕ್ಕೂ ಅವಳಿಗೆ ಹೆದರಿಕೆ. ಇದರಿಂದಾಗಿ ಅವಳು ಕಣ್ಣು ಮುಚ್ಚಿದ್ದಾಳೆ. ಇನ್ನು ಬೆಳದಿಂಗಳೂ ಅವಳಿಗೆ ಬಿಸಿಯಬೆಳಗಿನಂತಾಗಿದೆ; ಇದಕ್ಕಾಗಿ ಅವಳು ಬೆಳ್ದಿಂಗಳಿಗೆ ಮೈಬಿಡಲು ಸುಗಿಯುತ್ತಿದ್ದಾಳೆ; ಇನ್ನು ಕಾಯ್ದ ಮೈತಂಪು ಮಾಡಲು ಬಾಳೆಎಲೆಯನ್ನು ಮೈಗೆ ಮುಚ್ಚೋಣವೆಂದರೆ ಅದು ಬಾಳ (ಖಡ್ಗ) ಧಾರೆಯಂತೆ ಇರುವುದರಿಂದ ಅದನ್ನು ನೋಡುವುದಕ್ಕೂ ಅವಳಿಗೆ ಸಂಕೋಚ. ದರ್ಪಕೆಟ್ಟು ಒಪ್ಪಕುಂದಿದೆ; ಕೋಗಿಲೆಗಳ ಧ್ವನಿ ಅವಳ ಪಾಲಿಗೆ ಕಾಮದೇವನ ಕ್ರೂರವಾದ ಅಲಗಿನ ದನಿಯಂತೆ ಕರ್ಕಶವಾಗಿದೆ; ಮೇಲಾಗಿ ಆ ಅಲಗುಗಳು ವಸಂತನೆಂಬ ಕಮ್ಮಾರನು ಶಶಿಬಿಂಬದ ಹೊಸಸಾಣೆಗೆ ಕೊಟ್ಟು ಮಸೆದಂತೆ ಹರಿತವಾಗಿವೆ. ಆದ್ದರಿಂದ ಅವಳು ಕೋಗಿಲೆಯ ಧ್ವನಿಗೆ ಹೆದರಿ ನಡುಗುತ್ತಿದ್ದಾಳೆ. ಇನ್ನು ಗಿಳಿಗಳ ಅಕ್ಕರೆಯ ಮಾತುಗಳೂ ಅವಳ ಪಾಲಿಗೆ ಇಲ್ಲವಾಗಿವೆ. ಏಕೆಂದರೆ ಮಕರಧ್ವಜ (ಕಾಮ)ನೆಂಬ ವೇತ್ರಧರ ಅವನ ಮುಖದಿಂದ ಹೊರಟ ಗರ್ಜನೆಯಂತೆ ಅವಳು ಗಿಳಿಗಳ ಶಬ್ದಕ್ಕೆ ಹೆದರಿ ಭೂಮಿಗಿಳಿದು ಹೋಗಿದ್ದಾಳೆ. ದುಂಬಿಗಳ ಝೇಂಕಾರದ ಬಗೆಗೂ ಅವಳಿಗೆ ಒಂದು ಶಂಕೆ ಇದ್ದೇ ಇದೆ. ಏನೆಂದರೆ ಅದು ಬಿಡದೆ ಪ್ರಯೋಗಿಸುವ ಪ್ರಚಂಡ ಕುಸುಮ ಬಾಣನ ಅಂಬುಗಳ ಧ್ವನಿಯಂತೆ ಭೀಕರವಾಗಿ ಕೇಳುತ್ತಿದೆ. ಇನ್ನು ತಾಪಶಮನಕ್ಕಾಗಿ ಹೊಂಬಾಳೆಯ ಚಾಮರದ ಗಾಳಿಯನ್ನೂ ಸಹ ಅವಳು ತಡೆಯಲಾರದವಳಾಗಿದ್ದಾಳೆ; ಏಕೆಂದರೆ ಅದು ಚಿತ್ರನೆಂಬ ರಾಜನ ಪ್ರತಾಪದುರಿಯ ಧ್ವಜಪಟದ ಹಬೆಯಂತೆ ತಾಪವನ್ನೇ ಉಂಟುಮಾಡುತ್ತದೆ. ಹೀಗಾಗಿ ಅವಳು ಕೊರಗಿ ಕಳೆಗುಂದಿದ್ದಾಳೆ. ಅವಳನ್ನು ಸಖಿಯರು ಕೈಗೊಟ್ಟು ಕರೆತಂದು ತಾಪಶಮನಕ್ಕಾಗಿ ಕೊಳವನ್ನು ಪುಗಿಸಿದರು. ಆದರೆ ಅವಳ ಮೈಬೆಂಕಿಯಾಗಿದ್ದುದರಿಂದ ನೀರುಸೋಂಕಿದೊಡನೆಯೆ ಚುಯ್ಯೆಂದಿತು! ನೀರು ನೊರೆಗಟ್ಟಿತು! ತೆರೆ ತನುಮುಟ್ಟಿ ಸೆಕೆಯ ಉಸಿರು ಭುಗಿಲ್ ಎಂದು ಒಗೆಯಿತು. ಕಾಯ್ದ

ಬಿಸಿಯ ತೆರೆ ತನುಮುಟ್ಟಿ ಸೆಕೆಯುಸಿರ್ ಭುಗಿಲನೊಗೆದು ಕಾದ ನೀರ್ ಕಾಯಮಂ ಸುಡೆ ಘಳಿಲನೆ ಪೊಱಮಟ್ಟು ಕೆಳದಿಯರಂ ನೆಮ್ಮಿ ಹಮ್ಮೈದಂಬೋಗುತ್ತುಂ ಕಾಮಂಗೆ ಕನಲ್ದು ವಸಂತಂಗಳಲ್ದು ಎಳಲತೆಗೆ ಬಳಲ್ದು ಪಲ್ಲವಕ್ಕೆ ಕಳಲ್ದು ಕುಸುಮಕುಲಕ್ಕೆ ಬಸವಳಿದು ಮಂದಾನಿಳಂಗೆ ಮದವುಡುಗಿ ಕಾಮನ ಕಾರಾಗಾರದೊಳಿರ್ಪಂತೆ ಕೇಳೀವನದೊಳಿರ್ಪ ಬಾಲಕಿಗೆ ಚಂದ್ರನ ದಾಳಿ ಅಳಿಗಳ ದಳವುಳಂ ಬಸಂತನ ಬಂದಿ ಬಾಲಚೂತದ ಭಯಂ ಮಳಯಾನಿಳನ ಗಾಸಿ ಶಿಶಿರೋಪಚಾರದ ದಂಡಣೆಯ ಖಂಡಿತವಾಗೆ ಕೊಱಗಿ ಕರಗಿ ಕಂದಿ ಕುಂದಿ ಕೋಡಿ ಬಾಡಿ ಸುರುಳ್ದುರುಳ್ದು ತೆರಳ್ದು ಒಳಗಾಱಿ ಬಿಸುಪೇಱಿ ಕಳೆಗುಂದಿಯಾಸೆಯೞಿತು ನೋಟಂ ಬೞಿತು ವಿರಹಾಗ್ನಿಯೆತ್ತಿ ಮನಂ ಪೊತ್ತಿ ಬುದ್ಧಿ ಕವರ್ದು ಅಹಂಕಾರಂ ಹೊಗೆದು ಚಿತ್ತಂ ಬೆಂದು ಹರಣಮುರಿದು ಹಮ್ಮಯ್ಸಿ ಕಣ್ಮುಚ್ಚಿ ವಿರಹದ ಕರುವಿನಂತೆ ಕರುಣದ ಹಾಹೆಯಂತೆ ದೈನ್ಯದ ಸೀಮೆಯಂತೆ ಕಾರ್ಪಣ್ಯದ ನೆಳಲಂತೆ ವಿಲಾಸದ ವಿರತೆ ವಿಭ್ರಮದಭ್ರಚ್ಛಾಯೆ ಲಾವಣ್ಯದ ಬಂಜೆ ಭೋಗದ ವಿಯೋಗಿಯೆನಿಸಿರ್ದ ತರುಣಿಯರ ವಿರಹಾತಿಶಯಮಂ ಗಿರಿರಾಜಂ ಕರುಣಿಸಿ ನೋಡಿ ಕೌತುಕಮನಾಳುತ್ತಾ ವನದೊಳ್ ಬೇಯುತ್ತುಮಿರ್ಪ ವಿರಹಿಗಳ್ಗವರವರ ನಲ್ಲರನಲ್ಲಲ್ಲಿ ತಂದು ಸಲ್ಲೀಲೆಯಿಂ ಕೂಡುವುದೆಂದು ಚರರಂ ಪರಿಕಲ್ಪಿಸುತ್ತುಂ ತಿರುಗಿ ನಡೆತಂದು ಪಣ್ಯಾಂಗನಾವೀಥಿಯಂ ಪುಗುತಪ್ಪಾಗಳ್,

ಮ॥ ಸ್ರ॥ ಯುವತೀಸಂತಾನ ನಾನಾಚಲದಳಕ ಲಸಲ್ಲಾಸ್ಯಲೀಲಾಪ್ರಬದ್ಧಂ
ವಿವಿಧಾಗಾರಾಂಗಣ ಪ್ರಸ್ಫುರಿತ ಕೃತಕಕಾಸಾರ ಪಾನೀಯಭಂಗೋ।
ದ್ಭವ ಬಿಂದುವ್ರಾತ ಶೀತಾವರಣನೊಲವಿನಿಂ ತೀಡಿದಂ ಸ್ತ್ರೀಕುಲೋದ್ಯ
ನ್ನವಕಸ್ತೂರೀ ಹಿಮಪ್ರೋನ್ಮಲಯಜಘುಸೃಣಾಮೋದಭಾರಂ ಸಮೀರಂ ॥ ೧೧೯

ನೀರು ಮೈಯನ್ನು ಸುಟ್ಟಿತು. ಇದರಿಂದ ಅವಳು ಅಲ್ಲಿಂದ ಕೂಡಲೆ ಹೊರಬಂದು ಸಖಿಯರ ಮಾತನಂಬಿ ಕೆಟ್ಟೆನೆಂದು ಹಲುಬಿದಳು. ಮದನನಿಗೆ ಕೋಪಿಸಿಕೊಂಡು, ವಸಂತನಿಗೆ ಅಳಲಿ, ಎಳೆಲತೆಗೆಬಳಲಿ, ಚಿಗುರಿಗೆಕದ್ದು, ಕುಸುಮಗಳಿಗೆ ಬಳಲಿ, ಮಂದಮಾರುತಕ್ಕೆ ಮದವಳಿದು, ಕಾಮನ ಕಾರಾಗೃಹದಲ್ಲಿದ್ದಂತೆ ಕೇಳೀವನದಲ್ಲಿದ್ದ ಆ ಬಾಲಕಿಗೆ ಚಂದ್ರ, ದುಂಬಿಗಳು, ವಸಂತ, ಎಳೆಮಾವು, ಮಂದಮಾರುತ, ಶಶಿರೋಪಚಾರಗಳೆಲ್ಲ ವಿರುದ್ಧವೇ ಆದವು. ಇದರಿಂದ ದಿಕ್ಕೆಟ್ಟ ಅವಳು ವಿರಹಾಗ್ನಿ ಪೀಡಿತಳಾಗಿ ವಿರಹದ ಕರುವಿನಂತೆ, ಕರುಣದ ಹಾಹೆ (ಕಣ್ಣಗುಡ್ಡೆ)ಯಂತೆ ದೈನ್ಯದ ಸೀಮೆಯಂತೆ ಕಾರ್ಪಣ್ಯದಿಂದ ವಿಲಾಸವೆಲ್ಲ ಉಡುಗಿ, ಲಾವಣ್ಯವಳಿದು, ಭೋಗವಿರಹಿತಳಾಗಿದ್ದಳು. ಇಂತಹ ಅನೇಕ ಯುವತಿಯರನ್ನು ನೋಡಿ ಗಿರಿರಾಜನಿಗೆ ಕರುಣೆಯುದಿಸಿತು. ಸೋಜಿಗಗೊಂಡನು. ಅವರವರ ನಲ್ಲರಲ್ಲಿಗೆ ಅವರವರನ್ನು ಸೇರಿಸಲು ಆಜ್ಞೆ ಮಾಡಿದನು. ಅದಕ್ಕೆ ಅನುಚರರನ್ನು ನೇಮಿಸಿದನು. ಮುಂದೆ ಗಿರಿರಾಜನು ಪಣ್ಯಾಂಗನಾವೀಥಿ (ಸೂಳೆಗೇರಿ)ಯ ಕಡೆ ಹೊರಟನು.

೧೧೯. ಮಂದಮಾರುತ ಬೀಸತೊಡಗಿತು. ಆ ಮಂದಮಾರುತವು ಅನೇಕ ಯುವತಿಯರ ಚಂಚಲ ಮುಂಗುರುಳುಗಳನ್ನು ಕುಣಿಸುವ ಲೀಲೆಯಲ್ಲಿ ತೊಡಗಿದ್ದುದು ; ಅನೇಕ ಮನೆಗಳ ಅಂಗಳಗಳಲ್ಲಿರುವ ಕೃತಕಮಡುಗಳ ನೀರನ್ನು ಚದುರಿಸುವುದರಿಂದ ಸಿಡಿದ ಜಲ

ಚಂ॥ ಸಕಳ ನಿಕೇತನಂಗಳೊಳೆ ದರ್ಪಕನುನ್ನತಿ ದರ್ಪಕಾಜ್ಞೆ ದ
ರ್ಪಕನ ಕಥಾಳಿ ದರ್ಪಕನ ವರ್ಣನೆ ದರ್ಪಕನ ಪ್ರಶಸ್ತಿ ದ ।
ರ್ಪಕನ ವಿಳಾಸ ವಿಭ್ರಮತೆ ದರ್ಪಕನುಜ್ಜ್ವಳತೇಜದೇಳ್ಗೆ ದ
ರ್ಪಕನ ಸುಕೀರ್ತಿ ದರ್ಪಕನ ದಂಡನೆ ದರ್ಪಕನಾಣೆ ಸುತ್ತಲುಂ ॥ ೧೨೦

ರತಿಯ ವಿಲಾಸದಿಂ ರತಿಯ ವಿಭ್ರಮದಿಂ ರತಿಯರ್ಚನಾಳಿಯಿಂ
ರತಿಯತಿತೇಜದಿಂ ರತಿಯನೋಂಪಿಗಳಿಂ ರತಿಯಾಣೆಯೋಜೆಯಿಂ ।
ರತಿಯ ಸುಗೀತದಿಂ ರತಿಯ ನವ್ಯ ಸುಧಾರಸಪೂರಗೋಷ್ಠಿಯಿಂ
ರತಿಮಯವಾಯ್ತು ಪಣ್ಯವನಿತಾಪರಿ ವೀಥಿಯೊಳೆಲ್ಲಿ ನೋಳ್ಪೊಡಂ ॥ ೧೨೧

ವ॥ ಮತ್ತಮಲ್ಲಿ

ಚಂ॥ ಉಳಿ ಕಳೆ ನಿಃಸ್ವನಂ ಕರೆ ಸದರ್ಥನನಿಂಬಿಡು ತಂದ ಮಂಡನಂ
ಗಳನೊಸೆದಳ್ಕಱಿಂ ರತಿಯನರ್ಚಿಸು ಕಾಮನ ನೋಂಪಿಗಿಕ್ಷುಸಂ ॥
ಕುಳ ಫಳ ಪುಷ್ಪಮಂ ತರಿಸು ನವ್ಯದುಕೂಲ ಸುಗಂಧ ವೃಂದಮಂ
ತಳೆನವನಂದನಕ್ಕೆ ನಡೆಯೆಂಬ ರವಂ ಸಲೆ ಗೇಹ ಗೇಹದೊಳ್ ॥ ೧೨೨

ವ॥ ಅಂತು ನುಡಿವ ಮದನ ಪ್ರತಾಪವಿತತ ಚತುರೋಕ್ತಿಗಳಂ ಕೇಳುತ್ತುಂ ಬರೆವರೆ ಮುಂದೊಂದೆಡೆಯೊಳ್ ಕೆಲಬರ್ ಮುಗ್ಧೆಯರ್ಗೆ ವಿದಗ್ಧೆಯರ್ ಲಲಿತ ಚರಿತಮಂ ಕಲಿಸುತಿರ್ದರ ದೆಂತೆನೆ,

ಬಿಂದುಗಳಿಂದ ತಣ್ಣಗಿದೆ, ಸ್ತ್ರೀಯರು ಲೇಪಿಸಿಕೊಂಡಿರುವ ಕಸ್ತೂರಿ ಶ್ರೀಗಂಧಗಳ ಸೌರಭ ದಿಂದ ಭಾರವಾಗಿ ಮೆಲ್ಲ ಮೆಲ್ಲನೆ ತೀಡುತ್ತಿದೆ. ಅಂಥ ಮಂದಮಾರುತಕ್ಕೆ ಮೈಗೊಟ್ಟು ಗಿರಿ ರಾಜ ಮುಂದೆ ಬಂದರೆ ೧೨೦. ಎಲ್ಲ ಮನೆಗಳಲ್ಲಿಯೂ ಮನ್ಮಥನ ವಿಷಯಕವಾದ ಕಥಾ ಲಾಪವೇ ನಡೆದಿತ್ತು. ಮನ್ಮಥನ ಉನ್ನತಿ, ಅವನ ಕಥೆಗಳು, ಅವನ ವರ್ಣನೆ, ಪ್ರಶಸ್ತಿ ವಿಳಾಸಗಳ ವಿಚಾರ ನಡೆದಿತ್ತು, ೧೨೧. ಅದರ ಜೊತೆಗೆ ರತಿಯ ವಿಲಾಸ, ವಿಭ್ರಮ, ಅವಳ ತೇಜಸ್ಸು, ನೋಂಪಿಗಳು, ರತಿಗೀತಗಳು ಆ ಸೂಳೆಗೇರಿಯಲ್ಲಿ ಎಲ್ಲೆಲ್ಲಿ ನೋಡಿ ದರೂ ರತಿಮನ್ಮಥರ ಪ್ರಸ್ತಾಪವೇ ನಡೆದಿತ್ತು. ೧೨೨. ಯಾವ ಮನೆಯಲ್ಲಿ ನೋಡಿ ದರೂ ಉಳಿ, (ಬಿಡು) ಕಳೆ ,ತ್ಯಾಗವಾದ ದರಿದ್ರನನ್ನು. ಕರೆ, ಹಣವುಳ್ಳವನನ್ನು. ತಂದ ಭೂಷಣಗಳನ್ನು ಇಂಬಿಡು ; ರತಿಯನ್ನು ಪ್ರೇಮದಿಂದ ಅರ್ಚಿಸು. ಕಾಮನ ವ್ರತಕ್ಕೊ ಪೂಜೆಗೆ ಇಕ್ಷುದಂಡ ಫಲಪುಷ್ಪಗಳನ್ನು ತರಿಸು, ಹೊಸದುಕೂಲ ಸುಗಂಧ ದ್ರವ್ಯಗಳನ್ನು ಧರಿಸಿಕೊ, ಉದ್ಯಾನಕ್ಕೆ ನಡೆ ಮುಂತಾದ ಮಾತುಕತೆಗಳೇ ನಡೆಯು ತ್ತಿದ್ದವು. ವ|| ಆ ಬಗೆಯ ಮನ್ಮಥ ಕಥಾಲಾಪಗಳನ್ನು ಕೇಳುತ್ತ; ಬರಲು ಮುಂದೆ ಒಂದು ಕಡೆ ಕೆಲವರು ವಿದಗ್ಧೆಯರು ಮುಗ್ಧೆಯರಿಗೆ ಲಲಿತಶಿಕ್ಷಣವನ್ನು ಕೊಡುತ್ತಿದ್ದರು.

ಕಂ॥ ಓದಿಸದಿರ್ ಗಿಳಿಯಂ ನಿ
ನ್ನೀ ದಂತಮನೆಸೆವ ದಾಡಿಮೀಬೀಜಂ ಗೆ ।
ತ್ತಾದರದಿಂ ಕರ್ದುಕುಗುಮೆಂ
ದೋದಿಸುತಿರ್ದಳ್ ವಿದಗ್ಧೆ ಮುಗ್ಧೆಯನೊಲವಿಂ ॥ ೧೨೩

ತಿಳಿವಿಲ್ಲದೆ ಶಶಿಕಾಂತದ
ಕಳಶಮನೇಕಾಂತೆ ಕಾಂತೆ ನಿನ್ನ ಮುಖೇಂದೂ ।
ಜ್ಜ್ವಳ ಕೌಮುದಿಯಿಂದೊಸರ್ದಪು
ದಿಳಿಪಿಳಿಪೆಂದೊರ್ವ ಮುಗ್ಧೆಯಂ ಸಖಿ ನುಡಿದಳ್ ॥ ೧೨೪

ಕಂಜದಳೇಕ್ಷಣೆ ನಿನ್ನೀ
ಮಂಜುಳ ರವದಿಂದೆ ಪಾಡೆ ನವಪರಪುಷ್ಟ ।
ಪ್ರಾಂಜುಳ ಮಧುರಧ್ವನಿಯೆಂ
ದಂಜುವರೆಲೆ ಮಗಳೆ ಪಾಡದಿರ್ ವಿರಹಿಣೆಗಳ್ ॥ ೧೨೫

ತಿಳಕಮದಿಲ್ಲದೆ ಬೆಳ್ದಿಂ
ಗಳೊಳಗೆ ನಿಂದಿರದಿರಬಲೆ ಸಕಳಂಕಂ ನಿ ।
ನ್ನೊಳಸೂಯೆಗೊಂಡು ನೋಡುವ
ನೆಳೆಯಳೆ ಚಂದ್ರಮನದಿಟ್ಟಿ ತಾಗದೆ ನಿನ್ನಂ ॥ ೧೨೬

ವ॥ ಎಂದು ನುಡಿವ ವಿದಗ್ಧೆಯರ ಪ್ರೌಢವಚನಂಗಳಂ ಕೇಳುತಿರ್ಪ ಮುಗ್ಧೆಯರೊಳೊರ್ವಳ್ ಬೆಳ್ದಿಂಗಳೊಳ್ ನಿಂದು,

೧೨೩. ಪ್ರೌಢೆಯೊಬ್ಬಳು ಮುಗ್ಧೆಗೆ ಹೀಗೆ ಶಿಕ್ಷಣ ನೀಡುತ್ತಿದ್ದಾಳೆ. ಗಿಳಿಗೆ ಓದುಕಲಿಸಬೇಡ. ಹಾಗೆ ಓದಿದರೆ ಆ ಗಿಳಿಯು ನಿನ್ನ ಈ ದಂತಪಂಕ್ತಿಯನ್ನು ದಾಳಿಂಬೆ ಬೀಜವೆಂದು ಭಾವಿಸಿ ಕುಕ್ಕುತ್ತದೆ! ೧೨೪. ಮತ್ತೊಬ್ಬ ಮುಗ್ಧೆಯನ್ನು ಕುರಿತು ವಿದಗ್ಧೆ ಹೀಗೆ ಹೇಳುತ್ತಿದ್ದಾಳೆ. "ಒಬ್ಬ ಮುಗ್ಧೆ ಚಂದ್ರಕಾಂತಮಣಿಯ ಕಳಶಹೊತ್ತಿದ್ದಳು. ಅವಳನ್ನು ಕಂಡ ವಿದಗ್ಧೆ "ಎಲೆಕಾಂತೆ, ನಿನ್ನ ಮುಖಚಂದ್ರನ ತಿಂಗಳಿಂದ ಆ ಚಂದ್ರಕಾಂತ ಕಳಶವು ಇನ್ನು ನೀರ್ಗರೆಯುತ್ತದೆ! ಬೇಗನೆ ಅದನ್ನು ಕೆಳಗಿಳಿಸು! ಇಳಿಸು!" ಎಂದು ಹೇಳುತ್ತಿದ್ದಾಳೆ. ೧೨೫. ಎಲೌ ಕಮಲನಯನೆ, ನೀನು ಹಾಡಬೇಡ! ಏಕೆಂದರೆ ನಿನ್ನ ಮಂಜುಳ ಧ್ವನಿಯನ್ನು ಕೋಗಿಲೆಯ ಮಧುರ ಧ್ವನಿಯೆಂದು ವಿರಹಿಗಳು ಅಂಜುತ್ತಾರೆ. ೧೨೬. ಎಲೆ ಅಬಲೆ, ಹಣೆಗೆ ತಿಳಕವನ್ನಿಡದೆ ಬೆಳದಿಂಗಳೊಳಗೆ ನಿಂತಿರಬೇಡ. ಏಕೆಂದರೆ ಕಳಂಕವುಳ್ಳವನು ಚಂದ್ರ, ಅವನು ನಿನ್ನನ್ನು ಕಂಡು ಅಸೂಯೆ ಪಡುವನು, ಅವನ ದೃಷ್ಟಿ ನಿನಗೆ ತಾಗುವುದಿಲ್ಲವೆ? ವ॥ ಹೀಗೆ ಹೇಳುತ್ತಿರುವ ಮಾತುಗಳನ್ನು ಕೇಳದ ಮುಗ್ಧೆ

ಕಳಶೋದಕದೊಳ್ ಚಂದ್ರನ
ನೆಳಲಂ ಕಂಡೆಲೆಲೆ ಸಿಲ್ಕಿದಂ ಶಶಿಯೆನುತಂ ।
ದೊಳಪೊಕ್ಕು ನೋಡಿ ಕಾಣದೆ
ಗಳಿಲನೆ ತಡವರಿಸಿ ತರುಣಿ ತಳವೆಳಗಾದಳ್ ॥ ೧೨೭

ವ॥ ಮತ್ತಮೊರ್ವಳ್

ಕಂ॥ ಕರತಳ ಕಳಶೋದಕದೊಳ್
ಸುರುಚಿರ ಚಂದ್ರಮನ ನೆಳಲನೂನಂ ತೋಱು ।
ತ್ತಿರೆ ಬೆಳ್ಳಿವಟ್ಟಲೆಂದಾ
ತರುಣಿ ಕರಂ ತೆಗೆದು ತೆಗೆದು ಬೆಱಗಾಗಿರ್ದಳ್ ॥ ೧೨೮

ಮಿಗೆ ದಟ್ಟಯ್ಸಿದ ಚಂದ್ರಿಕೆ
ಸೊಗಯಿಸಿ ಕಂಡೋರ್ವ ಮುಗ್ಧೆ ದುಗ್ಧಮಿದೆಂದೆಂ ।
ದಗಲದೆ ಬದ್ಧಾಂಜಳಿಯಿಂ
ಮೊಗೆ ಮೊಗೆದಾ ಬಯಲನೀಂಟ ಬಳಲುತ್ತಿರ್ದಳ್ ॥ ೧೨೯

ವ॥ ಅದಲ್ಲದೆಯುಂ ಮತ್ತಮೊಂದೆಡೆಯೊಳೊರ್ವ ಮುಗ್ಧೆ ಮನೋವಲ್ಲಭಂ ಬನದದಿಂ ಬನಕ್ಕೆ ಪೋಗೆ ಸೈರಿಸಲಾಱದಿರ್ಪಲ್ಲಿ,

ಕಂ॥ ಮುಗುಳೊಳ್ ಕಿಡಿ ಬೆಳ್ದಿಂಗಳೊ
ಳಗೆ ದಳ್ಳುರಿ ಪೂವಿನೊಳ್ ಪುಗುಳ್ ಮೂಡುವವೋಲ್ ।
ಮಿಗೆ ಮುಗ್ಧೆಯೊಳತಿವಿರಹಂ
ನೆಗೆದುದು ಮತ್ತೊರ್ವರಜಿಯರಂತಿಂತುಸುರಳ್ ॥ ೧೩೦

ಯೊಬ್ಬಳು ಬೆಳದಿಂಗಳಲ್ಲಿ ನಿಂತು ೧೨೭. ಕಲಶದ ನೀರಿನಲ್ಲಿ ಚಂದ್ರನ ನೆರಳನ್ನು ಕಂಡು, ವಿಸ್ಮಯಗೊಂಡು ಎಲೆಲೆ, ಚಂದ್ರ ನನ್ನ ಕೈಗೆ ಸಿಕ್ಕಿದ ಎಂದು ಭ್ರಮಿಸಿ, ಅವಳು ಕಲಶದ ಒಳಗನ್ನೆಲ್ಲ ತಡಕಿ ಚಂದ್ರನನ್ನು ಕಾಣದೆ ತಳಮಳಗೊಂಡಳು. ೧೨೮. ಮತ್ತೊಬ್ಬ ತರುಣಿ, ಅವಳ ಕೈಲಿರುವ ಕಲಶದ ನೀರಿನಲ್ಲಿ ಚಂದ್ರ ಪ್ರತಿಬಿಂಬಿಸಿದ್ದಾನೆ. ಅದರಿಂದ ಅವಳು ಅದನ್ನು ಬೆಳ್ಳಿಯ ಬಟ್ಟಲೆಂದು ಭ್ರಮಿಸಿ, ಬೆರಗಾದಳು, ೧೨೯. ಬೆಳದಿಂಗಳು ದಟ್ಟವಾಗಿ ಹಬ್ಬಿತ್ತು. ಅದನ್ನು ಕಂಡ ಓರ್ವ ಮುಗ್ಧೆ ಅದನ್ನು ಹಾಲು ಎಂದು ಭ್ರಮಿಸಿ, ಬೊಗಸೆ ಮಾಡಿ ಮೊಗೆಮೊಗೆದು ಬಯಲನ್ನೇ ಕುಡಿಯತೊಡಗಿದ್ದಳು. ವ॥ ಒಂದೆಡೆಯಲ್ಲಿ ಒಬ್ಬ ಮುಗ್ಧೆಯು ತನ್ನ ಪ್ರಿಯನು ವಿನೋದಕ್ಕಾಗಿ ವನಕ್ಕೆ ಹೋಗಿದ್ದ. ಆಗ ಆ ಮುಗ್ಧೆ ವಿರಹ ಕಾತರೆಯಾದಳು. ೧೩೦. ಅರಳುವ ಮೊಗ್ಗೆಯಲ್ಲಿ ಕಿಡಿ, ಬೆಳದಿಂಗಳಲ್ಲಿ ಕಾಡ್ಗಿಚ್ಚು, ಹೂವಿನಲ್ಲಿ ಬೊಕ್ಕೆ ಮೂಡುವಂತೆ ಆ ಮುಗ್ಧೆಯಲ್ಲಿ ವಿರಹ ಮೂಡಿತು.

ಕಂ॥ ಒಳಗಣ್ಗಂ ಪೊಱಗಣ್ಗಂ
ಬಳಲುತ್ತೆಡೆಯಾಡುವಳ್ ಕರಂ ಬಿಸು ಸುಯ್ವಳ್ ।
ಮುಳಿವಳ್ ತನ್ನೊಳ್ ತಾನೇ
ತಿಳಿವಳ್ ಕಳೆಗುಂದುವಳ್ ಕನಲ್ವಳ್ ಕಾಯ್ವಳ್ ॥ ೧೩೧

ಒಳಗೊಳಗೆ ಬಳೆ ಬಳೆದು ಘಟ
ದೊಳಗಣ ದೀಪ್ತಿಯವೊಲಿರ್ಪ ಘನವಿರಹಮನಂ ।
ತೊಳಕೊಂಡು ನುಡಿಯಲಱಿಯದೆ
ಕಳೆಗುಂದಿದ ಚಂದ್ರನಂತೆ ಕರಗುತ್ತಿರ್ದಳ್ ॥ ೧೩೨

ಇರೆ ಹರಣಂ ನಡೆತರ್ಪಂ
ತಿರೆ ವಲ್ಲಭನಲ್ಲಿ ಬರೆ ಸರಾಗೋತ್ಸವದಿಂ ।
ಕರೆದಿದಿರ್ಗೊಂಡಿರದದಿರ್ಗೊಂ
ಡೆರೆದಿದಿರ್ಗೊಂಡಪ್ಪಿಯಪ್ಪಿಯರಲುತ್ತಿರ್ದಳ್ ॥ ೧೩೩

ಭರದಿಂ ಬಂದಚ್ಚಳಿಯದೆ
ಸಿರಿಮಂಚದ ಮೇಲೆ ಲೀಲೆ ಮಿಕ್ಕಾದರದಿಂ ।
ತರದಿಂ ಪುಳಕಂ ನೆಗೆಯಂ
ತ್ತಿರೆ ಸುರತಾಂಬುಧಿಯ ಸುಧೆಯ ಸುಳಿಯೊಳಗಿರ್ದರ್ ॥ ೧೩೪

ಮನವಲರೆ ಮುಖವಲರೆ ಲೋ
ಚನವಲರೆ ಕಪೋಲಕಚಲರೆ ಕಂಠವಲರೆ ಸು ।

ಅದು ಯಾರಿಗೂ ಗೊತ್ತಾಗಲಿಲ್ಲ; ಅವಳೂ ಯಾರಿಗೂ ಏನೂ ಹೇಳಳು! ೧೩೧. ಒಳಗಡೆಗೂ ಹಾಗೂ ಹೊರಗಡೆಗೂ ಬಳಲುತ್ತ ಎಡೆಯಾಡುತ್ತಿದ್ದಾಳೆ. ನಿಟ್ಟುಸಿರು ಬಿಡುತ್ತಿದ್ದಾಳೆ, ಕೋಪಿಸಿಕೊಳ್ಳುತ್ತಾಳೆ, ತನ್ನಲ್ಲಿ ತಾನೆ ಪ್ರಿಯನಿಗಾಗಿ ಕಳೆಗುಂದುವಳು, ಪ್ರಸನ್ನಳಾಗುವಳು. ೧೩೨. ವಿರಹದ ಉರಿ ಒಳಗೊಳಗೆ ಬೆಳೆಯುತ್ತಿದೆ. ಘಟದಲ್ಲಿನ ದೀಪ್ತಿಯಂತೆ ಇರುವ ವಿರಹದಿಂದ ಅವಳು ಬಳಲಿದ್ದಾಳೆ. ಅದನ್ನು ಯಾರಿಗೂ ಹೇಳಲರಿಯದೆ ಅವಳು ಕೃಷ್ಣಪಕ್ಷದ ಚಂದ್ರನಂತೆ ಕೊರಗುತ್ತಿದ್ದಾಳೆ. ೧೩೩. ಹೀಗಿರುವಾಗ ಅವಳ ಪ್ರಾಣವೇ ಬರುವಂತೆ ಪ್ರಾಣವಲ್ಲಭ ಬಂದ. ಅವಳ ಉತ್ಸಾಹ ಉಕ್ಕಿತು. ಅವನನ್ನು ಕರೆದು ಇದಿರ್ಗೊಂಡಳು. ಇರದೆ ಇದಿರ್ಗೊಂಡು, ಎರೆದು ಇದಿರ್ಗೊಂಡು, ಅವನನ್ನು ಅಪ್ಪಿ ಅಪ್ಪಿ ಅರಳಿಹೋದಳು. ೧೩೪. ರಸಾವೇಶದಿಂದ ಪ್ರಿಯ ಪ್ರಿಯೆಯರು ಸಿರಿಮಂಚವನ್ನೇರಿ ಸಾತ್ವಿಕ ಭಾವಾದಿಗಳಿಂದ ಸ್ವೇದ, ಪುಳಕಗಳೇಳುತ್ತಿರಲು ಸುರತಾಂಬೋಧಿಯಲ್ಲಿ ಮುಳುಗಿ ತನ್ಮಯರಾಗಿದ್ದರು. ೧೩೫. ಸುರತಮಗ್ನವಾಗಿರುವ ಅವರ ಮನ, ಲೋಚನ,

ಯ್ಯನುವಲರೆ ತನುವಲರೆ ವಿ
ಕ್ಕನುಭವಸುಖವಲರೆ ಸುರತ ಸುಖದೊಳಗಿರ್ದರ್ ॥ ೧೩೫

ವ॥ ಆ ಸಮಯದೊಳ್

ಕಂ॥ ಪುದಿದಾಲಿಂಗನದೊಳಗಾ
ವುದನಾವುದು ಸೋಂಕಿತದೆ ಮುಖೋತ್ಸವಮದೆ ಕಾ ।
ಮದಮದೆ ಮದನವಿಲಾಸಾ
ಸ್ಪದಮದೆ ಸರ್ವಾಂಗ ಹರ್ಷಮದೆ ಸಮಯೋಗಂ ॥ ೧೩೬

ವ॥ ಇಂತು ಸಮಾನರಾಗಸಂಭೂತ ಸುಖ ಮುಖದೊಳಿರ್ದು ಭರಿತಮಾದ ಸುರತಶ್ರಾಂತಿಯಿಂ ಪೊಱಪೊಣ್ಮಿದ ಸುಖಸ್ವೇದ ಬಿಂದುಗಳನಾಱಿಸಲೆಂದು ಮಿಾಱಿ ಬಂದು ನಿಜನಿಳಯ ವೇದಿಕಾ ಮಧ್ಯದೊಳಿರ್ದ ಮುಗ್ಧೆಯರಂ ಗಿರಿಪತಿಗೆ ನಾಗರಿಕಂ ತೋಱುತ್ತುಂ ಬರೆವರೆ ಮುಂದೊಂದೆಡೆ ಯೊಳೊರ್ವ ಮುಗ್ಧೆ ವಲ್ಲಭನೊಳ್ ಮುಳಿದಂತ ಮಱಿದು ನುಡಿಯದಿರ್ಪಲ್ಲಿ ತತ್ಪ್ರಿಯನಿಂತೆಂದಂ

ಕಂ॥ ಮುಗ್ಧೇ ಕೈರವ ನೇತ್ರೆ ವಿ
ದಗ್ಧೆಯವೋಲ್ ಮುಳಿಸನಾಂತೊಡಾನೆಂತಿರ್ಪೆಂ ।
ದಗ್ಧಾಂತರಂಗನಾದೆಂ
ದುಗ್ಧಂ ವಿಷಮಾದೊಡೇನನೆಂದಪೆನಿಳೆಯೊಳ್ ॥ ೧೩೭

ವ॥ ಎಂದು ನುಡಿದು ಸುಖದೊಳಿರೆ ಮತ್ತಮೊಂದೆಡೆಯೊಳ್

ಕಂ॥ ಬಳೆದೊಡಿಸಲೆಂದು ಸುದತಿಯ
ಕೆಳೆಯನದೊರ್ವಂ ಕರಕ್ಕೆ ಕೆಯ್ನೀಡೆ ಸುಖೋ ।

ಕಪೋಲ, ಕಂಠ, ಉಸಿರು, ತನುಗಳೆಲ್ಲ ವಿಕಾಸಹೊಂದಿರಲು ಅವರು ಸುರತಸುಖದಲ್ಲಿದ್ದರು. ೧೩೬. ಗಾಢಾಲಿಂಗನ ಸಮಯದಲ್ಲಿ ಯಾವ ಅಂಗವನ್ನು ಯಾವುದು ಸೋಂಕುವುದೋ ಆಯಾಅಂಗವು ಮದನೋತ್ಸಾಹದಿಂದ ಸರ್ವಾಂಗ ಹರ್ಷಸಮಯೋಗದಲ್ಲಿ ಮಗ್ನವಾಗಿತ್ತು. ವ॥ ಹೀಗೆ ಸಮರತಿ ಸುಖವಿಶೇಷದಲ್ಲಿದ್ದು ಮೈಮೇಲೆ ಹೊಮ್ಮಿದ ಸುಖಸ್ವೇದ ಬಿಂದುಗಳನ್ನು ಆರಿಸಲು ಮನೆಯ ಅಂಗಳದ ವೇದಿಕೆಗೆ ಬಂದಿದ್ದ ಮುಗ್ಧೆಯರನ್ನು ನಾಗರಿಕನು ರಾಜನಿಗೆ ತೋರುತ್ತ ಮುಂದೆ ಬರುತ್ತಿರುವಾಗ ದಾರಿಯಲ್ಲಿ ಒಬ್ಬ ಮುಗ್ಧೆ ತನ್ನ ವಲ್ಲಭನಲ್ಲಿ ಕೋಪಿಸಿಕೊಂಡು ನುಡಿಯದಿರುವಾಗ ಅವಳಿಗೆ ಪ್ರಿಯನು ಹೀಗೆ ಹೇಳಿದ. ೧೩೭. ಎಲೌ ಮುಗ್ಧೆ, ನೀನು ವಿದಗ್ಧೆ (ಪ್ರೌಢೆ)ಯಂತೆ ಕುಪಿತಳಾದರೆ ನಾನು ಇನ್ನೆಂತು ಇರಬಲ್ಲೆ ! ಈಗಂತೂ ನನ್ನ ಅಂತರಂಗವೆಲ್ಲ ದಗ್ಧವಾಗಿದೆ. ಹಾಲು ವಿಷವಾಗುವುದಾದರೆ ಇನ್ನೇನು ಹೇಳುವುದಿದೆ ?" ಎಂದನು. ೧೩೮. ಒಬ್ಬ ಕೆಳೆಯನು ಬಳೆ ತೊಡಿಸುವುದಕ್ಕಾಗಿ ಸುದತಿಯ ಹಸ್ತಕ್ಕೆ ಕೈಚಾಚಿದ. ಆಗ ಆ ಶಶಿಮುಖಿಯ

ಜ್ಜ್ವಳೆಯ ಶಶಿಮುಖಿಯ ಚಿತ್ತಂ
ಗೊಳಿಸುವ ಸಖಿ ಬೇಡ ಬೇಡವೆನುತುಂ ನುಡಿದಳ್ ॥ ೧೬೮

ಪರಿರಂಭಾರಂಭಣದಾ
ತುರಸಮಯದೊಳಂ ಮನೋಹರ ವ್ಯಾಜದೊಳಂ।
ವಿರಹದೊಳಂ ತನ್ನಿನಿಯಂ
ಬರೆ ಸುಖದೊಳಗಬಲೆಗೆಂತು ನಿಲ್ವುವು ಬಳೆಗಳ್ ॥ ೧೬೯

ವ॥ ಎಂದಿಂತು ನುಡಿವ ಸರಸೋಕ್ತಿಗಳಂ ಕೇಳುತ್ತುಂ ಬರೆವರೆ ಮುಂದೊಂದೆಡೆಯೊಳೊರ್ವ ಮಧ್ಯಮನಾಯಕಿಯ ವಿರಹಾತಿಶಯಮಂ ಪ್ರೇಮಸಖಿ ತನ್ನ ಕೆಳದಿಗೆ ಪೇಳುತ್ತುಮಿರ್ದಳದಂತೆಂದೊಡೆ–

ಕಂ॥ ಅಸವಸದಿಂದಿನನುಳಿದೊಡೆ
ದೆಸೆ ಕಾವುಳಮಸಗಿ ಮಾನಿನಿಗೆ ಮಧು ಮಱುಕಂ।
ಸಸಿ ಬಿಸಿ ಕಾವಂ ದಾವಂ
ಬಿಸಜಂ ಬಿಸಮನಿಲನನಲನೆನಿಸಿತ್ತಾಗಳ್ ॥ ೧೭೦

ವ॥ ಮತ್ತಮಲ್ಲದೆ,

ಚಂ॥ ವಿರಹದೊಳೀಕೆಗಕ್ಕ ಬಿಸಜಂ ವಿಷಜಂ ಹಿಮರೋಚಿ ಸೂಚಿ ಪಾ
ದರಿ ದರಿ ಮಾವು ಪಾವು ಕುಮುದಂ ಕುಮುದಂ ತನಿಗರ್ಬು ಮರ್ಬು ಕ।
ತ್ತುರಿಯುರಿ ಗಾಳಿ ದಾಳಿ ಕುಸುಮಂ ವಿಷಮಂ ಪೊಸಬಾಳೆ ಬಾಳ್ ವನೋ
ತ್ಕರವುರಿ ಹಂಸೆ ಹಿಂಸೆ ಮೊರೆವಾಱಡಿಯಾಱಡಿ ತಿಂಗಳಿಂಗಳಂ ॥ ೧೭೧

ಸಖಿಯೋರ್ವಳು ಬೇಡ ಬೇಡವೆಂದು ಹೇಳಿ ಸಖಿಯ ಮನಸ್ಸನ್ನು ಅರಳಿಸಿದಳು. ೧೬೯. ಆಲಿಂಗಿಸುವ ಆತುರದಲ್ಲಿ, ಮನೋಹರವಾದ ವ್ಯಾಜದಲ್ಲಿ, ವಿರಹದಲ್ಲಿ ತನ್ನ ಇನಿಯನು ಬಂದನೆಂದರೆ ಬಳೆಗಳು ಹೇಗೆ ತಾನೆ ಉಳಿದಾವು! ವ॥ ಹೀಗೆ ನಡೆದಿರುವ ಸರಸಸಲ್ಲಾಪಗಳನ್ನು ಕೇಳುತ್ತಾ ಮುಂದೆ ಬಂದರೆ ಅಲ್ಲೊಂದು ಕಡೆಯಲ್ಲಿ ಒಬ್ಬ ಪ್ರೇಮಸಖಿಯು ಮಧ್ಯಮ ನಾಯಕಿಯ ವಿರಹಾತಿಶಯವನ್ನು ತನ್ನ ಕೆಳದಿಗೆ ಹೀಗೆ ಹೇಳುತ್ತಿದ್ದಾಳೆ. ೧೭೦. ರವಿ ಅವಸರವಸರವಾಗಿ ಮುಳುಗಿದ. ದೆಸೆದೆಸೆ ಕಾವುಳವು ಮಸಗಿತು. ಆಗ ಆ ಮಾನವತಿಗೆ ವಿರಹದ ದೆಸೆಯಿಂದ ಮಧುಮಾಸವು ಮರುಕವನ್ನು ಹುಟ್ಟಿಸಿತು, ಶಶಿ ಬೆಚ್ಚಗೆಕಂಡ, ಕಾಮನು ದಾವಾಗ್ನಿಯಾದ, ಕಮಲವು ವಿಷದಂತೆ ಅಸಹ್ಯವಾಯಿತು. ಗಾಳಿಯು ಬೆಂಕಿಯಂತಾಯಿತು. ವಿರಹಕಾಲದಲ್ಲಿ ಅನುಕೂಲವಾದ ವಸ್ತುಗಳೂ ಪ್ರತಿಕೂಲವಾಗುತ್ತವೆ. ೧೭೧. ಎಲೌ ಅಕ್ಕ! ವಿರಹಕಾಲದಲ್ಲಿ ಈಕೆಗೆ ಬಿಸಜಕಮಲವು ವಿಷಜವಾಗುತ್ತದೆ. ಹಿಮಕರನು ಸೂಚಿ, ಪಾದರಿ ಹೂವುದರಿ (ಕೊರಕಲು), ಮಾವು;

ವ॥ ಮತ್ತಮಲ್ಲದೆ

ಕಂ॥ ಅತಿವಿರಹದೊಳೀ ಲಲನೆಗೆ
ಮತಿ ದುರ್ಮತಿ ವೀಣೆಸಾಣೆ ಸೋಮಂ ಭೀಮಂ ।
ಲತೆಯಸಿಲತೆ ಸಂಪಗೆ ಪಗೆ
ಸುತ ಕೀರಂ ಘೋರಮನ್ಯಪುಷ್ಪಮನಿಷ್ಟಂ । ೧೪೨

ವ॥ ಎಂದು ನುಡಿವಾಗಳ್

ಕಂ॥ ಬಿಸಿಲ ಚಕೋರಿಗೆ ಚಂದ್ರಂ
ಪಸಿದ ಶುಕಂಗಿದಿರೊಳಮೃತ ಫಳಮಿದಿರ್ವರ್ಪಂ ।
ತಸಮಾನ ಸುಧಾ ಶೀಲಂ
ರಸಮಯ ಸುಖಜಲಧಿ ವಲ್ಲಭಂ ನಡೆತಂದಂ ॥ ೧೪೩

ಚಂ॥ ನಡೆತರೆ ಕಂಡು ಜೀವಮಿದಿರ್ವಂದವೊಲೊರ್ವರನೋರ್ವರೀಕ್ಷಿಸು
ತ್ತಡಿಯಿಡುತೊಂದಿ ಮುಂದುವರಿವಿಂದ್ರಿಯದಿಂ ನಡೆಮುಂಚಿ ಮಾಜಿಬಂ ।
ದೆಡೆಗುಡದಪ್ಪಿಯಪ್ಪಿ ನಿರತಂ ಸುರತಾಬ್ಧಿಯೊಳಾಳುತೇಳುತುಂ
ಕಡೆಮೊದಲಿಲ್ಲದೆಳ್ತರದ ಕಾಮಿಗಳಿರ್ದರನೂನ ಸಂಗದೊಳ್ ॥ ೧೪೪

ಮ॥ ಸ್ರ॥ ಘನಗಾಢಾಲಿಂಗನಂ ಚಾಪಳಗಳಮತಿದೈನ್ಯೋಕ್ತಿಯುಕ್ತಾಧರಂ ಚುಂ
ಬನಸೀತ್ಕಾರಂ ಸ್ಮಿತಾಸ್ಯಂ ಮುಕುಳಿತನಯನಂ ಲಾಸ್ಯನೀಲಾಳಕಂ ಕಂ ।

ಹಾವು, ನೈದಿಲೆಯು ಕುತ್ಸಿತಮೋದಜನಕ, ತನಿಗರ್ಬು (ಕಬ್ಬು) ಮಬ್ಬು, ಕಸ್ತೂರಿಯ ಗಾಳಿಯೂ ಧಾಳಿಯೇ! ಕುಸುಮ–ವಿಷಮ, ಹೊಸಬಾಳೆ ಬಾಳ (ಖಡ್ಗ) ವನೋತ್ಕರ, ಹಂಸೆ, ದುಂಬಿಗಳು ಮುಂತಾದುವೆಲ್ಲ ದುಃಖದಾಯಕಗಳೇ ಆಗಿವೆ. ೧೪೨. ಈ ಲಲನೆಗೆ ವಿರಹಕಾಲದಲ್ಲಿ ಮತಿ–ದುರ್ಮತಿ, ವೀಣೆ–ಸಾಣೆ, ಸೋಮ (ಚಂದ್ರ) ಭಯಂಕರ, ಲತೆ, ಅಸಿ(ಖಡ್ಗ)ಲತೆ, ಸಂಪಿಗೆಯು ಹಗೆಕೀರ (ಸಾರಿಕೆ) ಘೋರ, ಕೋಗಿಲೆ–ಅನಿಷ್ಟಕರವಾಗುತ್ತದೆ. ೧೪೩. ಅಷ್ಟು ಹೊತ್ತಿಗೆ ಅವಳ ವಲ್ಲಭ ಅಲ್ಲಿಗೆ ಬಂದ. ಆತ ಸುಧಾಶೀಲರ ಸಮಯ ಸುಖಜಲನಿಧಿಯಂತಿದ್ದ. ಅವನು ಬಂದುದು ಚಕೋರಿಗೆ ಚಂದ್ರ, ಹಸಿದ ಗಿಳಿಗೆ ಎದುರಿನಲ್ಲೆ ಅಮೃತ ಫಲ, ಎದುರಿಗೆ ಬರುವಂತೆ ಆಯಿತು. ೧೪೪. ಪ್ರಿಯನು ಬಂದುದು ಅವಳಿಗೆ ತನ್ನ ಜೀವವೇ ಎದುರಿಗೆ ಬಂದಂತಾಯಿತು. ಅವರು ಒಬ್ಬರನ್ನೊಬ್ಬರು ನೋಡಿ ಮುಂದಡಿಯಿಟ್ಟು ಆಲಿಂಗಿಸಿಕೊಂಡು, ಮುಂದುವರಿದ ಇಂದ್ರಿಯದಿಂದ ಪರಸ್ಪರ ಆಸೆ ತೀರೆ ಮತ್ತೆ ಮತ್ತೆ ಆಲಿಂಗಿಸಿ ಸುರತಾಬ್ಧಿಯಲ್ಲಿ ಮುಳುಗಿ ಕಡೆ ಮೊದಲಿಲ್ಲದ ಸಮಸುಖದಲ್ಲಿ ಆ ಕಾಮಿಗಳಿದ್ದರು. ೧೪೫. ಗಾಢಾಲಿಂಗನ, ಚಪಲಗಳ, ಅತಿ ದೈನ್ಯೋಕ್ತಿಯುಕ್ತವಾದ ತುಟಿ, ಚುಂಬನಕಾಲದ ಸೀತ್ಕಾರ, ನಗೆಮೊಗ, ಮುಚ್ಚಿದ

ಪನಹಸ್ತಂ ಸ್ವೇದಗಂಡಂ ಪುಳಕಭರಿತಗಾತ್ರಂ ಸುಖಶ್ವಾಸಮಾನಂ
ದನಿವಾಸಂ ಲೀನಚಿತ್ತಂ ಗುರುತರ ಸುರತಂ ಕೂಡೆ ಕೂಡುತ್ತುಮಿರ್ದರ್ ॥ ೧೪೫

ಕಂ॥ ನಯನಝಷಾವಳಿಯಿಂದತಿ
ಶಯಾಧರೋದ್ಯತ್ ಪ್ರವಾಳದಿಂದಂ ದ್ವಿಜಸಂ ।
ಚಯ ಮೌಕ್ತಿಕದಿಂ ಸುರತಾ
ಬ್ಧಿಯದಂತಿರೆ ತೆರೆಗಳಂತೆ ಕಾದಲರಿರ್ದರ್ ॥ ೧೪೬

ವ॥ ಅಂತು ಸುರತ ಸುಖದಿಂ ನಲಿನಲಿದು ನರ್ತಿಸುತ್ತುಂ ಮತ್ತವಾರಣದ ಮೇಲಿರ್ಪ ಮಧ್ಯಮನಾಯಕಿಯರಂ ನಾಗರಿಕಂ ನಗರಾಜಂಗೆ ತೋಱುತ್ತುಂ ನಡೆತರೆ ಮುಂದೊಂದೆಡೆಯೊಳೊರ್ವ ವಿದಗ್ಧೆ ವಿರಹತಾಪದಿಂ ನಿಲಲಾಱದೆ ನಿಜಸಖಿಗೆ ಬಿಸುಸುಯ್ಯುತ್ತುಮಿಂತೆಂದಳ್

ಮ॥ ಸಕಳಂಕಂ ಶಶಿಕಾಮನೀಶನುರಿಗಣ್ಣಿಂ ಬೆಂದವಂ ವಾಯು ಸ
ರ್ಪಕದಂಬಾಶನಶೇಷವಂಗಜನ ಮಿತ್ರಂ ರಾಗಿ ಮತ್ತಾಳಿಗಳ್ ।
ವಿಕಳಂಗಳ್ ಪಿಕನನ್ಯಪುಷ್ಟನಿವಱೊಳ್ ಸೌಜನ್ಯಮಂ ಮಾಳ್ಪುದ
ಕ್ಕೆ ಕರಂ ಕಷ್ಟಮೆನುತ್ತೆ ಕಾಂತೆ ನುಡಿದಳ್ ಸಾಲಿಟ್ಟ ಸಂತಾಪದಿಂ ॥ ೧೪೭

ವ॥ ಎಂದು ನುಡಿದ ನಿರ್ವೇದೋಕ್ತಿಗಳಂ ಕೇಳಲಾಱದೆ ಪರಮ ಮಿತ್ರೆ ಪರಿದು ಪೋಗಿ ಮನೋವಲ್ಲಭನನೊಡಗೊಂಡು ಬರೆ ಬಂದು ನಿಂದು ಸಾಪರಾಧಿ ಸಮೀಪಸ್ಥನಾಗಿ ಕುಳ್ಳಿರ್ಪಲ್ಲಿ,

ಕಣ್ಣು, ನರ್ತಿಸುವ ಮುಂಗುರುಳು, ನಡುಗುವ ಹಸ್ತ, ಬೆವೆತ ಕಪೋಲ, ನವಿರೆದ್ದ ಶರೀರ, ಸುಖಕರವಾದ ನಿಟ್ಟುಸಿರು, ತನ್ಮಯವಾದ ಮನಸ್ಸುಳ್ಳವರಾಗಿ ಅವರು ಗಾಢ ಸುರತದಲ್ಲಿ ಮತ್ತೆ ಮತ್ತೆ ಕೂಡುತ್ತಿದ್ದರು. ೧೪೬. ಆ ಪ್ರೇಮಿಗಳು ಸುರತವೆಂಬ ಕಡಲಿನ ತೆರೆಗಳಂತೆ ಇದ್ದರು. ಇಲ್ಲಿ ಕಡಲಿನಲ್ಲಿ ಇರಬೇಕಾದ ವಸ್ತುಗಳೆಲ್ಲವೂ ಇವೆ. ಇಲ್ಲಿ ಕಣ್ಣುಗಳೇ ಮೀನುಗಳು, ಅತಿಯವಾದ ಕೆಳತುಟಿಗಳೇ ಹವಳಗಳು, ಹಲ್ಲುಗಳೇ ಮುತ್ತುಗಳು. ವ ॥ ಹೀಗೆ ಸುರತ ಸುಖದಿಂದ ನಲಿದು ನರ್ತಿಸುವ ಮಧ್ಯಮನಾಯಕಿಯರನ್ನು ನಾಗರಿಕನು ನಗರಾಜನಿಗೆ ತೋರಿಸುತ್ತಾ ನಡೆತಂದರೆ ಮುಂದೊಂದುಕಡೆ ಒಬ್ಬ ವಿದಗ್ಧೆ ವಿರಹತಾಪವನ್ನು ತಡೆಯಲಾರದೆ ಬಿಸುಸುಯ್ಯುತ್ತ ತನ್ನ ಸಖಿಗೆ ಹೀಗೆ ಹೇಳಿದಳು. ೧೪೭. ಆ ವಿರಹಿಣಿಗೆ ಸಂತಾಪವು ಸಾಲಿಟ್ಟಂತೆ ಆಗಿದೆ. ಇದರಿಂದ ಹತಾಶಳಾಗಿ ಅವಳು ಒಳ್ಳೆಯ ವಸ್ತುಗಳಲ್ಲಿಯೂ ಒಂದೊಂದು ದೋಷವನ್ನು ಆರೋಪಿಸಿ, ಇಂಥವರಲ್ಲಿ ಸೌಜನ್ಯವನ್ನು ಹೇಗೆ ತಾನೆ ನಿರೀಕ್ಷಿಸುವುದು ಎನ್ನುತ್ತಾಳೆ. ಶಶಿಯು ಕಳಂಕವುಳ್ಳವ, ಕಾಮನು ಶಿವನ ಉರಿಗಣ್ಣಿನಿಂದ ಸುಟ್ಟವನು, ಗಾಳಿಯು ಹಾವುಗಳು ಕುಡಿದು ಉಳಿದದ್ದು, ದುಂಬಿಗಳು ಬುದ್ಧಿಗೇಡಿಗಳು, ಕೋಗಿಲೆ ಪರಪುಟ್ಟ ; ವ ॥ ಹೀಗೆ ವಿರಹಿಣಿ ನಾಯಕಿಯು ಹೇಳುವ ನಿರ್ವೇದೋಕ್ತಿಗಳನ್ನು ಕೇಳಲಾರದೆ ಅವಳ ಆಪ್ತಸಖಿಯು ಅವಳ ಮನೋವಲ್ಲಭನನ್ನು

ಚಂ॥ ಎಱಗುಗುಮೆಂದು ಮೇಲುದಿನೊಳಂಘ್ರಿಗಳಂ ಮಱೆಮಾಡುತುಂ ಸ್ಮಿತಂ
ಪೊಱಮಡೆ ಮತ್ತದೊಂದು ನೆವದಿಂದಮೆ ಮುಚ್ಚುತುಮೆಯ್ದೆನೋಟಮಂ ।
ಮಱೆಯಿಸಿ ನೋಡುತುಂ ನುಡಿಯಲುತ್ತರಮಂ ಸಖಿಗೀಯುತಿಂತು ತ
ನ್ನೆಱೆಯನೊಳೊಲ್ದು ಕೋಪಿಸುವ ಕಾಮಿನಿಗೀಮುಳಿಸೊಂದು ಸಾಲದೇ ॥ ೧೪೮

ವ॥ ಇಂತು ಮುಳಿದ ವಿದಗ್ಧನಾಯಕಿಯ ಮುಳಿಸಂ ತಿಳಿಪಿ ಸಜ್ಜೆವನೆಯ ಸಿರಿಮಂಚದ ಹಂಸತೂಳದಡಕಿಲ್ವಾಸಿನೊಳ್ ಭರದಿಂ ನೆರೆವಾಗಳ್

ಕಂ॥ ಸೆಳೆಮಂಚದ ಕಳನಿನದಂ
ಬಳಸಿದ ಶಕುನಿಗಳ ನುಣ್ಚರಂ ನೇವುರದು ।
ಜ್ಜ್ವಳನಾದಂ ಲಲನಾಗಳ
ಗಳಿತಧ್ವನಿ ಬೆರಸಿ ಬಳೆದು ನೆರಪಿದುದಾಗಳ್ ॥ ೧೪೯

ಮ॥ ಸ್ರ॥ ಕರಘಾತಂ ಸೌಖ್ಯಜಾತಂ ಕಳರಣಿತಸಮೇತಂ ಲಸತ್ಕರ್ಣಪೂತಂ
ಸ್ಮರಯಂತ್ರಂ ಸಾರತಂತ್ರಂ ಘನಗಳರವಮಂತ್ರಂ ಪ್ರಮೋದಸ್ವತಂತ್ರಂ ।
ಸ್ಫುರಿತಾಂಗಂ ಸ್ವೇದಸಂಗಂ ಸುರತರಸತರಂಗಂ ಪ್ರರೋಮಾಚಲಿಂಗಂ
ಗುರುನೇತ್ರಂ ಬಾಷ್ಪಪಾತ್ರಂ ಸುಖರವಮುದಿತ ಶ್ರೋತ್ರಮಾನಂದಗಾತ್ರಂ ॥ ೧೫೦

ವ॥ ಅಂತುಮಲ್ಲದೆ

ಕರೆತಂದಳು. ಅಪರಾಧಿಯಂತಿರುವ ಅವನು ಒಂದು ಪಕ್ಕದಲ್ಲಿ ಕುಳಿತುಕೊಂಡನು. ಆಗ–
೧೪೮. ಅಪರಾಧಿಯಂತೆ ಬಂದ ಆ ಪ್ರಿಯನು ತನ್ನ ಕಾಲಿಗೆ ಎರಗುವನೆಂದು ತಿಳಿದು ಅವಳು ಸೆರಗಿನಿಂದ ತನ್ನಕಾಲುಗಳನ್ನು ಮುಚ್ಚಿಕೊಂಡಳು ; ನಗೆಯು ಹೊರಬಿದ್ದರೂ ಅದನ್ನು ಒಂದು ನೆಪಮಾಡಿ ಮರೆಮಾಡಿದಳು ; ಅವನನ್ನು ಕದ್ದು ಕದ್ದು ನೋಡತೊಡಗಿದ್ದಾಳೆ. ಆತ ಪ್ರಶ್ನೆ ಹಾಕಿದರೆ ಅದರ ಉತ್ತರವನ್ನು ಸಖಿಗೆ ಕೊಡುತ್ತಾಳೆ. ಹೀಗೆಲ್ಲ ಆಡಿ ತನ್ನ ಪ್ರಿಯನಲ್ಲಿ ಒಲಿದು ಕೋಪಿಸುವ ಅವಳಿಗೆ ಆ ಹುಸಿ ಮುನಿಸು ಎಷ್ಟೋ ರಮ್ಯವಾಗಿದೆ. ವ॥ ಹೀಗೆ ಹುಸಿಮುನಿಸಿನ ವಿದಗ್ಧನಾಯಕಿಯು ತನ್ನ ಅಂತರಂಗವನ್ನು ತಿಳುಹಿಸಿ, ಸಿರಿಮಂಚದಲ್ಲಿ ಭರದಿಂದ ನೆರೆದಳು. ೧೪೯. ಸೆಳೆಮಂಚದ ಮಧುರದನಿ, ಅವರನ್ನು ಬಳಸಿದ ಹಕ್ಕಿಗಳ ನುಣ್ದನಿ, ನೂಪುರಗಳ ಮಧುರಸ್ವನ, ಲಲನೆಯ ಇಂಪಾದ ಗಳಗಳಿತನಾದ, ಇವೆಲ್ಲ ಬೆರೆತು ಇಂಪಾಗಿತ್ತು. ೧೫೦. ಸೌಖ್ಯವಾದ ಹಸ್ತತಾಡನ, ಅವ್ಯಕ್ತಮಧುರವಾದ ಕಿವಿಗಿಂಪಾದ ಮಾತುಗಳು, ಸ್ವಾರಸ್ಯಕರವಾದ ಸ್ಮರಯಂತ್ರ, ಸಾರತಂತ್ರಗಳ ಆನಂದ ತುಂದಿಲತೆ, ನಡುಗುವ ಅಂಗಗಳು, ಬೆವರಿದವ್ಮೈ, ಸುರತರಸತರಂಗಗಳು, ಆನಂದಬಾಷ್ಪ, ಆನಂದಮಯವಾದ ಶರೀರಗಳಿಂದ ರಮ್ಯವಾದ

ಕಂ॥ ಗಳರವದಿಂಡಪ್ಪಿಂ ಕೋ
ಮಳರೂಪಿಂದಧರರಸದೆ ಸುಯ್ಗಂಪಿಂದಾ ॥
ಗಳೆ ಕಿವಿ ಮೆಯ್ ಕಣ್ ನಾಲಗೆ
ವಿಳಸನ್ನಾಸಿಕಮನಲ್ಲಿ ತಣಿಪುತ್ತಿರ್ದಳ್ ॥ ೧೫೧

ವ॥ ಮತ್ತಮೊಂದೆಡೆಯೊಳೊರ್ವಳ್ ತನ್ನ ಮಗಳ ಸೌಭಾಗ್ಯಮಂ ಪ್ರೇಮಸಖಿಗೆ ಪೇಳುತ್ತುಮಿರ್ದಳದೆಂತೆಂದೊಡೆ,

ಕಂ॥ ಮಾಳತಿಯೊಳ್ ಬಂಡುಂಡ ಮ
ದಾಳಿಯನಳಿಮಾಲೆ ಎಱಗಿ ಬಂಡುಣ್ಬವೊಲೀ ।
ನೀಳಾಳಕಿಯೊಳ್ ಬೆರಸಿದ
ಖೇಳನ ವಿಟರೆಯ್ದಿ ಸೋಂಕಿ ಸುಖಿಯಾಗಿರ್ಪರ್ ॥ ೧೫೨

ವ॥ ಅಂತುಮಲ್ಲದೆ

ಮ॥ ಸ್ರ॥ ದರಹಾಸಶ್ರೀಗೆ ಬೆಳ್ದಿಂಗಳ ಸಿರಿ ಸರಿಯಲ್ಲಂ ಕಟಾಕ್ಷೇಕ್ಷಣಕ್ಕಾ
ಸ್ಮರಬಾಣಂ ಸಾಟಿಯಲ್ಲಂ ಮಿಱುಗುವ ಕುಡುವುರ್ವಿಂಗೆ ತಾನಿಕ್ಷುಚಾಪಂ ।
ದೊರೆಯಲ್ಲಂ ಚಕ್ರವಾಕಂ ನೆಲೆಮೊಲೆಗೆಣೆಯಲ್ಲಂ ಕಳಂಕಪ್ರಭೂತಂ
ಪರಿದಗ್ಧಂ ತದ್ವಿಯೋಗಾಕುಳನಬಲೆಯ ರೂಪಿಂಗದೆಂತೊಂದುಮಾಳ್ಪಂ ॥ ೧೫೩

ವ॥ ಎಂದು ಬಣ್ಣಿಸುತ್ತಿರ್ಪಿನಂ ಇತ್ತಲ್ ಮತ್ತೊಂದೆಡೆಯೊಳೊರ್ವ ವಿದಗ್ಧವಿಟಂ ವಿರಹಪರಿತಾಪದಿಂ ನಿಲಲಾಱದೆ ನಿಜಸಖಿಗಿಂತೆಂದಂ,

ಸುರತೋತ್ಸವದಲ್ಲಿ ಮಗ್ನರಾಗಿದ್ದರು. ೧೫೧. ಗಳರವದಿಂದ ಕಿವಿ, ಆಲಿಂಗನದಿಂದ ಮೆಯ್, ಕೋಮಲವಾದ ರೂಪುದಿಂದ ಕಣ್ಣು, ಅಧರರಸದಿಂದ ನಾಲಗೆ, ನಿಟ್ಟುಸಿರ ಕಂಪಿನಿಂದ ನಾಸಿಕ ಹೀಗೆ ಅವಳು ಸರ್ವೇಂದ್ರಿಯ ಸುಖಾಸ್ವಾದವನ್ನು ಅನುಭವಿಸುತ್ತಿದ್ದಾಳೆ. ವ॥ ಮತ್ತೊಂದೆಡೆಯಲ್ಲಿ ಒಬ್ಬಳು ತನ್ನ ಮಗಳ ಸೌಭಾಗ್ಯವನ್ನು ಪ್ರಿಯಸಖಿಗೆ ಹೇಳುತ್ತಿದ್ದಾಳೆ. ೧೫೨. ಮಾಲತಿಯ ಕುಸುಮದಲ್ಲಿ ಮಕರಂದ ಪಾನಮಾಡಿ ಮದಿಸಿದ ದುಂಬಿಗಳನ್ನು ಬೇರೆ ದುಂಬಿಗಳು ಎರಗಿ ಬಂಡುಣ್ಣುವಂತೆ ಈ ನೀಲಮುಂಕುರುಳುಳ್ಳ ನಾಯಕಿಯನ್ನು ಬೆರೆದ ಖೇಳ (ಖಲ)ನನ್ನು ಇತರರು ಮುಟ್ಟಿ ತಾವೂ ಸುಖಿಗಳೆಂದು ಭಾವಿಸಿಕೊಂಡರು. ೧೫೩. ಅವಳ ನಸುನಗೆಗೆ ಬೆಳ್ದಿಂಗಳ ಸಿರಿ ಸರಿಯಲ್ಲ. ಕಡೆಗಣ್ಣ ನೋಟಕ್ಕೆ ಮನ್ಮಥನ ಬಾಣವು ಸಮವಲ್ಲ, ಮೆರೆಯುವ ಕುಡಿದುಬ್ಬಿಗೆ ಕಬ್ಬಿನಬಿಲ್ಲು ಹೋಲಿಕೆಯಾಗದು, ನೆಲೆಮೊಲೆಗೆ ಚಕ್ರವಾಕವು ಸಾಟಿಯಲ್ಲ, ಎಂದ ಮೇಲೆ ಚಂದ್ರಕಳಂಕವುಳ್ಳವ, ಮದನ ಸುಟ್ಟವನು, ಇಂಥವರು ವಿಯೋಗಾಕುಲೆಯಾದ ಅವಳ ರೂಪಿಗೆ ಹೇಗೆ ತಾನೆ ಹೋಲಿಕೆಯಾದಾರು! ವ॥ ಮತ್ತೊಂದು ಕಡೆ ಒಬ್ಬವಿದಗ್ಧವಿಟ, ಅವನು ವಿರಹತಾಪಕ್ಕೆ

ಮ॥ ಎರೆವೆಂ ಮತ್ಸಖಿ ತಂದುಕೊಡು ಗುಣವೃಂದಾರಾಮೆಯಂ ರಾಮೆಯಂ
ವರಪುಷ್ಪಾಯುಧಚಾಪಸಂಯುತುವೆನಿಪ್ಪಾ ಸಾರಿಯಂ ಸಾರಿಯಂ ।
ಸ್ಮರನಾಳೋಚನೆಗಾಪ್ತೆಯಾಗಿ ನೆಲೆಸಿರ್ಪಾ ಕಾಂತೆಯಂ ಕಾಂತೆಯಂ
ತರುಣೀ ಸಂಘಶಿರೋಮಣಿ ಪ್ರಬಳ ಕೀರ್ತ್ಯಾಶಾಂತೆಯಂ ಶಾಂತೆಯಂ ॥ ೧೫೪

ವ॥ ಎಂದಿಂತು ಬಾಯಲಿವ ಮಿತ್ರನಂ ನಲ್ಲಳೊಳ್ ಕೂಡಿ ಸಮಸುಖದೊಳಿರಿಸೆ, ಮತ್ತ ಮೊಂದೆಡೆಯೊಳ್ ವಿಟಂಗತ್ಯಾಸಕ್ತೆಯಾದ ಮಗಳ್ಗೆ ಪೂತೆ ಬುದ್ಧಿವೇಳ್ವಲ್ಲಿ.

ಚಂ॥ ಮಗಳೆ ಬಿಡಾತನಂ ಬಿಡೆನವಂ ಧನಮಂ ಪಿರಿದೀಯನಿತ್ತುದೇ
ಮಿಗೆ ಪಿರಿದೆಯ್ದದೆಯ್ದುವುದು ಸಾಲದು, ಸಾಲ್ಪುದು ಬೇಡ ಬೇಳ್ಪುದೊ ।
ತ್ತೆಗೆ ನಡೆ ಊಹುಮೂರ್ಖತೆಯ ಮೂರ್ಖತೆ ಕೆಟ್ಟಪೆ ಕೆಟ್ಟಪೆಂ ಕೆಲಂ
ತೆಗಳ್ದಿಯ ಹೈ ಕರಂ ತೆಗಳ್ದಿಯೆಂದೆನೆ ಪುತ್ರಿಯನಟ್ಟಿ ಮೋದಿದಳ್ ॥ ೧೫೫

ವ॥ ಅಲ್ಲದೆಯುಂ ಮತ್ತಮೊಂದೆಡೆಯೊಳೊರ್ವ ವೃದ್ಧವೇಶ್ಯಾಂಗನೆ ತನ್ನ ನೆರೆಮನೆಯ ಬಾಲಮುಗ್ಧೆಯ ಸೊಬಗಂ ಕಂಡು ಅಸೂಯೆಗೊಂಡು ತನ್ನೊಳಿಂತೆಂದಳ್,

ಚಂ॥ ಮೊಲೆ ಮುಗುಳೊತ್ತಮಕ್ಷಿ ಚಪಳತ್ವಮನೆಯ್ದುವು ಬಾಸೆ ಬಾರದು
ಜ್ವಲಿಸದು ಭಾಳಲೇಖೆ ವದನಂ ಮದವೇರಿದು ನೋಡೆ ತಳ್ತುಕಣ್ ।
ಗೊಳಿಸದು ಮೇಲುದಗ್ಗಳಿಪ ನೋಟಮಗುರ್ವಿಪಮಧ್ಯಮೊಪ್ಪುವೀ
ತಿಳಕಮನೂನ ಗರ್ವಮೊಲವಿಂ ನೆಲಸಿರ್ಪುದು ಚೋದ್ಯಮಲ್ಲವೇ ॥ ೧೫೬

ತಾಳಲಾಪರೆ ನಿಜಸಖಿಗೆ ಹೇಳಿದ. ೧೫೪. ಎಲೌ ಪ್ರಿಯಸಖಿ, ಗುಣವತಿಯೂ ಮನೋಹರೆಯೂ, ಮನ್ಮಥನ ಪುಷ್ಪಾಯುಧನ ಬಿಲ್ಲಿಗೆ ಹೆದೆಯೇರಿಸಿರುವ ನಾರಿನಂತಿರುವ ನಾರಿ, ಸ್ಮರನ ಆಪ್ತಾಲೋಚನೆಗೆ ತಕ್ಕವಳಾದ ಕಾಂತೆ, ತರುಣೀ ಸಮೂಹಕ್ಕೆ ಶಿರೋಮಣಿಯಾಗಿರುವ ಕಾಂತೆಯನ್ನು ಕರೆತಂದುಕೊಡು, ನೀನು ಕೇಳಿದುದನ್ನು ನೀಡುವೆನು ಎಂದ. ವ॥ ಮತ್ತೊಂದು ಕಡೆ ವಿಟನಲ್ಲಿ ಆಸಕ್ತೆಯಾದ ಮಗಳಿಗೆ ತಾಯಿ ಹೇಳುವ ಬುದ್ಧಿವಾದ ಸಂವಾದ ರೂಪವಾಗಿದೆ. ೧೫೫. ಮಗಳೆ ಆತನನ್ನು ಬಿಡು ; ನಾನು ಬಿಡುವುದಿಲ್ಲ. ಆತ ಹಣ ಹೆಚ್ಚಿಗೆಕೊಡುವುದಿಲ್ಲ ; ಕೊಟ್ಟಷ್ಟೇ ಸಾಕು ಅದೇ ದೊಡ್ಡದು ; ಸಾಲುವುದಿಲ್ಲ ; ಸಾಲುತ್ತದೆ ಬೇಡನಡೆ,ಊಹು! ಇದು ಮೂರ್ಖತನ, ಕೆಟ್ಟುಹೋಗುವೆ; ಆಗಲಿ ಕೆಡುವೆನು! ನನ್ನ ಮಾತಿಗೆ ತೆಗಳಿ ಎದುರಾಡುವೆಯ ? ಹೌದು ತೆಗಳಿದೆ ಎನ್ನಲು ವಾದಿಸುವ ಮಗಳನ್ನು ತಾಯಿ ಚನ್ನಾಗಿ ಹೊಡೆದಳು. ವ॥ ಅಲ್ಲೊಬ್ಬ ಮುದಿಸೂಳೆ ಅವಳ ನೆರೆಯಲ್ಲಿ ಒಬ್ಬ ಬಾಲ ಮುಗ್ಧೆ. ಅವಳ ಸೊಬಗನ್ನು ಕಂಡು ಇವಳಿಗೆ ಅಸೂಯೆ. ಅವಳ ಭಾವನೆಯಿದು, ೧೫೬. ಸ್ತನಗಳ ಚೂಚುಕ ಮಿದುವಾಯ್ತು, ಕಣ್ಣು ಚಪಲತ್ವ ತಳೆಯದು, ರೋಮರಾಜಿಯ ಮಸುಗು ಅಳಿಯಿತು. ಹಣೆಸುಕ್ಕುಗಟ್ಟಿತು, ಮದವೇರದು, ಮೇಲುದವು

ವ॥ ಎಂದು ತನ್ನೊಳ್ ತಾನೆ ಜಿನುಂಗಿ ನುಡಿವ ಮುದುಪಾಱಿಯಂ ನೋಡುತುಂ ನಗುತುಂ ಬರೆ ಮುಂದೊಂದೆಡೆಯೊಳೊರ್ವ ಲಲನೆ ತನ್ನೊಲ್ಪನಿಂದಾದ ಬೇಸಱಂ ನಿಜಸಖಿಗೆ ಪೇಳುತ್ತಿರ್ದಳದೆಂತೆನೆ,

ಉ॥ ಆದರಿಪಂತೆ ಸಾರ್ವನುಪಚಾರಮನಾಡುವನಿತ್ತುದಂ ಸಮಂ
ತೋದುವನಾವಗಂ ಕಟಕಿಯಂ ನುಡಿವಂ ನಗುವಂತೆ ಕೋಪಿಪಂ ।
ಸಾಧಿಸುವಂ ದಿಟಂ ಪುರುಡಿಪಂತೆ ನೆಗಳ್ಚುವನಟ್ಟಿ ಪತ್ತುವಂ
ಪೋದೊಡೆ ಪೋಗನಿರ್ದೊಡಿರನೀ ಶನಿಯಂ ಸಖಿಯೆಂತು ನೀಗುವಂ ॥ ೧೫೭

ವ॥ ಎಂದು ನುಡಿದ ನಿರಾಶಾವಚನಂಗಳಂ ಕೇಳುತ್ತುಂ ಬರೆವರೆ ಮುಂದೊಂದೆಡೆಯೊಳನೇಕ ನವೀನರತ್ನಮಯದರ್ಪಣ ಕನಕಕಳಶ ವಿಚಿತ್ರಪತ್ರಪರಿಶೋಭಿತಮಾಗಿನವೀನಕ್ರೀಡೆ ತವಿಲಿಲ್ಲದ ನವಿಲುಯ್ಯಲ ಮುಂದೊರ್ವ ವಿದಗ್ಧವನಿತೆ ಸಖೀಜನಂಬೆರಸು ಬೆಳ್ದಿಂಗಳನಿದಿರ್ಗೊಂಡು ವಸಂತಂಗೆ ಪೊಸತಳಿರ್ಗಳ ಪಸೆಯಂ ತಂದಿಕ್ಕಿ ಕಾಮಂಗೆ ಸಣ್ಣನನೆಗಳ ಪುಷ್ಪಾಂಜಳಿಯನಿತ್ತು, ರತಿದೇವಿಗೆ ಮೆಯ್ಯಿಕ್ಕಿ ಚಂದ್ರಂಗೆ ಕುಸುಮರಸದರ್ಘ್ಯಮಂ ಕೊಟ್ಟು ಗಿಳಿ ಹಂಸೆ ಕೋಗಿಲೆಗಳನುಚಿತಾಹಾರದಿಂ ತಣಿಪಿ ಮಂದಯ್ಸಿದ ಸತಿಯರ ಸಂದಣಿಯೊಳಾಂದೋಳಮನೇಱಿದಾಗಳ್

ಕಂ॥ ಏಱಿದ ಮಣಿಯುದಯನಗಂ
ತೋಱಿದ ಮುಖಬಿಂಬಮಿಂದು ಬಿಂಬಮಪಾಂಗಂ ।

---

ಕಂಗೊಳಿಸದು, ಅಗ್ಗಳಿಪನೋಟ, ದಪ್ಪವಾಗುತ್ತಿರುವ ಮಧ್ಯ, ಒಪ್ಪುವತಿಳಕ, ಹೀಗಿದ್ದೂ ಇನ್ನೂ ಒಲವು ನೆಲೆಸಿರುವುದು ಸೋಜಿಗವಲ್ಲವೆ? ವ॥ ಇಂಥ ಮುದಿ ಸೂಳೆಯನ್ನು ಕಂಡು ನಗುತ್ತಾ ಮುಂದೆ ಬಂದರೆ ಅಲ್ಲೊಬ್ಬ ಲಲನೆ, ತನ್ನ ಪ್ರಿಯನಿಂದ ಆದ ಬೇಸರವನ್ನು ತನ್ನ ಸಖಿಗೆ ಹೇಳುತ್ತಿದ್ದಾಳೆ. ೧೫೭. ಎಲೌ ಸಖಿ ಬಹಳ ಆದರಿಸುವ ಹಾಗೆ ನಟಿಸುತ್ತಾನೆ, ಉಪಚಾರದ ಮಾತುಗಳನ್ನಾಡುತ್ತಾನೆ, ಕೊಟ್ಟದ್ದನ್ನು ಚನ್ನಾಗಿ ಓದುತ್ತಾನೆ, ಯಾವಾಗಲೂ ಕಟಕಿಯನ್ನು ನುಡಿಯುತ್ತಾನೆ. ನಗುವಂತೆ ಕೋಪಗೊಳ್ಳುತ್ತಾನೆ, ಸುಳ್ಳನ್ನು ನಿಜದಂತೆ ಸಾಧಿಸುತ್ತಾನೆ. ಆಚೆಗೆ ಅಟ್ಟಿದರೆ ಮತ್ತೆ ಬರುತ್ತಾನೆ. ಇದ್ದರೆ ಇರ, ಇಂಥ ಶನಿಯನ್ನು ನೀಗುವುದು ಹೇಗೆ ಎಂಬುದೇ ತಿಳಿಯದಾಗಿದೆ! ವ॥ ಎಂಬ ನಿರಾಶಾವಚನಗಳನ್ನು ಕೇಳುತ್ತಾ ಮುಂದೆ ಬಂದರೆ ಅಲ್ಲಿ ಹೊಸ ರತ್ನಖಚಿತದರ್ಪಣ ಸುವರ್ಣದ ಕಳಶ ಶೋಭಿತೆಯಾದ ಒಬ್ಬ ವಿದಗ್ಧವನಿತೆ ಸಖಿಯರೊಡನೆ ಬೆಳ್ದಿಂಗಳಲ್ಲಿ ವಸಂತನಿಗೆ ಹೊಸತಳಿರುಗಳ ಹಸೆಯನ್ನಿಟ್ಟು, ಕಾಮನಿಗೆ ಸಣ್ಣನನೆಗಳ ಪುಷ್ಪಾಂಜಳಿಯನ್ನಿತ್ತು, ರತಿಗೆ ವಂದಿಸಿ, ಚಂದ್ರನಿಗೆ ಪುಷ್ಪರಸದ ಅರ್ಘ್ಯ ಕೊಟ್ಟು ಗಿಳಿ ಹಂಸಕೋಗಿಲೆಗಳನ್ನು ಉಚಿತ ಆಹಾರದಿಂದ ತೃಪ್ತಿಪಡಿಸಿ, ಸಖಿಯರ ಸಂದಣಿಯಲ್ಲಿ ತೂಗುಮಂಚವನ್ನೇರಿದಳು. ೧೫೮. ಅವಳು ಏರಿದ ಮಣಿಯೇ ಉದಯಾದ್ರಿ, ತೋರಿದ ಮುಖ

ಮಾಜಿದ ಚಂದ್ರಿಕೆಯೆನೆ ಕಳೆ
ಯೇಜಿದ ಪಡಿಚಂದ್ರನಂತೆ ಸೌಂದರಿಯೆಸೆದಳ್ ॥ ೧೫೮

ಉ॥ ನೋಡುವನೇಕ ಸದ್ವಿಟಜನಂಗಳ ಪೆಣ್ಗಳ ಕಣ್ಗಳಾಡೆ ಕೊಂ
ಡಾಡುವ ತತ್ಸಖೀಕುಲದ ಚಾಗದ ಭೋಗದ ರಾಗಮಾಡೆ ತೂ ।
ಗಾಡುವ ಬಾಲಕೀವ್ರಜದ ಕಂಕಣ ಝಂಕೃತಿ ಭೋಂಕನಾಡೆ ತಾ
ನಾಡಿದಳುಯ್ಯಲಂ ಮುಖಶಶಿಪ್ರಭೆ ಮುಚ್ಚೆ ಮುಸುಂಕೆ ಚಂದ್ರನಂ ॥ ೧೫೯

ವ॥ ಇಂತಾಡುವ ನವೀನಾಂದೋಳನಕ್ರೀಡೆಕಡೆಯಾದನೇಕಮದನ ಮಹೋತ್ಸಾಹಂಗಳಂ ನೋಡುತ್ತುಂ ಪಣ್ಯಾಂಗನಾವೀಥೀವಿಸರಮಂ ಕಳೆದು ಬಂದು ರಾಜನಿಳಯ ದ್ವಾರದ ಮುಂದೆ ನಿಂದಿರೆ ಸಾಗರಿಕನಿಂತೆಂದಂ,

ಕಂ॥ ದೀಪ್ತಿಯನುಳಿದುವು ಭಗಣಂ
ಸುಪ್ತಜನಂ ನಿದ್ರೆದಿಳಿದುದಿದೆ ಕೋಕಂ ತ।
ನ್ನಾಪ್ತನನಱಸುತ್ತಿರುಳ ಸ
ಮಾಪ್ತಿ ಕರಂ ಹತ್ತೆ ಸಾರ್ದುದಚಳಾಧೀಶಾ ॥ ೧೬೦

ಬರವಂ ಬಯಸುತೆ ಕುಳಿರೆಂ
ಬ ರವಂ ಮಿಗೆ ಪತ್ತೆ ಸಾರುತಿಂತಿವೆ ಚಕ್ರಂ ।
ಅರುಣೋದಯಮಂ ಸೂಚಿಸು
ತರುಣೋದಯಮಿತ್ತಲಾಗುತಿದೆ ಗಿರಿರಾಜಾ ॥ ೧೬೧

ಬಿಂಬವೆ ಚಂದ್ರಬಿಂಬ, ಕಡೆಗಣ್ಣಿನೋಟವೆ ಬೆಳದಿಂಗಳು, ಹೀಗೆ ಅವಳು ಕಳೆಯೇರಿದ ಚಂದ್ರನಂತೆ ಕಂಡಳು. ೧೫೯. ಅವಳು ಉಯ್ಯಾಲೆಯಾಡುತ್ತಿರುವಾಗ ವಿಟರ ಹಾಗೂ ಇತರ ಹೆಣ್ಣುಗಳ ಕಣ್ಣುಗಳು ಅವಳ ಮೇಲೆ ಬಿದ್ದವು, ಅವಳ ಸಖಿಯರು ಅವಳ ಭೋಗವನ್ನು ಕುರಿತು ಹಾಡತೊಡಗಿದರು, ಕೆಲವರು ಕೊಂಡಾಡಿದರು. ತೂಗುತ್ತಿರುವ ಬಾಲಕಿಯರ ಕಂಕಣ ಝೇಂಕೃತಿ ನೊಳಗಿತು, ಉಯ್ಯಾಲೆಯಲ್ಲಿ ತೂಗುವ ಅವಳ ಮುಖ ಶಶಿಪ್ರಭೆಯು ಚಂದ್ರನನ್ನು ಮುಸುಕಿತು. ವ ॥ ಇಂತಹ ಸೋಜಿಗಗಳನ್ನೆಲ್ಲ ನೋಡುತ್ತಾ ರಾಜನು ಅರಮನೆಗೆ ಹಿಂದಿರುಗಿದನು ; ಆಗ ನಾಗರಿಕನು ಹೇಳುತ್ತಾನೆ. ೧೬೦. ಎಲೈ ಗಿರಿರಾಜ, ತಾರೆಗಳು ಮಸಕಾದುವು, ಮಲಗಿದವರು ಎದ್ದರು. ಕೋಕವು ತನ್ನ ಆಪ್ತನನ್ನು ಅರಸುತ್ತಿದೆ. ಇದು ಇರುಳು ಕಳೆದುದರ ಕುರುಹು ಎಂದನು. ೧೬೧. ಆಗಮನವನ್ನು ಬಯಸುತ್ತಾ ಚಳಿ ಎಂಬ ಶಬ್ದವು ಹೆಚ್ಚಾಗಿ ಸಾರುತ್ತಿವೆ ಚಕ್ರವಾಕಗಳು, ಎಲೈ ಗಿರಿರಾಜನೆ

ವ॥ ಎಂದು ನುಡಿವ ನಾಗರಿಕನ ಬಿನ್ನಪಮಂ ಕೇಳ್ದು ಅರಮನೆಯಂ ಪೊಕ್ಕು ಗಿರಿರಾಜಂ ನಿರ್ಮಳೀಕೃತಕರಚರಣನುಂ ನವ್ಯ ವಸ್ತ್ರ ಪರಿಶೋಭಿತನುಂ ವಿಭೂತಿವಿಳಸಿತಸರ್ವಾಂಗನುಂ ರುದ್ರಾಕ್ಷಾಲಂಕೃತ ಶರೀರನುಂ ಶಿವಲಿಂಗಪೂಜಾವಿರಚಿತ ಹಸ್ತಕಮಳನುಂ ತತ್ಪಾದವಂದನಾಸಕ್ತನುಂ ಪಾದೋದಕ ಪ್ರಸಾದ ಸಂತುಷ್ಟ ಹೃದಯನುಂ ಕರ್ಪೂರ ತಾಂಬೂಲ ಮುಖವಳಯನುಮಾಗಿ ಸಭಾನಿಳಯಕ್ಕೆ ನಡೆತಂದು ನಾರದ ಮುನಿಯಂ ನಾಕಲೋಕಕ್ಕೆ ಕಳುಪಿ, ಪೂರ್ವಾಚಳಮನೇಱಿದ ಭಾಸ್ಕರನಂತೆ ಸಿಂಹವಿಷ್ಟರೋಪವಿಷ್ಟನಾಗಿರ್ದನಾ ಪ್ರಸ್ತಾವದೊಳ್,

ಮ॥ ಪರಮ ಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನ ಜ್ಞಾನಹಳಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ।
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನ ವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ॥ ೧೬೨

ಇದು ಸಮಸ್ತ ಸುರಾಸುರಮಕುಟ ಖಚಿತ
ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪುಂಜರಂಜಿತಚರಣ
ನೆನಿಪ ಪಂಪಾವಿರೂಪಾಕ್ಷ ಶ್ರೀಪಾದಕಮಲ
ಮಕರಂದ ಮಧುಕರಾಯಮಾಣ
ಸತ್ಕವೀಶ್ವರ ಹಂಪೆಯ
ಹರಿಹರದೇವ ವಿರಚಿತಮಪ್ಪ

ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ಪಾರ್ವತೀಯೌವನ ರಾತ್ರಿವಿಹಾರ ವರ್ಣನಂ
ಚತುರ್ಥಾಶ್ವಾಸಂ

ಮೂಡಲು ಕೆಂಪನ್ನು ಸೂಚಿಸುವ ಅರುಣೋದಯವಾಗುತ್ತಿದೆ. ವ॥ ಎಂದ ನಾಗರಿಕನ ಬಿನ್ನಪವನ್ನು ಕೇಳಿ ಅರಮನೆ ಹೊಕ್ಕು ಗಿರಿರಾಜನು ಕೈಕಾಲು ತೊಳೆದು ಮಿಂದು, ಮಡಿ ವಸ್ತ್ರಧರಿಸಿ, ಭಸ್ಮಾರುದ್ರಾಕ್ಷಭೂಷಿತನಾಗಿ ಕರಕಮಲದಲ್ಲಿ ಶಿವಲಿಂಗವನ್ನು ಭಕ್ತಿಯಿಂದ ಅರ್ಚಿಸಿ, ಪಾದೋದಕ ಪ್ರಸಾದಗಳನ್ನು ಸ್ವೀಕರಿಸಿ, ತಾಂಬೂಲ ಚರ್ವಣಮಾಡುತ್ತಾ ಸಭಾಂಗಣಕ್ಕೆ ಆಗಮಿಸಿ, ನಾರದಮುನಿಯನ್ನು ದೇವಲೋಕಕ್ಕೆ ಬೀಳ್ಕೊಟ್ಟು, ಪೂರ್ವಾದ್ರಿಯನ್ನು ಏರುವ ರವಿಯಂತೆ ಸಿಂಹಾಸನವನ್ನು ಅಲಂಕರಿಸಿದನು.

# ಪಂಚಮಾಶ್ವಾಸಂ

## ವಿರೂಪಾಕ್ಷದರ್ಶನ ಪುಷ್ಪಾಪಚಯಂ ಪೂಜಾವರ್ಣನಂ

ಕಂ॥ ಶ್ರೀ ಗಂಗಾಧರನಭವಂ
ಶ್ರೀ ಗೌರೀವರನುದಾರ ಪಾರಾವಾರಂ।
ಶ್ರೀ ಗುರು ಹಂಪೆಯ ಶಂಕರ
ನೀಗೆಮಗೆ ಮನೋರಥಂಗಳಂ ಕೃಪೆಯಿಂದಂ॥ ೧

ಮ॥ ಸ್ರ॥ ಸರಸೀಸಂಜಾತಜಾತೋನ್ನಿಶಿತ ನಿಶಿತ ಸೌರಂಭ ಸಂಪಾದನಾದಂ
ಧರಣೀ ದಿಗ್ವ್ಯೋಮಭಾಗಾವೃತಭರಿತ ಘನಧ್ವಾನಸಂಭೇದನಾದಂ।
ಸುರತಾಸಕ್ತಪ್ರಜಾಲಿಂಗನ ಚಲನಕರ ಪ್ರೌಢಿತಾನಾದನಾದಂ
ಪಡೆದತ್ತಾದಂ ಪ್ರಮೋದಂ ಶಿವನಿಳಯಕುಳೋತ್ಪಾದಮಾ ಶಂಖನಾದಂ॥ ೨

ಚಂ॥ ಮುಗಿಯಲೊಡರ್ಚಿನಿಂದ ಕುಮುದಾವಳಿಯಂ ಸರಸೀರುಹಂ ಮುಗುಳ್
ನಗೆ ನಗುವಂತಿರಿರ್ದುವು ಚಕೋರಿಗಳಸ್ತಗಿರೀಂದ್ರದತ್ತಲು।
ಬ್ಬೆಗದೊಳೆ ನೋಡುತಿರ್ದುವು ರಥಾಂಗಯುಗಕ್ಕೆ ಮನೋಜನೇಸು ಮೆ
ಲ್ಲಗೆ ತೊಲಗುತ್ತುಮಿರ್ದುದುದಯಾದ್ರಿಗೆ ಗೋಪತಿ ಬರ್ಪ ಪೊಳ್ತಿನೊಳ್॥ ೩

ಕಂ॥ ಕೆಂಪೇಱಿತು ಮೂಡಣದೆಸೆ
ಸೊಂಪೇಱಿತು ಚಕ್ರಮಿಥುನಮಬ್ಜಕದಂಬಂ।
ಕಂಪೇಱಿತು ಸಕಳ ಜಗಂ
ಪೆಂಪೇಱಿತು ಪದ್ಮಮಿತ್ರನುದಯಿಸುವಾಗಳ್॥ ೪

೧–೨. ಹೇಮಕೂಟ (ಹಂಪೆ)ದಲ್ಲಿರುವ ಅನೇಕ ಶಿವಾಲಯಗಳಲ್ಲಿ ಬೆಳಗಿನ ಶಂಖ ಧ್ವನಿಯು ಹರಡಿತು– ಭೂಮಿ ದಿಕ್ಕು ಆಕಾಶ ಇವುಗಳನ್ನು ಆವರಿಸಿದ ಮೇಘಧ್ವನಿಯನ್ನು ಸಹ ಭೇದಿಸುವ ನಾದದಂತೆಯೂ, ರತಿಕೇಳಿಯಲ್ಲಿ ತೊಡಗಿದ ರಸಿಕರ ಆಲಿಂಗನಾಸಕ್ತವಾದಕರ ಪ್ರೌಢಿಮೆಯನ್ನು ಪಡೆದಂತೆಯೂ ಆ ಶಂಖನಾದವು ಇತ್ತು. ೩. ಸೂರ್ಯನು ಉದಯಾದ್ರಿಗೆ ಬರುವ ಸಮಯದಲ್ಲಿ ಸಂಕೋಚಗೊಳ್ಳಲು ಸಿದ್ಧವಾಗಿನಿಂತಿದ್ದ ಕನ್ನೈದಿಲೆಗಳನ್ನು ನೋಡಿ ತಾವರೆಯ ಮೊಗ್ಗುಗಳು ಮುಗುಳ್ನಗೆ ಬೀರುವಂತಿತ್ತು. ಚಕೋರಿಗಳು ಅಸ್ತಾಚಲದಕಡೆ ಉದ್ವೇಗದಿಂದ ನೋಡುತ್ತಿದ್ದವು. ಚಕ್ರವಾಕ ದಂಪತಿಗಳಿಗೆ ಮನ್ಮಥನ ಹೊಡೆತ ಮೆಲ್ಲಗೆ ತಪ್ಪುತ್ತಿತ್ತು. ೪. ಕಮಲಮಿತ್ರನಾದ ಸೂರ್ಯನು ಉದಯಿಸುವ ಸಮಯದಲ್ಲಿ ಪೂರ್ವದಿಕ್ಕು ಕೆಂಪೇರಿತು, ಚಕ್ರವಾಕ ದಂಪತಿಗಳಿಗೆ

ಕಂ॥ ಉರ್ಕುಡುಗಲ್ ಕುಮುದಂಗಳ್
ಸೊರ್ಕೊಗೆಯಲ್ ಕಮಳ ಚಕ್ರಪಕ್ಷಿಯುಗಂಗಳ್ ।
ತರ್ಕೈಸಲ್ ತಮಮಾಗಳ್
ಬರ್ಕಟ ಬಯಲಾದುದರ್ಕನುದಯಿಸುವಾಗಳ್ ॥ ೫

ಇಳೆಯ ಮುಸುಂಕಂ ಮೆಲ್ಲಗೆ
ಕಳೆಯುತ್ತೆಳ್ಚಱಿಸುತುಂ ರಥಾಂಗಮನಬ್ಜಂ ।
ಗಳನೆವೆದೆಱೆಯಿಸುತುಂ ದೆಸೆ
ಗಳನೆಳ್ಬಿಸುತೆಳ್ದುವಾಗಳಿನನ ಕರಂಗಳ್ ॥ ೬

ವ॥ ಮತ್ತಮಲ್ಲದೆ,

ಕಂ॥ ಕೊರಗಿಸಿ ಕುಮುದವನೆಳ್ಬಿಸಿ
ಯರವಿಂದಮನಂಧತಮಮನೋಡಿಸಿ ದೋಷಾ ।
ಕರನಂ ಕಳೆಗುಂದಿಸಿ ಪರಿ
ವರಿದುವು ತರಣಿಯ ತಳಾಱರಂತಿರೆ ಕಿರಣಂ ॥ ೭

ವ॥ ಆ ಸಮಯದೊಳ್,

ಕಂ॥ ಮುದುಡಿಸುತಂ ಕೈರವಮಂ
ಬೆದಱಿಸುತುಂ ಕೌಶಿಕಂಗಳಂ ಘನಪಥದೊಳ್ ।
ಕೆದಱುತ್ತುಂ ಕಿರಣಾಳಿಯ
ನುದಯಾಚಳ ಚೂಡದಲ್ಲಿ ಮೂಡಿದನರ್ಕಂ ॥ ೮

ಸೊಂಪೇರಿತು, ಕಮಲಗಳಿಗೆ ಕಂಪು ಏರಿತು, ಸಕಲ ಜಗತ್ತಿಗೆ ಪೆಂಪುಏರಿತು. ೫. ಸೂರ್ಯೋದಯವಾದಾಗ ನೈದಿಲೆಗಳು ಮುಚ್ಚಿಕೊಂಡವು, ಕಮಲಗಳು ಅರಳಿದವು, ಚಕ್ರವಾಕ ಮಿಥುನಗಳು ತಕ್ಕೈಸಿದವು, ಕತ್ತಲು ಮಾಯವಾಯಿತು. ೬. ರವಿಯ ಕಿರಣಗಳು ಎಲ್ಲೆಡೆಗೂ ಹಬ್ಬಿದವು. ಸೂರ್ಯನ ಕರಗಳು ಇಳೆಗೆ ಮುಸುಕಿದ್ದ ಕತ್ತಲೆಂಬ ಮುಸುಕನ್ನು ಮೆಲ್ಲಗೆ ಕಳೆಯುತ್ತ ಎಚ್ಚರಿಸಿ, ಚಕ್ರವಾಕ ಮತ್ತು ಕಮಲಗಳ ರೆಪ್ಪೆಗಳನ್ನು ತೆರೆಯಿಸಿ, ದಿಕ್ಕುಗಳನ್ನೆಲ್ಲ ಎಬ್ಬಿಸುತ್ತ ಎಲ್ಲೆಡೆ ಹರಡಿದವು, ೭. ಸೂರ್ಯನ ಕಿರಣಗಳು ತಳವಾರರಂತೆ ನೈದಿಲೆಗಳನ್ನು ಕೊರಗಿಸಿ, ಕಮಲಗಳನ್ನು ಎಬ್ಬಿಸಿ, ಕತ್ತಲನ್ನು ಓಡಿಸಿ, ದೋಷಾಕರ-ಚಂದ್ರ ನನ್ನು ಕಳೆಗುಂದಿಸಿ ಎಲ್ಲೆಡೆ ಹಬ್ಬಿದವು. ೮. ಪೂರ್ವಾದ್ರಿಯ ತುದಿಯಲ್ಲಿ ರವಿ ಉದಯಿಸಿದಾಗ ನೈದಿಲೆ ಮುಚ್ಚಿಕೊಂಡವು. ಗೂಗೆಗಳು ಹೆದರಿ

ಕಂ॥ ಕಮಳಾಕರದಮಳ್ವಕ್ಕಿಗ
ಳ ಮನೋರಥಮಲರೆ ವಾಸವಾಶಾಮುಖದೊಳ್ ।
ತಮಮೆಂಬೆವೆದೆಗೆಯುತ್ತಿರೆ
ವಿಮಳ ಜಗಚ್ಚಕ್ಷು ತೊಳಗಿ ಬೆಳಗುತ್ತಿರ್ದಂ ॥ ೯

ವ॥ ಅಂತಾದ ಸೂರ್ಯೋದಯದೊಳ್ ಸಕಳ ಶಿವಾಲಯ ಪ್ರೋದ್ಭೂತಮಪ್ಪ ಪಂಚಮಹಾಶಬ್ದಮುಂ ತಟಾಕ ತೀರಸ್ಥಿತ ಸಂಧ್ಯಾವಂದನಾಸಕ್ತ ಧರಾಮರ ಪ್ರಕರಮುಂ ಗಜಶಿಕ್ಷಾಪ್ರಾರಂಭಸಮಯ ಸಂರಂಭಸಂಯುಕ್ತ ಸುಭಟಾರೋಹನಿಕಾಯಮುಂ ಹಯಶಿಕ್ಷಾವಾಹಕವ್ಯೂಹಮುಖರ ಮುಖಜನಿತ ನಿಬಿಡನಿರ್ಘೋಷಮುಂ ಸೇವಾಭರಧರಾಧೀಶ್ವರ ಪ್ರಕರ ಸಂರಂಭಮುಂ ರಾಜನಿಳಯಾಗಮ ಲಂಪಟಲಲಿತ ಲಲಿತಾಂಗೀವಿತಾನ ವಿಸ್ತಾರಹಸ್ತ ಕಟಕ ಮಂಜೀರಸಂಜನಿತ ಮಧುರಧ್ವನಿಯುಂ ನರ್ತಕ ನರ್ತಕೀನಿಕರ ವೈತಾಳಿಕಾದಿ ವಂದಿಮಾಗಧಸ್ತೋತ್ರಧರಾಮರ ಪರಮಾಶೀರ್ವಾದ ಕದಂಬಧ್ವನಿಯುಂ ಪುರದೊಳಂ ರಾಜಮಂದಿರದೊಳಂ ನೆಗಳೆ ಪರಮಹರ್ಷದಿಂ ಗಿರೀಶ್ವರಂ ಪ್ರಭಾತಸಮಯಸಮುಚಿತಾಸ್ಥಾನನಾಗಿ ಕುಳ್ಳಿರ್ದು ನೆನೆದು ನೋಡಿ ನಾರದಮುನೀಶ್ವರನಱಿಪಿ ಪೋದುದಂ ಕುರುಪುಗೊಂಡು ಹೈಮವತಿಯಂ ಹೇಮಕೂಟದೊಳಿರ್ಪ ಪರಂಜ್ಯೋತಿಃಸ್ವರೂಪನಪ್ಪ ಶ್ರೀ ವಿರೂಪಾಕ್ಷನಲ್ಲಿಗೆ ಕಳುಪಲೆಂಬು ಮನದಂದೋಲಗಮಂ ಪರೆಯಲ್ವೇಳ್ದು.

ಮ॥ ಸ್ರ॥ ಗಿರಿರಾಜಂ ನಾರದಂ ಪೇಳ್ದತಿಹಿತವಚಮಂ ಚಿಂತಿಸುತ್ತಲ್ಲಿ ನಾನಾ
ವರ ವಾರಸ್ತ್ರೀಯರೊಳ್ ತಾಂ ಜಯೆ ವಿಜಯೆಯೆನಿಪ್ಪಿರ್ವರಂ ಕೂಡಿಕೊಂಡೊ ।

ದವು, ಮೇಘ ಮಾರ್ಗದಲ್ಲಿ ಕಿರಣಗಳು ಹರಡಿದವು. ೯. ಕೊಳಗಳಲ್ಲಿರುವ ಚಕೋರ ಮಿಥುನಗಳ ಮನೋರಥವು ಅರಳಿತು. ಇಂದ್ರ ದಿಕ್ಕಿನಲ್ಲಿ ಕತ್ತಲೆಂಬ ರೆಪ್ಪೆ ತೆಗೆಯಿತು. ಜಗಚ್ಚಕ್ಷು ಸೂರ್ಯನು ಬೆಳಗುತ್ತಿದ್ದ. ವ॥ ಸೂರ್ಯೋದಯದಲ್ಲಿ ಆ ಪುರದಲ್ಲಿ ಹಾಗೂ ರಾಜಮಂದಿರದಲ್ಲಿ ನಾನಾ ವಿಧ ಧ್ವನಿಗಳು ಮೊಳಗಿದವು. ಅವುಗಳಲ್ಲಿ ಮುಖ್ಯವಾದವು ಇವು : ಎಲ್ಲ ಶಿವಾಲಯಗಳಲ್ಲಿ ಪ್ರಾತಃಕಾಲ ಪೂಜೆಯಲ್ಲಿ ಬಾರಿಸುವ ಪಂಚಮಹಾ ಶಬ್ದಗಳು, ಕೆರೆಯ ತಡಿಯಲ್ಲಿ ಸಂಧ್ಯಾವಂದನಾಸ್ತಕರಾದ ಭೂಸುರರ ಸಮೂಹ, ಗಜಶಿಕ್ಷಣದ ಪ್ರಾರಂಭದಲ್ಲಿ ಉತ್ಸಾಹಶಾಲಿಗಳಾದ ಸುಭಟರ ಗುಂಪು, ಹಯ (ಕುದುರೆ) ಶಿಕ್ಷಕರು ಕುದುರೆ ಹತ್ತಿಕೂಗುವ ಶಬ್ದ, ಸೇವಾಸಕ್ತರಾದ ಅನೇಕ ಸಾಮಂತ ರಾಜರ ಆಸಕ್ತ, ರಾಜನಿಲಯಕ್ಕೆ ಆಗಮಿಸುತ್ತಿರುವ ಲಲಿತಾಂಗಿಯರ ಕೈಬಳೆಗಳ ಮಧುರ ಶಬ್ದ, ನರ್ತಕ-ನರ್ತಕಿಯರು, ವೈತಾಳಿಕರು, ಹೊಗಳುಭಟ್ಟರ ಸ್ತೋತ್ರ, ಬ್ರಾಹ್ಮಣಾಶೀರ್ವಾದಧ್ವನಿಗಳು ಆ ಪಟ್ಟಣ ಹಾಗೂ ಅರಮನೆಯಲ್ಲಿ ಮೊಳಗಿದವು. ಅರಸನು ಸಂತೋಷದಿಂದ ಪ್ರಾತಃಕಾಲದಲ್ಲಿ ಉಚಿತಾಸನದಲ್ಲಿ ಕುಳಿತು, ನಾರದ ಮುನಿಯು ಕೊಟ್ಟಿರುವ ಸೂಚನೆಯನ್ನು ನೆನೆದು ಹೈಮವತಿ (ಉಮಾ)ಯನ್ನು ಹೇಮಕೂಟದಲ್ಲಿರುವ ಪರಂಜ್ಯೋತಿಸ್ವರೂಪನಾದ ಶ್ರೀವಿರೂಪಾಕ್ಷನಲ್ಲಿಗೆ ಕಳುಹಿಸಬೇಕೆಂದು ಯೋಚಿಸಿ ಓಲಗವನ್ನು ಮುಗಿಯಿಸಿದನು. ೧೦. ಗಿರಿರಾಜನು ನಾರದ ಮುನಿಯು ಹೇಳಿದ ಹಿತವಚನವನ್ನು ಚಿಂತಿಸುತ್ತಿರುವಾಗ

ಪ್ಪಿರೆ ಮೂಱುಂಪುಷ್ಪಕಂಗಳ್ ಬರೆ ನಿಜಸುತೆಯಂ ಶಾಂತೆಯಂ ಸತ್ಯೆಯಂ ಶಾಂ
ಕರಿಯಂ ಶರ್ವಾಣಿಯಂ ಶಾಶ್ವತಗುಣನಿಧಿಯಂ ಬಾರೆನುತ್ತಿರ್ದನಾಗಳ್ ೧೦

ಕಂ॥ ಗಿರಿಪತಿ ಕರೆದೊಡೆ ಪುಳಕಾ
ಭರಣೆ ಮಹಾದೇವಿ ಮಾನಿ ಶರ್ವಾಣಿ ಕೃಪಾ ।
ಕರೆ ಹಂಸಯಾನೆ ಬಿಂಬಾ
ಧರೆ ತಂದೆಯ ಮುಂದೆ ಬಂದು ನಿಂದಿರ್ದಾಗಳ್ ॥ ೧೧

ಮ॥ ಸ್ರ॥ ಪದೆಪಿಂದು ಬಂದು ಮೇನಾಸತಿ ನಿಜಸುತೆಯಂ ನೋಡಿ ಮುಂಡಾಡಿ ದೇವೀ
ಸದಳಂಕಾರೈಕಪಾತ್ರೇ ಪುಲಿಕರಡಿಮಹಾಸರ್ಪನಮ್ಮೃಾವು ಸಿಂಹಂ ।
ಮದವನ್ಮಾತಂಗನುಗ್ರ ಗ್ರಹವಿಡಿದ ಬದಿರ್ ಚಿತ್ರವುಂಟಲ್ಲಿ ತಾಯೇ
ಪದುಳಂ ಪೋಗವ್ವ ಪೋಗೆಂದತಿಭಯರಸದಿಂ ಬುದ್ಧಿವೇಳುತ್ತುಮಿರ್ದಳ್ ॥ ೧೨

ವ॥ ಎಂದಿಂತು ಪೇಳೆಕೇಳ್ದು ಮನದೊಳ್ ನಸುನಗುತ್ತುಂ ಮಾತೆಯ ಮಾತಿಗೊಡಂಬಟ್ಟು ವಿನಯ ವಿನಮಿತೆಯಾದ ಪಾರ್ವತಿಯಂ ಪರ್ವತರಾಜಂ ಪುಷ್ಪಕದೊಳ್ ಬಿಜಯಂಗೈಸಿ ತಾನುಂ ಕುಳ್ಳಿರ್ದು ಪಿಂತಣ ವಿಮಾನಂಗಳೊಳ್ ಜಯೆವಿಜಯೆಗಳಂ ಬರಲ್‌ವೇಳ್ದು ಗಗನಕ್ಕೆ ನೆಗೆದು ಮಿಱು ಪಾಱು ತ್ರ್ಯಕ್ಷನಂ ನೆನೆದು ದಕ್ಷಿಣಾಭಿಮುಖನಾಗಿ ನಡೆತರ್ಪಾಗಳ್,

ಅಂತಃಪುರದಲ್ಲಿರುವ ಶ್ರೇಷ್ಠ ಸ್ತ್ರೀಯರಲ್ಲಿ ಜಯೆವಿಜಯೆ ಎಂಬವರಿಬ್ಬರನ್ನು ಕೂಡಿಕೊಂಡು ಹೊರಡಲು ಸಿದ್ಧನಾದಾಗ ಅಲ್ಲಿ ಮೂರು ಪುಷ್ಪಕಗಳು ಬಂದವು. ರಾಜನು ಶಾಂತಳೂ ಸತ್ಯಸ್ವರೂಪಳೂ ಶಾಶ್ವತಗುಣನಿಧಿಯೂ ಆದ ಶರ್ವಾಣಿಯನ್ನು ಕರೆದನು. ೧೧. ಗಿರಿಪತಿ ಕರೆದೊಡನೆಯೇ ಗಿರಿಜೆಗೆ ಮೈ ರೋಮಾಂಚಿತವಾಯಿತು. ಪುಳಕವೇ ಅವಳಿಗೆ ಆಭರಣವಾಯಿತು. ಅವಳು ತಂದೆಯ ಹತ್ತಿರ ಬಂದಳು. ೧೨. ತಾಯಿ ಮೇನಾದೇವಿ ಅಕ್ಕರೆಯಿಂದ ಅಲ್ಲಿಗೆ ಬಂದು ಮಗಳನ್ನು ಮುದ್ದಾಡಿ, ದೇವಿ, ಹೇಮಕೂಟವು ಭಯಂಕರವಾದ ಕಾಡು, ಅಲ್ಲಿ ಹುಲಿ, ಕರಡಿ, ಹೆಬ್ಬಾವು, ಸಿಂಹ ಮುಂತಾದ ಕ್ರೂರ ಮೃಗಗಳಿವೆ ಎಂದು ಮುಂತಾಗಿ ಕಾಡಿನ ಬಗೆಗೆ ಮಗಳಿಗೆ ಸೂಚನೆ ನೀಡಿ ಬುದ್ಧಿ ಹೇಳುತ್ತಿದ್ದಳು. ವ॥ ತಾಯಿಹೇಳಿದ ಮಾತುಗಳನ್ನು ಕೇಳಿ ಪಾರ್ವತಿ ಹುಸಿ ನಗೆ ಸೂಚಿಸಿ ವಿನಯದಿಂದ ಒಡಂಬಟ್ಟಳು. ಆದರೆ ಅಷ್ಟುಹೊತ್ತಿಗೆ ತಂದೆಯ ಅಪ್ಪಣೆಯಂತೆ ಪುಷ್ಪಕ ವಿಮಾನವು ಅಲ್ಲಿಗೆ ಬಂತು. ಗಿರಿರಾಜನು ಜಯೆ ಮತ್ತು ವಿಜಯೆ ಎಂಬ ಸಖಿಯರನ್ನೂ ಕರೆಸಿದನು. ಗಿರಿಜೆಯನ್ನು ಪುಷ್ಪಕದಲ್ಲಿ ಕುಳ್ಳಿರಿಸಿ ತಾನೂ ಕುಳಿತು, ಬೇರೆ ವಿಮಾನಗಳಲ್ಲಿ ಆ ಸಖಿಯರನ್ನು ಬರಲು ಆಜ್ಞಾಪಿಸಿ ಶಿವನನ್ನು ಕರೆದು ದಕ್ಷಿಣಾಭಿಮುಖವಾಗಿ ಹೊರಟನು.

ಮ॥ ಸ್ರ॥ ಪಲವುಂ ದೇಶಂಗಳಂ ಭಾಸುರನಗರಿಗಳಂ ತತ್ತಟಾಕಂಗಳಂ ನಿ
ಶ್ಚಲಕೇದಾರಂಗಳಂ ಪರ್ವತವಿತತಿಗಳಂ ವಿಂಧ್ಯಸಂದೋಹಮಂ ನಿ ।
ರ್ಮಲಕಾಸಾರಂಗಳಂ ತಾವರೆಗಳನಲಿಯಂ ಹಂಸಮಾಲಾವಿಳಾಸೋ
ಜ್ಜ್ವಲಮಂ ನೋಡುತ್ತೆ ತೋಱುತ್ತಗಜೆಗೆ ನಗನಾಥಂ ಬರುತ್ತಿರ್ದನಾಗಳ್ ॥ ೧೩

ಕಂ॥ ಇಂತಿಂತು ನೋಡುತುಂ ಬರೆ
ಮುಂತಿರ್ದುದು ತರಳತರಂಗಪ್ರಯುತಾ ।
ನಂತ ನವಫೇನಜಲಚರ
ಸಂತಾನಂ ತುಂಗಭದ್ರೆ ಗಂಗಾಪ್ರಾಯಂ ॥ ೧೪

ಇರೆ ಕಂಡು ಕೊಂಡು ಕೊನೆಯುತೆ
ಗಿರಿರಾಜಂ ನಿಜತನೂಜೆಗಱಿಪಿದನತ್ಯಾ ।
ದರದಿಂ ಭರದಿಂ ಪರಿದುದು
ಸುರುಚಿರನದಿ ತುಂಗಭದ್ರೆಯೆಂಬುದು ಪೆಸರಿಂ ॥ ೧೫

ಚಂ॥ ತರಳತರಂಗ ಮುದ್ರೆಯನನೇಕಮುನೀಂದ್ರ ಮನಸ್ಸುಭದ್ರೆಯಂ
ಪರಮ ಸುಧಾರಸಾರ್ದ್ರೆಯನಪಾರಗಭೀರಸಮುದ್ರೆಯಂ ಪರಾ ।
ಪರಸುಖ ನಿದ್ರೆಯಂ ದುರಿತಮಾಲೆಗುಪದ್ರೆಯನತ್ಯನೂನವಿ
ಸ್ತರ ಸುಕೃತಾರ್ದ್ರೆಯಂ ನೆರೆ ನಿರೀಕ್ಷಿಸು ಪಾರ್ವತಿ ತುಂಗಭದ್ರೆಯಂ ॥ ೧೬

೧೩. ವಿಮಾನದಲ್ಲಿ ಬರುತ್ತಿರುವಾಗ ಅವರು ಕಂಡ ದೃಶ್ಯಗಳು ಅನೇಕ. ಅವುಗಳಲ್ಲಿ ಅನೇಕ ದೇಶಗಳು, ನದಿಗಳು, ಕೆರೆಗಳು, ಹೊಲ–ಗದ್ದೆ–ತೋಟಗಳು, ಬೆಟ್ಟಗುಡ್ಡಗಳು, ವಿಂಧ್ಯ ಪರ್ವತಪಂಕ್ತಿ, ಕೊಳಗಳು, ತಾವರೆಗಳು, ಹಂಸೆಗಳ ಸಾಲುಗಳು, ಮುಂತಾದುವನ್ನು ರಾಜನು ಮಗಳಿಗೆ ತೋರುತ್ತಾ ಬರುತ್ತಿದ್ದಾನೆ. ೧೪. ಮುಂದೆ ತುಂಗಭದ್ರಾನದಿ ಕಣ್ಣಿಗೆ ಬಿತ್ತು. ಅದು ಚಂಚಲವಾದ ಅಲೆಗಳು, ನೊರೆ, ಜಲಚರ ಪ್ರಾಣಿಗಳು ಮುಂತಾದವುಗಳಿಂದ ಕೂಡಿದ ತುಂಗಭದ್ರೆ, ಪವಿತ್ರ ಗಂಗಾನದಿಗೆ ಸಮಾನವಾದ ಈ ಪುಣ್ಯನದಿ ಕಾಣಿಸಿತು. ೧೫. ನದಿಯನ್ನು ನೋಡಿ ಗಿರಿರಾಜನಿಗೆ ಸಂತೋಷವಾಯಿತು. ಮಗಳಿಗೆ ಅದರ ಪರಿಚಯ ಮಾಡಿಸಿದ. ಸುರುಚಿರ ನದಿ ತುಂಗಭದ್ರೆ ಎಂದು ಅದರ ಹೆಸರು ತಿಳಿಸಿದ. ೧೬. “ಎಲೌ ಮಗಳೆ, ತುಂಗಭದ್ರೆಯನ್ನು ಚೆನ್ನಾಗಿ ಗಮನಿಸು. ಈ ನದಿ ತರಲತರ ತರಂಗಗಳಿಂದ ಕೂಡಿದ್ದು, ಮುನಿಜನರಿಗೆ ಸೇವ್ಯವಾದದ್ದು, ಅಮೃತದಂತೆ ಆಪ್ಯಾಯಮಾನವಾದುದು, ಆಳ–ಅಗಲಗಳಿಂದ ಕೂಡಿದೆ, ಪಾಪ ಪರಿಹಾರಕವಾದುದು. ಪುಣ್ಯ

ತಡೆವಿಡಿದೊಪ್ಪುವಾಮ್ರವರನೇಱಿಲಶೋಕೆ ಕವುಂಗು ತೆಂಗು ಕ
ರ್ಪಡಿದ ತಮಾಲಮೀಳೆ ನವದಾಡಿಮವೀಥಿ ಲವಂಗಲುಂಗವಿಂ ।
ಪೊದರಿಪ್ಪ ಬಾಳೆ ಪಕ್ವಪನಸಾವಳಿ ನಿಂಬಕದಂಬಮಿಂಬುಗೊಂ
ಡಡಸಿದ ಮಾತುಳಂಗತತಿ ಪೂಗಕುಲಂ ಸಲೆ ತುಂಗಭದ್ರೆಯೊಳ್ ॥ ೧೭

ವ॥ ಮತ್ತಮಲ್ಲದೆ,

ಕಂ॥ ನೆನೆದನೆ ಧನ್ಯಂ ನೋಡಿದ
ನನಘಂ ಸೋಂಕಿದವನಮರನಘಮರ್ಷಣಮಿ ।
ರ್ದನೆ ಗಣನಾಥಂ ಸೇವಿಸಿ
ದನೆ ಮುಕ್ತಂ ಕೇಳ ತುಂಗಭದ್ರೆಯ ಜಳಮಂ ॥ ೧೮

ವ॥ ಎಂದು ಪೇಳುತ್ತುಂ ತೋಱುತ್ತುಮಿರ್ಪಲ್ಲಿ,

ಮ॥ ಸ್ರ॥ ತರದಿಂಕುಳ್ಳಿರ್ದ ಸಂಧ್ಯಾಸಮಯ ವಿಮಳ ಮಂತ್ರಾಕ್ಷರಸ್ತೋಮಶೋಭಾ
ಕರ ವಕ್ತ್ರಾನೀಕದಿಂದೊಪ್ಪುವ ಮುನಿತತಿಯಂ ಪರ್ಣಶಾಲಾಂತ್ಯದೊಳ್ ಭಾ ।
ಸುರ ಶಂಭುಧ್ಯಾನ ನಾನಾಜಪನಿಯಮ ಸದಾಹೋಮದಿಂದಿರ್ಪ ವಿಪ್ರೋ
ತ್ಕರದಿಂದಂ ತುಂಗಭದ್ರಾತಟಮೆಸೆದುದು ಹೇಮಾಚಳಪ್ರಾಂತಕಾಂತಂ ॥ ೧೯

ವ॥ ಮತ್ತಮಾ ತುಂಗಭದ್ರೆ, ಶಿವನ ಕೀರ್ತಿಯಂತೆ ಭುವನಭರಿತಮುಂ ಪಾರ್ವತೀವಿಳಾಸದಂತೆ ತೀರದೊಪ್ಪಮುಂ ಅಮರಾವತಿಯಂತನಿಮಿಷಪ್ರಕರಮುಂ ಕಱಿಗೊರಲನಂತೆ ವಿಷಭಂಗಮುಂ ಗಗನತಳದಂತೆ ವಕ್ರಗತಿಯುಂ ದ್ವಿಜರಾಜ ಶೋಭಿತಮುಮೆನಿಸಿರ್ದುದಾ ನದಿಯುಭಯತಟವಿಳ ಸಿತ ವನಾವಳಿಯಲ್ಲಿ,

ವಂತರಿಗೆ ಮಾತ್ರ ಇದರ ಸಾನ್ನಿಧ್ಯ" ಎಂದನು. ೧೭. ಈ ನದಿಯ ತಡಿಯಲ್ಲಿ ಒಪ್ಪುವ ಮಾವು, ಜಂಬುನೇರಿಳೆ, ಅಡಕೆ, ತೆಂಗು, ಕಪ್ಪಗಿನ ಹೊಂಗೆ ಮರಗಳು, ದಾಳಿಂಬೆ, ಲವಂಗ, ಸೊಂಪಾಗಿ ಬೆಳೆದಿರುವ ಬಾಳೆ, ಹಲಸು, ಜೇವು, ಈಚಲು, ಮಾತುಳುಂಗ ಮುಂತಾದ ಫಲವೃಕ್ಷಗಳು ಇಲ್ಲಿವೆ. ೧೮. ತುಂಗಭದ್ರೆಯನ್ನು ನೆನೆದವನು ಧನ್ಯ, ನೋಡಿದವನೂ ಪಾಪರಹಿತ ಮುಟ್ಟಿದವನು ಅಮರ, ಅದರಲ್ಲಿ ಮುಳುಗಿ ಮಿಂದವನಿಗೆ ಪಾಪ ಪರಿಹಾರ, ಗಣಪದವಿಗಳಿಗೇರುವನು ಜಲವನ್ನು ಸೇರಿಸಿದವನೆ ಮುಕ್ತ. ೧೯. ಮುನಿಗಳು ಸಂಧ್ಯಾಸಮಯದಲ್ಲಿ ನದಿಯದಡದಲ್ಲಿ ಕುಳಿತು ಮಂತ್ರಪಠನ ಮಾಡುತ್ತಿದ್ದಾರೆ. ಪರ್ಣಶಾಲೆಗಳ ಕಡೆಯಲ್ಲಿ ಶಂಭುಧ್ಯಾನ ಜಪನಿಯಮ ಹೋಮಗಳಲ್ಲಿ ತೊಡಗಿರುವ ವಿಪ್ರರು, ಹೇಮಕೂಟ ಪ್ರಾಂತದಲ್ಲಿ ಮನೋಹರವಾದದ್ದು ತುಂಗಭದ್ರೆಯ ದಡ ಎಂದನು. ವ || ಈ ತುಂಗಭದ್ರೆ ಶಿವನ ಕೀರ್ತಿಯಂತೆ ಭುವನಭರಿತ; ಶಿವನ ಕೀರ್ತಿ ಭುವನ–ಪ್ರಪಂಚವೆಲ್ಲ ತುಂಬಿದೆ. ಅದರಂತೆ ತುಂಗಭದ್ರೆ ತುಂಬಿದೆ;

ಚಂ॥ ಪಱಿದೆಲೆಯಿಟ್ಟು ಪಲ್ಗಿಱಿದು ಹರ್ಜಿನುತುರ್ಬುತೆ ಪುರ್ಬನೇಱಿಸು
ತ್ತುಱುಗಿಸಿ ನೋಡಿ ದಾಂಟಲನುಗೆಯ್ವುತೆ ತೂಗುತೆ ಝುಂಕಿಸುತ್ತೆ ಬಾ।
ಯ್ದೆಱೆದೊಲೆಯುತ್ತೆ ಕೆಯ್ಗಳನೆ ಕೂನಿಸಿ ಕುರ್ಗುತೆ ಏಡಿಸುತ್ತೆ ತಾಂ
ನೆಱೆ ನಗಿಸಿತ್ತು ತಾಪಸಕುಮಾರರನಲ್ಲಿಯದೊಂದು ಮರ್ಕಟಂ॥ ೨೦

ವ॥ ಅಂತು ಪರಿಹಾಸರಸಮಂ ಮುನಿಗಳ ಮೊಗಕ್ಕೆ ಮೊಗೆದು ಚೆಲ್ಲುವಂತೆಸೆವ ಕೋಡ ಗಂಗಳಂ ನೋಡುತ್ತುಂ ಬರೆವರೆ ಮುಂತನಂತಗುಲ್ಮಲತಾವೃಕ್ಷ ಗುಹಾಗಹ್ವರಂಗಳೊಳ್ ಶಿವಧ್ಯಾನ ಸಾನಾತಪೋಭರಭರಿತಮಾದ ಮನುಮುನಿಸ್ತೋಮದಿಂ ಹೇಮಕೂಟಾಚಳ ಪ್ರಾಂತಮಿರ್ದುದ ದೆಂತೆಂದೊಡೆ,

ಮ॥ ಸ್ರ॥ ಪರಮಾರ್ಥಂ ಪುಣ್ಯತೀರ್ಥಂ ಮೃಗಪತಿನಿಕರ ಸ್ವಾರ್ಥಮದ್ಯತ್ ಸದರ್ಥಂ
ಸುರಭೂಜಂ ಶೈವತೇಜಂ ವಿಮಳಮುನಿಸಮಾಜಂ ನಗವ್ರಾತರಾಜಂ।
ಸ್ಥಿರಶೀಲಂ ದಂತಿಜಾಲಂ ಸುಕೃತಪರಿವೃತಸ್ಥೂಲಮೊಪ್ಪಿತ್ತು ಶೈಲಂ
ವರಕೂಟಂ ಶೃಂಗಮಾಟಂ ಮೃಗಧರಧರಜೂಟಂ ಕರಂ ಹೇಮಕೂಟಂ॥ ೨೧

ಪಾರ್ವತಿಯ ವಿಳಾಸದಂತೆ ತೀರದೊಪ್ಪಮುಂ-ಎಂದರೆ ಪಾರ್ವತಿಯ ವಿಲಾಸ ತೀರದ-ಮುಗಿಯದ ಒಪ್ಪ (ಓರಣ)ವುಳ್ಳದ್ದು. ಅದರಂತೆ ಈ ನದಿಯೂ ತೀರ-ದಡದಿಂದ ಒಪ್ಪವಾಗಿದೆ. ಅಮರಾವತಿ (ಇಂದ್ರರಾಜಧಾನಿ) ಯಂತೆ ಅನಿಮಿಷ-ಬಿಡುಗಣ್ಣರಾದ ದೇವತೆಗಳಿಂದ ತುಂಬಿದೆ; ಅದರಂತೆ ಈ ನದಿಯೂ ಸಹ ಅನಿಮಿಷ-ಮೀನುಗಳಿಂದ ತುಂಬಿದ್ದು, ಕಱೆಗೊರಲ (ವಿಷಕಂಠ-ಶಿವ) ನಂತೆ ವಿಷಭಂಗ (ನಂಜು) ವುಳ್ಳದ್ದು ಎಂದರೆ ವಿಷ-ನೀರಿನ ತರಂಗಗಳುಳ್ಳದ್ದು. ಗಗನತಳ (ಆಕಾಶ)ದಂತೆ ವಕ್ರಗತಿ-ವಾಯುವಿನಿಂದ ತುಂಬಿದ್ದು ಆಕಾಶ. ಅದರಂತೆ ನದಿಯೂ ವಕ್ರಗತಿ-ಡೊಂಕು ಡೊಂಕಾಗಿ ಹರಿದಿದೆ. ಮೇಲಾಗಿ ಗಗನತಳದ್ವಿಜರಾಜ (ರಾಜಹಂಸ) ಶೋಭಿತ. ಅದರಂತೆ ಈ ನದಿಯೂ ದ್ವಿಜ (ವಿಪ್ರ) ರಾಜ ಮೊದಲಾದವರಿಂದ ಶೋಭಿಸುತ್ತಿದೆ. ಇಂಥ ನದಿಯ ಎರಡೂ ದಡಗಳಗಳಲ್ಲಿ ವನಾವಳಿ ಶೋಭಿಸುತ್ತಿದೆ. ೨೦. ಅಲ್ಲೊಂದು ಕಪಿ. ಅದು ಎಲೆ ಹರಿದು ಹಲ್ಲುಕಿರಿದು, ಹರ್ ಹರ್ ಎಂದು ಕೂಗಿ, ಹುಬ್ಬುಏರಿಸಿ, ಬಾಗಿನೋಡಿ, ಕೊಂಬೆಯಿಂದ ದಾಟುವಾಗ ತೂಗಿ, ಝುಂಕಿಸಿ, ಬಾಯ್ದೆರೆದು, ಒಲೆದು, ಬಗೆಬಗೆಯಾಗಿ ಏಡಿಸು (ಹಂಗಿಸು)ತ್ತಾ ತಾಪಸ ಕುಮಾರರನ್ನು ನಗಿಸುತ್ತಿತ್ತು. ವ॥ ಹೀಗೆ ಪರಿಹಾಸರಸವನ್ನು ಉಕ್ಕಿಸುವ ಕೋತಿಗಳನ್ನು ನೋಡುತ್ತಾ ಮುಂದೆಬಂದರೆ ಪೊದೆ-ಬಳ್ಳಿ-ಮರ-ಗಿಡ-ಗುಹೆಗಳು, ಆ ಗವಿಗಳಲ್ಲಿ ತಪೋಮಗ್ನರಾದ ಮುನಿಗಳು, ಇವರಿಂದ ಹೇಮಕೂಟ ಪ್ರಾಂತವು ಶೋಭಿಸುತ್ತಿತ್ತು. ೨೧. ಈ ಹೇಮಕೂಟವು ಒಂದು ಪವಿತ್ರ ಪುಣ್ಯ ತೀರ್ಥ; ಸಿಂಹ ಶಾರ್ದೂಲಾದಿ ಮೃಗಗಳಿಂದ ಕೂಡಿದೆ, ಬೇಡಿದುದನ್ನು ನೀಡುವ ಮರಗಳು, ಶಿವಪ್ರಭಾವಿತವಾಗಿದೆ. ಪಾಪ

ವ॥ ಆ ಶೈಲದಲ್ಲಿ,

ಕಂ॥ ತರುತರುಗಳೊಳಗನಾದಿಯ
ಹಿರಿಯರತಿವ್ರತಿಗಳಚಳರಾರೂಢರ್ ಭ।
ಕ್ತಿರಸಾವಿಷ್ಟರ್ ನಿಯತರ್
ಪರಮ ತಪೋನಿಧಿಗಳಧಿಕರುನ್ನತರಿರ್ಪರ್ ॥ ೨೨

ವೇದಕರೀಶನ ಭಕ್ತಿಯ
ಬೋಧಕರುರುಸಾತ್ವಿಕರ್ ಸದರ್ಥರ್ ಸಿದ್ಧರ್ ।
ಸಾಧಕರುತ್ತಮರಭವಾ
ರಾಧಕರತಿಸಾಧುಗಳ್ ವಿರಾಜಿಸುತಿರ್ಪರ್ ॥ ೨೩

ನಿರತರ್ ಭರಿತರ್ ಚರಿತರ್
ಪರತತ್ತ್ವರತರ್ ನುತರ್ ವಿಕರ್ತನ ತೇಜಃ ।
ಕಿರಣರ್ ಕರುಣರ್ ಶರಣರ್
ಕರುಣಾಳುಗಳರುಣಮಣಿನಿಭರ್ ನೆಲೆಸಿರ್ದರ್ ॥ ೨೪

ವ॥ ಅಂತವರ ನಿಸ್ಸೀಮ ತಪಃ ಪ್ರಭಾವಮಂ ನೋಡುತ್ತುಂ ಬರ್ಪಾಗಳ್

ಕಂ॥ ಕರೆಯವು ಕೋಗಿಲೆ ಮಧುಪಂ
ಮೊರೆಯವು ಗಿಳಿಗಳಪವನಿಲನಲ್ಲಾಡಂ ಪೆರ್ ।
ಮರನಂ ಗಿಡುವಂ ಲತೆಯುಂ
ಗುರುಶರ್ವಸಮಾಧಿಭೀತಿಯಿಂದಾ ನಗದೊಳ್ ॥ ೨೫

ರಹಿತರಾದ ಮುನಿಜನಗಳು, ಆನೆಗಳು, ಸುಕೃತಪರಿವೃತವಾದ ಶೈಲವಿದು. ೨೨. ಆ ವನದ ಪ್ರತಿಯೊಂದು ಮರದ ಕೆಳಗೆ ಜ್ಞಾನವಯೋವೃದ್ಧರಾದ ಮುನಿಗಳು ನಿಶ್ಚಲ ಆಸನಾರೂಢರಾಗಿ, ಭಕ್ತಿರಸಾವಿಷ್ಟರಾಗಿ, ನಿಯಮದಿಂದ ಪರಮ ತಪೋಮಗ್ನರಾಗಿದ್ದರು. ೨೩. ವೇದಾಧ್ಯಯನಶೀಲರು, ಭಕ್ತಿಬೋಧಕರು, ಸಾತ್ವಿಕರು, ಸದರ್ಥಸಿದ್ಧರು, ಸಾಧಕರು, ಉತ್ತಮರು, ಶಿವಾರಾಧಕರು ಆದ ಸಾಧುಗಳು ವಿರಾಜಿಸುತ್ತಿದ್ದರು. ೨೪. ತಪೋನಿರತರೂ, ಗುಣಭರಿತರೂ, ಸಚ್ಚರಿತರೂ, ಪರತತ್ವರತರೂ ಸ್ತುತಿಪಾತ್ರರೂ, ಸೂರ್ಯನಂತೆ ತೇಜಸ್ವಿಗಳೂ ಕರುಣಾಳುಗಳೂ, ಶರಣರೂ ಆದ ಮುನೀಶ್ವರರು ಅಲ್ಲಿ ನೆಲೆಸಿದ್ದರು. ವ॥ ಹಾಗೆ ಅವರ ಮೇರೆಯರಿಯದ ತಪೋಮಹಿಮೆಯನ್ನು ನೋಡುತ್ತ ಬರುತ್ತಿರಲು ೨೫. ಪರಮೇಶ್ವರನು ಸಮಾಧಿಮಗ್ನನಾಗಿರುವುದೂ ಆ ವನದಲ್ಲಿಯೇ. ಇದರಿಂದಾಗಿ ಅಲ್ಲಿ ಕೋಗಿಲೆ ಕೂಗುವುದಿಲ್ಲ, ದುಂಬಿ ಮೊರೆಯವು, ಗಿಳಿ ಗಳಹುವುದಿಲ್ಲ, ಗಾಳಿ ಚಲಿಸದು, ಇದರಿಂದ ಮರ-ಗಿಡ-ಲತೆಗಳೂ ಚಲಿಸವು; ಎಲ್ಲವೂ ನಿಶ್ಶಬ್ದ ! ಇದಕ್ಕೆಲ್ಲ ಶಿವನ

ವ॥ ಅಂತವಱನೀಕ್ಷಿಸುತ್ತುಂ ಬರೆವರೆ ಮುಂತೆ,

ಸ್ರ॥ ಭಾನುಪ್ರದ್ಯೋತಕಾಯಂ ನುತಸುಕೃತನಿಕಾಯಂ ವಿಮಾಯಂ ಮಹೇಶ
ಧ್ಯಾನಾರೂಢಂ ಸಗಾಢಂ ಸದಮಳಗುಣಚೂಡಂ ಶಿವಜ್ಞಾನಲೀಢಂ।
ಶ್ರೀನಂದೀಶಂ ಸುವೇಶಂ ಸುರುಚಿರ ಸುಖಸಾಕಾರಸಾರಂ ಸುಧೀರಂ
ಸಾನಂದಂ ಕಾದುನಿಂದಂ ಗಿರಿಶಿಖರ ಮುಖದ್ವಾರಮಂ ಭಕ್ತಿಯಿಂದಂ॥ ೨೬

ಕಂ॥ ಅಂತಿರ್ದು ನಂದಿನಾಥಂ
ಮುಂತಿದಿರ್ವಂದಗಜೆಗೆಱಗಿ ಪೆಱಸಾರ್ದೊಲವಿಂ।
ದಂ ತಾಯೆ ದೇವಿ ಶಾಂತೆಯ
ನಂತಗುಣಾಭರಣೆ ಕರುಣೆ ಶರಣೆನುತಿರ್ದಂ॥ ೨೭

ವ॥ ಆಗಳ್

ಕಂ॥ ತೊಳಗುವ ಶಾರದ ನೀರದ
ದೊಳಗಿಂ ಮಿಂಚಿಳಿವ ತೆಱದೆ ಗಿರಿಸುತೆ ಶಶಿಮಂ।
ಡಳದಧಿದೇವತೆ ಧರಣೀ
ತಳಕ್ಕೆ ಬರ್ಪಂತೆ ಪುಷ್ಪಕದಿನಿಳಿತಂದಳ್॥ ೨೮

ಒಡನಿಳಿದಂ ಗಿರಿರಾಜಂ
ತಡವಿಲ್ಲದೆ ಭೋಂಕನಿಳಿದು ಜಯೆವಿಜಯೆಗಳಾ।
ಗಡೆ ನವರತ್ನದ ಪಾವುಗೆ
ಯಿಡೆ ಮೆಟ್ಟಿದಳಗಜೆ ಮುಟ್ಟಿದಳ್ ಶಿವನೊಲವಂ॥ ೨೯

ಗಿರಿರಾಜಂ ಕೆಯ್ಗುಡೆ ನೇ
ವುರದ ಕಳಧ್ವಾನಮೊಗೆದು ನಗಮಂ ಜಗಮಂ।

ಸಮಾಧಿಭಂಗವಾಗಬಾರದೆಂಬ ಹೆದರಿಕೆಯೇ ಕಾರಣ. ೨೬. ಆ ವನದ ಬಾಗಿಲಲ್ಲಿ ಕಾದಿರುವವನು ನಂದಿಕೇಶ್ವರ. ಆತ ಸೂರ್ಯನಂತೆ ಮಹಾತೇಜಸ್ವಿ, ಪುಣ್ಯಪುಂಜ, ಮಾಯಾ ದೂರ, ಶಿವಧ್ಯಾನಾರೂಢ, ಶಿವಜ್ಞಾನಮಗ್ನ, ಸುರುಚಿರ ಸುಖಕಾಸಾರನೂ ಸುಧೀರನೂ ಆಗಿದ್ದಾನೆ. ೨೭. ನಂದಿಕೇಶ್ವರನು ಬಂದು ಅಗಜೆಗೆ ವಂದಿಸಿ ಪಕ್ಕಕ್ಕೆಸರಿದ. ತಾಯೆ, ದೇವಿ, ಅನಂತ ಗುಣಾಭರಣೆ, ಕರುಣೆ! ಶರಣು! ಎಂದ. ೨೮. ಗಿರಿಜಾದೇವಿ ವಿಮಾನ ದಿಂದ ಕೆಳಗಿಳಿಯುವಾಗ ಶರತ್ಕಾಲದ ಮೇಘದಿಂದ ಮಿಂಚು ಇಳಿಯುವಂತೆ ಇತ್ತು. ೨೯. ಕೂಡಲೆ ಗಿರಿರಾಜನೂ ವಿಮಾನದಿಂದ ಇಳಿದ. ಜಯೆವಿಜಯೆಗಳು ನವರತ್ನದ ಹಾವುಗೆಗಳನ್ನು ಮುಂದಿಡಲು ಅವಳು ಅವುಗಳನ್ನು ಮೆಟ್ಟಿದಳು. ಶಿವನ ಒಲವನ್ನು ಮುಟ್ಟಿ ದಳು. ೩೦. ಗಿರಿರಾಜನ ಕೈಹಿಡಿದುಕೊಂಡು ಗಿರಿಜೆ ಅವಳ ನೂಪುರಗಳ ಮಂಜುಳ

ಪರಿವೇಷ್ಟಿಸೆ ಬರುತಿರ್ದಳ್
ಪರಮೇಶ್ವರಿ ಚಂದ್ರಧರನನೀಕ್ಷಿಪ ಭರದಿಂ ॥ ೩೦

ವ॥ ಅಂತು ಬರೆವರೆ

ಮ॥ ಇದು ವಿದ್ಯುತ್ಪ್ರಭವಪ್ರಭಾಪ್ರಸರವೋ ಸಂಪೂರ್ಣಚಂದ್ರಾಂಶುಸಂ
ಪದವೋ ಶಾಶ್ವತ ಸೂರ್ಯಕೋಟರುಚಿರಪ್ರದ್ಯೋ ತಮೋವಿಾಜಿ ಪ್ರೊ ।
ಣ್ಮಿದ ಸರ್ವೇಶನಿಜಪ್ರಕಾಶ ನಿಧಿಯೋ ಪೇಳೆಂಬಿನಂ ತೋಱುತಿ
ರ್ದುದು ದಿಕ್ಪಂಕುಳನಿರ್ಮಳೀಕೃತ ವಿರೂಪಾಕ್ಷ ಪ್ರಭಾಮಂಡಲಂ ॥ ೩೧

ವ॥ ಆ ಪ್ರಭಾಮಂಡಲದೊಳಗೆ

ಮ॥ ಸ್ರ॥ ವಿಳಸತ್ ಪದ್ಮಾಸನಂ ಭಾಸುರಭಸಿತವಪುರ್ವಲ್ಕಲಂ ಧ್ಯಾನಮುದ್ರಾಂ
ಗುಳಿ ರುದ್ರಾಕ್ಷಾಕ್ಷಮಾಲಾರುಚಿ ನಳಿಗುಣವ್ರಾತಯಜ್ಞೋಪವೀತಂ ।
ಲಳಿತಾಸ್ಯಂ ಸ್ನಿಗ್ಧಗಂಡಂ ಮುಕುಳಿತನಯನಂ ಚಿತ್ತನಿಷ್ಕಂಪನಂ ಪಿಂ
ಗಳ ಪರ್ಣೋದ್ಯಜ್ಜಟಾಮಂಡಳಮೆಸೆಯೆ ತಪೋವೇಷದಿಂದೀಶನಿರ್ದಂ ॥ ೩೨

ಮ॥ ಸ್ರ॥ ಮನಮೆಂತು ಬುದ್ಧಿಯೊಳ್ ಬುದ್ಧಿಯ ನಿಲವದಹಂಕಾರದೊಳ್ ತಾನಹಂಕಾ
ರ ನಿಜಂ ಚಿತ್ತಾಂತದೊಳ್ ಚಿತ್ತದ ನೆಲೆ ವಿಲಸತ್ ಪ್ರಾಣದೊಳ್ ಪ್ರಾಣಮುಂ ಜೀ ।
ವನೊಳಾದಂಕೊಡೆ ಜೀವಂ ಪರಮನೆನಿಸಿ ನಿರ್ಮಾಯ ನಿಷ್ಕಾಮಿ ನಿಷ್ಕಂ
ಪ ನಿವಾತಜ್ಯೋತಿರೂಪಂ ನಿರುಪಮನೆನಿಸಿರ್ದಂ ವಿರೂಪಾಕ್ಷಲಿಂಗಂ ॥ ೩೩

ಧ್ವನಿಯು ಹೇಮಕೂಟವನ್ನೂ ಜಗತ್ತನ್ನೂ ವ್ಯಾಪಿಸಿತ್ತು. ಪರಶಿವನನ್ನು ನೋಡುವತವಕದಿಂದ ಬರುತ್ತಿರಲು ೩೧. ಮುಂದೆ ಪರಮೇಶ್ವರನ ಪ್ರಭಾಮಂಡಲ ಕಂಗೊಳಿಸುತ್ತಿತ್ತು. ಅದು ವಿದ್ಯುತ್ತಿನ ಬೆಳಕಿನ ಪ್ರಸಾರವೋ, ಪೂರ್ಣಚಂದ್ರನ ಕಿರಣಸಂಪತ್ತೋ, ಕೋಟಿ ಸೂರ್ಯರ ಪ್ರಭೆಯೋ, ಸರ್ವೇಶ್ವರನ ನಿಜಪ್ರಕಾಶನಿಧಿಯೋ, ಎಂಬಂತೆ ಆ ಪ್ರಭಾಪುಂಜ ದಿಗಂತಗಳವರೆಗೆ ಹಬ್ಬಿತ್ತು. ೩೨. ಪರಶಿವನ ತಪೋಮೂರ್ತಿವರ್ಣನೆ–ಪದ್ಮಾಸನ, ಭಸ್ಮಭೂಷಿತ ಶರೀರ, ನಾರುಡೆ, ಧ್ಯಾನಮುದ್ರೆ, ರುದ್ರಾಕ್ಷ–ಅಕ್ಷಮಾಲೆಗಳು, ಸದ್ಗುಣಗಳೇ ಯಜ್ಞೋಪವೀತ, ಲಲಿತಮುಖಕಮಲ, ನುಣುಪಾದ ಕಪೋಲಗಳು, ಮುಚ್ಚಿದ ಕಣ್ಣು, ನಿಶ್ಚಲಚಿತ್ತ, ಕೆಂಜೆಡೆಗಳು ಇವುಗಳಿಂದ ಪರಶಿವನು ತಪೋಮಗ್ನನಾಗಿದ್ದನು. ೩೩. ಪರಮಶಿವವಿರೂಪಾಕ್ಷನ ತಪೋವರ್ಣನೆ–ಮನಸ್ಸು ಬುದ್ಧಿಯಲ್ಲಿ, ಬುದ್ಧಿಯನಿಲವು ಅಹಂಕಾರದಲ್ಲಿ, ಅಹಂಕಾರವು ಚಿತ್ತದಲ್ಲಿ, ಚಿತ್ತವು ಪ್ರಾಣದಲ್ಲಿ, ಪ್ರಾಣವುಜೀವದಲ್ಲಿ, ಜೀವವು ಪರಮನಲ್ಲಿ, ಪರಮನೇ ಆಗಿ ನಿರ್ಮಾಯ–ನಿಷ್ಕಾಮ, ನಿಷ್ಕಂಪ, ನಿವಾತ ಜ್ಯೋತಿ

ಕಂ॥ ಭಿನ್ನಾಭಿನ್ನಂ ಜ್ಞಾನಮ
ಯಂ ನಿಜತೇಜೋವಿಲೀನ ಮಾನಸನಚಲಂ ।
ತನ್ನಂ ತಾನೇ ಜಾನಿಪ
ಬಿನ್ನಣದೊಳಗಿರ್ದನಭವನದ್ವಯರೂಪಂ ॥ ೩೪

ಮ॥ ಸ್ರ॥ ಇದುಸತ್ಯಾಕಾರವೋ ಶಾಂತಿಯನೆಲೆವನೆಯೋ ಧರ್ಮವಿಸ್ತಾರವೋ ಪು
ಣ್ಯದ ಜನ್ಮಸ್ಥಾನವೋಜ್ಞಾನದ ನಿಜರುಚಿಯೋ ನಿತ್ಯನಿರ್ಮಾಯವೋ ತ ।
ತ್ತ್ವದ ತೇಜಃಪುಂಜವೋ ಮುಕ್ತಿಯ ಸುಖಮುಖವೋ ಯೋಗಸಂಧಾನವೋ ಎನೋ
ಡಿದುತಾನೆಂಬಂತೆ ಮುಂತಿರ್ದುದು ಶಿವನ ನಿಜಧ್ಯಾನಮೂರ್ತಿಪ್ರಭಾವಂ ॥ ೩೫

ವ॥ ಅಂತುಮಲ್ಲದೆ,

ಕಂ॥ ಮಾತಿನವೇಧೆಯ ಬೋಧೆಯ
ಭೂತಾದಿಯ ಪಂಚವಿಂಶತಿಗಳಂ ಮೀಱಿ ।
ಜ್ಞಾತೃಜ್ಞಾನಜ್ಞೇಯ
ವ್ರಾತಮನಳಿದುಳಿದು ತಾನೆ ತಾನಾಗಿರ್ದಂ ॥ ೩೬

ಮುನಿತತಿಗಳ ಮನವೆಯ್ದದ
ಮನುಗಳ ಬಗೆಪುಗದ ಶಾಸ್ತ್ರವರಿಯದ ವೇದಂ ।
ಜಿನುಗುವ ಗಜಿಬಜಿನಿಳ್ಕದ
ಘನತೇಜೋರಾಶಿ ನಿಜ ನಿವೇಶದೊಳಿರ್ದಂ ॥ ೩೭

ಪೊಱಗಂ ಬಳಸದ ಮಾಯೆಗೆ
ತೆಱಪಂಗುಡದಚ್ಚಬಚ್ಚಬಱಿಯಱಿವಿನ ಸೈ ।

ಯಂತೆ ನಿರುಪಮವಾಗಿತ್ತು. ೩೪. ಭಿನ್ನಾಭಿನ್ನನೂ, ಜ್ಞಾನಮಯನೂ, ತನ್ನ ತೇಜಸ್ಸಿನಲ್ಲಿ ಅಡಗಿದ ಮನಸ್ಸುಳ್ಳವನೂ ಅಚಲನೂ ಆಗಿ ಅದ್ವಯನಾದ ಅಭವನು ತನ್ನನ್ನು ತಾನೇ ನೆನೆವ ಬಿನ್ನಾಣದಲ್ಲಿದ್ದನು ('ಆತ್ಮಾನಮಾತ್ಮನ್ಯವಲೋಕಯಂತಂ' ಎಂಬ ಮಹಾಕವಿಯ ಉಕ್ತಿಯನ್ನು ಇಲ್ಲಿ ನೆನೆಯಬಹುದು) ೩೫. ಇದು ಸತ್ಯಸ್ವರೂಪವೊ, ಶಾಂತಿಯ ನೆಲೆವೀಡೊ, ಧರ್ಮದವಿಸ್ತಾರವೊ, ಪುಣ್ಯದ ತೌರುಮನೆಯೊ, ಜ್ಞಾನದಪ್ರಕಾಶವೊ, ನಿತ್ಯನಿರ್ಮಾಯವೋ ತತ್ತ್ವದ ತೇಜಃಪುಂಜವೋ, ಮುಕ್ತಿಯಸುಖವೋ, ಯೋಗಸಂಧಾನವೋ ಎಂಬಂತೆ ಶಿವನ ನಿಜಧ್ಯಾನಮೂರ್ತಿ ಪ್ರಭಾವ ಬೆಳಗಿತ್ತು. ೩೬. ವಾಕ್ಕು ಮನಸ್ಸು ಬುದ್ಧಿ ಮುಂತಾದ ಪಂಚಭೂತಾದಿ ತತ್ತ್ವಗಳನ್ನು ದಾಟಿ, ಜ್ಞಾತೃ-ಜ್ಞಾನ-ಜ್ಞೇಯ ಎಂಬ ತ್ರಿಪುಟವನ್ನು ಮೀರಿ ಪರಶಿವನು ತಾನೇ ತಾನಾಗಿದ್ದನು. ೩೭. ಮನು ಮುನಿಗಳಿಗೆ ಗೋಚರವಾಗದ, ಶಾಸ್ತ್ರವೂ ತಿಳಿಯದ, ವೇದವೂ ಪುಗದ ನಿಷ್ಕಳ ಘನತೇಜೋರಾಶಿಯಾದ ಅಭವನು ನಿಜ ನಿವೇಶಸ್ಥಿತಿಯಲ್ಲಿದ್ದನು. ೩೮. ಹೊರಗಿನ

ಪೆಱಗಿನ ಮಱಹಿನ ಕುಱುಹಿನ
ಕಱಿಗೊರಲಂ ನಿಜಸಮಾಧಿಯೊಳ್ ಸಂದಿರ್ದಂ ‖ ೩೮

ಇರೆ ಕಾಣುತೆ ಗಿರಿರಾಜಂ
ಪರಮ ಸುಖಿಂಬಡೆದು ಪಿಡಿದು ಮೆಲ್ಲಡಿಗಳನಾ ।
ದರದಿಂ ಹರ್ಷಂ ಮೂಡು
ತ್ತಿರೆ ಪುಳಕದ ಮೆಯ್ಯೊಳೊಲ್ದು ಮೆಯ್ಯಿಕ್ಕಿರ್ದಂ ‖ ೩೯

ವ॥ ಅಂತು ಮೆಯ್ಯಿಕ್ಕಿನಿಂದು ಕೆಯ್ಯಂ ಮುಗಿದು ಪಾರ್ವತಿಯಂ ಕರೆದು,

ಚಂ॥ ಅನುಪಮನಿರ್ದನಿರ್ದನೆ ಶರಣ್ಬುಗು ಶಾಶ್ವತಮೂರ್ತಿಯಿರ್ದ ನಿ
ರ್ದನೆ ನಡೆನೋಡು ಚಂದ್ರಧರನಿರ್ದನೆ ನಂಬು ನಿಜೇಶನಿರ್ದನಿ ।
ರ್ದನೆ ಪರಿಭಾವಿಸಪ್ರತಿಮನಿರ್ದನೆ ಕೀರ್ತಿಸು ಶಂಭುವಿರ್ದನಿ
ರ್ದನೆ ಪದೆದರ್ಚಿಸರ್ಚಿಸೊಲವಿಂದಮೆ ಪಾರ್ವತಿ ಹಂಪೆಯಾಳ್ದನಂ ‖ ೪೦

ಕಂ॥ ನಿಧಿಯಿದೆ ಭಕ್ತರ ಬಯ್ಕೆಯ
ನಿಧಾನವಿದೆಯಚ್ಚಶರಣರನುವಿದೆ ಕರುಣಾಂ ।
ಬುಧಿಯಿದೆ ಸುಧೆಯಿದೆ ಕೇಳ್ ನಿ
ನ್ನಧಿಪಂ ಶಶಿಮೌಳಿಯೆಂಬ ಕಲ್ಪಮಹೀಜಂ ‖ ೪೧

ಸದಮಳಮಿದೆ ಪರತತ್ತ್ವದ
ನಿಧಾನಮಿದೆಯಾದ್ಯರಱಿದು ಕುಱುಪಿಟ್ಟಾನಂ ।
ದದಮೊದಲಿದೆ ಪರಮಾರ್ಥದ
ತುದಿಯಿದೆ ಗಿರಿಜಾತೆ ನೋಡು ನೆನೆ ಪೊಗಳೆಂದಂ ‖ ೪೨

ಪರಿವೆಯಿಲ್ಲದ, ಮಾಯೆಗೆ ಎಡೆಗೊಡದ, ಸ್ವಚ್ಛಜ್ಞಾನದ ತನ್ಮಯತೆಯ ನಿಜಸಮಾಧಿಯಲ್ಲಿ ಪರಶಿವನಿದ್ದನು. ೩೯. ಹೀಗಿರುವ ಶಿವನ ಸಮಾಧಿಸ್ಥಿತಿಯನ್ನು ಕಂಡು ಗಿರಿರಾಜನು ಮೆಲ್ಲಡಿಯಿಟ್ಟು ಮುಂದೆ ಬಂದು ಆನಂದಾಶ್ರುಗಳು ಕುಡಿವರಿಯೆ, ಮೈನವಿರೇಳುತ್ತಿರೆ ಸಾಷ್ಟಾಂಗವೆರಗಿದನು. ೪೦. ಅನುಪಮನಿಗೆ ಶರಣಾಗು, ಶಾಶ್ವತ ಮೂರ್ತಿಯನ್ನು ಚೆನ್ನಾಗಿ ನೋಡು, ಚಂದ್ರಧರನನ್ನು ನಂಬು, ನಿಜೇಶನನ್ನು ಪರಿಭಾವಿಸು, ಅಪ್ರತಿಮನನ್ನು ಸ್ತುತಿಸು, ಶಂಭುವನ್ನು ಭಕ್ತಿಯಿಂದ ಅರ್ಚಿಸು, ಎಂದು ಪಾರ್ವತಿಗೆ ಬೆಸಸಿದನು. ೪೧. ಇದು ಭಕ್ತರ ಬಯಕೆಯ ನಿಧಿ ; ಅಚ್ಚಶರಣರ ನಿಧಾನವೇ ಇದು. ಇದು ಕರುಣೆಯ ಕಡಲು, ಇದೇ ಅಮೃತ, ನಿನ್ನ ಅಧಿಪನೆಂಬ ಕಲ್ಪವೃಕ್ಷವಿದೇ ! ೪೨. ಇದು ಸದಮಳ ಪರತತ್ತ್ವನಿಧಾನ; ಆದ್ಯರು ಅರಿದು ಗುರ್ತಿಸಿದ್ದು. ಇದು ಆನಂದದ ಮೊದಲು,ಪರಮಾರ್ಥದ

ವ॥ ಎಂದು ಗಿರಿರಾಜಂ ಹರನ ಪರತತ್ತ್ವಮಯ ಸೌಂದರ್ಯರೂಪಮಂ ಗಿರಿಜೆಗೆ ತೋಱುತ್ತುಂ ಪೊಡಮಡು ಪೊಡಮಡೆನೆ ಪಾರ್ವತೀದೇವಿಗೆ ಕೌತುಕರಸದೊಳಾನಂದಂ ಪುಟ್ಟೆ ಭಯರಸದೊಳ್ ಭಕ್ತಿಯುಣ್ಮೆ ಸ್ನೇಹರಸದೊಳ್ ತಾತ್ಪರ್ಯಂ ಪೊಣ್ಮೆ ಶೃಂಗಾರರಸದೊಳ್ ಲಜ್ಜೆವೆರಸಿ ಕಲ್ಪತರುವಿನ ಬೀಳಲ್ ಮಹಾನಿಧಾನಕ್ಕೆಱಗುವಂತೆ ಮಂದಾನಿಳನ ಸೋಂಕಿಂದಂ ಪುಷ್ಪಮಾಲೆ ಬಳ್ಕುವಂತೆ ಕುಸುಮಚಾಪಂ ಕಾಲ್ಗೆಱಗುವಂತೆ ಪಂಚಬಾಣಂ ಹೊಡೆಗೆಡೆವಂತೆ ಮುಂದೆ ನಿನ್ನ ವಾಮ ಭಾಗಮಂ ಸೂಱೆಗೊಳ್ವುದರ್ಕಿದೆ ಕುಱುಪೆಂಬಂತೆ ಬಿಂಕದಿಂ ಕೊಂಕಿನಿಂದು ವಿಲಾಸದಿಂದೆಡದುಂಗುಟಮಂ ಲಲಾಟದಿಂ ಮುಟ್ಟಿ ಪೊಡೆಮಟ್ಟುನಿಂದು,

ಶಾ॥ ಆನಿರ್ದಂತಿರದೇಕೆ ಬೇಡ ತಪವೆಂದೆಂಬಂತಹಂಕಾರದಿಂ
ನೀನೇ ಸದ್ಗತಿ ದೇವ ದೇವ ದಯೆಗೆಯ್ಯೆಂಬಂತೆ ಕಾರ್ಪಣ್ಯದಿಂ ।
ಸಾನಂದಾತ್ಮಕನೆನ್ನನೇಕಱಿವನೆಂದೆಂಬಂತೆ ನಿರ್ವೇದದಿಂ
ನಾನಾ ಭೋಗದೊಳೆಂದು ಕೂಡಿದಪೆನೆಂಬಂತಾಸೆಯಿಂ ನೋಡಿದಳ್ ॥ ೪೩

ಮ॥ ಶಿವನೀತಂ ನಿಜವಲ್ಲಭಂ ಮಮಗುರು ಪ್ರಖ್ಯಾತನತ್ಯೂರ್ಜಿತಂ
ಭವನೆನ್ನಾಳ್ದನೆನಿಪ್ಪುದಂ ತಿಳಿದೆನಾಂ ನೀಂಪೋಗು ನಿತ್ಯಾರ್ಚನೋ ।
ತ್ಸವದಿಂ ಸಂತಸದಿಂ ಸದಾತುರತೆಯಿಂ ಸಾನಂದದಿಂದಿರ್ಪೆನೆಂ
ದು ವಿಳಾಸಾಬ್ಧಿ ಭವಾನಿ ನೋಡಿ ನುಡಿದಳ್ ಭೂಭೃತ್ಕುಲಾಧೀಶನೊಳ್ ॥ ೪೪

ತುದಿ ಇದೇಯೇ ! ಹೇ ಗಿರಿಜೆ, ಇದನ್ನು ನೆನೆ, ಸ್ತುತಿಸು ಎಂದು ಗಿರಿರಾಜನು ಮಗಳಿಗೆ ಹೇಳಿದನು. ವ || ಗಿರಿರಾಜನು ಶಿವನ ನಿಜಸೌಂದರ್ಯಸ್ವರೂಪವನ್ನು ಗಿರಿಜೆಗೆ ತೋರಿ 'ಪೊಡೆಮಡು, ಪೊಡೆಮಡು' ಎನ್ನಲು ಪಾರ್ವತಿಗೆ ರಸಮಯವಾದ ಕೌತುಕದಲ್ಲಿ ಆನಂದ, ಭಯದಲ್ಲಿ ಭಕ್ತಿ, ಸ್ನೇಹದಲ್ಲಿ ತಾತ್ಪರ್ಯ, ಶೃಂಗಾರದಲ್ಲಿ ಲಜ್ಜೆ ಬೆರೆದು, ಕಲ್ಪವೃಕ್ಷದ ಬಿಳಲು ಮಹಾನಿಧಾನಕ್ಕೆ ಎರಗುವಂತೆ, ಮಂದಮಾರುತದ ಸ್ಪರ್ಶಕ್ಕೆ ಕುಸುಮಮಾಲೆ ಬಳುಕುವಂತೆ, ಕುಸುಮಬಾಣನೇ ಕಾಲಿಗೆ ಬೀಳುವಂತೆ, ಪಂಚಬಾಣ ಮದನನೇ ಹೊಡೆಗೆಡೆದಂತೆ ಮುಂದೆ ನಿನ್ನ ಎಡಭಾಗವನ್ನೇ ಸೂರೆಗೊಳ್ಳುವುದಕ್ಕೆ ಇದೇ ಕುರುಹು ಎಂಬಂತೆ ಬಿಂಕದಿಂದ ಕೊಂಕಿನಿಂದು ವಯ್ಯಾರದಿಂದ ಎಡ ಅಂಗುಷ್ಟವನ್ನು ಹಣೆಮುಟ್ಟುವಂತೆ ಪೊಡಮಟ್ಟಳು. ೪೩. ಗಿರಿಜೆ ಪರಶಿವನನ್ನು ಆಸೆಯಿಂದ ಭಾವಪೂರ್ಣವಾಗಿ ನೋಡಿದಳು. ಆ ನೋಟವು ನಾನಿರ್ದಂತೆ ಇರದೆ ಹೀಗೇಕೆ ಬಂದೆ ? ಎಂಬಂತೆ ತಪಸ್ಸು ಬೇಡ ಎಂಬಂತೆ ನೀನೇ ಸದ್ಗತಿ, ದೇವ ದೇವ, ದಯೆಮಾಡು ಎಂಬಂತೆ, ಸಾನಂದಾತ್ಮಕನು ಕಾರ್ಪಣ್ಯದಿಂದ ನನ್ನನ್ನು ಏಕೆ ಅರಿವನು ಎಂಬಂತೆ, ನಿರ್ವೇದ ಭಾವದಿಂದ ನಾನಾ ಭೋಗದಲ್ಲಿ ಎಂದು ಒಂದುಗೂಡುವೆನೋ ಎಂಬಂತೆ ಇತ್ತು. ೪೪. ನಿಜವಲ್ಲಭನಾದ ಶಿವನು ಈತನೇ, ನನ್ನ ಗುರು, ಪ್ರಖ್ಯಾತ, ಅತ್ಯೂರ್ಜಿತ, ಎನ್ನಾಳ್ದ ಭವನು ಈತನೇ ಎಂಬುದನ್ನು ನಾನು ತಿಳಿದೆ. ಇನ್ನು ನೀನು ಹಿಂದಿರುಗು. ಪ್ರತಿನಿತ್ಯವೂ ಉತ್ಸಾಹದಿಂದ ಸಂತೋಷ

ಕಂ॥ ನುಡಿಯೆ ಗಿರಿರಾಜನೊಲವಿಂ
ಮೃಡಾಣಿಯಂ ನೋಡಿ ಮಗಳೆ ಮಾತೆ ಕರಂ ನ ।
ಟ್ಟಡವಿ ಗುಹೆ ಗಹ್ವರಂ ಮಡು
ಗಿಡುವವಱೊಳ್ ಪದುಳಮರ್ಚಿಸೆನುತುಂ ನುಡಿದಂ ॥ ೪೫

ಪತ್ತಡಿಯಿಟ್ಟತಿಮೋಹಂ
ಚಿತ್ತಮನಳ್ಳಿಱಿಯೆ ತಿರುಗಿ ಬಂದು ಗಿರಿಜೆ ಲೋ ।
ಕೋತ್ತ್ರಮೆ ಪೋದಪೆನೆನುತುಂ
ಮತ್ತಂ ಮತ್ತಪ್ಪಿ ಪರಸಿ ಗಿರಿಪತಿ ಪೋದಂ ॥ ೪೬

ವ॥ ಅಂತು ಪೋಗೆ ಚಿಂತಿಸಿ ನೋಡಿ ಮುಂತಿರ್ದ ವಿಪುಳ ವಿಭ್ರಮನಂ ತಪೋಮಯನಂ ವಿಳಾಸನಿಧಿಯಂ ವೈರಾಗ್ಯಯುಕ್ತನಂ ಸೌರಭ್ಯಸದನನಂ ಭಸಿತಕಾಯನಂ ಸೌಂದರ್ಯರೂಪನಂ ಜ್ಞಾನಪ್ರದೀಪನಂ ನಿಜಸುಖನಿವಾಸನಂ ಸ್ವಯಂ ಪ್ರಕಾಶನಂ ಕಂಡು ಶೃಂಗಾರರಸಕ್ಕೆ ಮನದಂದು ವೈರಾಗ್ಯರಸಕ್ಕೆ ಮೆಯ್ದೆಗೆದು ಸಹಚರಯರಪ್ಪ ಜಯೆವಿಜಯೆಗಳ್ಗೆ ನಗತನೂಜೆ ನಿರ್ವೇದದಿಂದಿಂತೆಂದಳ್,

ಚಂ॥ ಇದೆ ವಿಭು ಸಾರ್ದನೊಲ್ದುಪರವಂ ಪರವಂ ಪರವಂಚನೋಕ್ತಿ ಕೊ
ಳ್ಳದು ತಪಮತ್ಯಸಾಧ್ಯ ವಿಷಯಂ ವಿಷಯಂ ವಿಷಯಂತ್ರದಂತೆ ಸು ।
ತ್ತಿದುದುಪತಾಪವೆಯ್ದೆ ತನುವಂ ತನುವಂ ತನುವಂ ಕಪರ್ದಿ ನೋ
ಡಿದೊಡೆನಗಾದುದೆಯ್ದೆ ಕುಮುದಂ ಕುಮುದಂ ಕುಮುದಂ ಮೃಗೇಕ್ಷಣೇ ॥ ೪೭

ದಿಂದ, ಸದಾತುರತೆಯಿಂದ, ಆನಂದದಿಂದ ಇಲ್ಲಿರುತ್ತೇನೆ ಎಂದು ಗಿರಿಜೆ ತಂದೆಗೆ ಹೇಳಿದಳು. ೪೫. ಹೀಗೆ ಪಾರ್ವತಿ ನುಡಿಯಲು ಪರ್ವತರಾಜ ವಾತ್ಸಲ್ಯದಿಂದ ಮಗಳನ್ನು ನೋಡಿ, ಮಗಳೆ! ತಾಯಿ, ಇದು ನಟ್ಟಡವಿ, ಗುಹೆ ಗಹ್ವರಗಳಿವೆ, ಮಡು–ಗಿಡಗಳಿವೆ ನೋಡಿಕೊಂಡು ಎಚ್ಚರದಿಂದಿದ್ದು ಶಿವನನ್ನು ಭಕ್ತಿಯಿಂದ ಪೂಜಿಸು ಎಂದು ನುಡಿದನು. ೪೬. ಹತ್ತು ಹೆಜ್ಜೆ ಮುಂದೆ ಹೋದ ಗಿರಿರಾಜನಿಗೆ ಮಗಳ ವ್ಯಾಮೋಹ ಅಳ್ಳಿರಿಯಿತು. ಮತ್ತೆ ಹಿಂದಕ್ಕೆ ಬಂದು ಗಿರಿಜೆ, ಲೋಕೋತ್ತ್ರಮೆ ಎಂದು ಮತ್ತೆಮತ್ತೆ ಮುದ್ದಿಸಿ ಹರಸಿ ಹಿಂದಿರುಗಿದನು. ವ॥ ತಂದೆ ಹೋದ ಮೇಲೆ ಗಿರಿಜೆಗೆ ಯೋಚನೆ, ಮುಂದೆ ತಪೋಮಯನೂ, ವಿಳಾಸನಿಧಿಯೂ, ವೈರಾಗ್ಯಯುಕ್ತನೂ, ಸೌರಭ್ಯಸದನನೂ, ಭಸಿತಕಾಯನೂ ಆದ ಪರಶಿವನನ್ನು ಕಂಡು ಶೃಂಗಾರ ರಸಕ್ಕೆ ಮನದಂದು ವೈರಾಗ್ಯರಸಕ್ಕೆ ನ್ಯೆಸೋತು ಜತೆಗಿದ್ದ ಸಖಿಯರಿಗೆ ಹೀಗೆ ಹೇಳಿದಳು. ೪೭. ಎಲೈ ಮೃಗಾಕ್ಷಿಯೆ, ಪರನನ್ನು ಒಲಿದು ವಿಭು ಸಾರ್ದದು ಇದೇ! ಪರವಂಚನೋಕ್ತಿಯು ಪರನನ್ನು ಸ್ವೀಕರಿಸಲಾರದು; ತಪವು ಅತಿ ಅಸಾಧ್ಯವಾದ ವಿಷಯ; ವಿಷಯವು ವಿಷಯಂತ್ರದಂತೆ ಸುತ್ತಿದುದು; ಉಪತಾಪವೆ

ಕಂ॥ ತಪಮಿಂತಿದು ಮದ್ವಿರಹಾ
ತಪಮತ್ಯಧಿಕಂ ತುಡುಂಕಬಾರದಪಾರಂ ।
ತಪನನತೇಜಕ್ಕಂ ವಿ
ತ್ತಪನಱಿವಿಂಗಂ ವಿಶೇಷ ಚೋದ್ಯಮಭೇದ್ಯಂ ॥ ೪೮

ನಿಗಮಂಗಳ್ ವಿಷ್ಣು ವಿರಿಂ
ಚಿಗಳಱಿಯದ ಶಿವನನಱಿವೊಡೆನ್ನಳವೇ ತಾಂ ।
ಬಗೆವೊಡೆ ಸಾತ್ತ್ವಿಕ ಶಿವಭ
ಕ್ತಿಗಲ್ಲದಭವಂ ಸಮಂತು ಸಿಲ್ಕಂ ನಿಲ್ಕಂ ॥ ೪೯

ಅದುಕಾರಣದಿಂ ಭಕ್ತಿ
ಪ್ರದನಂ ವಿರೂಪಾಕ್ಷನಂಘ್ರಿಗಳನರ್ಚಿಸುವೆಂ ।
ಸದಮಳ ಶಿವಸುಖಿಮುಖಿಸಂ
ಪದದೊಳ್ ಬಳಿಕಿರ್ಪೆನಪ್ಪಿ ಶರ್ವನ ತನುವಂ ॥ ೫೦

ಎಂದಬಲೆಯರೊಳ್ ನುಡಿಯು
ತ್ತುಂ ದಟ್ಟಡಿಯಿಟ್ಟು ಭಕ್ತಿ ತನ್ನಯ ಮನಮಂ ।
ಬಂದಡರೆ ಭರಂಮಿಗೆ ಮುದ
ದಿಂದಂ ಪುಷ್ಪಾಪಚಯಕೆ ಗಿರಿಸುತೆ ಬಂದಳ್ ॥ ೫೧

ನೇವುರದ ನುಣ್ದನಿಗೆ ಮಿಗೆ
ಯಾವರಿಸುವ ಹಂಸೆವಿಂಡನೆಡಪುತ್ತುಂ ಸದ್ ।

ಯ್ದಿದತನು (ಕೃಶ)ವಾದ ತನುವನ್ನು ಕಪರ್ದಿ ನೋಡಿದಲ್ಲಿ ವಿಷಾದಗೊಳ್ಳುವನು, ಕುಮುದವುಂಟಾಗಲು, ಎನಗೆ ಕುಮುದಂತೆ ಕುಮುದವುಂಟಾಯಿತು. ೪೮. ಇದು ತಪಸ್ಸು, ನನ್ನ ವಿರಹಾತಪವೊ ಅತ್ಯಧಿಕವಾಗಿದೆ. ಅದು ಅಪಾರ. ಆದ್ದರಿಂದಲೇ ಅದನ್ನು ತುಡುಕುವಂತಿಲ್ಲ ; ಇದು ತಪನನ (ಸೂರ್ಯ) ತೇಜಸ್ಸಿಗೂ, ವಿತ್ತಪ (ಕುಬೇರ)ನ ಅರಿವಿಗೂ ಮೀರಿದ್ದು. ಆದ್ದರಿಂದ ಇದು ಸೋಜಿಗ ಅಂತೆಯೇ ಅಭೇದ್ಯವೂ ಆಗಿದೆ. ೪೯. ವೇದ–ವಿಷ್ಣು–ವಿರಿಂಚಿಗಳು ಅರಿಯದ ಶಿವನನ್ನು ಅರಿಯುವುದು ನನಗೆ ಸಾಧ್ಯವೆ ? ಸಾತ್ವಿಕ ಶಿವಭಕ್ತಿಗಲ್ಲದೆ ಆತ ಎಂದಿಗೂ ದೊರೆಯಲಾರ ! ೫೦. ಆದ್ದರಿಂದ ಭಕ್ತಿಪ್ರದನಾದ ವಿರೂಪಾಕ್ಷನ ಪಾದಕಮಲಗಳನ್ನು ಅರ್ಚಿಸುತ್ತೇನೆ. ಆ ಶರ್ವನ ತನುವನ್ನು ಅಪ್ಪಿಸುಖಿಸುತ್ತೇನೆ. ೫೧. ಎಂದು ಸಖಿಯರೊಡನೆ ನುಡಿದು, ಭಕ್ತಿಯು ತನ್ನ ಮನಸ್ಸನ್ನು ವ್ಯಾಪಿಸುತ್ತಿರಲು ಗಿರಿಸುತೆ ಮುದದಿಂದ ಪುಷ್ಪಾಪಚಯಕ್ಕೆ ಬಂದಳು. ೫೨. ಅವಳ ನೂಪುರದ ನುಣ್ದನಿಗೆ ಹಂಸೆಗಳು ಮುತ್ತಿಬಂದವು. ಅವುಗಳನ್ನು ಎಡವುತ್ತಾ ಭಾವಿಕಿ

ಭಾವಕಿ ಭಾಮಿನಿ ಭರ್ಗನ
ಜೀವಂ ಶೃಂಗಾರವಾರಿನಿಧಿ ನಡೆತಂದಳ್ ॥ ೩೨

ವ॥ ಇಂತು ನಡೆತಂದು ಪೂದೋಂಟಮಂ ಪೊಕ್ಕು,

ಕಂ॥ ಅರರೆ ಸುಕುಮಾರೆ ಸೌರ
ಭ್ಯರತೆ ವಸಂತಾನುಕೂಲೆ ಮೆಲ್ಲಡಿಯಿಡುತುಂ ।
ಹರನ ಜಡೆಮುಡಿಗೆ ನಡೆತಂ
ದಿರವಂತಿಗೆಯರಲನಗಜೆ ಬಗೆವಿಗೆ ತೆಗೆದಳ್ ॥ ೩೩

ತೊಳಗುವ ಚಂಪಕನಾಸಿಕೆ
ಬಳಸಿದ ಚಂಪಕ ಸುಗಂಧಿ ನಗನಂದನೆ ಬಂ ।
ದಳಿಮನವಲ್ಲದ ಭಕ್ತ್ಯು
ಜ್ವಳೆ ತಿಱಿದಳ್ ಕಂಪು ಸುರಿವ ಸಂಪಗೆಯಲರಂ ॥ ೩೪

ಎಸೆವ ರಜೋಗುಣ ಲಸಿತ
ಪ್ರಸನ್ನಮುಖರಾಗಯುಕ್ತೆ ಶಿವಪದಪೂಜಾ ।
ವ್ಯಸನೆ ಶಶಿವದನೆ ತಿಱಿದಳ್
ಪೊಸ ಹರಿಸಮನಾಂತು ಶಾಂತೆ ಸೇವಂತಿಗೆಯಂ ॥ ೩೫

ಪರಮೋತ್ಸವದಿಂ ನಡೆತಂ
ದುರುತರ ಮೃಗನಾಭಿಗಂಧಿ ನಿಂದು ಬಳಿಯ ಕ ।
ತ್ತುರಿ ತಾನೆನಿಸುವ ಪಡ್ಡಳಿ
ಯರಲಂ ತಿಱಿದಳ್ ಭವಾನಿ ಶಿವಪೂಜಾರ್ಥಂ ॥ ೩೬

ಎಳಸಿ ನಲಿನಲಿದು ನವಪಾ
ಟಳಗಂಧಿಕೆ ಪಾಟಳಾಂಗಿ ಮಿಗೆ ಕೊಯ್ದಳ್ ಪಾ ।

ಯಾದ ಭರ್ಗನ ಜೀವಗಿರಿಜೆ ಶೃಂಗಾರವಾರಿನಿಧಿಯಂತೆ ನಡೆತಂದಳು. ೩೩. ಸುಕುಮಾರೆಯಾದ ಅಗಜೆ ವಸಂತಾನುಕೂಲೆಯಾಗಿ ಮೆಲ್ಲಡಿಯಿಡುತ್ತ ಬಂದು ಹರನಜಡೆಗೆ ಇರವಂತಿಗೆಯ ಅರಲುಗಳನ್ನು ತಂದಳು. ೩೪. ಚಂಪಕ ನಾಸಿಕೆಯೂ ಚಂಪಕ ಸುಗಂಧಿಯೂ ಆದ ನಗನಂದನೆ ಗಿರಿಜೆ ಭಕ್ತಿ ಉದ್ರೇಕದಿಂದ ಶಿವಪೂಜೆಗಾಗಿ ಸಂಪಿಗೆ ಹೂಗಳನ್ನು ತಂದಳು. ೩೫. ಪ್ರಸನ್ನಮನಸ್ಕಳಾದ ಆ ಚಂದ್ರವದನೆ ಶಿವಾರ್ಚನೆಗಾಗಿ ಹೊಸ ಹರ್ಷದಿಂದ ಸೇವಂತಿಗೆ ಹೂವುಗಳನ್ನು ಸಂಗ್ರಹಿಸಿದಳು. ೩೬. ಭವಾನಿಯು ಶಿವಪೂಜೆಗಾಗಿ ಪಡ್ಡಳಿ (ಕಣಗಿಲೆ) ಹೂ ತಿರಿತಂದಳು. ೩೭. ಗಿರಿಜೆ ನಲಿನಲಿದು, ನವ ಪಾಟಳ

ಟಳರುಚಿರಾಧರೆ ಕಾಮನ
ಶಿಳೀಮುಖದ ಪರಿಯ ಪಾದರಿಯ ಪೊಸಪೂವಂ ॥ ೫೭

ವ॥ ಅವಂ ಕೊಂಡು ಮತ್ತೆನಡೆತಂದು ಕೊಳನಂ ಪೊಕ್ಕು,

ಕಂ॥ ಕಮಳಂದಿಱಿಯಲ್ ನಿಜಕರ
ಕಮಳಮುಮಂ ನೀಡೆ ಕೆಯ್ಯ ಕಂಪಿಂಗಮಮ ।
ಭ್ರಮರಾಳಿ ಮುತ್ತೆ ಕರಮಂ
ಕಮಳಂ ದಿಟಮೆಂದು ಬಗೆದು ನೋಡುತ್ತಿರ್ದಳ್ ॥ ೫೮

ವ ॥ ಅಂತು ನೋಡಿ ತಿಳಿದು

ಮಿಸುಪ ನವತರುಣ ತರಣಿಯ
ಪಸಿಯ ಬಿಸಿಲ್ ಮಸಗೆ ತನುವಿನರಿಸಿನವೊಲವಿಂ ।
ದೆಸೆವ ರಥಾಂಗಕುಚದ್ವಯೆ
ಪೊಸದಾವರೆವೂವನೋವಿ ಭಾವಿಸಿ ತಿಱಿದಳ್ ॥ ೫೯

ಸದಮಳ ಮೃದುಮಯ ಹಸ್ತ
ಪ್ರದೇಶಮಂ ಸುತ್ತಿ ಮುತ್ತೆ ಮತ್ತಾಳಿಗಳಂ ।
ಬುದ ಕೋದಂಡ ಭ್ರೂಯುಗೆ
ಸುದೀರ್ಘನಖೆ ಕೊಯ್ದುಳೊಲ್ದು ನುತಕೇತಕಿಯಂ ॥ ೬೦

ಸೆಳ್ಳುಗುರ್ಗಳ ನಳನಳಿಸುವ
ಬಳ್ಳಿವೆಳಗು ಕರೆಯೆ ಕೌಮುದಿಯನುತ್ಸವದಿಂ ।
ದುಳ್ಳಲರ್ವ ಕುಮುದಕುಲದೊಳ
ಗೊಳ್ಳಿದುವಂ ತೆಗೆದಳಿಂದುಮುಖಿ ತಿಳಿಗೊಳನೊಳ್ ॥ ೬೧

ಗಂಧಿಕೆ ಪಾಟಳಾಂಗಿ ಪಾಟಳ ರುಚಿರಾಧರೆ ಕಾಮನ ಶಿಳೀಮುಖದಂತಿರುವ ಪಾದರಿಹೂಗಳನ್ನು ತಂದಳು. ೫೮. ಅಂತು ನೋಡಿ ತಿಳಿದು, ೫೯. ಬಾಲ ಸೂರ್ಯನ ಎಳೆ ಬಿಸಿಲಿನಂತಿರುವ ಅರಿಸಿನ ಲೇಪಿಸಿದ ಆ ಚಕ್ರವಾಕಸ್ತನಿ, ಹೊಸತಾವರೆ ಹೂವುಗಳನ್ನು ಬಿಡಿಸಿತಂದಳು. ೬೦. ಮುದಿಸಿದ ದುಂಬಿಗಳು ಅವಳ ಅಮಲ ಮೃದು ಹಸ್ತಗಳನ್ನು ಮುತ್ತುತ್ತಿರಲು, ಕಾಮನಬಿಲ್ಲಿನಂತೆ ಸುಂದರವಾದ ಹುಬ್ಬುಗಳುಳ್ಳ ಗಿರಿಜೆ ಸೆಳ್ಳುಗುರುಗಳ ಕೈಯ್ಗಳಿಂದ ಒಳ್ಳೆಯ ಕೇದಗೆ ಹೂಗಳನ್ನು ಕೊಯ್ದು ತಂದಳು. ೬೧. ಚೂಪಾದ ತೆಳುಉಗುರುಗಳು ಪ್ರಭೆ ಬೀರುತ್ತಿರುವ ಕೈಗಳಿಂದ ಅರಳುವುದರಲ್ಲಿರುವ ನೈದಿಲೆಗಳಲ್ಲಿ

ಕಂ॥ ಜಾತಿಸುಗಂಧಿನಿ ಮೇನಾ
ಜಾತೆ ಕುಸುಮ ಜಾತಿಯೊಳಗೆ ಜಾತಿಯಿದೆಂದಾ ।
ಜಾತಿ ಸ್ತ್ರೀ ಜಾತಿಯೊಳತಿ
ಜಾತೆ ಜಗನ್ಮಾತೆ ಜಾತಿಯರಲಂ ಕೊಯ್ದಳ್ ॥ ೬೨

ಮಲ್ಲಿಗೆ ಶರ್ವನ ಜಡೆಮುಡಿ
ಯಲ್ಲಿಗೆ ಕೊಂಡೊಯ್ಯಲೆಂದು ಸಮ್ಮುದದಿಂ ನಿ ।
ಮ್ಮಲ್ಲಿಗೆ ಬಂದೆನೆನುತ್ತುಂ
ಮಲ್ಲಿಗೆಯಲರ್ದೊಂಗಲಂ ಮಹೇಶ್ವರಿ ಕೊಯ್ದಳ್ ॥ ೬೩

ವ॥ ಮತಂ ಪುಷ್ಪಜಾತಿಯಂ ಕೊಯ್ದು

ಕಂ॥ ಸಹಜಾಮೋದೆ ಸುಗಂಧಾ
ಮಹಮೆನಿಸಿದ ಮರುಗದಲ್ಲಿ ಪರಿಮಳದೆಲೆಯಂ ।
ಬಹುಗುಣ ಭೂಪಣೆ ಭಕ್ತಿಯೊ
ಳಹಿನಿವಹಾಭರಣನರ್ಚನೆಗೆ ನೆರೆ ತಿಱಿದಳ್ ॥ ೬೪

ನಲವಿಂದಂ ಮುಡಿವಾಳದ
ನೆಲೆಗೆಯ್ತಂದಗತನೂಜೆ ಬೇರಂ ಬಲ್ಲ ।
ರ್ಗೆಲೆದೋಱಲೇಕೆ ನೀನೆನು
ತೊಲವಿಂ ಪರಿಮಳದ ಬೇರ್ಗಳಂ ಬರೆ ತೆಗೆದಳ್ । ೬೫

ಇಂತಿಂತನಂತಕಾಂತಲ
ತಾಂತಂಗಳ ನಾಯ್ದುಕೊಯ್ದು ಸಂತಸದಿಂದಂ ।

ಒಳ್ಳೆಯವನ್ನು ಇಂದುಮುಖಿ ಅಗಜೆ ತಿಳಿಗೊಳಗಳಲ್ಲಿ ಆರಿಸಿ ತಂದಳು. ೬೨. ಸ್ತ್ರೀ ಜಾತಿಯಲ್ಲಿಯೇ ಅತಿಶ್ರೇಷ್ಠಳೆನಿಸಿದ ಆ ಜಗನ್ಮಾತೆ ಮೇನಾಜಾತೆ, ಕುಸುಮಜಾತಿಯಲ್ಲಿ ಅತಿ ಶ್ರೇಷ್ಠವಾದ ಜಾತಿ ಕುಸುಮಗಳನ್ನೇ ಆರಿಸಿದಳು. ೬೩. ಮಲ್ಲಿಗೆಯನ್ನು ಶರ್ವನ ಜಡೆ ಮುಡಿಯಲ್ಲಿ ಸಿಂಗರಿಸಲೆಂದು ನಿಮ್ಮಲ್ಲಿಗೆ ಬಂದೆ ಎಂದು ಹೇಳುವಳೊ ಎಂಬಂತೆ ಮಹೇಶ್ವರಿ ಮಲ್ಲಿಗೆ ಕುಸುಮಗೊಂಚಲನ್ನು ಕೊಯ್ದಳು. ವ ॥ ಪತ್ರಜಾತಿಯನ್ನು ಕೊಯ್ಯಲೆಂದು, ೬೪. ಸಹಜ ಸುಗಂಧಾಮೋದೆಯಾದ ಗಿರಿಸುತೆ ಸರ್ಪಭೂಷಣನಾದ ಪರಶಿವನ ಅರ್ಚನೆಗಾಗಿ ಸುಗಂಧಯುತವಾದ ಮರುಗವನ್ನು ಬಿಡಿಸಿದಳು. ೬೫. ಮುಡಿವಾಳದ ಬೇರುಗಳುಳ್ಳ ಸ್ಥಳಕ್ಕೆ ವಿಶ್ವಾಸದಿಂದ ಬಂದ ಅಗಜೆ ಬೇರಿನ ಗುಟ್ಟನ್ನು ಅರಿದವರಿಗೆ ಎಲೆಯನ್ನು ಏಕೆ ತೋರಬೇಕು ಎಂಬಂತೆ ಒಲವಿನಿಂದ ಸುಗಂಧದ ಬೇರುಗಳನ್ನು ಸಂಗ್ರಹಿಸಿದಳು. ೬೬. ಹೀಗೆ ಅನೇಕ ಸುಂದರವಾದ ಲತಾದಿಗಳನ್ನು ಆಯ್ದುಕೊಯ್ದು ಸಂತಸ

ಮುಂತೆ ನವಾಂಕುರಕಿಸಲಯ
ದಿಂ ತೀವಿದ ಬಾಲಚೂತದೆಡೆಗೆಯ್ತಂದಳ್ ॥ ೬೬

ಒಡನೆ ಜಯೆವಿಜಯೆಗಳ್ ಮೆ
ಲ್ಲಡಿಯಿಡುತುಂ ಬಂದು ಪುಷ್ಪಪುಟಿಕೆಗಳಂ ಸಂ ।
ಗಡವಿಳುಹಿ ವಿಮಳತಳದೊಳ್
ಪೊಡೆವಡುತುಂ ಗಿರಿತನೂಜೆಗತಿಮುದದಿಂದಂ ॥ ೬೭

ವ॥ ಅಂತು ಪೊಡೆಮಟ್ಟು ಬಾಲಸಹಕಾರತಳದೊಳ್ ಹರಿತ ಭೂಮಿಕೆಯೊಳ್ ಸುರುಚಿರ ಮರೀಚಿಗಳಂಕುರಿಸಿತೆಂಬಂತೆ ನಳನಳಿಸಿ ಬೆಳೆದು ಪೊಸ ಪಸಲೆಯ ಮೇಲೆ ಕದಳೀದಳಂಗಳಂ ಕಮಲ ಪತ್ರಂಗಳಂ ನುಣ್ಪೆಳಗಂ ಕಱೆವ ಪೊಂಬಾಳೆಯ ಪತ್ರಗಳನಿಂಬಿನಿಂ ಪಾಸುತ್ತುಂ ಪಾಸಿಗೆ ಕವಿವ ಮತ್ತಾಳಿಗಳನೆತ್ತಂ ನಿವಾರಿಸುತ್ತುಂ ಕುಸುಮ ಕುಲಮನೆಸೆಯೆ ಸುರಿದು ಭಾಸುರದುಕೂಲದಿಂ ಬಾಸಣಿಸಿ ಶತಪತ್ರಸೂತ್ರ ಕುಲಮಂ ಕೆಲದೊಳಿರಿಸಿ ಮೆಯ್ಯಿಕ್ಕಿ ಕೆಯ್ಯಂ ಮುಗಿದು ದೇವಿ ಜಗ ನ್ಮಾತೆ ಸರ್ವಕಳಾಕೋವಿದೆ ಸುಕುಮಾರಾಂಗಿ ಸೌಂದರ್ಯಮೂರ್ತಿ ಇತ್ತ ಬಿಜಯಂಗೆಯ್ವುದೆಂದು ಬಿನ್ನವಿಸಿ ಕೆಯ್ಗುಡೆ ಮೃದುಪದನ್ಯಾಸದಿಂ ನಡೆತಂದಿಕ್ಕಿದ ಮಾಂದಳಿರ ಪೊಸಪಸೆಯ ಮೇಲೆ ಕಮ ನೀಯದಿಂ ಕುಳ್ಳಿರ್ದಾಗಳ್,

ಕಂ॥ ಪರಿಮಳದಧಿದೇವತೆಯೋ
ವರಕುಮುದದ ಕೂಡೆಬಂದ ಶಶಿಕಳೆಯೋ ವಾ ।
ರಿರುಹದ ನಡುವೆಯ್ತಂದಿಂ
ದಿರೆಯೋ ಎನೆ ದೇವಿ ಪೂವನೋವುತ್ತಿರ್ದಳ್ ॥ ೬೮

ದಿಂದ ಮುನ್ನಡೆದು ಹೊಸ ಚಿಗುರಿಡಿದ ಎಳೆಮಾವಿನ ಮರದೆಡೆಗೆ ಬಂದಳು. ೬೭. ಕೂಡಲೆ ಸಖಿಯರಾದ ಜಯೆ-ವಿಜಯೆಯರು ಹೂವಿನ ಬುಟ್ಟಿಗಳನ್ನು ಮೆಲ್ಲಗೆ ತಂದು ಶುದ್ಧಸ್ಥಳ ದಲ್ಲಿ ಇಳಿಸಿ, ಸಂತಸದಿಂದ ಗಿರಿಜೆಗೆ ವಂದಿಸಿದರು. ವ ॥ ಹಾಗೆ ವಂದಿಸಿ ಎಳೆಮಾವಿನ ಮರದ ಅಡಿಯಲ್ಲಿ ಹಸಿರುನೆಲದಲ್ಲಿ ಮನೋಹರವಾದ ಕಿರಣಗಳು ಅಂಕುರಿಸಿದಂತೆ ಹುಲುಸಾಗಿ ಬೆಳೆದ ಹೊಸ ಗರಿಕೆಯ ನೆಲದಮೇಲೆ ಬಾಳೆ ಎಲೆಗಳನ್ನು ಹರಡಿ, ತಾವರೆ ಎಲೆಗಳನ್ನು ಹೊಳೆಯುವ ಹೊಂಬಾಳೆಯ ಎಲೆಗಳನ್ನು ಹಾಸಿ, ಸುವಾಸನೆಗೆ ಮುತ್ತುವ ದುಂಬಿಗಳನ್ನು ಸೋವುತ್ತ, ಹೂವುಗಳನ್ನು ಎರಚಿ, ಬೆಳಗುವ ಸೀರೆಯನ್ನು ಹೊದಿಸಿ, ತಾವರೆಹೂವು ಗಳನ್ನು ಪಕ್ಕದಲ್ಲಿರಿಸಿ, ದೇವಿಗೆ ಕೈಮುಗಿದು, ಜಗನ್ಮಾತೆ ಸಕಲ ಕಲಾಕೋವಿದೆ. ಸುಕು ಮಾರಾಂಗಿ, ಈ ಕಡೆ ಬಿಜಯಂಗೆಯ್ಯಬೇಕು ಎಂದು ವಿಜ್ಞಾಪಿಸಿ, ಕೈಯ್ಗುಡಲು ಮೆಲ್ಲನೆ ನಡೆತಂದು ಗಿರಿಜೆ ಮಾವಿನಚಿಗುರಿನ ಹಸೆಯಮೇಲೆ ಕುಳಿತುಕೊಂಡಳು. ೬೮. ಆಗ ಅಗಜೆಯು ಪರಿಮಳದ ಅಧಿದೇವತೆಯೊ, ಕನ್ನೈದಿಲೆಯ ಜೊತೆಗೆ ಬಂದ ಶಶಿಕಲೆಯೊ,

ವ॥ ಅಂತೋಪುತ್ತುಮಿರ್ದು,

ಕಂ॥ ಮುಟ್ಟಿದೊಡಾಗಳೆ ಕಂದುವ
ಸೆಟ್ಟನೆ ನೋಡಿದೊಡೆ ಕೋಡಿ ಬಾಡುವ ನೆನೆಯಲ್ ।
ತೊಟ್ಟನೆ ಕೊರಗುವ ಪೂವಂ
ಕಟ್ಟುವ ಪರಿಯೆಂತೆನುತ್ತೆ ಚಿಂತಿಸುತಿರ್ದಳ್ ॥ ೧೯

ವ॥ ಅಂತು ಚಿಂತಿಸಿ, ನೋಡಿ ಭಕ್ತಿಯೊಳ್ ಕೂಡಿ ಪೂಜಿಸಲ್ವೇಡಿ ಪೂವಂ ಪೂ ಸೋಂಕೆ ಕೊರಗದೆಂಬಂತೆ ತನ್ನ ಕರಕಮಲಮಂ ನೀಡಿ,

ಕಂ॥ ಅತಿಸುಕುಮಾರೆ ಸುಖಾಕರೆ
ನುತ ಗುಣಗಣಯುಕ್ತೆ ಶಾಂತೆ ಸಾತ್ತ್ವಿಕರೂಪಾ ।
ನ್ವಿತೆ ಸರ್ವಕಳಾನಿಧಿ ಪಾ
ರ್ವತಿಸತಿ ಶತಪತ್ರ ಸೂತ್ರಮಂ ತೆಗೆಯುತ್ತುಂ । ೨೦

ವದನಕ್ಕಂ ಕುಸುಮಕ್ಕಂ
ಪದೆದೆಱಗುವ ಮಧುಕರಂಗಳಂ ಸೋವುತ್ತುಂ ।
ಮೃದುತರ ಸರಳಾಂಗುಲಿಯಿಂ
ಸದಮಲೆಯಿರವಂತಿಯರಲನೊಲವಿಂ ಪಿಡಿದಳ್ ॥ ೨೧

ಪಿಡಿದೆತ್ತಿ ನಳಿನ ಗುಣದೊಳ್
ತೊಡರ್ಚುತುಂ ಮೆಲ್ಲ ಮೆಲ್ಲನಿರವಂತಿಯ ಪೂ ।
ದೊಡಿಗೆಗಳಂ ವಿರಚಿಸಿದಳ್
ಮೃಡಾಣಿ ಮೃಡನವಯವಕ್ಕೆ ಸಡಗರದಿಂದಂ ॥ ೨೨

ತಾವರೆಯ ನಡುವೆ ಬಂದ ಇಂದಿರೆ (ಲಕ್ಷ್ಮಿ)ಯೊ, ಎಂಬಂತೆ ಪ್ರಕಾಶಿಸಿದಳು. ೧೯. ಮುಟ್ಟಿದರೆ ಕೂಡಲೆ ಬಾಡುನಷ್ಟು ಸುಕುಮಾರವಾಗಿರುವ ಈ ಹೂವುಗಳು; ಕಣ್ಣ ದೃಷ್ಟಿತಾಕಿದೊಡನೆಯೆ ಕಂದುವುವು; ನೆನೆದರೆ ಕೊರಗುತ್ತವೆ; ಇಂಥವುಗಳನ್ನು ಕಟ್ಟುವುದು ಹೇಗೆ ಎಂಬುದು ಅವಳ ಚಿಂತೆಗೆ ಕಾರಣವಾಗಿತ್ತು. ವ॥ ಹೀಗೆ ಚಿಂತಿಸಿ ಭಕ್ತಿಯಿಂದ ಪೂಜಿಸುವ ಉದ್ದೇಶದಿಂದ ಕಟ್ಟಿದರೆ ಅವು ಕೊರಗುವುದಿಲ್ಲವೆಂದು ಭಾವಿಸಿದ ಅವಳು ಕೈಚಾಚಿದಳು. ೨೦. ಅತಿಸುಕುಮಾರೆ, ಸದ್ಗುಣಶೀಲೆ, ಶಾಂತೆ, ಸರ್ವಕಳಾನಿಧಿ ಪಾರ್ವತಿಯು ಕಮಲದ ದಂಟಿನಲ್ಲಿರುವ ಎಳೆಗಳನ್ನು ತೆಗೆದು ೨೧. ಮುಖಕ್ಕೆ ಮತ್ತು ಹೂವುಗಳಿಗೆ ಮುತ್ತುತ್ತಿರುವ ದುಂಬಿಗಳನ್ನು ಸೋವುತ್ತ ಗಿರಿಜೆಯು ತನ್ನ ಮೃದುವಾದ ಬೆರಳುಗಳಿಂದ ಇರವಂತಿ ಹೂವುಗಳನ್ನು ಹಿಡಿದಳು ೨೨. ಮೃಡಾಣಿಯಾದ ಪಾರ್ವತಿಯು ತಾವರೆ ದಂಟಿನ ಎಳೆಗಳಲ್ಲಿ ಇರವಂತಿಯ ಹೂವುಗಳನ್ನು ಮಾಲೆಗಟ್ಟಿ, ಹೂವಿನ ತೊಡಿಗೆಗಳನ್ನು

ಕಂ॥ ಸರಸಿಜ ಬಂಧಂ ಕಮಲಾ
ಕರಬಂಧಂ ಮುರಜ ಬಂಧಮುತ್ಪಲಬಂಧಂ ।
ತರುಬಂಧಂ ಗಿರಿಬಂಧಂ
ವರಬಂಧಂ ಲಿಂಗಬಂಧಮಮಂ ವಿರಚಿಸಿದಳ್ ॥ ೭೩

ಸುರರ ಶಿರೋಮಾಲಾವಿ
ಸ್ತರಬಂಧ ನಾಗಬಂಧಮವನೀಬಂಧಂ ।
ದ್ವಿರದಾಜಿನಬಂಧಂ ವಿ
ಸ್ತರ ವಿಧುರವಿಬಿಂಬ ಬಂಧಮಂ ವಿರಚಿಸಿದಳ್ ॥ ೭೪

ಕರಕಮಲದ ಲೋಚನಸರ
ಸಿರುಹದೆ ವದನಾರವಿಂದದಾ ಪರಿಮಳದಿಂ ।
ಪೊರೆಯುತ್ತುಂ ಪೊಸಪೂವಂ
ಗಿರಿಜೆ ಸುಖಂ ಮುಟ್ಟಿ ಮುಟ್ಟಿ ಕಟ್ಟುತ್ತಿರ್ದಳ್ ॥ ೭೫

ಈ ತೆಱದಿಂ ಕ್ಷಿತಿಧರವರ
ಜಾತೆ ಜಗನ್ಮಾತೆಯೆಸೆವ ಕುಸುಮಾವಳಿಯಿಂ ।
ದೋತು ಮನೋಹರಮಪ್ಪ ವಿ
ನೂತನ ಮಾಳಾವಿಳಾಸಮಂ ಮಿಗೆ ಸಮೆದಳ್ ॥ ೭೬

ವ॥ ಇಂತು ಪುಷ್ಪಾವಳಿಯಿಂ ಪಲವುಂ ತೆಱದ ಬಂಧಮಂ ಸಮೆದು ಬಳಲ್ದು ಸ್ವೇದಭರಿತ ಗಂಡಸ್ಥಳಿಯುಂ ಶಿಥಿಲೀಕೃತಕರತಳೆಯುಮಾಗಿರ್ದ ಪಾರ್ವತಿಯಂ ಕಂಡು ಸಹಚರಿಯರ್

ಮೃಡನ ಅವಯವಗಳಿಗೆ ಸಡಗರದಿಂದ ಅಲಂಕರಿಸಿದಳು. ೭೩. ಪಾರ್ವತಿಯು ಹೂವಿನ ಮಾಲೆಗಳಲ್ಲಿ ಬಗೆಬಗೆಯ ಬಂಧಗಳನ್ನು ರಚಿಸಿದ್ದಳು. ಅವುಗಳಲ್ಲಿ ಸರಸಿಜ ಬಂಧ, ಕಮಲಾಕರಬಂಧ, ಮುರಜಬಂಧ, ಉತ್ಪಲಬಂಧ, ತರುಬಂಧ, ಗಿರಿಬಂಧ, ಲಿಂಗಬಂಧ ಮುಂತಾದವು ಮುಖ್ಯವಾದವು. ೭೪ ಅವುಗಳಲ್ಲಿ ದೇವತೆಗಳ ಶಿರೋಮಾಲೆಯಷ್ಟು ವಿಸ್ತಾರವಾದ ಬಂಧಗಳು, ನಾಗಬಂಧ, ಅವನೀಬಂಧ, ದ್ವಿರದಾಜಿನ ಬಂಧ, ಚಂದ್ರಬಿಂಬ ರವಿಬಿಂಬ ಬಂಧಗಳೂ ಇದ್ದವು. ೭೫. ಕಲಕಮಲ, ನೇತ್ರಕಮಲ, ಮುಖಾರವಿಂದ ಇವುಗಳ ಪರಿಮಳದಿಂದ ಕೂಡಿದ ಗಿರಿಜೆ ಹೊಸ ಹೂವುಗಳನ್ನು ಮುಟ್ಟಿ ಮುಟ್ಟಿ ಮಾಲೆಗಳನ್ನು ಕಟ್ಟುತ್ತಿದ್ದಳು. ೭೬. ಹೀಗೆ ಗಿರಿರಾಜನಂದಿನಿಯಾದ ಪಾರ್ವತಿ ಜಗನ್ಮಾತೆ ಹೂವುಗಳಿಂದ ಮನೋಹರವಾದ ವಿನೂತನ ಮಾಲೆಗಳನ್ನು ಕಟ್ಟಿದಳು. ವ॥ ಹೀಗೆ ಹೂಗಳಿಂದ ಬಗೆ ಬಗೆಯ ಬಂಧಗಳನ್ನು ಹಣೆದು, ಬಳಲಿದಳು ; ಕಪೋಲಗಳಲ್ಲಿ ಬೆವರು ಹನಿನಿಮೂಡಿತು, ಕೈಗಳು ಸೋತವು ; ಹೀಗೆ ಆಯಾಸಗೊಂಡ ಪಾರ್ವತಿಯನ್ನು ಕಂಡ

ಬಂದು ಸೇವಂತಿಗೆಯ ಪನಿನೀರಂ ಮಜ್ಜನಕ್ಕೆಱೆದು ಪರಾಗದಂಗರಾಗಮನಮರ್ಚಿ ತಾವರೆಯ ನೂಲ ದುಕೂಲಮನುಡಿಸಿ ಕದಂಬ ಕುಸುಮಮಂ ಸಿರಿಮುಡಿಯೊಳ್ ತುಱುಂಬಿ ಕೇತಕಿಯ ಸಣ್ಣನಪ್ಪ ನುಣ್ಣೆಸಳ ಕರ್ಣಪತ್ರಮನಿಕ್ಕಿ ಮಕರಂದದ ತಿಲಕಮನಿಟ್ಟು ಪುಷ್ಪಮಂಜರಿಯ ಕರ್ಣಾವತಂಸಮನಳವಡಿಸಿ ಮಲ್ಲಿಗೆಯನನೆಯ ಏಕಾವಳಿಯುಂ ಮುತ್ತಿನ ಹಾರದೊಳೊಡಗೂಡಿ ಮೊಲ್ಲೆಯ ಮುಗುಳ ಕಂಕಣಮಂ ಕೆಯ್ಗೊಳಿಸಿ ನಳಿನಕರ್ಣಿಕಾ ಮುದ್ರಿಕೆಗಳಂ ಭದ್ರಾಂಗುಲಿಗೆ ಹತ್ತಿಸಾರ್ಚಿ ನವಲತೆಯನಂಕುರದಿಂದಲಂಕರಿಸುವಂತೆ ಕಲ್ಪತರುವಂ ಕುಸುಮದಿಂದೆ ಮುಸುಂಕುವಂತೆ ಪಿನಾಕಿಯ ಮನೋರಥಮಂ ಪುಣ್ಯಫಲದಿಂ ಪಸದನಂಗೊಳ್ವಂತೆ ಕುಸುಮ ಬಾಣಮಂ ಪೊಸಗಂಪಿಂ ಕೂರ್ಪಿಡುವಂತೆ ಸೌಂದರ್ಯಮಂ ಮೋಹದಿಂದೊಲ್ವಂತೆ ಸೌಕುಮಾರ್ಯನಿಧಿಯಪ್ಪ ಶರ್ವಾಣಿಗೆ ಶೃಂಗಾರಂ ಗೆಯ್ದನುರಾಗದಿಂ ಕೆಯ್ಗೊಟ್ಟ ಕೆಳದಿಯರ ಕೈಯೊಳ್ ಮೆಯ್ಯಂ ಮಲಂಗಿಸಿ ಮೆಲ್ಲಮೆಲ್ಲನಡಿಯಿಡುವಾಗಳ್ ಹೊನ್ನ ಹಾವುಗೆಯ ರನ್ನವೆಳಗಂ ಕೀಳ್ಮಾಡಿ ನಕ್ಷತ್ರಮಾಲೆಯಂತೆ ನಣ್ಪೆಳಗನೀಂಬ ಪದನಖ ಪ್ರಭೆ ಪೂವಲಿಗೆದಱೆ ಮಂಜೀರದ ಮಧುರಧ್ವನಿಗೆ ಮಂಡಳಿಸುವ ಮರಾಳಕುಳಮಂ ಜಡಿವಂತೆ ಪಳಂಚುವ ಪಾದಮುದ್ರಿಕೆ ನುಣ್ದನಿಯನುಗುಳೆ ಹರನಚಿತ್ತಮಂ ಗಿರಿಜೆ ನಿನ್ನ ಚರಣದೊಳ್ ಕೆಡಪುವೆನೆಂದು ಭಾಷೆಗುಡುವಂತೆ ಸೂಸುವ ಸುನಾದದಿಂ ನೇವುರ ಮುಲಿಯೆ ಕುಸುಮಕುಳವಿಳಸಿತ ಕಾಂಚೀದಾಮದ ಭಾರಮಂ ತಳೆದ ನಿತಂಬ ಬಿಂಬಮಂ ಸುತ್ತಿ ಮುತ್ತಿದ ದುಕೂಲದ ಧವಳದ್ಯುತಿ ದೆಸೆ ದೆಸೆಗೆ ಪಸರಿಸೆ ಲಾವಣ್ಯರಸಂ ತೀವಿ

ಸಖಿಯರು ಅವಳಿಗೆ ಸೇವಂತಿಗೆಯ ಪನ್ನೀರ ಮಜ್ಜನ ಮಾಡಿಸಿದರು. ಹೂವಿನ ಪರಾಗ (ಧೂಳಿ)ವನ್ನು ಮೈಗೆ ಲೇಪಿಸಿದರು, ತಾವರೆಯ ನೂಲಿನ ಸೀರೆಯುಡಿಸಿದರು, ಕದಂಬ ಕುಸುಮವನ್ನು ಅವಳ ಸಿರಿಮುಡಿಗೆ ಸಿಂಗರಿಸಿದರು, ಕೇದಗೆಯ ಸಣ್ಣ ನುಣ್ಣೆಸಳನ್ನು ಕರ್ಣಗಳಿಗೆ ಸಿಕ್ಕಿಸಿದರು, ಮಕರಂದ ತಿಲಕವಿಟ್ಟು, ಹೂಗೊಂಚಲನು ಕರ್ಣಾವತಂಸವಾಗಿಸಿದರು. ಮಲ್ಲಿಗೆ ಮೊಗ್ಗಿನ ಏಕಾವಳಿ ಮುತ್ತಿನ ಹಾರದೊಂದಿಗೆ ಮೊಲ್ಲೆಯ ಮೊಗ್ಗುಗಳ ಕಂಕಣವನ್ನು ಕಟ್ಟಿ, ತಾವರೆಯ ಕರ್ಣಿಕೆ (ಗೆಡ್ಡೆ)ಗಳ ಮುದ್ರಿಕೆಗಳನ್ನು ಬೆರಳುಗಳಿಗೆ ತೊಡಿಸಿ, ನವಲತೆಯನ್ನು ಚಿಗುರುಗಳಿಂದ ಅಲಂಕರಿಸುವ ಹಾಗೆ, ಕಲ್ಪವೃಕ್ಷವನ್ನು ಹೂಗಳು ಮುಸುಕವಂತೆ, ಹರನ ಮನೋರಥವನ್ನು ಪುಣ್ಯಫಲದಿಂದ ಪ್ರಸಾದಗೊಳಿಸುವಂತೆ, ಕುಸುಮ ಬಾಣವನ್ನು ಹೊಸಕಂಪಿನಿಂದ ಹರಿತಗೊಳಿಸುವಂತೆ, ಸೌಂದರ್ಯವನ್ನು ಮೋಹದಿಂದ ಒಲಿಸುವಂತೆ, ಸುಕುಮಾರಿಯಾದ ಶರ್ವಾಣಿಗೆ ಶೃಂಗಾರ ಮಾಡಿದರು. ತರುವಾಯ ಅನುರಾಗದಿಂದ ಕೆಳದಿಯರು ಕೈಗೊಟ್ಟು ಮೆಲ್ಲಡಿಯಿಟ್ಟು ನಡೆಯುವಾಗ, ಹೊನ್ನಹಾವುಗೆಗಳ ರತ್ನಗಳ ಬೆಳಕನ್ನು ಕೀಳ್ಮಾಡಿ ನಕ್ಷತ್ರಮಾಲೆಯಂತೆ ನುಣ್ಬೆಳಗನ್ನು ಚೆಲ್ಲುವ ಕಾಲ ಉಗುರಕಾಂತಿ ರಂಗೋಲೆ ಚಿತ್ರ ತೆಗೆಯಲು, ಮಂಜೀರದ ಮಧುರ ಧ್ವನಿಗೆ ಗುಂಪುಗೆಟ್ಟ ಹಂಸೆಗಳನ್ನು ಬೆದರಿಸುವಂತೆ ಹೊಳೆಯುವ ಪಾದಮುದ್ರಿಕೆ ಇಂಪಾಗಿ ಕೇಳುತ್ತಿರಲು, ಎಲೌ ಗಿರಿಜೆ ಹರನ ಚಿತ್ತವನ್ನು ನಿನ್ನ ಪಾದಕ್ಕೆ ಕೆಡುಪುವೆನೆಂದು ಭಾಷೆಗೊಡುತ್ತಿದೆಯೊ ಎಂಬಂತೆ ನೂಪುರಗಳು ನುಡಿಯುತ್ತಿರಲು ; ಹೂವುಗಳಿಂದ ಸುಂದರವಾದ ಒಡ್ಯಾಣದ ಭಾರವನ್ನು ತಳೆದ ನಿತಂಬವನ್ನು ಸುತ್ತಿರುವ ಸೀರೆಯ ಬಿಳುಪು ಸುತ್ತಲೂ ಹರಡುತ್ತಿರಲು,

ನೆಲೆಗಾಣಲ್ ಬಾರದ ಗಂಭೀರನಾಭೀ ಸರೋವರದೊಳಗೊಗೆದ ಮೃಣಾಳನಾಳದಂತಿರ್ದ ಬಾಸೆಯಂ ಮಱೆಗೊಂಡ ಬಡನಡುವಡಿಗಡಿಗೆ ಬಳುಂಕುತ್ತಿರೆ ವಿಭವಮಾದುಭಯಕಕ್ಷಮನಿಂಬುಗೊಂಡು ತುಂಬಿ ಬಳೆದು ಮುತ್ತಿದ ಮೇಲುದನೊತ್ತರಿಸಿ ಹೊತ್ತೆತ್ತಿ ಕೆಲಕ್ಕೆ ನೂಂಕುವ ಪೆರ್ಮೊಲೆಗಳ್ಗೆ ಹಾರ ಕಾಂತಿ ಹೊಸಮೇಲುದಂ ಪೊರಯ್ಸೆ ಕಲ್ಪತರುವಿನ ಶಾಖೆಗಳಂತೆ ಕೋಮಳದಿಂ ನೀಳ್ದು ನಳನಳಿಸಿ ಬೆಳೆಬೆಳೆದ ಬಾಹುಲತಾಪ್ರಸೂನಮಂ ಪೋಲ್ವಸೆಳ್ಳುಗುರ್ಗಳ್ ಬಳ್ಳಿವೆಳಗಂ ಕಱೆಯೆ ಕಬರೀಭರದ ಗುರುತ್ವಮನಾಂತ ಕಂಬುಗ್ರೀವಮಿಂಬು ವಡೆಯೆ ಕಪೋಳಬಿಂಬದೊಳ್ ಪ್ರತಿಬಿಂಬಿಸುವ ಕರ್ಣಾವತಂಸಪ್ರಸವಮಂಜರಿಗಳ್ ಕರ್ಣಪಾಲಿಕೆಯೊಳಾಂದೋಳಮನಾಡೆ ನೆಱೆ ತೀವಿ ತೆರೆಮಸ ಗುವ ಮುಖರಸದೊಡನೆ ಕಡೆಗಣ್ಣಕಾಂತಿ ಕೋಡಿವರಿಯೆ ಕರ್ಪೂರದ ಮೂಕುತಿಗೆ ಕಂಪನಿರ್ಮಡಿ ಸುವ ನಿಡುಸುಯ್ಯ ಪರಿಮಳಕ್ಕೆ ಪರಿಮರಿಯಾಡುವ ಮಧುಕರ ನಿಕರಂ ಮಕರಂದ ತಿಲಕದ ತನಿ ಗಂಪಿಂಗಳಸಿ ಲಲಾಟ ಪಟ್ಟದೊಳಂಕುರಿಸಿ ನಲಿವ ನೀಲಾಳಕಮೆಂಬ ಮಱಿದುಂಬಿಗಳೊಳ್ ಕಾಳೆ ಗಂದೆಗೆಯೆ ತಾರಕಿತಮಾದ ನೀರದಮಂ ಮುಸುಂಕಿದ ತಾರೇಶಮರೀಚಿಗಳಂತೆ ಕದಂಬ ಕುಸುಮ ಗರ್ಭೀಕೃತ ಕಬರೀಭರಸಂಯುತ ಶಿರೋಭಾಗಮಂ ಬಾಸಣಿಸಿದ ನನೆಯ ಸೂಸಕದ ಕೊನೆಗಳ ಲುಗೆ ಶಿವನಮನೋರಥಂ ಮೂರ್ತಿಗೊಂಡಂತೆ ಹರನ ಮೆಚ್ಚು ಹರೆಯುಂಬಡೆದಂತೆ ಶಂಕರನ ಬಿಂಕಂ ಬಿನ್ನಣಮಾದಂತೆ ಚಂದ್ರಕಳೆ ಕಳೆಕಣ್ದೆಱೆದಂತೆ ನೆಱೆಮೆಱೆದು ನಡೆತಂದು ನಗತನೂಜೆ ಚಂದ್ರ ಧರನ ಮುಂದೆ ನಿಂದು,

ಲಾವಣ್ಯರಸವು ವ್ಯಾಪಿಸಿ, ನೆಲೆಗಾಣದ ಗಂಭೀರನಾಭಿ ಎಂಬ ಸರೋವರದೊಳಗೆ ಒಗೆದ ತಾವರೆಯದಂಟೋ ಎಂಬಂತಿದೆ ಬಾಸೆ (ರೋಮರಾಜಿ), ಮರೆಯಲ್ಲಿರುವ ಬಡನಡು ಅಡಿ ಗಡಿಗೆ ನಡುಗುತ್ತಿದೆ, ಸುಂದರವಾದ ಎರಡೂ ಪಕ್ಕಗಳ ಆಸರೆ ಪಡೆದು ತುಂಬಿಬೆಳೆದ ಪೆರ್ಮೊಲೆಗಳು ಮೇಲುದವನ್ನು ಪಕ್ಕಕ್ಕೆ ಸರಿಸಿವೆ,ಅಂಥಪೆರ್ಮೊಲೆಗಳಿಗೆ ಹಾರಕಾಂತಿಯು ಹೊಸ ಮೇಲುದವನ್ನು ಹೊದಿಸಿದಂತೆ ಆಗಿದೆ, ಕಲ್ಪತರುವಿನ ಕೊಂಬೆಗಳಂತೆ ಕೋಮಲ ವಾಗಿ ಉದ್ದವಾಗಿ ನಳನಳಿಸಿ ಬೆಳೆದು ಲತೆಯಂತಿರುವ ಬಾಹುಗಳು, ಆ ಬಾಹುಲತೆಗಳಿಗೆ ಹೂಗಳಂತಿರುವ ತಳು ಉಗುರುಗಳು ಬಳ್ಳಿಬೆಳಗನ್ನು ಸೂಸುತ್ತಿವೆ, ಕಬರೀ (ಕೇಶಪಾಶ) ಭಾರದ ಹೊರೆಯನ್ನು ಹೊತ್ತ ಶಂಖಕಂಠವು ಇಂಬಾಗಿರಲು, ಕಪೋಲ (ಕೆನ್ನೆ)ಗಳಲ್ಲಿ ಪ್ರತಿಬಿಂಬಿಸಿರುವ ಕರ್ಣಾವತಂಸವಾಗಿರುವ ಹೂಗೊಂಚಲುಗಳು ತೂಗುತ್ತಿರಲು, ತೆರೆ ತೆರೆಯಾಗಿ ಸೂಸುವ ಮುಖರಸದೊಡನೆ ಅಪಾಂಗ (ಕಡೆಗಣ್ಣನೋಟ) ಕಾಂತಿ ಕೋಡಿ ವಡಿಯುತ್ತಿರಲು, ಕರ್ಪೂರದ ಮೂಗುತಿಗೆ ಕಂಪನ್ನು ಇಮ್ಮಡಿಸುವನಿಟ್ಟುಸಿರ ಸುವಾಸನೆಗೆ ಮುತ್ತಿರುಬವ ದುಂಬಿಗಳು–ಮಕರಂದ ತಿಲಕದ ವಾಸನೆ ಬಯಸಿ ಬಂದಂತಿವೆಯೊ ಎಂಬಂತೆ ಇರುವ ಕಪ್ಪು ಚೂರ್ಣಕುಂತಳಗಳೆಂಬ ಮರಿದುಂಬಿಗಳೊಡನೆ ಕಾದುತ್ತಿವೆ. ತಾರೆ ಮೂಡಿದ ಮೋಡವನ್ನು ಮುಸುಕಿದ ಚಂದ್ರಕಿರಣಗಳಂತೆ ಕದಂಬ ಕುಸುಮ ಧರಿಸಿದ ಕೇಶಪಾಶವು ಶಿರೋಭಾಗವನ್ನು (ಮಂಡೆಯನ್ನು) ಹೊದಿಸಿದ ಮೊಗ್ಗುಗಳ ಕೊನೆಗಳು ಅಲುಗುತ್ತಿರಲು, ಶಿವನ ಮನೋರಥವು ಮೂರ್ತಿಗೊಂಡಿವೆ, ಹರನ ಮೆಚ್ಚುಗೆಗೆ ಹರೆಯವು ಬಂದಂತೆ, ಹರನ ಬಿಂಕವು ಬಿನ್ನಣವಾದಂತೆ, ಚಂದ್ರಕಳೆ ಕಣ್ದೆರೆದಂತೆ ಪ್ರಕಾಶಿಸುವ ಅಗ

ಕಂ॥ ಇರುಳುಂ ಪಗಲುಂ ಕಾಮಂ
ತರದಿಂ ತೆಗೆದೆಚ್ಚ ಕುಸುಮಬಾಣಮಿದೆಂದಾ ।
ಗಿರಿಶಂಗೆ ತೋರ್ಪತೆಱದಿಂ
ಸೆರಪಿದಳಭವಾಂಘ್ರಿಗಳ್ಗೆ ಪುಷ್ಪಾಂಜಳಿಯಂ ॥ ೭೭

ವ॥ ಅಂತುಮಲ್ಲದೆ,

ಕಂ॥ ಸಂದಣಿಸುವ ನವನವ ಪುಳ
ಕಂ ದಟ್ಟಯ್ಸುತ್ತೆ ನೆಗೆಯೆ ಶಶಿಮೌಳಿಗೆ ಪೂ ।
ರ್ಣೇಂದುಮುಖಿ ಪೊಡೆಮಡುತ್ತಾ
ನಂದಾಶ್ರುಗಳಿಂದೆ ಚರಣತಳಮಂ ತೊಳೆದಳ್ ॥ ೭೮

ಪದೆಪಿಂ ಪೊಡೆಮಡುವಾಗಳ್
ಮೃದುತರಪದದುಪರಿಭಾಗಮಂ ಚೆಲ್ವಿಂ ಪ ।
ತ್ತಿದ ಮಕರಂದದ ತಿಳಕಂ
ಪದಮಳ ಚಂದನ ವಿಳಾಸಮೆನಿಸಿತ್ತಾಗಳ್ ॥ ೭೯

ಸದ್ಗಂಭೀರಾವೃತ ವಿಳ
ಸದ್ಗಮಕದೆ ನಿಂದು ಶಿವನ ಮೆಲ್ಲಡಿಗಳಿಗು ।
ದ್ಯದ್ಗುಣಭೂಷಣೆ ಸುರಿದಳ್
ಗದ್ಗದಿಸುತೆ ಪುಳಕಿಸುತ್ತೆ ಸರಸಿಜದಲರಂ ॥ ೮೦

ಜಾತೆ ತಿಂಗಳು ಸೂಡಿದವನ ಮುಂದೆ ಬಂದು ನಿಂತಳು. ೭೭. ಹಾಗೆ ಬಂದ ಪಾರ್ವತಿ ಗಿರೀಶನ ಪಾದಕಮಲಗಳಿಗೆ ಪುಷ್ಪಾಂಜಲಿ ಸಮರ್ಪಿಸಿದಳು. ಅದು ಮನ್ಮಥನು ಹಗಲಿರುಳೂ ಬಿಟ್ಟ ಹೂಬಾಣಗಳೊ ಎಂಬಂತಿತ್ತು. ೭೮. ನಮಿಸಲು ಬಂದ ಪಾರ್ವತಿಗೆ ಮೈರೋಮಾಂಚಿತವಾಗಿದೆ. ಹರ್ಷಾಶ್ರುಗಳು ಸುರಿಯುತ್ತಿವೆ. ಶಿವನ ಪಾದಕಮಲಗಳಿಗೆ ಪೊಡೆಮಟ್ಟು ಅವಳು ಆನಂದಾಶ್ರುಗಳಿಂದ ಚರಣತಳವನ್ನು ತೊಳೆದಳು. ೭೯. ಪಾರ್ವತಿಯು ಪರಶಿವನಿಗೆ ಪೊಡಮಟ್ಟಳು ; ಆಗ ಅವಳು ಹಣೆಗೆ ಇಟ್ಟಿದ್ದ ಮಕರಂಥ ತಿಲಕವು ಪರಶಿವನ ಮೃದುತರ ಪಾದಗಳ ಮೇಲೆ ಅಂಕಿತವಾಯಿತು ; ಅದು ಪಾದಗಳಿಗೆ ಚಂದನದ ಬೊಟ್ಟು ಇಟ್ಟಂತೆ ಕಾಣುತ್ತಿತ್ತು. ೮೦. ಪಾರ್ವತಿಯು ಗಂಭೀರವಾದ ಭಂಗಿಯಲ್ಲಿ ನಿಂತುಕೊಂಡು ಪರಶವನ ಮೆಲ್ಲಡಿಗಳಿಗೆ ತಾವರೆ ಹೂಗಳನ್ನು ಸುರಿದಳು, ಆಗ ಅವಳಲ್ಲಿ ಗದ್ಗದ, ರೋಮಾಂಚ ಮುಂತಾದ ಸಾತ್ವಿಕ ಭಾವಗಳು ಮೂಡಿದವು.

ಕಂ॥ ಊರುದ್ವಯದೊಳ್ ಕರದೊಳ್
ಚಾರುಭುಜಾಗ್ರಂಗಳೊಳ್ ಸುಬಾಹುಗಳೊಳ್ ಪು ।
ಣ್ಯೋರಸ್ಥಳದೊಳ್ ಗಿರಿಸುತೆ
ಹಾರಯ್ಸುತೆ ಕುಸುಮಮಾಲೆಯಂ ಪಸರಿಸಿದಳ್ ॥ ೮೧

ವ॥ ಮತ್ತಮಲ್ಲದೆಯುಂ,

ಕಂ॥ ತವ ತವಗೆ ಮುಂಚುವಿಂದ್ರಿಯ
ನಿವಹಮನೋವುತ್ತೆ ಗಿರಿಜೆ ಹರಕಂಧರದೊಳ್ ।
ನವಕುಸುಮಮಾಲೆಯಂ ಸಾ
ರ್ಚುವ ನೆವದಿಂ ಸೋಂಕಿ ಸೋಂಕಿ ಪುಳಕಿಸುತಿರ್ದಳ್ ॥ ೮೨

ವ॥ ಅಂತಿರ್ದು,

ಕಂ॥ ಭರದಿಂದಂ ನವಕುಸುಮಾ
ಭರಣಂಗಳನಭವನಂಗದೊಳ್ ಸಿಂಗರಿಸು ।
ತ್ತಿರಲುತ್ತುಬ್ಬುತೆ ಕೊಬ್ಬುತೆ
ಗಿರಿಸುತೆ ನಱುಸುಯ್ಯ ಧೂಪಮಂ ಪದೆದಿತ್ತಳ್ ॥ ೮೩

ಅಲರ್ದೊಂಗಲ ಪೊಸದುಡಿಗೆಯ
ನಲಂಪಿನಿಂ ಶಂಕರಂಗೆ ಕೆಯ್ಗೊಳಿಸುತ್ತ ।
ಗ್ಗಲಿಸುತ್ತಿತ್ತಿದಳಂಬಿಕೆ
ನಲವಿಂ ನಗೆಮೊಗದ ಕಾಂತಿಯೆಸೆವಾರತಿಯಂ ॥ ೮೪

೮೧ ಗಿರಿಸುತೆ ಪರಮೇಶ್ವರನ ತೊಡೆ, ಕರ, ಭುಜಗಳ ಮೂಲ ಬಾಹುಗಳು, ಉರಸ್ಥಳಗಳಲ್ಲಿ ಶುಭವನ್ನು ಕೋರಿ ಹೂವಿನ ಮಾಲೆಗಳನ್ನು ಸಿಂಗರಿಸಿದಳು. ೮೨. ಶಿವನ ಕುತ್ತಿಗೆಯಲ್ಲಿ ಹೊಸ ಹೂವಿನ ಮಾಲೆಯನ್ನು ಹಾಕುವಾಗ ಅವಳ ಕೈ ಶಿವನ ಅಂಗಾಂಗಗಳನ್ನು ಸೋಂಕಿ ಸೋಂಕಿ ರೋಮಾಂಚಿತವಾಯಿತು. ಅವಳ ಇಂದ್ರಿಯಗಳು ತಾನು ಮುಂದು ತಾನು ಮುಂದು ಎಂದು ಶಿವಸಂಪರ್ಕಕ್ಕೆ ಎಳಸುತ್ತಿದ್ದವು. ಆದರೂ ಗಿರಿಜೆ ಅವುಗಳ ಆವೇಗವನ್ನು ತಡೆದು ಶಿವನ ಸೇವೆ ಎಸಗುತ್ತಿದ್ದಳು. ೮೩. ಅಭವನ ಅಂಗಾಂಗಗಳಲ್ಲಿ ನೂತನ ಕುಸುಮಗಳ ಆಭರಣಗಳನ್ನು ಆದರದಿಂದ ಸಿಂಗರಿಸುತ್ತಿರುವಾಗ ಅವಳು ಆನಂದದಿಂದ ಉಬ್ಬಿದಳು, ಕೊಬ್ಬಿದಳು (ಹೆಮ್ಮೆಪಡುತ್ತಿದ್ದಳು), ನಿಟ್ಟುಸಿರ ಧೂಪವನ್ನು ಹಾಕಿದಂತಾಗಿತ್ತು ! ೮೪. ಹೂಗೊಂಚಲು, ಹೊಸ ಉಡಿಗೆಗಳನ್ನು ಪ್ರೇಮದಿಂದ ಶಂಕರನಿಗೆ ಅಲಂಕ

ಉತ್ತಮ ಗುಣಗಣಭೂಷಣೆ
ಚಿತ್ತವಿಕಾಸಮನೆ ಪಡೆದು ಸಾತ್ತ್ವಿಕ ಭಾವೋ ।
ನ್ಮತ್ತೆ ನಗಪುತ್ರಿ ಮುದದಿಂ
ದಿತ್ತಳ್ ಶರ್ವಂಗೆ ಭಕ್ತಿಯಾರೋಗಣೆಯಂ ॥ ೮೫

ವ॥ ಇಂತು ಪಾರ್ವತಿ ಪಲವುಂ ಭೋಗಂಗಳಂ ರಾಗದಿಂ ರಾಜಮೌಳಿಗೊಲ್ದು ಪೂಜೆಯ ನೆವದಿಂ ನಿವೇದಿಸಿ ಸಂಪದಮನೋಲಗಿಪ ಸಿಂಗರದಂತೆ ಧರ್ಮಮಂ ಬಳೆಯಿಸುವ ಸಂಪಹದಂತೆ ಪುಣ್ಯಮಂ ಸೇವಿಪ ಧರ್ಮದಂತೆ ಭಕ್ತಿಯುಂ ಬಯಸುವ ಪುಣ್ಯದಂತೆ ಶಿವಜ್ಞಾನಮನೆಳಸುವ ಭಕ್ತಿಯಂತೆ ಮುಕ್ತಿಯುಂ ನಿಶ್ಚಯಿಪ ಶಿವಜ್ಞಾನದಂತೆ ಶಿವಸಂಗಮಂ ಬಯಸಿ ಮನ್ಮಥ ಮನೋರಥ ದುರ್ಲಭವಲ್ಲಭನಂ ನೋಡುವಾಗಳ್,

ಚಂ॥ ಪೊಸಜಡೆಯೊಳ್ ತೊಡಂಕಿ ನೊಸಲೊಳ್ ನಡೆಪಾಡಿ ಕಪೋಲಭಾಗದೊಳ್
ಪಸರಿಸಿ ಲೋಚನಂಗಳೊಳಮರ್ಚಿ ತದಾಸ್ಯದೊಳೊಂದಿ ಕಂಠದೊಳ್ ।
ಮಿಸುಗಿ ಭುಜಾಗ್ರದೊಳ್ ತೊಳಗಿ ವಕ್ಷದೊಳಾಳ್ದು ಕರಂಗಳೊಳ್ ವಿರಾ
ಜಿಸಿ ಪದದಲ್ಲಿ ಬಿಳ್ದುವು ಭವಾನಿಯ ಮಾನಿಯ ದೈನ್ಯದೃಷ್ಟಿಗಳ್ ॥ ೮೬

ರಿಸಿ ಅಂಬಿಕೆ, ನಗೆಮೊಗದ ಕಾಂತಿಯೆಂಬ ಆರತಿ ಬೆಳಗಿದಳು. ೮೫. ಉತ್ತಮ ಗುಣಗಳಿಂದ ಭೂಷಿತಳಾದ ಗಿರಿಸುತೆಯ ಮನಸ್ಸು ಪ್ರಸನ್ನವಾಗಿತ್ತು, ಸಾತ್ವಿಕಭಾವಗಳು ಅವಳ ಮನಸ್ಸಿನಲ್ಲಿ ಉಕ್ಕಿ ಬರುತ್ತಿದ್ದುದರಿಂದ ಭಾವೋನ್ಮಾದ ಸ್ಥಿತಿಯನ್ನು ಅವಳು ಮುಟ್ಟಿದ್ದಳು ಇಂಥ ಸ್ಥಿತಿಯಲ್ಲಿ ಅವಳು ಶರ್ವನಿಗೆ. ಭಕ್ತಿಯ ಆರೋಗಣೆ ಬಡಿಸಿದಳು. ವ॥ ಹೀಗೆ ಪಾರ್ವತಿಯು ಚಂದ್ರಮೌಳಿಗೆ ಒಲಿದು ಪೂಜೆಯ ನೆಪದಿಂದ ಅನೇಕ ಭೋಗಗಳನ್ನು ರಾಗದಿಂದ ಸಮರ್ಪಿಸಿ, ಸಂಪತ್ತನ್ನು ಓಲೈಸುವ ಶೃಂಗಾರದಂತೆ, ಧರ್ಮವನ್ನು ಬೆಳೆಸುವ ಸಂಪತ್ತಿನಂತೆ, ಪುಣ್ಯವನ್ನು ಸೇವಿಸುವ ಧರ್ಮದಂತೆ, ಭಕ್ತಿಯನ್ನು ಬಯಸುವ ಪುಣ್ಯದಂತೆ, ಶಿವಜ್ಞಾನವನ್ನು ಬಯಸುವ ಭಕ್ತಿಯಂತೆ, ಮುಕ್ತಿಯನ್ನು ನಿರ್ಧರಿಸುವ ಶಿವಜ್ಞಾನದಂತೆ ಶಿವಸಂಗವನ್ನು ಬಯಸಿ, ಮನ್ಮಥನ ಮನೋರಥಕ್ಕೆ ದೊರೆಯದೆ ಇರುವ ತನ್ನ ವಲ್ಲಭನನ್ನು ನೋಡಿದಳು. ೮೬. ಶಿವನಲ್ಲಿ ಅಭಿಮಾನಿ ಎನಿಸಿರುವ ಭವಾನಿಯ ದೈನ್ಯ ದೃಷ್ಟಿಗಳು ಮೊದಲು ಶಿವನ ಜಡೆಯಲ್ಲಿ ತೊಡಕಿ, ಹಣೆಯಲ್ಲಿ ನಡೆದಾಡಿ, ಕೆನ್ನೆಯಲ್ಲಿ ಹರಡಿ, ಕಣ್ಣುಗಳಲ್ಲಿ ಕೀಲಿಸಿ, ಮುಖವನ್ನು ಹೊಂದಿ, ಕಂಠದಲ್ಲಿ ಮಿಸುಗಿ (ಪ್ರಕಾಶಿಸಿ) ಭುಜಮೂಲದಲ್ಲಿ ಬೆಳಗಿ, ವಕ್ಷಸ್ಥಳದಲ್ಲಿ ಓಲಾಡಿ, ಕರಗಳಲ್ಲಿ ವಿರಾಜಿಸಿ ಕಡೆಗೆ ಶಿವನ ಪಾದಗಳಲ್ಲಿ ಬಿದ್ದವು. "ಸ್ಥಿತಾಃಕ್ಷಣಂ ಪಕ್ಷ್ಮಸುತಾಡಿತಾಧರಾಃ ಪಯೋಧರೋತ್ಸೇಧನಿಪಾತಚೂರ್ಣಿತಾಃ। ವಲೀಷುತಸ್ಯಾಃಸ್ಖಲಿತಾಃ ಪ್ರಪೇದಿರೇ ಚಿರೇಣನಾಭಿಂ ಪ್ರಥಮೋದಬಿಂದವಃ॥ (ಕು. ಸಂ. ಸರ್ಗ ೫–೨೪) ಎಂಬ ಮಹಾಕವಿಯ ಪದ್ಯದೊಡನೆ ಇದನ್ನು ಹೋಲಿಸಿರಿ. ಪಾರ್ವತಿಯು

ವ॥ ಇಂತು ಶರ್ವನ ಸರ್ವಾಂಗದೊಳ್ ನೋಟಂ ಮುಸುಂಕಿ ನೋಡಿ,

ಕಂ॥ ಬೆಮರ್ವಳ್ ಬೆರ್ಚುವಳುರ್ಬುವ
ಳಮರ್ವಳ್ ಪೆಱಸಾರ್ವಳಂಜಿ ನಿಲ್ವಳ್ ಸೋಂಕಲ್ ॥
ನಿಮಿರ್ವಳ್ ನೆನೆವಳ್ ಮುನಿವಳ್
ಸಮಸಲ್ವಳ್ ಗಿರಿಜೆ ಸೆಡೆದು ಸುಯ್ವಳ್ ಕಾಯ್ವಳ್ ॥ ೮೭

ಚಾರುತರ ಕಾಂತಿಮಯಸುಕು
ಮಾರಾವಯವಂಗಳಂ ನಿರೀಕ್ಷಿಸಿ ನಲಿವಳ್ ।
ತಾರಾಚಳನಾಥನ ಘನ
ವೈರಾಗ್ಯಕ್ಕಂಜಿ ನಡುಗಿ ಸಿಡಿಮಿಡಿಗೊಳ್ವಳ್ ॥ ೮೮

ವ॥ ಅಂತುಮಲ್ಲದೆ

ಮ॥ ಸ್ರ॥ ಶಿವನಂ ನೋಡುತ್ತೆ ಮೇನಾಸುತೆ ಮದನಸುಖಾಸಕ್ತಿಯಿಂ ಸುತ್ತುವಳ್ ಸೋಂ
ಕುವಳಾನಂದಾಶ್ರುವಂ ಸೂಸುವಳನುವಿಸುವಳ್ ತತ್ತಪಕ್ಕಂಜಿ ಹಿಮ್ಮೆ ।
ಟ್ಟುವಳಂತಂತಳ್ಕುವಳ್ ಬಳ್ಕುವಳದಟಲಿವಳ್ ಕೋಡುವಳ್ ಬಾಡುವಳ್ ಕುಂ
ದುವಳಾರ್ತಂಗೆಟ್ಟು ನಿಲ್ವಳ್ ನೆನೆದುರವಣಿಪಳ್ ಮುಂದಳಲ್ವಳ್ ಬಳಲ್ವಳ್ ॥ ೮೯

ವ॥ ಮತ್ತಮಾಗಳ್

ತಪೋಮಗ್ನಳಾಗಿದ್ದಾಗ ಮೊದಲ ಮಳೆ ಹನಿಗಳು ಕಣ್ಣಿವೆಗಳ ಮೇಲೆ ಕ್ಷಣಕಾಲ ನಿಂತು, ತುಟಿಗೆ ಸೋಂಕಿ, ಸ್ತನಗಳ ಮೇಲೆ ಬಿದ್ದು ಹುಡಿಯಾಗಿ ತ್ರಿವಳಿಗಳಲ್ಲಿ ನುಸುಳಿ ನಿಧಾನವಾಗಿ ನಾಭಿ ಸೇರಿದವು–ಎಂಬುದು ಪದ್ಯದ ಭಾವ. ವ || ಶಿವನ ಸರ್ವಾಂಗಗಳಲ್ಲಿಯೂ ಅವಳ ನೋಟ ಮುತ್ತಿತ್ತು, ಇದರಿಂದಾಗಿ ಅವಳು ೮೭. ಬೆವರುವಳು, ಬೆಚ್ಚುವಳು, ಉಬ್ಬುವಳು, ಹೆದರಿ ಪಕ್ಕಕ್ಕೆ ಸರಿದು ನಿಲ್ಲುವಳು, ಸೋಂಕಲು ಸೆಟೆದು ನಿಲ್ಲುವಳು, ನೆನೆವಳು, ಮುನಿವಳು, ಸಮಸಂದು ಗಿರಿಜೆ ಸೆಡೆದು ಬಿಸುಸುಯ್ವಳು, ಕಾಯುವಳು. ೮೮. ಪರಮೇಶ್ವರನ ಮನೋಹರ ಕಾಂತಿಮಯ ಸುಕೋಮಲವಾದ ಅವಯವಗಳನ್ನು ನೋಡಿ ಗಿರಿಜೆ ನಲಿವಳು, ಆದರೆ ಆ ಶಿವನ ಘನವೈರಾಗ್ಯಕ್ಕೆ ಹೆದರಿ ನಡುಗಿ ಸಿಡಿಮಿಡಿಗೊಳ್ಳುವಳು. ೮೯. ಮೇನಾದೇವಿಯ ಮಗಳಾದ ಪಾರ್ವತಿಯು ಶಿವನನ್ನು ನೋಡುತ್ತಾ ಮದನ ಸುಖಾಸಕ್ತಿಯಿಂದ ಪ್ರದಕ್ಷಿಣೆ ಮಾಡುವಳು. ಸೋಕುವಳು, ಆನಂದ ಬಾಷ್ಪಗಳನ್ನು ಸೂಸುವಳು, ಅನುವಿಸುವಳು, ಆ ತಪಸ್ಸಿಗೆ ಹೆದರಿ ಹಿಮ್ಮೆಟ್ಟುವಳು, ಹಾಗಾಗೇ ಅಳುಕುವಳು, ಬಳುಕುವಳು, ಅದಟು ಅಳಿವಳು, ಬಾಡಿ, ಕುಂದಿ, ಕಂಗೆಟ್ಟು ನಿಲ್ಲು

ಕಂ॥ ನಗುವಳ್ ನಗೆಯೊಳ್ ಕೌತುಕ
ಮೊಗೆಯೆ ನಿರೀಕ್ಷಿಸುವಳೀಕ್ಷಣದೊಳಗೆ ದೈನ್ಯಂ ।
ಮಿಗೆ ಭಾವಿಸುವಳ್ ಭಾವದೊ
ಳಗೆ ದೇವನ ಚೆಲ್ವನಬಲೆ ಸಲೆ ನಿಲೆ ನೆನೆವಳ್ ॥ ೯೦

ವ॥ ಇಂತು ನೋಳ್ಪರ ಕಣ್ಗೆ ಶೀತಳಮಯ ಸುಧಾರೋಚಿಗಳಂ ಬೀಱುವ ಚಂದ್ರಮನಂತೆ ಮುಟ್ಟುವರ ಮೆಯ್ಗೆ ತೀವ್ರಪ್ರತಾಪಮಂ ಕುಡುಪ ಸೂರ್ಯನಂತೆ ಪೊಗಳ್ವರ ನಾಲಿಗೆಗಮೃತದಂತೆ ಕೇಳ್ವರ ಕಿವಿಗೆ ಮಧುರವಾಣಿಯಂತೆ ನೆನೆವರ ಮನಕ್ಕೆ ನಿರುಪಾಧಿಕ ಜ್ಯೋತಿಯಂತೊಪ್ಪುತಿರ್ದ ರುದ್ರನ ಮನೋಹರ ಮೂರ್ತಿಯಂ ನೋಡಿ ನೋಡಿ ತಣಿಯದ ಸೋಂಕಿ ಸೋಂಕಿ ಸವೆಯದೆ ಪೊಗಳ್ದು ಪೊಗಳ್ದು ತೀಱದೆ ನೆನೆದು ನೆನೆದು ನೆಱೆಯದೆ ಸಡೆತಂದು ಪಾರ್ವತೀದೇವಿ ಪೊಚ್ಚ ಪೊಸಪೂಗಳನಚ್ಚರಿಮಿಗೆ ತಂದು ತಂದಂದಂದಿಂಗೆ ಚಂದ್ರಧರನಂ ಕಳಾನಿಧಿಯಂ ವಿಳಾಸದಿಂ ದಾರ್ತದಿಂ ಹತ್ತೆಸಾರ್ದು ಮತ್ತೆಮತ್ತೆ ಪೂಣದೆ,

ಕಂ॥ ಹರನಂ ಶಿವನಂ ಮೃಗಧರ
ಧರನಂ ಸುಸ್ನೇಹಮಡರೆ ನವನವ ಕುಸುಮೋ ।
ತ್ಕರದಿಂದೆ ನಚ್ಚಿ ಮಚ್ಚಿಯೆ
ಗಿರಿಜಾವಧುವರ್ಚಿಸುತ್ತುಮಿರ್ಪಿನಹುತ್ತಲ್ ॥ ೯೧

ವಳು, ನೆನೆದು ರಭಸಗೊಳ್ಳುವಳು ಅಳಲುಸಳು ಬಳಲುವಳು, ೯೦. ಗಿರಿಜೆ ನಗುವಳು, ನಗೆಯಲ್ಲಿಯೆ ಕುತೂಹಲವು ಉಕ್ಕಿಶಿವನನ್ನು ನೆಟ್ಟನೋಟದಿಂದ ನಿರೀಕ್ಷಿಸುವಳು, ಅದೇ ಕ್ಷಣದಲ್ಲಿ ದೈನ್ಯವು ಹೆಚ್ಚಿಭಾವಿಸುವಳು, ಆ ಭಾವದಲ್ಲಿ ದೇವನ ಚೆಲುವನ್ನು ನೆನೆವಳು. ವ॥ ರುದ್ರನ ಮನೋಹರ ಮೂರ್ತಿಯನ್ನು ಎಷ್ಟು ನೋಡಿದರೂ ಅವಳಿಗೆ ತಣಿವು ಹಿಂಗಲಿಲ್ಲ. ನೋಡುವರ ಕಣ್ಣಿಗೆ ಅದು ಚಂದ್ರನಂತೆ ಶೀತಳವಾದ ಸುಧಾರೋಚಿಗಳನ್ನು ಬೀರುತ್ತದೆ. ಮುಟ್ಟಿದರೆ ಸೂರ್ಯನಂತೆ ತೀವ್ರತಾಪವನ್ನುಂಟುಮಾಡುತ್ತದೆ. ಹೊಗಳುವವರ ನಾಲಗೆಗೆ ಅಮೃತದಂತೆ ಆಪ್ಯಾಯಮಾನವಾಗಿದೆ, ಕೇಳುವರ ಕಿವಿಗೆ ಮಧುರವಾಣಿಯಂತೆ, ನೆನೆವರ ಮನಸ್ಸಿಗೆ ಉಪಾಧಿಯಿಲ್ಲದ ಜ್ಯೋತಿಯಂತೆ ಒಪ್ಪುತ್ತಿದೆ. ಅಂಥ ರುದ್ರನ ಮೂರ್ತಿಯನ್ನು ನೋಡಿ ತಣಿಯಲಿಲ್ಲ, ಸೋಂಕಿಸೋಂಕಿ ಸವೆಯದೆ, ಹೊಗಳಿ ಹೊಗಳಿ ತೀರದೆ, ನೆನೆದು ನೆನೆದು ನೆರೆಯದೆ, ನಡೆತಂದು ಪಾರ್ವತಿ ಹೊಸ ಹೊಸ ಹೂಗಳನ್ನು ತಂದು ಪ್ರತಿದಿನವೂ ಶ್ರದ್ಧಾಭಕ್ತಿ ಪ್ರೇಮಗಳಿಂದ ಅರ್ಚಿಸುತ್ತಿದ್ದಳು. ೯೧. ಗಿರಿಜಾವಧುವು ಪರಶಿವನನ್ನು ಹೊಸಹೊಸ ಹೂಗಳನ್ನು ತಂದು ಅತ್ಯಂತ ಭಕ್ತಿ-ಪ್ರೇಮಗಳಿಂದ ಆರಾಧಿಸುತ್ತಿರುವಾಗ ಆ ಕಡೆ—

ಮ॥ ಪರಮ ಸ್ವಾಮಿಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನ ಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ತಂ ।
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನ ವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ॥ ೯೨

ಇದು ಸಮಸ್ತ ಸುರಾಸುರಮಕುಟ ಖಚಿತ
ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪುಂಜರಂಜಿತಚರಣ
ನೆನಿಪ ಪಂಪಾವಿರೂಪಾಕ್ಷ ಶ್ರೀಪಾದಕಮಲ
ಮಕರಂದ ಮಧುಕರಾಯಮಾಣ
ಸತ್ಕವೀಶ್ವರ ಹಂಪೆಯ
ಹರಿಹರದೇವ ವಿರಚಿತಮಪ್ಪ

ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ಪಾರ್ವತೀಯೌವನ ರಾತ್ರಿವಿಹಾರ ವರ್ಣನಂ
ಪಂಚಮಾಶ್ವಾಸಂ

## ಷಷ್ಠಾಶ್ವಾಸಂ

### ತಾರಕಾಸುರ ಯುದ್ಧವರ್ಣನಂ

ಕಂ॥ ಶ್ರೀಪತಿ ವಾಕ್ಪತಿ ಪೌಲೋ
ಮೀಪತಿ ಪೂಜಿತಪದದ್ವಯಂ ಸದ್ಭಕ್ತಿ ।
ಶ್ರೀಪದಮಂ ಕುಡುಗೆಮಗೆ ವಿ
ರೂಪಾಕ್ಷಂ ಭಾಸುರಂ ಭವಾನೀಭರ್ತಂ ॥ ೧

ಸಕಳೋರಗ ಸುರನರಮ
ಸ್ತಕಶೂಲನನಮಿತಲೋಕ ಪಾಲನ ತೀವ್ರ ।
ಪ್ರಕಟ ಯಶೋಲೋಲನ ತಾ
ರಕಾಸುರನ ಕೊರ್ವು ಪರ್ವಿತುರ್ವೀ ತಳಮಂ ॥ ೨

ವ॥ ಅಂತುಮಲ್ಲದೆ,

ಮ॥ ಸ್ರ॥ ಉರಗಾನೀಕಾಬ್ಧಿಮರ್ತ್ಯವ್ರಜಗಹನ ಸುರವ್ರಾತ ಧಾರಾಧರ ಪ್ರ
ಸ್ಫುರಿತೌರ್ವಂ ಪಾವಕಂ ಮರುತನೆನಿಸಿ ಕರಂ ಶೋಷಿಸುತ್ತಾವಗಂ ಸು ।
ಟ್ಟುರಿಪುತ್ತೆಳ್ಪುಟ್ಟುತುಂ ಪೆರ್ಚಿದನಸುರನವಂ ತಾರಕಂ ತೀವ್ರಕೋಪಾ
ಕರರೂಪಂ ಪ್ರಾಯಕಾಯಂ ಪ್ರಬಳ ಬಳಯುತಂ ಚಂಡಶೀಲಂ ವಿಶಾಲಂ ॥ ೩

ಮ॥ ಅರರೇ ಆತ್ಮಬಲಾಕ್ಷಿಮಧ್ಯವಿಮಲಶ್ರೀತಾರಕಂ ತಾರಕಂ
ಪರಭೂಪಾಲ ತಮಂಧ ಭೇದನಕರೋದ್ಯತ್ತಾರಕಂ ತಾರಕಂ ।

೧. ವಿಷ್ಣು–ಬ್ರಹ್ಮ ಮತ್ತು ರಾವಣ ಮುಂತಾದ ಸದ್ಭಕ್ತರಿಂದ ಪೂಜಿಸಿದ ಪಾದ ಕಮಲಗಳುಳ್ಳ ಭವಾನೀಪತಿಯಾದ ವಿರೂಪಾಕ್ಷನು ನಮಗೆ ಸದ್ಭಕ್ತಿಯನ್ನು ಅನುಗ್ರಹಿಸಲಿ. ೨. ಸ್ವರ್ಗ-ಮರ್ತ್ಯ-ಪಾತಾಳವಾಸಿಗಳಾದ ಸುರ–ನರ–ಉರಗ (ಸರ್ಪ)ರ ಮಸ್ತಕಕ್ಕೆ ಶೂಲದಂತಿರುವ, ಲೋಕಪಾಲರಿಂದ ವಂದಿಸಲ್ಪಟ್ಟು ಪ್ರಖ್ಯಾತನಾಗಿರುವ ತಾರಕಾಸುರನ ಹಮ್ಮು (ಅಹಂಕಾರ) ಮಿತಿಮೀರಿತ್ತು. ೩. ಉರಗ ಸಮೂಹವೆಂಬ ಅಬ್ಧಿ (ಸಮುದ್ರಕ್ಕೆ) ಔರ್ವ (ಬಡಬಾನಲ)ನಂತೆಯೂ, ಮರ್ತ್ಯ (ಮಾನವ)ರೆಂಬ ಕಾಡಿಗೆ ಕಿಚ್ಚಿನಂತೆಯೂ, ದೇವತಾಸಮೂಹವೆಂಬ ಮೇಘಕ್ಕೆ ಬಿರುಗಾಳಿಯಂತೆಯೂ ಇರುವ, ಕಡುಕೋಪಿಯೂ, ಯುವಕನೂ, ಬಲಿಷ್ಠನೂ ಆದ ತಾರಕನೆಂಬ ಅಸುರನು ಮೂರು ಲೋಕವನ್ನು ಯಾವಾಗಲೂ ಶೋಷಿಸಿ ಹಿಂಸಿಸುತ್ತಿದ್ದನು. ೪. ಓಹೋ ! ಆ ತಾರಕಾಸುರನ ಪ್ರಭಾವ ವೆಂತಹುದು ? ಅವನು ಆತ್ಮ ಬಲವೆಂಬ ಕಣ್ಣುಗಳ ಮಧ್ಯದಲ್ಲಿ ವಿಮಲ ಶ್ರೀತಾರಕೆ (ಕಣ್ಣುಗುಡ್ಡೆ) ಯಂತಿರುವವನು. ಶತ್ರುರಾಜರೆಂಬ ಕಗ್ಗತ್ತಲನ್ನು ಭೇದಿಸುವ ಕಿರಣ

ಸುರಸಂಘಾತಪತಾಕಿನೀ ಪ್ರಬಳವಾರ್ಧ್ಯುತ್ತಾರಕಂ ತಾರಕಂ
ನರನಾಗಾಮರಲೋಕಶೋಕಸರಣೀ ವಿಸ್ತಾರಕಂ ತಾರಕಂ ॥ ೪

ವ॥ ಎಂದು ಗಂಭೀರ ಪ್ರತಾಪಮಂ ತಳೆದು,

ಚಂ॥ ಧರಣಿಯನೊಕ್ಕಲಿಕ್ಕಿ ದಿಗಧೀಶರ ಗಂಟಲನೊತ್ತಿ ಮೆಟ್ಟಿ ಭೀ
ಕರ ಫಣಿಲೋಕಮಂ ಹಿಳಿದು ನಾಕಮನೋಡಿಸಿ ನಿಂದ ವೀರರಂ ।
ಧುರದೊಳೆ ತತ್ತಱಂದಱಿದು ತಳ್ಗಿಸುತಪ್ರತಿಮ ಪ್ರತಾಪಭಂ
ಗುರ ಭುವನತ್ರಯಂ ನೆಗಳ್ದನಕ್ರಮಕಾರಿ ಜಿತಾರಿ ತಾರಕಂ ॥ ೫

ವ॥ ಇಂತು ಜಗತ್ತ್ರಯಮಂ ನಿಜಪ್ರತಾಪದಿಂ ಕುಕ್ಕುಳಂಗುದಿಸುವ ವಿಕ್ರಮ ಶೀಲನಪ್ಪತಾರಕಾಸುರನುರವಣೆಯಂ ಸೈರಿಸಲಾಱದೆ ನಾಗರ್ಕಳುಂ ನರರುಂ ನಿರ್ಜರರುಂ ಕಿನ್ನರಸ್ತೋಮಮುಂ ಕಿಂಪುರುಷವ್ರಜಮುಂ ನೆರೆದು ಪರಿತಂದು ಮೇರುವಿನ ತಳ್ಪಲೊಳಿರ್ಪ ನಾರಾಯಣ,ವಾರಿಜಪುತ್ರ-ಪುರಂದರರ ಸಭಾನಿಳಯದ್ವಾರವಳಯದ ಮುಂದೆ ಮಂದೈಸಿ ಮುದವಳಿದು ಮದವುಡುಗಿ ಮೆದೆಗೆಡೆದು ಮುಂದುಗೆಟ್ಟು ಸಂದಣಿಸಿ ನಿಂದು,

ಚಂ॥ ನರತತಿ ನೊಂದಳಲ್ದು ಮೊಱೆಯೋಮೊಱೆಯೋ ನೆರೆದಲ್ಲಿಗಲ್ಲಿಗೊ
ತ್ತರಿಸಿ ನಿಳಿಂಪವೀಥಿಯವಿಧಾಯವಿಧಾ ಉರಗಪ್ರತಾನವಮಾ ।

ಗಳುಳ್ಳವನು. ದೇವತಾ ಸಮೂಹಗಳೆಂಬ ಸೈನ್ಯಸಾಗರವನ್ನು ದಾಟತಕ್ಕವನು, ನರ–ನಾಗ ಮತ್ತು ಸುರರ ದುಃಖವನ್ನು ಹೆಚ್ಚಿಸತಕ್ಕವನು ಈ ತಾರಕಾಸುರ ! ೫. ಈ ತಾರಕನು ಭೂಲೋಕದ ಜನರನ್ನು ಮಟ್ಟಹಾಕಿದ, ಅಷ್ಟದಿಕ್ಪಾಲಕರು ಉಸಿರೆತ್ತದಂತೆ ಅಂಕೆಯಲ್ಲಿಟ್ಟ, ಭಯಂಕರವಾದ ಸರ್ಪಗಳನ್ನೆಲ್ಲ ಹಿಂಡಿ ಹಿಪ್ಪೆ ಮಾಡಿದ. ಇವನ ಪ್ರತಾಪಕ್ಕೆ ಹೆದರಿ ದೇವತೆಗಳು ಓಡಿದರು, ಎದಿರುಬಿದ್ದ ವೀರರನ್ನು ಯುದ್ಧದಲ್ಲಿ ತತ್ತರಿಸುವಂತೆ ತರಿದು, ತನ್ನ ಎಣೆಯಿಲ್ಲದ ಪ್ರತಾಪದಿಂದ ಮೂರು ಲೋಕದವರನ್ನೂ ಭಂಗಗೊಳಿಸಿ ಶತ್ರು ಸಂಹಾರಕನಾದ ತಾರಕನು ಅಕ್ರಮಕಾರಿ ಎಂದು ಪ್ರಸಿದ್ಧನಾದನು. ವ ॥ ಹೀಗೆ ಮೂರು ಲೋಕಗಳನ್ನು ತನ್ನ ಪ್ರತಾಪದಿಂದ ಕುದಿಸುತ್ತಿರುವ, ಮಹಾಪರಾಕ್ರಮಶಾಲಿಯಾದ ತಾರಕಾಸುರನ ಪೀಡೆಯನ್ನು ತಡೆಯಲಾರದೆ ನಾಗ–ನರ–ಸುರ–ಕಿನ್ನರ–ಕಿಂಪುರುಷರೆಂಬ ಎಲ್ಲ ಜನರೂ ಒಟ್ಟುಗೂಡಿ ಮೇರುಪರ್ವತದ ತಪ್ಪಲಲ್ಲಿರುವ ವಿಷ್ಣು–ಬ್ರಹ್ಮ ಮತ್ತು ದೇವೇಂದ್ರರ ಸಭಾ ದ್ವಾರಗಳ ಮುಂದೆ ಒಟ್ಟುಗೂಡಿ ದೀನವದನರಾಗಿ, ಸೊಕ್ಕು ಮುರಿದು, ದಿಕ್ಕೂತಿಳಿಯದೆ ಚಿಂತಾಕ್ರಾಂತರಾಗಿದ್ದರು. ೬. ಮೇರು ಪರ್ವತದ ಸಾನು ಪ್ರದೇಶ (ಕಿಬ್ಬದಿ)ದಲ್ಲಿ ನರರು ನೊಂದು ದುಃಖಿತರಾಗಿ ಮೊರೆಯೋ ! ಮೊರೆಯೋ !

ತುರಿಸಿ ಬಿಗುರ್ತು ನಿಂದು ಶಿವಧೋಶಿವಧೋ ಎನುತುಂ ಸುರುಳ್ದು ಸೂ
ಗುರಿಸಿ ತೆರಳ್ದುತಲ್ಲಣಿಸಿ ಮಲ್ಲಳಿಗೊಂಡುದು ಮೇರುಭಾಗದೊಳ್ ॥ ೬

ಚಂ॥ ಮೊಱೆಯಿಡೆ ಕೇಳ್ದು ಚಕ್ರಧರನುಂ ಜಳಜೋದ್ಭವನುಂ ಬಲಾರಿಯುಂ
ಮಱುಗಿಸುರುಳ್ದಲಲ್ದು ಕರೆಯೆಲ್ಲಿಯದೀ ಘನ ಶೋಕವಾವನಿಂ ।
ತುಱುಗಿದುದಾವನಿಂದೊದವಿತಾವನಿನುರ್ವಿದುದಾವನಿಂದೆಯು
ಳ್ಕಱಿದುದಿದಾವನಿಂದಲರ್ದುದಾವನಿನೊತ್ತರಿಸಿತ್ತುಕೌತುಕಂ ॥ ೭

ಕಂ॥ ಎಂದೆಂದು ನುಡಿಯುತಿರ್ಪಿನ
ಮಂದೆಯ್ತಂದೊಟ್ಟಯೊಱಲಿ ಮೆದೆಗೆಡೆಯುತ್ತುಂ ।
ಸಂದಣಿಸುತ್ತುರವಣಿಸು
ತ್ತುಂ ದಡದಡಿಸುತ್ತೆ ಸುರನರೋರಗನಿಕರಂ॥ ೮

ಸುರಿತರ್ಪ ಕಣ್ಣನೀರಿಂ
ಕರಾಗ್ರದೊಳ್ ನೆಗೆದುತೋರ್ಪ ಪುಲ್ಲಿಂ ಮುಖದೊಳ್ ।
ತರದಿಂ ಪೊಣ್ಮುವ ಮೊಱೆಯಿಂ
ನೆರೆದೊಱಲುತ್ತಳುರ್ವ ತಾಪದಿಂದಖಿಳಜನಂ ॥ ೯

ವ॥ ಅಂತು ಬಂದಳಲ್ದುನಿಂದು

ಉ॥ ಕಾವುದು ವಿಷ್ಣು ಕಾವುದರವಿಂದ ತನೂಭವ ಕಾವುದಿಂದ್ರ ಸದ್
ಭಾವದೊಳೆಮ್ಮನೀಕ್ಷಿಪುದು ತಾರಕನಿಂದುಱೆನೊಂದು ಶೋಕದಿಂ ।

(ಕಾಪಾಡಿ !) ಎಂದು ಹುಯ್ಯಲಿಡುತ್ತಿದ್ದರು. ಅಲ್ಲಲ್ಲಿ ನೆರೆದ ದೇವತಾ ಸಮೂಹಗಳು ಅವಿಧಾ ! ಅವಿಧಾ ! (ರಕ್ಷಿಸಿರಿ) ಎಂದು ಬೊಬ್ಬೆ ಹಾಕುತ್ತಿದ್ದರು. ನಾಗರುಗಳು ಆತುರದಿಂದ ಬಿಗಿದುನಿಂತು ಶಿವಧೋ ! ಶಿವಧೋ ! (ಆರ್ತಧ್ವನಿ) ಎಂದು ತಲ್ಲಣಿಸಿದ್ದರು. ೭. ಹೀಗೆ ಸುರ–ನರ–ನಾಗಲೋಕದ ಜೀವಿಗಳು ಮೊರೆಯಿಡುತ್ತಿರಲು ಕೇಳಿ ವಿಷ್ಣು–ಬ್ರಹ್ಮ ಮತ್ತು ದೇವೇಂದ್ರರು ಮರುಗಿದರು. ಈ ಕೂಗು ಎಲ್ಲಿಯದು ? ಈ ದುಃಖ ಯಾರಿಂದ ಒದಗಿತು ? ಇದೆಲ್ಲ ಕೌತುಕಕ್ಕೆ ಕಾರಣರು ಯಾರು ? ಎಂದು ಯೋಚಿಸುತ್ತಿರುವಾಗ ೮. ಹೀಗೆ ನುಡಿಯುತ್ತಿರುವಷ್ಟರಲ್ಲಿ ಸುರ–ನರ–ಉರಗ ಸಮೂಹವು ಮಂದೆ ಮಂದೆಯಾಗಿ ಒರಲುತ್ತಾ ಬಂದು ಆ ದೇವಸಭೆಯ ಮುಂದೆ ದಿಂಡುಗೆಡೆದುಬಿತ್ತು. ೯. ಅವರ ಕಣ್ಣುಗಳಲ್ಲಿ ನೀರು ಧಾರಾಕಾರವಾಗಿ ಸುರಿಯುತ್ತಿದೆ. ಕೈಯಲ್ಲಿ ಅಸಹಾಯ ಸೂಚಕವಾದ ಹುಲ್ಲುಕಡ್ಡಿ ಹಿಡಿದ್ದಾರೆ. ಮುಖದಲ್ಲಿ ಮೊರೆಯಿಡುತ್ತಿದ್ದಾರೆ. ಹೀಗೆ ಎಲ್ಲರೂ ಅಲ್ಲಿ ನೆರೆದು ದುಃಖಾಕ್ರಾಂತವಾಗಿ ೧೦. ನಾರಾಯಣ, ಕಾಪಾಡು ; ಕಮಲಜ, ಕಾಪಾಡು ; ದೇವೇಂದ್ರನೆ ರಕ್ಷಿಸು ; ಕರುಣೆಯ ಕಣ್ಣಿಂದ ನಮ್ಮನ್ನು ನೋಡಿರಿ;

ಶೀನಿದೆವಾವುದಿನ್ನೆಮಗೆ ಜೀವನಮಾವುದು ನಿಲ್ವತಾಣ ವಿ
ನ್ನಾವುದು ರಕ್ಷಣಾರ್ಥಕರವಾವುದು ಸತ್ಪಥವಾವುದಾಶ್ರಯಂ ॥ ೧೦

ವ॥ ಅಂತುಮಲ್ಲದೆ,

ಚಂ॥ ಧರೆಗೆಸೆದತ್ತು ತಾರಕನ ದುರ್ಗತಿ ತಾರಕನೇಳ್ಗೆ ತಾರಕಾ
ಸುರನ ಪೊಡರ್ಪು ತಾರಕನ ಮತ್ತತೆ ತಾರಕನಾಜ್ಞೆ ತಾತಕಾ।
ಸುರನ ತೆರಳ್ಕೆ ತಾರಕನ ತೀವ್ರತೆ ತಾರಕನುರ್ಕು ತಾರಕಾ
ಸುರನ ನಿಮಿರ್ಕೆ ತಾರಕನ ಮೂರ್ಖತೆ ತಾರಕನುತ್ಕಟಕ್ರಮಂ ॥ ೧೧

ಕಂ॥ ತಾರಕನಂ ಗುರುತರ ಭೂ
ಭಾರಕನಂ ಸಕಳದುರಿತಪೂರಿತಪಾಪ ।
ಪ್ರೇರಕನಂ ದುರ್ಗುಣವಿ
ಸ್ತಾರಕನಂ ಬಾರಿಪನ್ನರಾರ್ ಧಾರಿಣಿಯೊಳ್ ॥ ೧೨

ವ॥ ಎಂದು ಬಿನ್ನವಿಸಿದ ಪನ್ನಗನರಸುರರ ಸಂತಾಪಮನೆಂತಾನುಂ ಕೇಳಲಾಱದೆ ಸಂತೈಸಿ, ಮಂತ್ರಾಳೋಚನೆಯಂ ಮುಂದುಗೊಂಡು ಹರ್ಯಜ ಪುರಂಧರರ್ ಪರಿಮಿತಾಸ್ಥಾನರಾಗಿ

ಚಂ॥ ಪುರಹರನಿರ್ದಹಂ ನಿರುಪಮಾ ನತಪೋಮಯನಾಗಿ ಲೋಕವೃ
ತ್ತರಿಸಿ ತೆರಳ್ದು ಪುಯ್ಯಲಿಡುತಿರ್ದುದು ಸೈರಿಸಬಾರದಾತ್ತ ಸಂ ।
ಗರ ವಿಜಯೋರ್ಜಿತ ಪ್ರಮುಖರಿಲ್ಲ ವಿಚಾರಿಸೆ ವೀರತಾರಕಾ
ಸುರನತುಳಪ್ರತಾಪನಿಧಿ ಕಾಳೆಗಮಿಾಪದದೊಳ್ ನಿರರ್ಥಕಂ ॥ ೧೩

ತಾರಕಾಸುರನಿಂದ ಬಹಳವಾಗಿ ನೊಂದಿದ್ದೇವೆ. ಮುಂದೆ ನಮ್ಮ ಜೀವನವೇನು ? ನಾವು ನಿಂತುಕೊಳ್ಳುವ ನೆಲೆ ಎಲ್ಲಿ ? ನಮಗೆ ರಕ್ಷಣೆಯೆಲ್ಲಿ ? ನಮಗೆ ಒಳ್ಳೆದಾರಿ ಯಾವುದು ? ತೋರಿರಿ. ೧೧. ತಾರಕಾಸುರನ ದುರ್ಗತಿ, ಅವನ ಏಳ್ಗೆ, ಅವನ ಪರಾಕ್ರಮ, ಅವನ ಅಹಂಕಾರ, ಅವನ ಆಜ್ಞೆ, ಅವನ ಧಾಳಿ, ಅವನ ತೀಕ್ಷ್ಣತೆ, ಅವನ ಉತ್ಸಾಹ ಅವನ ದೊಡ್ಡಸ್ತಿಕೆ, ಅವನ ಮೂರ್ಖತನ, ಅವನ ಮೇರೆ ಮೀರಿದ ನಡವಳಿಕೆಗಳಿಗೆ ಎದುರಿಲ್ಲ. ೧೨. ಆ ತಾರಕಾಸುಸನ ಪಾಪಕೃತ್ಯಗಳು ಭೂಮಿಗೆ ಭಾರವಾಗಿವೆ. ಅವನು ಸಕಲ ದುರಿತ ಪೂರ್ಣನಾದ ಪಾಪಿಷ್ಠ, ಪಾಪಕಾರ್ಯ ಪ್ರೇರಕನು ಅವನೇ. ದುರ್ಗುಣಗಳನ್ನು ಹರಡುವ ಅವನನ್ನು ಎದುರಿಸುವರಾರು ? ವ ॥ ಹೀಗೆ ವಿಜ್ಞಾಪಿಸಿದ ಸುರ–ನರ–ಪನ್ನಗರ ಸಂತಾಪ ವನ್ನು ಕೇಳಲಾರದೆ ಅವರನ್ನು ಸಂತೈಸಿ, ಹರಿ–ಅಜ–ಪುರಂದರರು ಏಕಾಂತದಲ್ಲಿ ಯೋಚಿ ಸಲು ಸೇರಿದರು. ೧೩. ಪರಮೇಶ್ವರನು ಅನುಪಮ ತಪೋಮಗ್ನನಾಗಿದ್ದಾನೆ. ಲೋಕ ಗಳ ಜನವೆಲ್ಲ ತಲ್ಲಣಗೊಂಡು ಹುಯ್ಯಲಿಡುತ್ತಿದೆ ; ಅದು ಸೈರಿಸಲು ಸಾಧ್ಯವಿಲ್ಲವಾಗಿದೆ.

ಕಂ॥ ಸುರ ಗುರುವಂ ಕಳಿಪುವುದಾ
ದರದಿಂ ಸಂಧಾನಮಂ ನಿಮಿರ್ಚುವುದವನಿ।
ರ್ಪಿರವಂ ನೋಡುವುದಲ್ಲದೊ
ಡರವರಿಸದೆ ಕಾದುವುದು ದಿಟಕ್ಕಿದು ಮಂತ್ರಂ॥ ೧೪

ವ॥ ಎಂದು ನಾರಾಯಣ–ನೀರಜಭವ-ನಾಕಪತಿಗಳೇಕಚಿತ್ತರಾಗಿ

ಕಂ॥ ಶೌರ್ಯಮದೀಪೊಳ್ತಲ್ಲಂ
ವೀರ್ಯಾಧಿಪನೆನಿಪ ತಾರಕನ ಸಂಧಾನಂ॥
ಕಾರ್ಯಮಿದೆನುತಂ ತ್ರಿದಶಾ
ಚಾರ್ಯನ ಮುಖಮಂ ನಿರೀಕ್ಷಿಸುತ್ತಿಂತೆಂದರ್॥ ೧೫

ಸಕಳಕಳಾ ಪೂರಿತಮನ
ನಕಳಂಕಚರಿತ್ರನಮರಗುರು ನೀಂ ಘನಸಾ।
ತ್ತ್ವಿಕನದು ಕಾರಣದಿಂ ತಾ
ರಕನಲ್ಲಿಗೆ ಪೋಪುದೊಲ್ದು ಮಾಳ್ಪುದು ನಯಮಂ॥ ೧೬

ವಿನಯಮನಾಡುವುದಾಳೋ
ಚನೆಗೆಯ್ವುದು ಚಿತ್ತದೊಳಗನಾರಯ್ವುದು ನೀ।
ನನುಕೂಲನಂತೆ ಪೊರ್ದುವು
ದನವದ್ಯಂ ಸಾಮದಿಂ ಮರಳ್ಚುವುದವನಂ॥ ೧೭

ವೀರ ತಾರಕಾಸುರನು ಅತುಲಪ್ರತಾಪನಿಧಿ, ಅವನೊಡನೆ ಕಾದಿ ಗೆಲ್ಲುವರಾರೂ ಇಲ್ಲ, ಈ ಸ್ಥಿತಿಯಲ್ಲಿ ಅವನೊಡನೆ ಯುದ್ಧ ಮಾಡುವುದು ನಿರರ್ಥಕ. ೧೪. ದೇವ ಗುರುವಾದ ಬೃಹಸ್ಪತಿಯನ್ನು ಅವನಲ್ಲಿಗೆ ಕಳುಹಿಸಿ ಸಂಧಾನವನ್ನು ಏರ್ಪಡಿಸಬೇಕು, ಅವನ ಸ್ಥಿತಿ ಗತಿಗಳನ್ನು ಗಮನಿಸಬೇಕು. ಇಲ್ಲದಿದ್ದರೆ ಹಿಂದುಮುಂದು ನೋಡದೆ ಕಾದಬೇಕು. ಸಧ್ಯಕ್ಕೆ ಇದಿಷ್ಟೆ ನಮಗಿರುವ ದಾರಿ. ೧೫. ಶೌರ್ಯವನ್ನು ತೋರಿಸಲು ಇದು ಸಮಯ ವಲ್ಲ. ಪರಾಕ್ರಮಶಾಲಿಯಾದ ತಾರಕನೊಡನೆ ಸಂಧಾನ ನಡೆಸುವುದೇ ಸರಿ! ಎಂದು ಅವ ರೆಲ್ಲ ಬೃಹಸ್ಪತಿಯ ಮುಖವನ್ನು ನೋಡಿದರು. ೧೬. "ಎಲೈ ಬೃಹಸ್ಪತಿಯೆ, ಸಕಲ ಕಲಾಪೂರ್ಣನಾದವನು, ನಿರ್ಮಲ ಚಾರಿತ್ರವುಳ್ಳವನು, ಮೇಲಾಗಿ ದೇವಗುರು, ಸಾತ್ತ್ವಿಕ ಸ್ವಭಾವದವನು; ಆದ್ದರಿಂದ ನೀನು ತಾರಕಾಸುರನ ಬಳಿಗೆ ಹೋಗಿ ಸಂಧಾನ ಮಾಡು! ೧೭. ಶತ್ರುವಿನೊಡನೆ ರಾಜನೀತಿಯನ್ನು ಅನುಸರಿಸಿ ಸಂಧಾನ ನಡೆಸುವುದು. ಆಲೋಚಿಸ ಬೇಕು. ವಿಚಾರಮಾಡಬೇಕು. ಅನುಕೂಲನಂತೆ ಅವನನ್ನು ಸೇರಿ ಸಾಮೋಪಾಯ

ಕಂ॥ ಅದು ಸಲ್ಲದೊಡಾತನ ನೇ
ಹದ ಗೋತ್ರಸುಮಿತ್ರ ರಾಜಪುತ್ರ ಸಚಿವ ಸಂ।
ಘದ ಕಿವಿಗೇನಾನುಮನೀ
ವುದನಾಡುತೆ ಭೇದದಿಂ ಕಳಲ್ಚುವುದವನಂ ॥ ೧೮

ಆ ನಯವಾಗದೊಡಸುರಂ
ಗಾನತವಚನಾಗಿ ಬಲ್ಪುಗುಂದದೆ ಬಯಸಿ।
ತ್ತೇನೆಂದುಮನನುಸರಿಸುವ
ದಾನದೊಳಂ ಸಂತವಿಡುವುದಾತನ ಮನಮಂ ॥ ೧೯

ಈ ಪೇಳ್ದಂದಮನೊಲ್ಲದೆ
ಚಾಪಳವೃತ್ತಿಯೊಳೆ ಮೀಱಿ ನುಡಿದೊಡೆ ಸಮರ।
ವ್ಯಾಪಾರದಲ್ಲಿ ಕಾಣ್ಪಂ
ಕೋಪಾವಿಷ್ಟಪ್ರಚಂಡಕ್ರಮಮಂ ॥ ೨೦

ವ॥ ಎಂದು ರಾಜೀವ ಸಂಭವಾದಿಗಳೋಜೆಯಿಂ ರಾಜನೀತಿಯಂ ಕಲ್ಪಿಸಿ ಕಳಿಪೆ,

ಮ॥ ಸ್ರ॥ ಭರದಿಂ ಬೀಳ್ಕೊಂಡು ವಾಚಸ್ಪತಿ ಗಮನವಶಂ ಪುಷ್ಪಕಾರೂಢಕಾಯಂ
ಸ್ಥಿರಚಿತ್ತಂ ಸರ್ವಕಾರ್ಯಸ್ಥಿತ ಪರಿಣತನಜ್ಞಾನಮೇಘಾನಿಳಂ ಭಾ।
ಸುರತೇಜಂ ರಾಜಪೂಜ್ಯಂ ನುತಸಕಳಕಳಾಮಾರ್ಗಸಂಗಂ ಸುಖಾಂಗಂ
ಹರಪಾದಾರಾಧಕಂ ತಾರಕನ ನಗರಿಯಂ ಪೊಕ್ಕನುತ್ಸಾಹದಿಂದಂ ॥ ೨೧

ದಿಂದ ಅವನು ಯುದ್ಧ ಕೈಬಿಡುವಂತೆ ಮಾಡಬೇಕು. ೧೮. ಹಾಗಿಲ್ಲದಿದ್ದರೆ ನನುಗೆ ಆಪ್ತರೂ, ವಂಶೀಯರೂ, ಒಳ್ಳೆಮಿತ್ರರೂ, ರಾಜಪುತ್ರ ಇಲ್ಲವೆ ಸಚಿವರಲ್ಲಿ ಏನಾದರೂ ಕೊಡುವುದಾಗಿ ಪ್ರಸ್ತಾಪಿಸುತ್ತಾ ಭೇದೋಪಾಯದಿಂದ ಅವನನ್ನು ಯುದ್ಧವಿಮುಖನನ್ನಾಗಿ ಮಾಡಬೇಕು. ೧೯. ಆ ನೀತಿಯನ್ನು ಅವನು ಒಪ್ಪದಿದ್ದಲ್ಲಿ ಮಾತಿನಲ್ಲಿ ಸಿಕ್ಕಿ ಬೀಳದೆ ಎದೆಗುಂದದೆ ಅವನ ಇಂಗಿತವೇನು ? ಅವನು ಏನನ್ನು ಬಯಸುವನು ಎಂಬುದನ್ನು ಅರಿತು ದಾನೋಪಾಯದಿಂದ ಆತನ ಮನಸ್ಸನ್ನು ಸಮಾಧಾನಗೊಳಿಸಬೇಕು. ೨೦. ಈ ಮೇಲೆ ಹೇಳಿದ ಕ್ರಮವನ್ನು ಅವನು ಒಪ್ಪದೆ ಚಪಲವೃತ್ತಿಯಿಂದ ಮೀರಿ ನುಡಿದದ್ದಾದರೆ ಆಗ ಯುದ್ಧದಲ್ಲಿಯೇ ಅವನನ್ನು ಎದುರಿಸೋಣ. ವ॥ ಹೀಗೆ ಬ್ರಹ್ಮ ಮೊದಲಾದವರು ದಿಟ್ಟತನದಿಂದ ರಾಜನೀತಿಯನ್ನು ವಿವರಿಸಿ ದೇವಗುರುವನ್ನು ತಾರಕಾಸುರನಲ್ಲಿಗೆ ಕಳುಹಿಸಿದರು. ೨೧. ವಾಚಸ್ಪತಿಯು ದೇವ ಪ್ರಮುಖರನ್ನು ಬೀಳ್ಕೊಂಡು ಪುಷ್ಪಕವಿಮಾನವನ್ನೇರಿದನು. ಆತ ಕಾರ್ಯಸಾಧನೆಯಲ್ಲಿ ಪರಿಣತ, ಮಹಾತೇಜಸ್ವಿ, ರಾಜಪೂಜ್ಯ, ಸಕಲ ಕಲಾಮಾರ್ಗಗಳನ್ನು ಬಲ್ಲವ, ಮೇಲಾಗಿ ಪರಮ ಶಿವಭಕ್ತ. ಆದ್ದರಿಂದಲೇ ಅವನು ಉತ್ಸಾಹ

ವ॥ ಅಂತು ಪೊಕ್ಕು ಪುರವೀಥಿಯಂ ನಿರೀಕ್ಷಿಸುತ್ತುಂ ನೂತನ ನಿಕೇತನಯೂಥಕ್ಕೆ ಕೌತುಕ ಚಿತ್ತನಾಗಿ

ಉ॥ ಬಂದು ವಿಮಾನದಿಂದಿಳಿದು ರಾಜಗೃಹಪ್ರತಿಹಾರದೇಶದೊಳ್
ನಿಂದು ಸುರೇಂದ್ರಮಂತ್ರಿ ನಡೆತಂದನೆನಿಪ್ಪುದನಂದು ಪೇಳಿಸಾ ।
ರ್ತಂದು ಕವಾಟಮಂ ತೆಱೆಯೆ ಕಂಡನನಂತಸಮುದ್ಭಟಾವಳೀ
ವಂದಿತಪಾದಪದ್ಮಯುಗರಾಜಿತನಂ ಘನತಾರಕಾಖ್ಯನಂ ॥ ೨೨

ಕಂ॥ ಕಂಡುಪಚರಿಸಿದೊಡಸುರಂ
ಕೊಂಡಾಡುತ್ತುನ್ನತಾಸನಮನೀಯುತ್ತಾ ।
ಖಂಡಲಮಂತ್ರಿಯನಸುಹೃ
ನ್ಮಂಡಲ ರವಿರಾಹುಸನ್ನಿಭಂ ಬೆಸಗೊಂಡಂ ॥ ೨೩

ಸುರಪತಿಗೆ ಕುಶಲಮೇ ಪಂ
ಕರುಹಭವಂ ಕ್ಷೇಮಿಯೇ ಸರೋರುಹನಾಭಂ ।
ಸ್ಥಿರನೇ ನೀವಿಂತಿಲ್ಲಿಗೆ
ಬರವೇನೆಂದಱಿಪುವರ್ಥವಾವುದು ಕಜ್ಜಂ ॥ ೨೪

ಎನೆ ಸುರಗುರುವೆಂದಂ ನಾ
ಗನಿಕರಮುಂ ಮರ್ತ್ಯನಿಕರಮುಂ ತರದಿಂ ದೇ ॥
ವನಿಕರಮುಂ ನಿಮ್ಮೊಳಿಗ
ಮನೆ ಭರದಿಂ ಪುಯ್ಯಲಿಕ್ಕೆ ಕಳುಪಿದರೆನ್ನಂ ॥ ೨೫

ದಿಂದ ತಾರಕನ ರಾಜಧಾನಿಯನ್ನು ಸೇರಿದನು. ೨೨. ಬೃಹಸ್ಪತಿಯು ಅಲ್ಲಿಂದ ತಾರಕನ ರಾಜಧಾನಿಗೆ ಬಂದು ವಿಮಾನದಿಂದ ಇಳಿದನು, ಪ್ರತಿಹಾರ ಪ್ರದೇಶದಲ್ಲಿ ನಿಂತು "ಸುರೇಂದ್ರ ಮಂತ್ರಿಯು ಬಂದಿರುವ"ನೆಂದು ಹೇಳಿಕಳಿಸಿದನು. ರಾಜಸಭಾ ಭವನದ ಬಾಗಿಲು ತೆರೆಯಿತು. ಆಗ ಅವನು ಅನಂತ ಭಟರು ವಂದಿಸುತ್ತಿದ್ದ ಪಾದಕಮಲವುಳ್ಳ ತಾರಕನನ್ನು ಕಂಡನು. ೨೩. ಕಂಡು ಕುಶಲಪ್ರಶ್ನೆ ಮಾಡಿದಮೇಲೆ ಅಸುರನು ವಾಚಸ್ಪತಿಯನ್ನು ಕೊಂಡಾಡಿ ಉನ್ನತಾಸನವನ್ನು ಇತ್ತು, ಶತ್ರುಮಂಡಲವೆಂಬ ರವಿಗೆ ರಾಹುವಿನಂತಿರುವ ತಾರಕ ಬಂದ ಕಾರ್ಯವೇನೆಂದು ಬೆಸಗೊಂಡನು. ೨೪. ಸುರಪತಿಗೆ ಕುಶಲವೆ ? ಕಮಲಭವ (ಬ್ರಹ್ಮ)ನಿಗೆ ಕ್ಷೇಮವೆ ? ಕಮಲನಾಭ (ವಿಷ್ಣು) ಸ್ಥಿರವಾಗಿರುವನೆ ? ನೀವು ಇಲ್ಲಿಗೆ ಬಂದ ಕಾರಣವೇನು ? ಬಂದುದಕ್ಕೆ ಪ್ರಯೋಜನವಾವುದು ? ಏನು ಕೆಲಸ ಎಂದು ತಾರಕ ಪ್ರಶ್ನಿಸಿದ. ೨೫ ತಾರಕನ ಪ್ರಶ್ನೆಗೆ ಬೃಹಸ್ಪತಿ ಹೀಗೆ ಉತ್ತರಿಸಿದ–ನಾಗನಿಕರ–ಮರ್ತ್ಯನಿಕರ ಮತ್ತು ದೇವ ನಿಕರವೆಲ್ಲವೂ ನಿಮ್ಮ ಉಪದ್ರವನ್ನು ತಡೆಯಲಾರದೆ ಮೊರೆ

ಮ॥ ಸ್ರ॥ ಬಿದಿಯುಂ ದೈತ್ಯಾರಿಯುಂ ವಜ್ರಧರನುಮೆನಿಪೀ ಮೂವರುಂ ಕೂಡಿ ಮೂಲೋ
ಕದ ಶೋಕಾನೀಕಮಂ ಕೇಳ್ದತಿಕೃಪೆ ಮನದೊಳ್ ಪುಟ್ಟಿ ನಿನ್ನಲ್ಲಿಗೆನ್ನಂ ।
ಪದೆಪಿಂದಂ ಪೋಗವೇಳ್ದಟ್ಟಿದರದುವೆ ನಿಮಿತ್ತಂ ದಿಟಂ ಬಂದೆನೀ ಕಾ
ರ್ಯದ ಭಾರಂ ನಿನ್ನದೆಂತು ನಿನಗೆ ಧುರದೊಳಾರ್ ಪಾಟಿ ಪೇಳ್ ದೈತ್ಯರಾಜಾ ॥ ೨೬

ಕಂ॥ ವರಗಂಭೀರಂ ಧೀರಂ
ಪರಸೈನ್ಯಾರಣ್ಯದಾವನೆನಿಸಿದ ನಿನಗೊಂ ।
ದರಿದುಂಟೆ ಪೇಳೆನುತ್ತುಂ
ಸುರಗುರು ಮಿಗೆ ಪೊಗಳೆ ತಾರಕಂ ನಗುತೆಂದಂ ॥ ೨೭

ನಯಮಿಂತೇಕೆ ಬೃಹಸ್ಪತಿ
ಜಯಮಂ ಮುಂತಿಟ್ಟು ಬಂದವಂಗೆನಗತಿ ನಿ ।
ಶ್ಚಯಬುದ್ಧಿಯಿಂದೆ ಮೇಲತಿ
ಶಯಸಂಗರವಿಕ್ರಮಂಗಳುಳ್ಳೊಡೆ ಪೇಳಾ ॥ ೨೮

ವ॥ ಎಂದು ತಾರಕಂ ನಯಮನೊಲ್ಲದೆ ನಿರಾಕರಿಸಿ ನುಡಿಯೆ ಸುರಗುರುವಿಂತೆಂದಂ,

ಮ॥ ಸ್ರ॥ ನಯಮಂ ನೀನೊಲ್ಲೆ ಬುದ್ಧಿಪ್ರದ ಸಚಿವಕುಲಂ ನೋಡೆ ತಾನಿಲ್ಲ ನಿಸ್ಸಂ
ಶಯದಿಂದಂ ಮಂತ್ರಿಗಳ್ ಪೇಳ್ದತಿಹಿತವಚಮಂ ಕೇಳೆ ಮತ್ತಾರುಮಂ ಸಂ ।

ಯಿಡಲಿಕ್ಕೆ ನನ್ನನ್ನು ಕಳುಹಿಸಿದರು. ೨೬. ಬ್ರಹ್ಮ ವಿಷ್ಣು ಮತ್ತು ದೇವೇಂದ್ರ ಈ ಮೂವರೂ ಒಂದೆಡೆ ಸೇರಿ ಮೂರುಲೋಕಗಳಿಗೆ ಪ್ರಾಪ್ತವಾಗಿರುವ ದುಃಖನನ್ನು ಕೇಳಿದರು. ಅವರ ಮನಸ್ಸು ಕರಗಿತು. ಕರುಣೆ ಹುಟ್ಟಿತು. ನನ್ನನ್ನು ಕರೆದು ಇದಕ್ಕೆ ಪರಿಹಾರವನ್ನು ಹುಡುಕಲು ನಿನ್ನ ಸಮೀಪಕ್ಕೆ ಕಳುಹಿಸಿದರು. ಅದಕ್ಕಾಗಿ ನಾನು ಬಂದದ್ದು ನಿಜ; ಈ ಕಾರ್ಯವನ್ನು ಮಾಡಿಕೊಡುವ ಭಾರ ನಿನ್ನದು. ಎಲೈ ದೈತ್ಯೇಂದ್ರನೆ, ಯುದ್ಧದಲ್ಲಿ ನಿನಗೆ ಸಮರು ಈ ಜಗತ್ತಿನಲ್ಲಿ ಯಾರಿದ್ದಾರೆ ? ೨೭. ಬೃಹಸ್ಪತಿಯ ಪ್ರಶಂಸೆಯನ್ನು ಕೇಳಿ ತಾರಕನಿಗೆ ಸಂತೋಷವಾಯಿತು. "ಗಂಭೀರನೂ ಧೀರನೂ ಶತ್ರುಸೈನ್ಯವೆಂಬ ಕಾಡಿಗೆ ಕಿಚ್ಚಿನಂತಿರುವವನೂ ಆದ ನಿನಗೆ ಇದು ಯಾನ ಮಹಾ ಹೇಳು !" ಎಂದು ಸುರಗುರುವು ಮತ್ತೆ ಹೊಗಳುತ್ತಿರಲು ತಾರಕ ನಕ್ಕು ಹೇಳಿದನು. ೨೮. ಎಲೈ ಬೃಹಸ್ಪತಿ, ಈ ನೀತಿಯೆಲ್ಲಾ ಏತಕ್ಕೆ ? ಜಯವನ್ನು ಪಡೆಯಲು ಬಂದವನು ನೀನು ! ನನಗೆ ಅತಿಶಯ ಬುದ್ಧಿವಂತಿಕೆಯ ಮಾತುಗಳನ್ನಾಡುತ್ತಿರುವೆ ! ಅಂತಹ ಅತಿಶಯವಾ ಯುದ್ಧಸಿದ್ಧತೆ ಏನಾದರೂ ಇದ್ದರೆ ಹೇಳಬೇಡು ! ವ॥ ತಾರಕ ಬೃಹಸ್ಪತಿಯ ಮಧ್ಯಸ್ಥಿಕೆಯನ್ನು ತಿರಸ್ಕರಿಸಿದ. ಆದಕ್ಕೆ ಸುರಗುರು ಉತ್ತರಿಸಿದ–೨೯. ನಯ ನಿನಗೆ ಬೇಕಿಲ್ಲ, ರಾಜನೀತಿ ಬೋಧಿಸುವ ಸಚಿವರು ಮೊದಲೇ ಇಲ್ಲ! ಇರುವ ಮಂತ್ರಿಗಳು ಹೇಳುವ ಹಿತವಚನವನ್ನು

ದೆಯದಿಂದಂ ನಂಬೆ ನಂಬಿರ್ದತಿಹಿತಜನಮಂ ಪೊರ್ದಿ ಮಾತಾಡೆ ಮೇಲ
ಪ್ಪ ಯಶೋವಿಸ್ತಾರಮಂ ಭಾವಿಸೆ ತನುಮದದಿಂ ತಾರಕಾ ಮೇರೆಗೆಟ್ಟೈಯ್ ॥ ೨೯

ವ॥ ಎಂದು ವಾಚಸ್ಪತಿ ಸಾಮಮಂ ಬಿಟ್ಟು ಭೇದಮಂ ನುಡಿಯೆ ತಾರಕಂ ದರಸ್ಮಿತಮುಖ ನಾಗಿ,

ಕಂ॥ ಎಂತೆಂತು ಗುರುವೆ ನೀನೆ
ನ್ನಂತರಮಂ ನೋಡದಿಂತು ನುಡಿವರೆ ಸಮರ।
ಪ್ರಾಂತದೊಳೆನಗೆ ವಿಚಾರಮೆ
ಸಂತಮಿರತಿಮಥನಮೇಕೆ ತಾಳಕನಿದಿರೊಳ್ ॥ ೩೦

ಹಿತರೆನಗಿನ್ನಾರ್ ವಾಚ
ಸ್ಪತಿ ನೀನೆಂದಂತಿರಹಹ ಹುಸಿಯಲ್ಲಲ್ತು।
ನ್ನತಸಂಗರದೊಳಗಱಿಯಯ್
ಹಿತರೆನ್ನ ನಿಶಾತಖಡ್ಗಮುಂ ಸಿಡುದೋಳುಂ ॥ ೩೧

ಇಂತೆಂದು ನುಡಿದ ತಾರಕ
ನಂತಸ್ಥಮನಱಿದು ಸಾಮಭೇದಂಗಳುಮಂ।
ಪಿಂತಿಕ್ಕಿ ನಿರ್ಜರಾಚಾ
ರ್ಯಂ ತಡೆಯದೆ ನುಡಿದನುಚಿತದಾನಕ್ರಮಮಂ ॥ ೩೨

ನೀನು ಕೇಳುವವನಲ್ಲ ; ಸಂದೇಹದಿಂದ ಯಾರಲ್ಲಿಯೂ ನಿನಗೆ ನಂಬಿಕೆ ಇಲ್ಲ ; ನಿನ್ನನ್ನು ನಂಬಿರುವ ಹಿತಚಿಂತಕರೊಡನೆ ನೀನು ಮಾತಾಡುವುದೂ ಇಲ್ಲ ; ಮುಂದೆ ಆಗಲಿರುವ ಅಪಕೀರ್ತಿಯನ್ನು ಕುರಿತು ನೀನು ಯೋಚಿಸುವುದೂ ಇಲ್ಲ, ಒಟ್ಟಿನಲ್ಲಿ ಎಲೈ ತಾರಕನೆ, ಇದೆಲ್ಲಕ್ಕೂ ಮುಖ್ಯಕಾರಣ ನಿನ್ನ ತನುಮದ! ಅಂತು ನಿನ್ನ ಅನ್ಯಾಯ ಮೇರೆ ಮೀರಿತು! ವ॥ ದೇವಗುರು ಸಾಮೋಪಾಯವನ್ನು ಕೈಬಿಟ್ಟು ಭೇದೋಪಾಯಕ್ಕೆ ಇಳಿದು ಮಾತನಾಡಿದುದನ್ನು ಕೇಳಿ ತಾರಕ ನಸುನಕ್ಕು–೩೦. ಎಲೈ ಬೃಹಸ್ಪತಿ, ನೀನು ನನ್ನ ಅಂತರಂಗವನ್ನರಿಯದೆ ಹೀಗೆ ಮಾತನಾಡಬಹುದೇ ? ಯುದ್ಧವಿಚಾರದಲ್ಲಿ ನನಗೆ ಬೇರೆ ಅಭಿಪ್ರಾಯವುಂಟೆ ? ಸುಮ್ಮನಿರು ! ಇನ್ನು ತಾರಕನ ಎದುರಿನಲ್ಲಿ ಘರ್ಷಣೆ ಬೇಡ ! ೩೧. ಹೇ ವಾಚಸ್ಪತಿ, ನನಗಿನ್ನಾರು ಹಿತವರು ! ನೀನು ಎಂದಂತೆ ಇರು, ಇದು ಸುಳ್ಳಲ್ಲ ; ಮಹಾಯುದ್ಧಗಳಲ್ಲಿ ನನಗೆ ಹಿತರೆಂದರೆ ಈ ಹರಿತವಾದ ಖಡ್ಗ, ಮತ್ತು ಸುದೃಢವಾದ ಉದ್ದವಾದ ತೋಳು ಇವೆರಡೇ, ತಿಳಿಯಿತೆ ? ೩೨. ಹೀಗೆ ನುಡಿದ ತಾರಕನ ಅಂತರಂಗವನ್ನು ಅರಿತ ಸುರಗುರು ಸಾಮ ಮತ್ತು ಭೇದೋಪಾಯಗಳನ್ನು ಕೈಬಿಟ್ಟು ದಾನೋಪಾಯವನ್ನು

ಉ॥ ಕೇಳಲೆ ತಾರಕಾಸುರ ಸರೋಜಭವಾದಿಗಳಾಜಿರಂಗದೊಳ್
ಕಾಳೆಗಮಂ ನಿಮಿರ್ಚಲಣಮಾಜಿದಿರರ್ ದಿಟಮೆಂಬ ಯುದ್ಧಸ ।
ಲ್ಲೀಳೆಯದಿರ್ಕೆ ನಿನ್ನ ಮನದೊಳ್ ಬಯಸಿರ್ದುದನೇನನಾದೊಡಂ
ಪೇಳದನಿತ್ತಪರ್ ಬಡವರಲ್ಲೊಡೆಯರ್ ಕನಕಾದ್ರಿಗಾವಗಂ ॥ ೩೩

ಕಂ॥ ನೀಡಾಗದೆ ರಣರಂಗ
ಕ್ರೀಡೆಯನುಳಿದೆಳಸಿದನಿತುಮಂ ದೇಶವನೀ ।
ಡಾಡಲ್ ಸಮರ್ಥರದಱಿಂ
ಬೇಡೊಲ್ದು ಸಮುದ್ರಮುದ್ರಿತಾವನಿಯೆಡೆಯೊಳ್ ॥ ೩೪

ಎನೆ ತಾರಕಂಗೆ ಕೋಪಂ
ಮನದೊಳ್ ಪುಟವೆಳ್ದು ಮುಖದೊಳವತರಿಸಿ ವಿಲೋ ।
ಚನದೊಳ್ ಪಸರಿಸಿ ಪುರ್ಬಿನ
ಕೊನೆಯೊಳ್ ಕುಡಿಗೊಂಡು ನಿಮಿರೆ ನಡುಗುತೆ ನುಡಿದಂ ॥ ೩೫

ಸಡಿಫಡ ಸುರೇಂದ್ರಮಂತ್ರಿಯೆ
ಬೆಡಂಗಿದೇಕೆನ್ನ ಕೂಡೆ ನೆನೆಯದ ಮುನ್ನಂ ।
ಪೊಡವಿಯನೆನ್ನಯ ಕೆಯ್ಯೊಳ
ಗಡಗಿರ್ದುದನೆನಗೆ ಕುಡುವೆನೆಂಬುದು ಚಿತ್ರಂ ॥ ೩೬

ಅನುಸರಿಸಿ ಹೇಳಿದನು. ೩೩. ಎಲೈ ತಾರಕಾಸುರನೇ ಬ್ರಹ್ಮನೊದಲಾದವರು ಯುದ್ಧಕ್ಕೆ ಹಿಂಜರಿಯುವರೆಂದು ಎಂದಿಗೂ ಭಾವಿಸಬೇಡ ! ಆ ಯುದ್ಧದ ಪ್ರಸ್ತಾಪ ಈಗ ಬೇಡ. ನಿನ್ನ ಮನಸ್ಸಿನಲ್ಲಿ ಏನಾದರೂ ಬಯಕೆಗಳಿದ್ದರೆ ಹೇಳು. ಕನಕಾದ್ರಿಗೆ ಒಡೆಯರಾದ ಅವರು ನೀನು ಕೇಳಿದ್ದನ್ನೆಲ್ಲ ಕೊಡಬಲ್ಲರು. ೩೪. ಯುದ್ಧದ ಪ್ರಸಕ್ತಿ ಬೇಡ ; ಪ್ರತಿಭಟಿಸುವುದನ್ನು ಕೈಬಿಟ್ಟು ನೀನು ಬಯಸಿದುದೆಲ್ಲವನ್ನೂ ಎಂದರೆ ಈ ದೇಶವನ್ನೇ ಆದರೂ ಅವರು ಕೊಡಲು ಸಮರ್ಥರು ; ಆದ್ದರಿಂದ ಸಮುದ್ರಗಳಿಂದ ಸುತ್ತುವರಿಯಲ್ಪಟ್ಟ ಈ ಭೂಲೋಕದಲ್ಲಿ ಯಾವ ಭಾಗವನ್ನಾದರೂ ನೀನು ಬೇಡಿ ಅವರಿಂದ ಪಡೆದುಕೊ ! ೩೫. ಬೃಹಸ್ಪತಿಯ ಮಾತುಗಳನ್ನು ಕೇಳಿ ತಾರಕನ ಕೋಪ ನೆತ್ತಿಗೇರಿತು. ಕೋಪವು ಪುಟಿದು ಮುಖದಲ್ಲಿ ಹರಡಿ, ಕಣ್ಣಿನಲ್ಲಿ ಉಕ್ಕಿ ಹುಬ್ಬುಗಂಟಕ್ಕಿ ತುಟಿಯದುರುತ್ತಿರಲು ಹೀಗೆಂದ— ೩೬. ಸಡಿಫಡ ! ಎಲೈ ದೇವ ಮಂತ್ರಿ, ಈ ಬೆಡಗಿನ ಮಾತುಗಳೇತಕ್ಕೆ ? ಈ ಭೂಲೋಕವೆಲ್ಲ ನನ್ನ ಕೈಯಲ್ಲಿಯೇ ಇರುವಾಗ ಅದನ್ನೇ ಮತ್ತೆ ನನಗೆ ಕೊಡುವೆನೆಂಬುದು

ಉ॥ ಎನ್ನೊಡನೇಕೆ ನಿನ್ನ ಮತಿ ನಿನ್ನ ಮದಾಂಧತೆ ನಿನ್ನ ಮತ್ಸರಂ
ನಿನ್ನ ನಯೋಕ್ತಿ ನಿನ್ನ ಹೃದಯೋಗ್ರತೆ ನಿನ್ನಯೆ ಬುದ್ಧಿ ನಿನ್ನ ಸಂ।
ಪನ್ನತೆ ನಿನ್ನ ಮಂತ್ರಗತಿ ನಿನ್ನಯೆ ವಕ್ತೃತೆ ನಿನ್ನ ವಿಸ್ತರಂ
ನಿನ್ನಯೆ ನೀತಿ ನಿನ್ನ ಬಗೆ ನಿನ್ನ ತಿರಸ್ಕರಣಂ ಬೃಹಸ್ಪತೀ ॥ ೩೭

ಕಂ॥ ಧರೆಯೊಳಗೆ ತಾರಕಂಗೆನ
ಗರಿಮೇಘಮಹಾಬಲಂಗೆ ಸಮರಾಂಗಣದೊಳ್ ।
ಹರಿಗಿರಿ ರವಿಗಿವಿ ಶಿಖಿಗಿಖಿ
ಸುರಪತಿಗಿರಪತಿಯಜಂಗಿಜಂ ತೆಗೆ ಸರಿಯೇ ॥ ೩೮

ನೆಟ್ಟನೆ ಕಾಳೆಗಮನೊಡಂ
ಬಟ್ಟೆಂ ಕೇಳಮರಗುರುವೆ ಅಮರಾವತಿಯುಂ ।
ಬಿಟ್ಟೋಡಿ ನಿಮ್ಮ ಬೆಳ್ಳಿಯ
ಬೆಟ್ಟದ ಗುಹೆಸುಹೆಗಳೊಳಗೆ ಮಾಡುವುದಿಂಬಂ ॥ ೩೯

ವ॥ ಎಂದು ನುಡಿದ ತಾರಕನ ವೀರಾಳಾಪಮಂ ವಾಚಸ್ಪತಿ ಕೇಳ್ದು ಕೌತುಕಮನಾಳ್ದು ನಿರ್ವೇದದೊಳ್ ಬಿಳ್ದು ಭಯರಸದೊಳಳ್ದು ಧೈರ್ಯದೊಳೆಳ್ದಿಂತಾನುಂ ಸಂತಯ್ಸಿಕೊಂಡು ಸಾಮ-ಭೇದ-ದಾನಂಗಳ ನುಲ್ಲಂಘಿಸಿದ ಕರ್ಕಶನಪ್ಪ ರಕ್ಕಸರರಸನೊಳ್ ದಂಡಮೆಂದುಂ ಹಸನಾಗ ದೆಂದು ಮನದೊಳಳ್ಕುತುಂ ಮಾತಿನೊಳ್ ಬಲ್ಪುಗಿಡದೆ ತಾರಕನಂ ಬೀಳ್ಕೊಂಡು,

ಎಂತಹ ಸೋಜಿಗ!. ೩೭. ಎಲೈ ಬೃಹಸ್ಪತಿ, ನಿನ್ನ ಹತ್ತಿರ ಆಟ ನಡೆಯುವುದಿಲ್ಲ; ನಿನ್ನ ಬುದ್ಧಿವಂತಿಕೆ, ಮದಾಂಧತೆ, ನಿನ್ನ ಮತ್ಸರ, ನಯವಾದ ಮಾತು, ನಿನ್ನ ಮನಸ್ಸಿನ ಉಗ್ರತ್ವ, ನಿನ್ನ ಸಂಪನ್ನತನ, ಮಂತ್ರದಮಾಟ, ನಿನ್ನ ಮಾತುಗಾರಿಕೆ, ನಿನ್ನ ನೀತಿ, ಇವೆಲ್ಲ ನನ್ನ ಮುಂದೆ ತಿರಸ್ಕಾರ ಯೋಗ್ಯ! ೩೮. ಎಲೈ ಸುರಗುರು, ಅರಿಮೇಘ ಮಹಾ ಬಲ (ಬಿರುಗಾಳಿ) ನೆನಿಸಿರುವ ಈ ತಾರಕನಿಗೆ ತುಚ್ಛರಾದ ಹರಿ, ರವಿ, ಶಿಖಿ ಮತ್ತು ಸುರ ಪತಿಗಳು ಸಮವೆ? ೩೯. ಇಗೊ, ಯುದ್ಧಕ್ಕೆ ಸಿದ್ಧನಾಗಿದ್ದೇನೆ! ಹೇ ಅಮರ ಗುರು, ಇನ್ನು ನೀವೆಲ್ಲ ಅಮರಾವತಿಯನ್ನು ಬಿಟ್ಟು ಓಡಿಹೋಗಿ ಆ ರಜತಗಿರಿಯ ಗುಹೆಗಳನ್ನು ಆಶ್ರಯಿಸಿರಿ. ವ॥ ತಾರಕಾಸುರನ ವೀರಾಳಾಪವನ್ನು ಕೇಳಿದ ಸುರಗುರುವಿಗೆ ಸೋಜಿಗ ವಾಯಿತು ಬಹು ದುಃಖವೂ ಆಯಿತು. ಹೇಗೋ ಕೊಂಚ ಧೈರ್ಯ ತೆಗೆದುಕೊಂಡು ಸಮಾಧಾನ ಮಾಡಿಕೊಂಡನು. ತಾರಕ ತಾನು ಒಡ್ಡಿದ ಸಾಮ-ದಾನ-ಭೇದ ಎಂಬ ಮೂರು ಉಪಾಯಗಳನ್ನು ಒಪ್ಪಲಿಲ್ಲ; ಇನ್ನು ದಂಡೋಪಾಯ ಅವನಲ್ಲಿ ನಡೆಯದು; ಆದರೆ ಅದನ್ನು ಹೊರಗೆ ತೋರಿಸುವಂತೆ ಇಲ್ಲ; ಆತ ಮಾತಿನಲ್ಲಿ ತನ್ನ ಬಿಂಕವನ್ನು ಬಿಟ್ಟು

ಕಂ॥ ಮೋನದೆ ನಡೆತಂದಂ ಸಂ
ಧಾನವಿಹೀನಪ್ರಧಾನ ಚಿಂತಾಭರಿತಂ ।
ಮಾನ ಮನಸ್ಸಂಗತವಿಧು
ರಾನನ ವಿಗತಪ್ರಧೈರ್ಯನಮರಾಚಾರ್ಯಂ ॥ ೪೦

ಬರೆವರೆ ಸರೋಜಭವನುಂ
ಹರಿಯುಂ ವಾಸವನುಮಮರರುಂ ನೆರೆದಿರ್ದಾ ।
ತುರದಿಂದೆ ಬರ಼್್ಪ ಮಂತ್ರಿಯ
ಬರವಂ ನೆರೆ ಕಂಡು ತಮ್ಮೊಳಂದಿಂತೆಂದರ್ ॥ ೪೧

ಕೊರಗಿದುವು ಲೋಚನಂ ಭಾ
ಸುರಮುಡುಗಿತು ಭಾಳಲೇಖೆ ಕಂದಿತು ಗಂಡಂ ।
ವರವಕ್ತ್ರಂ ಕಳೆಗುಂದಿತು
ಗುರುತರಸಂಧಾನಮಿಲ್ಲ ಗುರುವಿನ ಮುಖದೊಳ್ ॥ ೪೨

ಎಂದಾಗಳ್ ನುಡಿಯುತ್ತಿರೆ
ಬಂದೆಲ್ಲರ್ ನಮಿಸಲಮರ ಗುರು ಕುಳ್ಳಿರ್ದಿಂ ।
ತೆಂದಂ ರಕ್ಕಸನೊಡನೆ
ಲ್ಲಂದದೊಳಂ ಪೇಳ್ದೆನಾವ ಮಂತ್ರಮನೊಲ್ಲಂ ॥ ೪೩

ಕ್ರಮದೊಳ್ ಸಲ್ಲಂ ಸಂಧಾ
ನಮನೊಲ್ಲಂ ಸಂಗರಾನುಸಂಧಾನಮ. ತ ।

ಕೊಡದೆ ತಾರಕನನ್ನು ಬೀಳ್ಕೊಂಡನು–೪೦ ಬೃಹಸ್ಪತಿಯು, ತನ್ನ ಸಂಧಾನವು ಮುರಿದು ಬಿದ್ದುದಕ್ಕಾಗಿ ಚಿಂತಾಭರಿತನಾಗಿ ಮೌನವಾಗಿ ಹಿಂದಿರುಗಿದ, ಆತನ ಮನಸ್ಸಿನಲ್ಲಿ ಅಭಿಮಾನ ಹೆಡೆಯಾಡುತ್ತಿತ್ತು. ಮುಖಕಳೆಗೆಟ್ಟಿತ್ತು, ಧೈರ್ಯಧೃತಿಗೆಟ್ಟಿತ್ತು. ೪೧. ಸುರಗುರುವಿನ ಬರವನ್ನೇ ಕಾಯುತ್ತಿದ್ದವರು ಅಜ–ಹರಿ–ದೇವೇಂದ್ರರೇ ಮೊದಲಾದ ಅಮರರು; ಅವರು ಆತುರದಿಂದ ಬರುತ್ತಿರುವ ಮಂತ್ರಿ ಬೃಹಸ್ಪತಿಯ ಸ್ಥಿತಿಯನ್ನು ಕಂಡು ತಮ್ಮಲ್ಲೆ ಹೀಗೆಂದುಕೊಂಡರು. ೪೨ ಅಯ್ಯೊ! ಗುರುವಿನ ಕಣ್ಣು ಕೊರಗಿವೆ,ಮುಖಬಾಡಿದೆ,ಕಪೋಲ ಕಂದಿದೆ, ಇದೆಲ್ಲವನ್ನು ನೋಡಿದರೆ ಈ ಬೃಹಸ್ಪತಿಯ ಸಂಧಾನ ಫಲಿಸಿದಂತೆ ಕಾಣುತ್ತಿಲ್ಲ. ೪೩. ಹೀಗೆ ದೇವತೆಗಳು ಅಂದುಕೊಳ್ಳುತ್ತಿರುವಾಗ ಬೃಹಸ್ಪತಿ ಅಲ್ಲಿಗೆ ಬಂದ; ಎಲ್ಲರೂ ಗುರುವಿಗೆ ವಂದಿಸಿದರು. ಅಮರಗುರು ಕುಳಿತುಕೊಂಡು " ತಾರಕನೊಡನೆ ಎಲ್ಲ ವಿಧದಿಂದಲೂ ಮಾತನಾಡಿಯಾಯಿತು! ಆತ ಯಾವ ಸಂಧಾನವನ್ನೂ ಒಪ್ಪುವವನಲ್ಲ! ೪೪. ಸಾಮ–ದಾನಗಳು ಅವನಿಗೆ ಬೇಕಿಲ್ಲ, ಸಂಧಾನದ ಅಗತ್ಯವಿಲ್ಲ; ಯುದ್ಧವೊಂದೇ ಅವನ ಗುರಿ; ಆದ್ದರಿಂದ ನಾವು ಶ್ರಮವಹಿಸಿ ಅವನೊಡನೆ ಕಾದುವುದೊಂದೇ ನಮಗಿರುವ

ನ್ನ ಮನಂ ತಾರಕನೊಡನ
ಶ್ರಮದಿಂ ಕಾದುವುದೆ ಮಂತ್ರಮಿಂತಿದ ಕಜ್ಜಂ ॥ ೪೪

ಅತಿನಿಷ್ಠುರನತಿ ನಿಷ್ಕೃಪ
ನತಿನೀರಸನತಿನಿರಾಶ್ರಯಂ ತಾರಕನಿಂ ।
ತತಿದುಷ್ಕರನತಿದುರ್ಜನ
ನತಿ ದುಗುಣನತಿ ದುರಾತ್ಮನತಿದುಶ್ಶೀಲಂ ॥ ೪೫

ವ॥ ಅಂತುಮಲ್ಲದೆ,

ಕಂ॥ ಅಪರಿಮಿತತುರಗಕುಲದಿಂ
ದಪರಿಮಿತೇಭಪ್ರತಾನದಿಂ ತಾರಕನಿಂ ।
ತಪರಿಮಿತ ಪತ್ತಿಯಿಂದ
ಶ್ವಪತಿಗೆ ಗಜಪತಿಗೆ ನರಪತಿಗೆ ಮಿಗಿಲೆನಿಪಂ ॥ ೪೬

ಸಿಡಿಲಿಂದರಣ್ಯಶಿಖಿಯಿಂ
ವಡಬಾನಳನಿಂ ಲಯಾಗ್ನಿಯಿಂ ತಾರಕನಿ ।
ರ್ಮಡಿ ಮೂವಡಿ ನಾಲ್ವಡಿಯ
ಯ್ವಡಿ ಭರದೊಳ್ ಬಲದೊಳುಷ್ಣದೊಳ್ ತೀವ್ರತೆಯೊಳ್ ॥ ೪೭

ವ ॥ ಎಂದು ವಾಚಸ್ಪತಿ ತಾರಕಾಸುರನ ಪಟುತರಪ್ರತಾಪಮಂ ಪೇಳುತಿರ್ಪ ಸಮಯ ದೊಳೊರ್ವ ಗಂಧರ್ವನಾಯಕನತಿತ್ವರಿತಗತಿಯಿಂ ಪರಿತಂದು

ಉ ॥ ಏತಱ ಮಾತಿದೇತಱ ವಿಚಾರತೆಯೇತಱ ಮಂತ್ರಶಕ್ತಿಯಿ
ನ್ನೇತಱ ಸತ್ವಮೇತಱ ಬಲೋನ್ನತಿಯೇತಱ ವೀರವೃತ್ತಿ ತಾ ।

ದಾರಿ! ೪೫. ಆ ತಾರಕ ಮಹಾದುಷ್ಟ ! ಕೃಪಾಹೀನ, ನೀರಸಸ್ವಭಾವದವನು, ನಿರಾಶ್ರಯ ; ಅವನು ಅತಿ ದುಷ್ಕರ, ದುರ್ಜನ, ದುರ್ಗುಣ, ದುರಾತ್ಮ ಎಲ್ಲಕ್ಕಿಂತ ಹೆಚ್ಚಾಗಿ ಆತ ಬಹು ದುಶ್ಶೀಲ ! ೪೬. ಅವನಲ್ಲಿ ಅಪರಿಮಿತ ಅಶ್ವ ಸೈನ್ಯವಿದೆ, ಅಪರಿಮಿತ ಗಜಗಳಿವೆ, ಅಸಂಖ್ಯ ಸೈನ್ಯವಿದೆ ; ಇದರಿಂದ ತಾರಕನು ಅಶ್ವಪತಿ, ಗಜಪತಿ ಮತ್ತು ನರಪತಿಗಳೆಲ್ಲ ರನ್ನೂ ಮೀರಿದ್ದಾನೆ. ೪೭. ಲೋಕದಲ್ಲಿ ವೇಗದಲ್ಲಿ, ಬಲದಲ್ಲಿ, ಉಷ್ಣತೆಯಲ್ಲಿ ಮತ್ತು ತೀವ್ರತೆಯಲ್ಲಿ ಸಿಡಿಲು, ಕಾಡು ಕಿಚ್ಚು, ಬಡಬಾಗ್ನಿ ಮತ್ತು ಪ್ರಳಯಾಗ್ನಿಗಳು ಒಂದಕ್ಕಿಂತ ಒಂದು ಹೆಚ್ಚು ಎನಿಸಿವೆ. ಆದರೆ ಈ ತಾರಕ ಅವೆಲ್ಲವುಗಳಿಗಿಂತಲೂ ಇಮ್ಮಡಿ, ಮುಮ್ಮಡಿ, ನಾಲ್ವಡಿ, ಇಲ್ಲವೆ ಐದರಷ್ಟು ಮಿಗಿಲೆನಿಸಿದ್ದಾನೆ. ವ|| ಹೀಗೆ ಸುರಗುರು ತಾರಕನ ಪ್ರತಾಪ ವನ್ನು ಹೇಳುತ್ತಿರುವಾಗ ಒಬ್ಬ ಗಂಧರ್ವ ನಾಯಕನು ಆತುರದಿಂದ ಬಂದು ೪೮. ಓಹೊ! ಇದು ಏತರ ಮಾತು ! ಯಾವ ವಿಚಾರತೆ! ಯಾವ ಮಂತ್ರಶಕ್ತಿ ! ಇನ್ನೇತರ ಸತ್ವ ! ಯಾವ

ನೇತಱ ಬುದ್ಧಿಯೇತಱ ಪರಾಕ್ರಮದುತ್ಸವವೇತಱಾಜ್ಞೆ ವಿ
ಖ್ಯಾತನ ತಾರಕಾಸುರನ ಬೀಡು ಬೀಡುತ್ತಿದೆ ನೋಡಲದ್ಭುತಂ ॥ ೪೮

ಮ ॥ ಸ್ರ ॥ ಧರೆಯಿಂಬಿಲ್ಲಬ್ಧಿಯಿಂಬಿಲ್ಲಚಲವಿತತಿಯಿಂಬಿಲ್ಲ ದಿಕ್ಚಕ್ರವಿಂಬಿ
ಲ್ಲ ರಥವ್ರಾತಕ್ಕೆ ಘೋಟಪ್ರತತಿಗೆ ಗಜಯೂಥಕ್ಕೆ ಪಾದಾತಿವೃಂದ ।
ಕ್ಕರಿದಾರ್ಗಂ ರೇಣು ಪಂಕಂ ಶಿಥಿಲತೆ ದೆಸೆಗೆಟ್ಟಿತ್ತು ತಾನೆಂಬಿನಂ ಸಂ
ಗರಕಾಲಾಭೀಳಭೃತ್ತಾರಕನಖಿಳಬಳಂ ತೀವಿ ಪರ್ವಿತ್ತದೆತ್ತಂ ॥ ೪೯

ವ ॥ ಎಂಬ ಸಂಭ್ರಮೋಕ್ತಿಯನಂಬುಜಾಕ್ಷಂ ಕೇಳ್ದು ಕೋಪಮಂ ತಾಳ್ದು,

ಕಂ॥ ನಡೆ ಸುರಪತಿ ನಡೆ ಪಾವಕ
ನಡೆಯಂತಕ ನಡೆ ನೃವಾಹ ನಡೆ ಜಳಧೀಶಾ ।
ನಡೆ ಮಾರುತ ನಡೆ ವಿತ್ತಪ
ನಡೆ ವೃಷಭಾರೂಢ ಗಾಢತರವಿಕ್ರಮದಿಂ ॥ ೫೦

ಸುರರುಂ ಕಿನ್ನರರುಂ ಖೇ
ಚರರುಂ ಗಂಧರ್ವರುಂ ಗರುಡರುಂ ವಿದ್ಯಾ ।
ಧರರುಂ ರಾಕ್ಷಸರುಂ ಯ
ಕ್ಷರುಮೊಂದೊಂದೆಸೆಯೊಳೊಡ್ಡನೊಡ್ಡುಗೆ ರಣದೊಳ್ ॥ ೫೧

ಬಲೋನ್ನತಿ! ಎಂಥ ವೀರವೃತ್ತಿ! ಇನ್ನು ಯಾವ ಬುದ್ಧಿವಂತಿಕೆ! ಪರಾಕ್ರಮ! ಏತರ ಆಜ್ಞೆ! ಎಲ್ಲ ಸಿಪ್ಪಲ! ಏಕೆಂದರೆ ತಾರಕಾಸುರನ ಸೈನ್ಯವಾಗಲೆ ಬೀಡು ಬಿಡುತ್ತಿದೆ! ಅದೆಂತಹ ಅದ್ಭುತ! ೪೯. ಆ ತಾರಕಾಸುರನ ರಥ ಸಮೂಹಕ್ಕೆ, ಕುದುರೆಗಳ ವೃಂದಕ್ಕೆ ಗಜಸೇನೆಗೆ, ಕಾಲಾಳಪಡೆಗೆ ನೆಲ ಸಾಲದು, ಸಮುದ್ರ ಹಿಡಿಸದು, ಬೆಟ್ಟಗಳು ಇಕ್ಕಟ್ಟಾಗಿವೆ, ದಿಕ್ಕುಗಳು ಸಾಲವು! ಅವುಗಳ ತುಳಿತಕ್ಕೆ ನೆಲ ಧೂಳೆದ್ದಿತು, ಕಡಲು ಕೆಸರಾಯಿತು, ಬೆಟ್ಟಗಳು ಪುಡಿ ಪುಡಿಯಾದವು ದಿಕ್ಕುಗಳು ಕೆಟ್ಟವು; ಸಂಗ್ರಾಮ ಕಾಲನಂತೆ ಭಯಂಕರ ನಾದ ತಾರಕನ ಸೈನ್ಯವು ಎಲ್ಲೆಲ್ಲೂ ತುಂಬಿದೆ! ವ॥ ಎಂಬ ಸಂಭ್ರಮದ ಮಾತನ್ನು ವಿಷ್ಣು ಕೇಳಿ ಕುಪಿತನಾಗಿ ೫೦. ಇಂದ್ರ, ಅಗ್ನಿ, ಯಮ, ನೈರುತ್ಯ, ವರುಣ, ವಾಯು, ಕುಬೇರ, ಮತ್ತು ಈಶಾನರೇ ನೀವೆಲ್ಲ ನಿಮ್ಮ ನಿಮ್ಮ ವಾಹನಗಳನ್ನು ಏರಿ ನಡೆಯಿರಿ. ಗಾಢ ವಿಕ್ರಮದಿಂದ ತಾರಕನನ್ನು ಎದುರಿಸೋಣ! ಎಂದನು. ೫೧. ಸುರರು ಕಿನ್ನರರು ಖೇಚರರು ಗಂಧರ್ವರು ಗರುಡರು ವಿದ್ಯಾಧರರು ರಾಕ್ಷಸರು ಯಕ್ಷರು ಮುಂತಾದವರೆಲ್ಲರು ಒಂದೊಂದು ದಿಕ್ಕಿನಲ್ಲಿ ವ್ಯೂಹಗಳನ್ನು ರಚಿಸಿಕೊಂಡು ಯುದ್ಧದಲ್ಲಿ ತಾರಕನ ಸೈನ್ಯವನ್ನು ಎದುರಿಸಿರಿ.

ಕಂ॥ ಎಂದು ಬೃಹಸ್ಪತಿಗತಿಭರ
ದಿಂದಂ ಬೆಸಸುತ್ತುಮಿರ್ಪ ಸಮಯದೊಳೊರ್ವಂ।
ಸಂದಣಿಪ ನುಡಿಗಳೊಗುತಿರೆ
ನಿಂದುರ್ಬುತೆ ಭಾಷೆಗೊಟ್ಟನಚಲಿತವೀರಂ॥ ೫೨

ಚಂ॥ ಎನಗಿದಿರಾದ ತಾರಕಬಳಂ ಕಬಳಂ ಕಬಳಂಬೊಲಿಂದು ಪೊ
ಕ್ಕನವಧಿಸಾಹಸಪ್ರಕರವಂ ಕರವಂ ಕರವಂತೆ ಪೊರ್ದಿ ಭೋಂ।
ಕನೆ ಕರವಾಳ್ ಕಡಂಗಿದವನಂ ದವನಂ ದವನಂಜಿವೊಯ್ದು ಪೋ
ಳ್ದನಿಮಿಷರಾರೆ ವೈರಿಬಲವಂ ಬಲವಂ ಬಲವಂದು ಗೆಲ್ದಪೆಂ॥ ೫೩

ವ॥ ಎಂದು ನಿಂದಾಸುರದಿಂ ಭಾಷೆಗುಡುತ್ತಿರ್ಪ ವೀರಾಳಾಪಮಂ ಕೇಳುತ್ತಮರಪತಿ ಸಮರೋತ್ಸಾಹಭೇರಿಯಂ ಪೊಡೆಯಿಸೆ,

ಮ॥ ಧರೆಯಲ್ಲಾಡೆ ಸಮುದ್ರಮುರ್ಕೆ ದಿಗಧೀಶರ್ ಬೆರ್ಚೆ ದಿಕ್ಕುಂಜರಂ
ಕರಮಳ್ಕುತ್ತಿರೆ ಸೀಳೆ ಶೈಳಮಹಿರಾಜಂ ಬಳ್ಕೆ ಕೂರ್ಮಂ ಭಯಾ।
ತುರಭಾಮ್ರಾನನನಾಗೆ ಮೇಗಣುಡುವೃಂದಂ ಬೀಳ್ಕೆ ಕೋಳಾಹಳೋ
ತ್ಕರನಿಸ್ಸಾಳಧಳಂಧಳಂಧಳರವಂ ಪರ್ಬಿತ್ತು ಮೂಲೋಕಮಂ॥ ೫೪

ವ॥ ಅನಂತರದಲ್ಲಿ

ಮ॥ ಉರುನಿಸ್ಸಾಳಧಳಂಕೃತಂ ನೆಗೆದುದೇಳೇಳ್ ಭೀಕರಾಕಾರಮಾ
ಗಿರೆ ಪೆರ್ಣಾನೆಯನಾರ್ದು ಹಲ್ಲಣಿಸು ವಾಹವ್ಯೂಹಮಂ ಕೂಡೆ ಪೊ।

೫೨. ಹೀಗೆ ವಿಷ್ಣುವು ಬೃಹಸ್ಪತಿಗೆ ಭರದಿಂದ ಕಟ್ಟಪ್ಪಣೆ ಕೊಡುತ್ತಿರುವಾಗ ಒಬ್ಬಾನೊಬ್ಬ ವೀರನು ಯುದ್ಧ ಕೋಲಾಹಲವು ಮೊಳಗುತ್ತಿರುವಲ್ಲಿ ಹೆಮ್ಮೆಯಿಂದ ಎದೆ ತಟ್ಟಿ ಪ್ರತಿಜ್ಞೆ ಮಾಡಿದನು. ೫೩. ನನಗೆ ಇದಿರಾದ ತಾರಕನ ಬಲವು ಒಂದು ಕಬಳ (ತುತ್ತು), ಮೇರೆ ಮೀರಿದ ಸಾಹಸ ಪ್ರಕರವನ್ನು ಕಬಳದಂತೆ ಹೊಕ್ಕು ಕರವನ್ನು ಕರೆಸಂತೆ ಹೊಂದಿ ಭೋಂಕನೆ ಕರವಾಳ (ಖಡ್ಗ)ವನ್ನು, ಕಡಂಗಿದ ಅವನನ್ನು ಕಾಡ್ಗಿಚ್ಚು ಸುಡುವಂತೆ, ದೇವತೆಗಳು ಹೊಗಳುತ್ತಿರಲು ಶತ್ರು ಸೈನ್ಯವನ್ನು ಸುತ್ತುಗಟ್ಟಿ ಗೆಲ್ಲುತ್ತೇನೆ. ವ॥ ಹೀಗೆ ಆವೇಶದಿಂದ ಭಾಷೆಕೊಡುತ್ತಿದ್ದ ವೀರಾಲಾಪಗಳನ್ನು ಕೇಳಿದ ದೇವೇಂದ್ರನು ಸಮರದ ಉತ್ಸಾಹವನ್ನು ಹೆಚ್ಚಿಸುವ ರಣಭೇರಿಯನ್ನು ಹೊಡೆಸಿದನು. ೫೪. ರಣಭೇರಿಯು ಧಳಂ ಧಳಂ ಧಳಂ ಎಂದು ಭೋರ್ಗರೆಯಿತು. ಅದರ ರಭಸಕ್ಕೆ ನೆಲ ನಡುಗಿತು, ಕಡಲು ಉಕ್ಕಿತು, ದಿಕ್ಪತಿಗಳು ಬೆಚ್ಚಿದರು, ದಿಗ್ಗಜಗಳು ಅಳುಕಿದವು, ಪರ್ವತಗಳು ಬಿರುಕು ಬಿಟ್ಟವು, ಆದಿ ಕೂರ್ಮವು ಬಳುಕಿತು ಮತ್ತು ಭಯದಿಂದ ಅದರ ಮುಖ ಬೆಮರಿತು, ತಾರೆಗಳು ಉದುರಿದವು:—೫೫. ದೇವಲೋಕದ ಸೇನಾನಿ ಮುಖ್ಯದಲ್ಲಿ "ದೊಡ್ಡ ನಗಾರಿಗಳಿಂದ ಎದ್ದ ಧಣ್ ಎಂಬ ಶಬ್ದವೂ, 'ಏಳು ೩' ಎಂಬ ಶಬ್ದವು ಭೀಕರಾ

ಡು ರಥವ್ರಾತಮನೆಯ್ದೆ ಕೆಯ್ದುಗೊಳವೇಳ್ ಪಾದಾತಿಯಂ ಬೇಗಮೆಂ
ಬ ರವಂ ಪರ್ವಿತು ನಾಕಲೋಕದಿವಿಜಾನೀಕಪ್ರಧಾನಾಖ್ಯರೊಳ್ ॥ ೫೫

ವ ॥ ಇಂತು ಕೊರ್ಬಿ ಪರ್ಬಿದ ಕೋಳಾಹಳದ ಸಂಭ್ರಮಮಿಂಬುವಡೆಯೆ, ಸುರಕುಲಂ ಸಡಗರಿಸಿ ಘುಡುಘುಡಿಸಿ ನಡೆ ನಡೆದು ಪರಿದು ನೆರೆದು ಮುಂಗುಡಿಗೆದಱಿ ಸಂಗರ ಭೂಮಿಯೊಳೊಡ್ಡಿ ನಿಂದೆಡ್ಡಮಾಗಿ ಬಗ್ಗಿಸಿ ವೊಗ್ಗರಿಸುತ್ತೊಗ್ಗುಗೆಡದೆ ನಡೆಗೋಂಟೆಯಂತೆ ನೆಲೆವೆರ್ಚಿ ನಿಂದು ತೊಲಗದಕಂಭದ ಹುಲಿಯ ಬಚ್ಚಣೆಯ ಗಜಮುಖದ ಭುಜಬಳಗರುಡನ ಗಜಕೇಸರಿಯ ಬಿರುದ ಶರಭನ ಗಂಡರ ಡಾವಣೆಯ ಭಂಡಣವಿಜಯನ ವೈರಿಜಗದ್ದಳನನ ವೀರಘಂಟೆಯ ಪೊನ್ನಗುಬ್ಬಿಯ ರನ್ನವಟ್ಟೆಯ ಬೆನ್ನ ಚಮ್ಮಟಿಗೆಯ ಬಿಳಿಯ ಚವರದ ವಿಳಸದ ಗೆಜ್ಜೆಯ ಅಭಯಹಸ್ತದ ಉಭಯ ಸತ್ತಿಗೆಯ ಹಗಲ ಕೈಯ್ದೀವಿಗೆಯ ಘಟಸರ್ಪನ ಕಟಕಸೂಱೆಗಾಱನ ಅಸುರ ಕೋಳಾಹಳನ ದೈತ್ಯಮರ್ದನನ ದಾನವಾರಿಯ ರಕ್ಕಸಜೂಜಿನ ಪಚ್ಚೆಯ ಪರಿಗೆಯ ಪಸರದ ಪಾರಿಯದೊಯ್ಯಾರದ ಕೆಂದಟ್ಟಿನ ಪಂತಿಯ ಪೊಂಬಟ್ಟೆಯ ಹಾದಿಯ ಕಾಳಿಕೆಯ ಜಾಳದ ನೀಲದ ಸಾಲಶಂಖದ ತಟ್ಟಿನೊಟ್ಟಜೆಯ ಕಟ್ಟುಬ್ಬಟೆಯ ಬಿರುದಿನ ಹರಿಗೆಕಾಱರ ಪರಿವೀಥಿಯೊಳಂ ; ಮತ್ತಮಾ ಹರಿಗೆಕಾ

ಕಾರವಾಗಿರಲು ಹೆಣ್ಣಾನೆಯನ್ನು ಆರ್ದುಹಲ್ಲಣಿಸಿ (ಸಿದ್ಧಪಡಿಸಿ) ರಥ ಸಮೂಹವನ್ನು ಹೂಡು, ಪದಾತಿಗಳನ್ನು ಆಯುಧ ಹಿಡಿವಂತೆ ಹೇಳು, ಎಂಬ ರವವು ಹಬ್ಬಿತ್ತು.

ವ॥ ಹೀಗೆ ಕೊಬ್ಬಿ ಹಬ್ಬಿದ ಕೋಲಾಹಲದ ಸಂಭ್ರಮವು ಅಧಿಕವಾಯಿತು. ಸುರಸೈನ್ಯವು ಸಡಗರದಿಂದ ಘುಡುಗುಡಿಸಿತು. ಯುದ್ಧ ಭೂಮಿಯನ್ನು ಹೊಕ್ಕು ಎಲ್ಲರೂ ಒಟ್ಟುಗೂಡಿ ಧೃತಿಗೆಡದೆ ಇರುವ ಬಿರುದಿನ ಹರಿಗೆ ಗುರಾಣಿಕಾರರ ವರ್ಣನೆ–ಅವರು ಬಗ್ಗಿಸಿ ಒಟ್ಟು ಗುಂಪು ಕೆಡದೆ ಚಲಿಸುವ ಕೋಟೆಯಂತೆ ಉಬ್ಬಿ ನಿಂತಿರುವ ಕಂಭದ ಹುಲಿಯ ಮುಖವಾಡದ, ಆನೆಮುಖ, ಗರುಡನಮುಖ ಮತ್ತು ಗಜಕೇಸರಿಯ ಬಿರುದುಳ್ಳ, ಶರಭನಗಂಡ–ಶರಭನಂಥ ಶೂರರ, ಸಾಲುಯುದ್ಧಗಳಲ್ಲಿ ವಿಜಯ ಗಳಿಸಿದವನು, ವೈರಿ ಜಗತ್ತನ್ನೇ ಸೀಳಿದವನು, ವೀರಘಂಟೆ ಧರಿಸಿದವನು, ಚಿನ್ನದ ಗುಬ್ಬಿ ಅಲಂಕಾರವುಳ್ಳ, ರತ್ನಪಟ್ಟಿಯ, ಬೆನ್ನಿಗೇರಿಸಿರುವ ಚಮ್ಮಟಿಗೆಯ, ಬಿಳಿಯ ಚಾಮರದ, ವಿಲಾಸದ ಗೆಜ್ಜೆಗಳಿಂದ ಕೂಡಿದ, ಅಭಯ ಹಸ್ತವುಳ್ಳ ಎರಡೂಕಡೆ ಛತ್ರಿ ಧರಿಸಿದ, ಹಗಲು ಕೈದೀವಿಗೆಯುಳ್ಳ, ಘಟಸರ್ಪ ಹಿಡಿದಿರುವ ಕಟಕ (ಸೈನ್ಯ)ಗಳನ್ನೇ ಸೂರೆಮಾಡುವ, ಅಸುರರನ್ನು ನಾಶಪಡಿಸುವ, ದೈತ್ಯರನ್ನು ಸದೆಬಡಿವ, ದಾನವಾರಿಯ, ದ್ಯೂತರಾಕ್ಷಸರಾಗಿರುವ, ಪಚ್ಚೆಯ ಹಲಗೆ ಅಂಗಡಿಯುಳ್ಳ, ಸೊಗಸಾದ ರಥಗಳಿಂದ ಕೂಡಿದ(?) ಕೆಂಪುನಡುಕಟ್ಟುಳ್ಳ, ಹೊನ್ನವಸ್ತ್ರ, ಹಳದಿ, ಕಪ್ಪು ಜಾಳ ಮತ್ತು ನೀಲ ವರ್ಣಸಾಲು ಶಂಖಗಳುಳ್ಳ ಸೈನ್ಯದ ಪರಾಕ್ರಮದ ವಿಶೇಷೋತ್ಸಾಹಿಗಳಾದ ಬಿರುದುಧರಿಸಿದ ಗುರಾಣಿಯ ಸೈನಿಕರು; ಆ ಸೈನಿಕರ ಅಕ್ಕಪಕ್ಕಗಳಲ್ಲಿ ನಿಂತಿರುವ ಕಾಲಾಳುಪಡೆ ಯುದ್ಧಕ್ಕೆ ಸಿದ್ಧವಾಗಿದೆ–ಅವರಲ್ಲಿ ಕೆಲವರು ಕೈಯಲ್ಲಿ ಕೋಡು ಹಿಡಿ ಮಲ್ಲಗಂಟಿಕ್ಕಿದ್ದಾರೆ. ಅವರ ಉಡಿಗೆ ಗಂಟೆಕಟ್ಟಿದೆ. ಕಿಗ್ಗಟ್ಟಿಗೆ (ಸೊಂಟಕ್ಕೆ) ಸಿಕ್ಕಿಸಿದ ಕಠಾರಿ

ಜರಿಕ್ಕಿಲದೊಳ್ ಕೋಡಕಿಯ್ಯೊಳುಟ್ಟ ಮಲ್ಲಗಂಟಿನ ತೊಡರ್ಚಿದುಡೆ ಗಂಟೆಯ ಕಿರ್ಗಟ್ಟಿನ ಸುರಿಗೆಯ ಕಟ್ಟಿದ ಚಿಂದಿಯ ತೊಟ್ಟ ಕಂಚುಳಿಕೆಯ ಹಿಡಿದ ಬಿಲ್ಲ ಬಲಗೈಯ ಸರಳ ಬೆನ್ನಬತ್ತಳಿಕೆಯ ಸುತ್ತಿದ ಹೀಲಿಯ ಮುಡಿಗಟ್ಟಿನ ಪಟ್ಟಿಯ ಮಲಯಜದ ಮಂಗಳಬೊಟ್ಟಿನ ಕಟ್ಟಣಕದ ಸಿಂಗರಂ ಬೆರಸಿ ಬೀರ ಸಿರಿಯಂ ಬೇಱಿ ನಂಜಿನ ಪುಂಜದಂತೆ ಕುಳಿಕನ ಕುಲದಂತೆ ಜವನ ಜಂಗುಳಿಯಂತೆ ಬಯ್ದುಕೊಲ್ವ ಬಕನಬಳಗದಂತೆ ನಿಂದ ಬಿಲ್ಲ ಬಲ್ಲಣೆಯ ಹಿಂಗಟ್ಟನೊಳ್ ಮುಂಕಣಿಸಿ ನೆಗೆಪಿದ ಸಬಳಂಗಳ ಮೊನೆಯ ಮೊತ್ತಮಿನ ಕಿರಣಂಗಳನೊತ್ತರಿಸಿ ಮಿಸುಗುವತಪನನ ಬಿಸಿಯ ಬಿಂಬದೊಳ್ ಮಾರ್ಪೊಳೆದು ತಳತಳಿಸಿ ಸಿಡಿಲ ಬಳಗಂ ತಳಿರ್ತಂತೆ ಗಗನ ತಳದೊಳ್ ತುಱುಂಗಿ ನೆರೆಮೆಱೆಯೆ ನಭಕ್ಕೆ ಚಿಮ್ಮಿ ಕುರುಳ್ಚಿ ಕೆಯ್ಮಾಡುವ ಕೊಂತಕಾಱರ ತಿಂತಿಣಿಯ ನಡುವೆ ಪಿಡಿದ ವಜ್ರಮುಷ್ಟಿಯ ಮಸೆದಿಟ್ಟಿಯೆಸೆವ ಗಂಡಗತ್ತಿಯ ಕೂರಲಗಿನ ಭಾರಿಸಂಕಲೆಯ ಪಟ್ಟಿಯದ ಪರಶುವಿನ ಚಕ್ರದ ಕಕ್ಕಡೆಯ ಕರವಾಳ ಕಠಾರಿಯ ಕತ್ತಿಯ ಕರಗಸದ ಗಂಡಗತ್ತರಿಯ ಶೂಲದ ಕಾಲ ತೊಡರ ರಕ್ಕಸರ ಹಾಹೆಯ ತಡೆಯದ ಲವುಡಿಯ ಚಾವುಡಿಯ ಬಾವುಲಿಯ ಬಲ್ಲಾಳ್ಗಳ ಮುಂದೆತ್ತಿದ ಪರಿಪರಿಯ ಪತಾಕಾವಳಿಯ ಸೂಳಱಿದು ಮಸಗಿ ದುವ್ವಾಳಿಸುವ ಗೋವಳಗಟ್ಟಿಗೆಯ ಗೊಂದಣಂ ಗೂಡಿ ಗಗನಂ ಕವಿದಂತೆ ದೆಸೆಗಳ್ ಉಗುಳ್ದಂತೆ ಭೂಮಿ ಬೆಸಲಾದಂತೆ ಭೂಚಕ್ರಮಂ ತೆಕ್ಕನೆ ತೀವಿದ ಪದಾತಿ ಬಲದೊಳಂ ; ಮತ್ತಮಾ ಪದಾತಿಬಲದ ಪೆಡಮೆಟ್ಟನೊಳ್ ಹೂಡಿದ ಕುದುರೆಯ

ಯುಳ್ಳವರು ಕೆಲವರು, ಚಿಂದಿಯನ್ನುಟ್ಟವರು, ಕವಚ ತೊಟ್ಟವರು, ಬಿಲ್ಲುಹಿಡಿದವರು, ಬಲಗೈಯಲ್ಲಿ ಬಾಣ, ಬೆನ್ನಿಗೆ ಕಟ್ಟಿದ ಬತ್ತಳಿಕೆ, ನವಿಲುಗರಿ ಸುತ್ತಿದ್ದಾರೆ, ತಲೆಗೆ ಪಟ್ಟಿ ಕಟ್ಟಿದ್ದಾರೆ, ಶ್ರೀಗಂಧದ ತಿಲಕವಿಟ್ಟವರು, ಬಹಳ ಅಂದವಾದ ಶೃಂಗಾರಮಾಡಿಕೊಂಡು, ವೀರಲಕ್ಷ್ಮಿಯು ಪ್ರಕಾಶಿಸುತ್ತಿರಲು, ನಂಜಿನ (ವಿಷದ) ಪುಂಜದಂತೆ, ಸರ್ಪಗಳ ಸಮೂಹದಂತೆ, ಯಮನ ಸೈನ್ಯದಂತೆ, ಬಯ್ದು ಕೊಲ್ಲುವ ಬಕಾಸುರನ ಬಳಗದಂತೆ, ಧನುರ್ವಿದ್ಯಾ ಪಾಂಡಿತ್ಯವುಳ್ಳವರು,ಮುಂದೆ ನೂಕಿ ಹಿಡಿದಿರುವ ಸಲಾಕೆಯುಳ್ಳವರು,ಹಿಟಿದ ಆಯುಧಗಳ ತುದಿಮೊತ್ತವು ರವಿಕಿರಣಗಳನ್ನು ಮಾರಿಸಿತ್ತು. ಆಯುಧಗಳ ಸೂರ್ಯಬಿಂಬ ಪ್ರಕಾಶಿಸುತ್ತಿರಲು,ಸಿಡಿಲಬಳಗವೆ ಚಿಗುರಿದಂತಿತ್ತು,ಆ ಪ್ರಕಾಶ ದಟ್ಟಗಗನದಲ್ಲಿ ಹಬ್ಬಿರಲು, ಕೈಮಾಡುವ ಭರ್ಜಿಹಿಡಿದವರು ಕೆಲವರು ಅವರ ಮಧ್ಯದಲ್ಲಿ ವಜ್ರಮುಷ್ಟಿ ಹಿಡಿದವರು, ಹರಿತಮಾಡಿದ ಈಟಿಯನ್ನು ಬೀಸಿ ಹೊಡೆಯುವವರು,ಗಂಡುಗತ್ತಿ, ಕೂರಲಗು, ಭಾರಿ ಸರಪಣಿ, ಪಟ್ಟಿಯ, ಗಂಡುಗೊಡಲಿಗಳ, ಚಕ್ರ, ಕೆಕ್ಕಾಡ, ಕತ್ತಿ, ಕಠಾರಿ, ಖಡ್ಗ , ಗರಗಸ, ಗಂಡಗತ್ತರಿ, ಶೂಲ, ಕಾಲಿಗೆತೊಡುವ, ರಕ್ಕಸರಂತಿರುವಕಣ್ಣುಳ್ಳ, ಲಗುಡಿ ಕಬ್ಬಿಣತುದಿಯ ಗದೆ (ದೊಣ್ಣೆ), ಚವುರಿಯ, ಬಾವುಲಿಯ, ಶೂರರಮುಂದೆ ಎತ್ತಿದ ಬಗೆಬಗೆಯ ಬಾವುಟಗಳು, ಸರದಿ ಪ್ರಕಾರ, ರಭಸದಿಂದ ಓಡುವ (ನುಗ್ಗುವ) ಲಾಠಿಗಳನ್ನು (ಕೈಬಡಿಗೆ) ಹಿಡಿದು, ಗುಂಪುಕೂಡಿ, ಆಕಾಶವೇ ವ್ಯಾಪಿಸಿದಂತೆ, ದಿಕ್ಕುಗಳು ಉಗುಳಿದ ಹಾಗೆ, ನೆಲ ಪ್ರಸವಿಸಿದಂತೆ, ಭೂಮಂಡಲವನ್ನೆ ದಟ್ಟವಾಗಿ ತುಂಬಿದ ಕಾಲು ಪಡೆ ಒಂದುಕಡೆ ; ಮತ್ತು ಆ ಕಾಲಾಳು ಪಡೆಯ ಹೆಡಮೆಟ್ಟನಲ್ಲಿ ಹೂಡಿದ ಕುದುರೆಯ, ಎತ್ತಿಹಿಡಿದ ಧ್ವಜಪಟದ, ಕಟ್ಟಿದ ಚಮ

ನೀಡಿ ನೆಗೆದ ಪಳವಿಗೆಯ ಕಟ್ಟಿದ ಚಮರದ ನೆಟ್ಟತ್ರಿಸೂಳದ ಕೀಲಿಸಿದ ಕೀಲ್ಗಳ ತಿರುಗುವ ಚಕ್ರದ ಸುತ್ತಿ ಬಿಗಿದ ಲೋಹಬಂಧದ ತೆತ್ತಿಸಿದ ಸೂಲಿಗೆಯ ಹೇಱಿದ ಶಸ್ತ್ರವೇಱಿದ ಸಾರಥಿಯ ಮಿಱು ನಿಂದ ಜೋದರ ಭೀಕರರೂಪು ಲೋಕಕ್ಕೆ ಪೊಸತಾಗೆ ಚಕ್ರಚೀತ್ಕೃತಿಗೆ ದಿಕ್ಕರಿಗಳ್ ಬೆರ್ಚೆ ಸೂತರ ಕಳಕಳಕ್ಕೆ ಭೂತಳಂ ನಡುಗೆ ಜವನ ಜಕ್ಕಂದೊಳಲಿಯಂತೆ ಮಾರಿಯ ಮುಸಕದಂತೆ ಪಸರಿಸಿನಿಂದ ರಥಿಕಪ್ರತಾನದೊಳಂ ; ಮತ್ತಮಾ ಸ್ಯಂದನವೃಂದಮಂ ಮುಂದುಗೊಂಡ ಪೊನ್ನ ಪಲ್ಲಣದ ರನ್ನದ ಪಕ್ಕರಕ್ಕೆಯ ಕಟ್ಟಿದ ಗೆಜ್ಜೆಯ ಸೂಟಿಯರವದ ಪೊರ್ಕುಳಗಂಟೆಯ ಮೋಹಿಸುವ ಮೊಗ ವಡದ ರೂಹಿಸುವ ನೊಸಲ ಕನ್ನಡಿಯ ಕಡುಚೆಲ್ವ ಕೊಡಂಕೆಯ ಲಂಬಿಸುವ ಚಮರದ ಚಾರುತರ ಭೂಷಣಂ ಭೀಷಣಮಾಗೆ ಕಂಬಿಯ ಕಡಿಯಣದ ಕೀಲಣದ ಹೋರಟೆಯ ಘಾರಾಘಾರಿಯೊಳ್ ಜೋಲಿಸುವ ಲಾಲಾಜಲಂ ಖುರಹತಿಯಿಂ ನೆಗೆವ ದೂಳ್ಗೆ ಚಳೆಯಂಗುಡೆ ಪರಿಣ ಚರಣಮಂ ಚೆಲ್ಲ ವಾಡುವ ಗರುಡನಂ ಪರಿಹಾಸಂಗೆಯ್ವ ಪವನನಂ ಪರಿಭವಿಸುವ ಮನಮನನುಗೆಡಿಸುವ ದಿಟ್ಟಿ ಗಳನಿಟ್ಟಣಿಸಿ ದಾಂಟುವ ಕಡುವೇಗದಿಂ ಮೆಱೆದ ಚರ್ಮದಂಡದ ನೆಮ್ಮುಗೆಯಿಲ್ಲದೆ ದನಿದೋಱು ವನುಮಾನಂ ಪೊರ್ದದೆ ಮಡಸನ್ನೆ ಮನದೊಳಂಕುರಿಸುವಲ್ಲಿಂ ಮುನ್ನಂ ಪರಿದು ಶರಧಿಯನೆಡ ಗಲಿಪ ಗಗನಮನಡರ್ವಜಾತ್ಯಶ್ವಂಗಳ ವಳಯಮುಮಂ ಸೋಕದಂಕಣಿಯ ಹಂಗಿಲ್ಲದೆ ಭೋಂಕನೇಱಿ ಸುಳಿವ ಮಿಂಚಂಸೆಳೆದು ನಿಮಿರ್ಚಿ ಕರತಳದೊಳಮರ್ಚಿದಂತೆ ಮಿಗೆಮಿಡಿದು ಪೆಗಲೊಳಿಟ್ಟ ಪಟ್ಟ

ರದ, ನೆಟ್ಟ ತ್ರಿಶೂಲವುಳ್ಳ, ನೆಡಿಸಿದ ಕೀಲುಳ್ಳ, ತಿರುಗುವ ಚಕ್ರವುಳ್ಳ, ಸುತ್ತಿ ಬಿಗಿದ ಲೋಹಬಂಧವುಳ್ಳ, ತೆತ್ತಿಸಿದ ಶೂಲವುಳ್ಳ, ಶಸ್ತ್ರವೇರಿದ ಸಾರಥಿಯುಳ್ಳ, ಮೀರಿ ನಿಂತ ಯೋಧರುಳ್ಳ ಸೈನ್ಯವು ಲೋಕಕ್ಕೆ ಹೊಸದೆನಿಸಿತ್ತು. ಚಕ್ರಗಳ ಚೀತ್ಕಾರಕ್ಕೆ ದಿಗ್ಗಜಗಳು ಹೆದರಿದವು, ಸೂತರ ಕಾಳಗಕ್ಕೆ ಭೂತಳವು ನಡುಗಿತು, ಯಮನ ಕೋಣದಂತೆ, ಮಾರಿಯ ರಭಸದಂತೆ, ಹರಡಿ ನಿಂತಿರುವ ರಥಿಕರ ಸಮೂಹವೊಂದುಕಡೆ; ಮತ್ತು ರಥಗಳನ್ನು ಮುಂದು ಮಾಡಿಕೊಂಡಿರುವ ಹೊನ್ನಿನಜೀನುಗಳುಳ್ಳ, ರತ್ನದ ಥಡಿಯುಳ್ಳ, ಕಟ್ಟಿದ ಗೆಜ್ಜೆಗಳುಳ್ಳ, ವೇಗದ ರವವುಳ್ಳ, ಹೊಕ್ಕುಳಗಂಟೆಯುಳ್ಳ, ಮೋಹಕವಾದ ಮೊಗವಾಡ ರೂಪಿಸಿರುವ, ನೊಸಲಿಗೆ ಕಟ್ಟಿದ ಕನ್ನಡಿಯುಳ್ಳ ಚೆಲುವಾಗಿ ಕಾಣುವ ಕಿವಿಗಳುಳ್ಳ, ಜೋತಾಡುವ ಚಾಮರ ಗಳುಳ್ಳ, ಮನೋಹರವಾದ ಭೂಷಣಗಳು ಭೀಷಣವಾಗಿ ಕಾಣುತ್ತಿರಲು, ಕಂಬಿಯಕಡಿ ವಾಣವುಳ್ಳ, ಕೀಲಣಹೋರಾಟದ ಘಾರಾಘಾರಿಯಲ್ಲಿ, ಜೋಲುವ ಲಾಲಾಜಲವು, ಗೊರಸನ್ನು ಕುಟ್ಟುವುದರಿಂದ ಏಳುವ ಧೂಳಿಗೆ ಚಳಯಕೊಡುತ್ತಿರಲು, ವೇಗದಲ್ಲಿ ಹರಿಚರಣ ವನ್ನು ಚಲ್ಲವಾಡುವ, ಗರುಡನನ್ನು ಪರಿಹಾಸಮಾಡುವ, ಗಾಳಿಯನ್ನು ಪರಿಭವಗೊಳಿಸುವ, ಮನೋವೇಗವನ್ನೂ ಮೀರಿರುವ, ದೃಷ್ಟಿಗಳನ್ನು ಒಟ್ಟುಗೂಡಿಸಿ ದಾಟಲೆಳಸುವ, ಅತ್ಯಂತ ವೇಗದಿಂದ ಚಾಟಿ ಏಟನ್ನು ನಿರೀಕ್ಷಿಸದೆ ದನಿದೋರುವ ಅನುಮಾನವಿಲ್ಲದೆ ಹಿಮ್ಮಡಿಸನ್ನೆಯು ಮನಸ್ಸಿನಲ್ಲಿ ಮೊಳೆವ ಮೊದಲೆ ಮುನ್ನೆಗೆದು ಕಡಲನ್ನೂ ದಾಟುವ, ಆಕಾಶಕ್ಕೆನೆಗೆವ, ಜಾತಿ ಕುದುರೆಗಳ ಸಮೂಹವನ್ನು ಸೋಕದಿರುವ, ಸಂಜ್ಞೆಯ ಹಂಗಿಲ್ಲದೆ ಜಗ್ಗನೆದ್ದು ಸುಳಿವ, ಮಿಂಚನ್ನೇ ಎಳೆದು ನಿಮಿರಿಸಿ ಕರತಳದಲ್ಲಿ ಹಿಡಿದಂತೆ ಚನ್ನಾಗಿ ಹಿಡಿದು ಹೆಗಲಿಗೇರಿ

ಗಳ ಬೆಳಗಗೆಯೆಳ್ದು ಗಗನಮನಪ್ಪಿ ಗಾಡಿಕೆಯಿಂದೊಪ್ಪುವ ಭುಜ ಪೂಜೆಯ ವೀರನಿವಾಳಿಯ ಬಿರುದಿನೇಳ್ಗೆಯ ತರದ ದೌಡೆಯ ಹೀಲಿದಳಿಯ ಮಾಲೆ ಗೋಡೆಯು ಬೆಲ್ಲುವ ಚಾಮರದ ಸೂಸುವ ಸೀಗುರಿಯ ಸೂರ್ಯಸೋಮ ವಂಶದ ರಾಜಪುತ್ರರ ರಾಯ ರಾವುತರ ದಿವ್ಯವಾಹಕರ ರಾಘೆ ಗಿಂಬುಗೊಟ್ಟು ವಾಘೆಗಳವಟ್ಟು ಪ್ರಳಯಸಮಯದೊಳ್ ಮೇಟಿಯಂ ಮಿಾಱಿದ ವಾರಿನಿಧಿಯ ತರಂಗ ಕುಲದಂತಿರ್ದ ತುರಂಗ ಬಲದೊಳಂ; ಮತ್ತಮಾತುರಂಗ ಬಲದಪರಭಾಗದೊಳ್ ಹಮ್ಮಿದ ಗುಳದ ಹೂಡಿದ ಱಂಚೆಯದ ಕಾಲಕಂಭದ ದಂಡೆಯ ಬರಿಕೆಯ್ಯ ಪಟ್ಟೆಯದ ಕೋಡ ಮೊನೆಯ ಕೀರ್ತಿಮುಖದ ಅಗ್ರಪಲ್ಲವದ ಪತ್ರಿಗತಿಯ ತಲೆಯೊಳೊಟ್ಟದ ಕುಂಕುಮದ ಕಪೋಳ ದೊಳ್ ಸುರಿವ ಮದಜಲದ ಬೆನ್ನ ಮೇಲಿಳಿವ ಬಿಳಿಯ ಚವರದ ಮುಂತಣ ಮಾವಂತರ ಪಿಂತಣ ಬಡಿಗೆಕಾಱರ ನಡುವಣ ವೀರ ಜೋದರ ಮುಗಿಲನಳ್ಕಿಱಿವ ಕದಳಿಯ ಕಂಭದ ಬೊಬ್ಬೆಗುಡು ವಾರೆಕಾಱರ ಘುಳುಘುಳಿಸುವ ವೀರವೃಂದದ ಘುಡು ಘುಡಿಸುವ ದೌಡೆಯ ಕೋಳಾಹಳದಬ್ಬರ ಮಾಗೆ ಸೂರ್ಯಮಂಡಲಮಂ ಸೆಳೆವ ಸಿಡಿಲಂ ಪಿಡಿವ ದಿಕ್ಕರಿಗಳನೆಳ್ಬಟ್ಟುವ ಕಡುಗಾಯ್ಪಂ ತಳೆದು ನೀಲಾಚಳಂ ಸಾಲಿಟ್ಟಂತೆ ಅಂಜನಗಿರಿಯೊಯ್ಯಾರಂ ಬಡೆದಂತೆ ಕಾಲಮೇಘಂಗಳ್ ಕವಿದಂತೆ ನಿಂದ ಗಜ ಘಟಾಪಟಲದೊಳಂ; ಇಂತೊಡ್ಡಿನಿಂದ ಹಸ್ತ್ಯಶ್ವರಥಪದಾತಿಯೆನಿಪದೇವರ್ಕಳ ಚಾತುರಂಗ

ಸಿದ ಪಟ್ಟೆಗಳ ಬೆಳಗು ಸಸಿಯಾಗಿ ಗಗನವನ್ನು ಅಪ್ಪಿ, ಓಜೆಯುಳ್ಳಭ ಜಬಲದ ಬಿರುದಾಂತ ವೀರಪಡೆಯ, ತರದ ದೌಡೆ, ನವಿಲು ಗರಿಯಛತ್ರಿ, ಮಾಲೆಗೊಂಡೆಯ, ಬೀಸುನಚಾಮ ರಗಳ, ಸೂಸುನ ನವಿಲುಗರಿಯಿಂದ ಮಾಡಿದ ಚಾಮರವುಳ್ಳ, ಸೂರ್ಯ-ಚಂದ್ರವಂಶದ ರಾಜ ಪುತ್ರರುಳ್ಳ, ರಾಯ–ರಾವುತರು, ದಿವ್ಯ ಅಶ್ವಾರೋಹಕರು, ತೊಡೆಗೆ ಇಂಬುಗೊಟ್ಟು, ಲಗಾಮುಳಿಳವಡಿಸಿ, ಪ್ರಳಯ ಕಾಲದಲ್ಲಿ ಎಲ್ಲೆ ಮಿಾರಿದ ಕಡಲ ಅಲೆಯ ಮಾಲೆಗಳಂತೆ ಇರುವ ಅಶ್ವಬಲದಿಂದಲೂ ಮತ್ತು ಆ ಅಶ್ವಪಡೆಯ ಮತ್ತೊಂದು ಮಗ್ಗುಲಲ್ಲಿ ಆನೆಗಳ ಬೆನ್ನ ಮೇಲೆ ಕಟ್ಟಿದ ತೊಟ್ಟಿಲುಗಳುಳ್ಳ, ಹೂಡಿದ ರೆಂಚೆ (ಥಡಿ), ಕಂಬದಂತಿರುವ ಕಾಲು ಗಳುಳ್ಳ, ಸೊಂಡಿಲಿಗೆ ಅಳವಡಿಸಿದ ಕಿರುಗತ್ತಿಯುಳ್ಳ, ಚೂಪಾದ ಕೊಂಬುಳ್ಳ, ಕೀರ್ತಿ ಮುಖವೂ,ಅಗ್ರಪಲ್ಲವವೂ, ಪತ್ರಗತಿಯೂ ತಲೆಯಲ್ಲಿ ಅಲಂಕರಿಸಿದ ಕುಂಕುಮವೂ ಉಳ್ಳ, ಕಪೋಲದಲ್ಲಿ ಸುರಿವ ಮದಜಲವುಳ್ಳ,ಬೆನ್ನಮೇಲೆ ಇಳಿಬಿಟ್ಟ ಬಿಳಿಚಾಮರಗಳುಳ್ಳ, ಮುಂದು ಗಡೆ ಮಾವುತರೂ, ಹಿಂದೆ ಬಡಿಗೆಕಾರರೂ, ಇವರ ನಡುವೆ ವೀರಯೋಧರು, ಮುಗಿಲನ್ನೇ ಅಳ್ಳಿರಿದು ಕದಳಿಯ ಕಂಬದ ಬೊಬ್ಬೆಗುಡುಸ ಗುಲ್ಲೆಬ್ಬಿಸುವವರುಳ್ಳ, ಘುಳುಘುಳಿಸುವ ವೀರರವೃಂದದ ಘುಡುಘುಡಿಸುವ ದೌಡೆಯುಳ್ಳಕೋಳಾಹಳವು ಅಬ್ಬರವಾಗಲು, ಸೂರ್ಯ ಮಂಡಲವನ್ನು ಸೆಳೆಯುವ, ಸಿಡಿಲನ್ನು ಹಿಡಿಯುವ, ದಿಗ್ಗಜಗಳನ್ನು ಎಬ್ಬಿಸಿ ಓಡಿಸುವ, ಚನ್ನಾಗಿಕಾಯ್ದ ನೀಲಾಚಲವು ಸಾಲಿಟ್ಟಂತೆಯೂ, ಅಂಜನಗಿರಿಯೇ ಒಯ್ಯಾರವನ್ನು ಪಡೆದಂತೆ, ಕಾಲಮೇಘಗಳು ಕವಿದಂತೆ, ಆನೆಯ ಪಡೆಯೊಂದೆಡೆ ನಿಂತಿವೆ;

ಹೀಗೆ ಮುಂದೊಡ್ಡಿರುವ ದೇವಸೈನ್ಯದ ಆನೆ-ಕುದುರೆ–ರಥ ಮತ್ತು ಕಾಲಾಳುಗಳ ಚತುರಂಗಬಲದ ಕಟ್ಟೆದಿರಿನಲ್ಲಿಯೇ ಒಡ್ಡಿನಿಲ್ಲಿಸಿರುವ ತಾರಕಾಸುರನ ಚತುರಂಗ ಬಲವು

ಬಲದ ಕಟ್ಟದಿರೊಳೊಡ್ಡಿನಿಂದ ತಾರಕಾಸುತನ ಚಾತುರಂಗಬಲವೆಂತಿರ್ದುದೆಂತೆಂದೊಡೆ ಪೆರ್ಬುಲಿಯೊರ್ಬುಳಿಯಂತೆ ಸಿಂಗದ ಸಂಗರದಂತೆ ಶರಭಂಗಳ ನೆರವಿಯಂತೆ ಭೇರುಂಡನ ಹಿಂಡಿನಂತೆ ಕುಳಿಕನ ಕುಳದಂತೆ ನಂಜಿಕ ಪುಂಜದಂತೆ ಸಿಡಿಲಗಡಣದಂತೆ ಕಾಳ್ಕಿರ್ಚಿನ ಗೂಳೆಯಂತೆ ವಡಬಾನಲನ ಪಡೆಯಂತೆ ಕಾಲಾಗ್ನಿಯ ಮಾಲೆಯಂತೆ ಮಾರಿಯ ಮೂರಿಯಂತೆ ಮೃತ್ಯುವಿನ ಕೊತ್ತಳಿಯಂತೆ ಅಂತಕನ ಸಂತತಿಯಂತೆ ಭೈರವನ ಬಳಗದಂತೆ ಮುಂತಿರ್ದ ರಕ್ಕಸವಡೆಯ ನಡುವೆ ನಿಂದ ವೀರ ತಾರಕಾಸುರಂ ತನ್ನ ಬಲಕ್ಕಿದಿರಾದ ನಿರ್ಜರಬಲಮಂ ನಿರೀಕ್ಷಿಸಿ ರಾಕ್ಷಸ ಗುರುವಪ್ಪ ಭಾರ್ಗವನ ಮುಖಮಂ ನೋಡಿ,

ಕಂ॥ ಒಟ್ಟಿದ ನಿರ್ಜರ ಬಲದೊಳ್
ಕಟ್ಟದಿರಾಗಿರ್ದು ನಿಂದರಾರಾರವರಂ ।
ನೆಟ್ಟನೆನಗಱಪವೇಳ್ಕೆನೆ
ನಿಟ್ಟಯಿಸಿಯೆ ನುಡಿದನಸುರಕುಲಗುರು ಭರದಿಂ ॥ ೫೬

ಮ ॥ ನಡೆತಂದುನ್ನತವಕ್ತ್ರನಾಗಿ ಸುರರಂ ಗಂಧರ್ವರಂ ಯಕ್ಷರಂ
ಎಡೆಗೊಂಡೊಪ್ಪುವ ರತ್ನಕೋಟಿ ರುಚಿರ ಪ್ರಖ್ಯಾತಕೋಟೀರಮಿ ।
ರ್ಮಡಿ ದಿವ್ಯಪ್ರಭೆಯಿಾಯೆ ಬೆಳ್ಗೊಡೆಯ ವೀರಚ್ಛಾಯೆಯೊಳ್ ವಜ್ರಮಂ
ಪಿಡಿದೈರಾವತಮೇಱ ನಿಂದನವನಿಂದ್ರಂ ಕೇಳ್ ದನುಪ್ರೋದ್ಭವಾ ॥ ೫೭

ಹೇಗಿರುವುದೆಂದರೆ–ಹೆಬ್ಬುಲಿಗಳ ಹಿಂಡಿನಂತೆ,ಸಿಂಹಗಳ ಯುದ್ಧದಂತೆ, ಶರಭಗಳ ಸಮೂಹದಂತೆ, ಭೇರುಂಡನ ಹಿಂಡಿನಂತೆ, ಕುಳಿಕ (ಒಂದು ಜಾತಿಸರ್ಪ)ನ ಸಮೂಹದಂತೆ, ನಂಜು (ವಿಷ) ಪುಂಜದಂತೆ, ಕಾಡುಕಿಚ್ಚಿನ ಪಯಣದಂತೆ, ಬಡಬಾಗ್ನಿಯ ಪಡೆಯಂತೆ, ಕಾಲಾಗ್ನಿಯ ಮಾಲೆಯಂತೆ, ಮಾರಿಯ ಮೂತಿಯಂತೆ, ಮೃತ್ಯುವಿನ ಸಮೂಹದಂತೆ, ಅಂತಕ (ಯಮ)ನ ಸಂತಾನದಂತೆ, ಭೈರವನ ಬಳಗದಂತೆ, ಮುಂದೆ ನಿಂತಿರುವ ರಾಕ್ಷಸ ಪಡೆಯ ಮಧ್ಯಭಾಗದಲ್ಲಿ ನಿಂತಿರುವ ವೀರತಾರಕಾಸುರನು ತನ್ನ ಸೈನ್ಯದ ಎದುರಿಗಿರುವ ದೇವ ಸೈನ್ಯವನ್ನು ನೋಡಿ ರಾಕ್ಷಸಗುರು ಶುಕ್ರಾಚಾರ್ಯನ ಮುಖವನ್ನು ನೋಡಿ, ಹೀಗೆಂದನು—
೫೬. ತನ್ನನ್ನು ಪ್ರತಿಭಟಿಸಿದ ಸುರಸೈನ್ಯದಲ್ಲಿ ನೇರವಾಗಿ ಯಾರು ಯಾರು ಎದುರಾಗುವರೊ ಅವರನ್ನು ನನಗೆ ಪರಿಚಯಮಾಡಿಕೊಡು ಎಂದು ತಾರಕನು ಶುಕ್ರಾಚಾರ್ಯರನ್ನು ಪ್ರಾರ್ಥಿಸಲು ಅಸುರಗುರು ಹೇಳತೊಡಗಿದನು. ೫೭. ಎಲೈ ದನುಜೇಶ್ವರನೆ, ಅಗೋ ನೋಡು! ಈಗ ಸುರ, ಗಂಧರ್ವ, ಯಕ್ಷರ ಮಧ್ಯದಲ್ಲಿ ಬೆಳ್ಗೊಡೆ ಕಾಣುತ್ತಿದೆಯಲ್ಲವೆ? ಅದರ ವಿವಿಧ ರತ್ನಪ್ರಭೆಯಿಂದ ಅವನ ಉನ್ನತ ಮುಖಕಾಂತಿ ಇಮ್ಮಡಿಸಿದೆ; ಅದರ ವೀರಚ್ಛಾಯೆಯಲ್ಲಿ ವಜ್ರಾಯುಧವನ್ನು ಹಿಡಿದು ಐರಾವತವನ್ನು ಏರಿ ಕುಳಿತಿರುವ

ಕಂ॥ ಆತನ ಕೆಲದೊಳ್ ಚಂಡ
ವ್ರಾತಂ ಸಿಡಿಲೇಳ್ಗೆಯೇಳ್ವ ಬಲ್ದಗರೇಱಿ ।
ರ್ದಾತಂ ಸಕಳಜಗದ್ವಿ
ಖ್ಯಾತಂ ಹುತವಹನೆನಿಪ್ಪನವಧರಿಸಸುರಾ ॥ ೫೮

ಉರುತರ ಭೀಕರವಕ್ತ್ರಂ
ಕರತಳದಿಂ ಕಾಲದಂಡಮಂ ಕಡುಪಿಂದಂ ।
ತಿರಿಪುತ್ತಿರ್ಪವನಂತಕ
ನರಿದೆನಿಪ ಉಲಾಯುವಾಹನಂ ದನುಜೇಂದ್ರಾ ॥ ೫೯

ಅಸಮುಬಳನತುಳವಿಕ್ರಮ
ನಸುರಕುಲೋತ್ತಂಸನಾಜಿಮುಖಹಸನಂ ಮಾ ।
ನಸನಂ ಪಾಯ್ದೇಱಿದ ರ
ಕ್ಕಸರರಸಂ ನಿರೃತಿ ನಿರುತವೆಲೆ ದನುಜೇಂದ್ರ ॥ ೬೦

ಅವಧರಿಸೆಲೆ ತಾರಕ ಮಕ
ರವನೇಱಿ ವಿಶಾಲಪಾಶಮಮಂ ಪಿಡಿದತ್ಯು ।
ತ್ಸವದಿಂದಂ ನಿಂದಾತಂ
ನವರತ್ನಾಭರಣನಿಕರಕಿರಣಂ ವರುಣಂ ॥ ೬೧

ಸಂದಣಿಪ ಕುರುಳ ಕುಂತದ
ಮುಂದಣ ಸಾಮಂತರಾಜ ಪುತ್ರೋತ್ಕರದಿಂ ।

ವನೇ ದೇವೇಂದ್ರ! ೫೮. ಎಲೈ ಅಸುರಾಧಿಪನೆ, ಆ ದೇವೇಂದ್ರನ ಪಕ್ಕದಲ್ಲಿ ಭಯಂಕರವಾದ ಸಿಡಿಲಮುದ್ದೆಯಂತಿರುವ ಬಲಿಷ್ಠವಾದ ಟಗರನ್ನು ಹತ್ತಿರುವವನೇ ಜಗತ್ಪ್ರಸಿದ್ಧನಾದ ಅಗ್ನಿ! ೫೯. ಎಲೈ ದನುಜೇಂದ್ರನೆ, ಭೀಕರವಾದ ಮುಖ, ಕೈಯಲ್ಲಿ ಕಾಲದಂಡ ಅದನ್ನು ದರ್ಪದಿಂದ ತಿರುಗಿಸುತ್ತಾ ಕೋಣವನ್ನೇರಿರುವವನೇ ಯಮಧರ್ಮ! ೬೦. ಹೇ ದನುಜೇಶ, ಅಸಮಬಳ, ಅತುಲವಿಕ್ರಮ, ಅಸುರಕುಲಶ್ರೇಷ್ಠ, ಅಸುರಾಧಿಪತಿ, ಯುದ್ಧಕುಶಲನಾದ ನಿರೃತಿ; ನರವಾಹನನಾಗಿ ನಿಂತಿದ್ದಾನೆ! ೬೧. ಎಲೈ ತಾರಕನೆ, ಮೊಸಳೆಯನ್ನೇರಿ, ವಿಶಾಲಪಾಶವನ್ನು ಹಿಡಿದು ರತ್ನಾಭರಣಕಿರಣಗಳಿಂದ ಭೂಷಿತನಾಗಿ ಉತ್ಸಾಹಿಯಾಗಿ ನಿಂತಿರುವವನೇ ವರುಣ! ೬೨. ಮುಖದ ಮೇಲೆ ಕೆದರಿರುವ ಮುಂಗುರುಳು, ಕುಂತಾಯುಧ ಹಿಡಿದು ಸಾಮಂತ ರಾಜಪುತ್ರರು ಸುತ್ತುವರಿದಿರುವ ವಾಯುದೇವನು ಚಿಗರೆ

ಗೊಂದಣಿಸಿ ಪರ್ವಿ ರಣದೊಳ್
ನಿಂದಿರ್ಪವನೇಣವಾಹನಂ ಪವಮಾನಂ ॥ ೬೨

ತುಳಗವನೇಱಿ ಮಯೂಖಾ
ವರಣ ಸಿತಚ್ಛತ್ರಮೆಸೆಯೆ ಗರುಡರ ಗಂಧ ।
ರ್ವರ ಯಕ್ಷರ ಸಂದಣಿಯೊಳ್
ಬರುತೊಪ್ಪುವ ಭೀಕರಂ ಕುಬೇರಂ ದನುಜಾ ॥ ೬೩

ನಂದಿಯನೇಱಿ ಗಣಂಗಳ
ಮುಂದೆ ವೃಷಭಧ್ವಜಮನೆತ್ತಿ ಸಮರೋತ್ಸಾಹಾ ।
ನಂದದೊಳೆ ಬಂದು ಮುಂದಂ
ನಿಂದವನೀಶಾನನೆಂಬನೊರ್ವ ಗಣೇಶಂ ॥ ೬೪

ವರಚಕ್ರಂ ಶಾರ್ಙ್ಗ ಗದೆ
ಯುರುತರಭೀಕರಮನೀಯೆ ಸಂಗರರಂಗ ।
ಕ್ಕುರವಣಿಸುತ್ತುಂ ಬರ್ಪಂ
ಗರುಡಧ್ವಜನಸುರಮರ್ದನಂ ಕೇಳರಸಾ ॥ ೬೫

ಸುತ್ತಿರ್ದ ತಳೆಯ ದಿವಿಜರ
ವೊತ್ತ್ರದ ಗಂಧರ್ವಕುಲದ ನಡುವೆ ವಿಳಾಸಂ ।
ಬೆತ್ತ್ತಿಸಂಭ್ರಮದಿಂದೆ ಬ
ರುತ್ತಿರ್ಪಂ ಹಂಸವಾಹನಂ ಚತುರಾಸ್ಯಂ ॥ ೬೬

ಯನ್ನೇರಿ ರಣ ಮಧ್ಯದಲ್ಲಿ ನಿಂತಿದ್ದಾನೆ. ೬೩. ಎಲೈ ದನುಜೇಶ್ವರ, ಕುದುರೆಯನ್ನೇರಿ, ರತ್ನಗಳ ಕಿರಣಗಳಿಂದ ಹೊಳೆಯುವ ಬಿಳಿಕೊಡೆ ಹಿಡಿದು, ಗರುಡ ಗಂಧರ್ವಯಕ್ಷರ ಸಂದಣಿಯಲ್ಲಿ ಬರುತ್ತಿರುವ ರಣಭೀಕರನೇ ಕುಬೇರ! ೬೪. ಬಸವನ ಮೇಲೆ ಕುಳಿತು ಪ್ರಮಥ ಗಣಗಳ ಮಧ್ಯದಲ್ಲಿ ಬಸವ ಬಾವುಟವು ಹಾರಾಡುತ್ತಿರಲು ಸಮರೋತ್ಸಾಹದಿಂದ ಬಂದಿರುವವನೇ ಈಶಾನನೆಂಬ ದಿಕ್ಪಾಲಕ! ೬೫. ಎಲೈ ಅಸುರಾಧಿಪತಿ, ಬೆಳಗುತ್ತಿರುವ ಸುದರ್ಶನ ಚಕ್ರ, ಶಾರ್ಙ್ಗಧನುಸ್ಸು, ಗದೆ, ಇವುಗಳು ಭಯೋತ್ಪಾದಕವಾಗಿ ಕಾಣುತ್ತಿರಲು ರಣರಂಗಕ್ಕೆ ದರ್ಪದಿಂದ ಬರುತ್ತಿರುವವನೇ ಅಸುರಾರಿ ವಿಷ್ಣು! ೬೬. ಸುತ್ತುವರಿದಿರುವ ಪ್ರಭಾಮಂಡಲದ ಮಧ್ಯದಲ್ಲಿ ದಿವಿಜ–ಗಂಧರ್ವ ಕುಲದ ನಡುವೆ ವಿಲಾಸ–ಸಂಭ್ರಮ

ವ ॥ ಎಂದು ತಾರಕಾಸುರಂಗೆ ಭಾರ್ಗವಂ ಬೇಱೆವೇಱೆ ಮಾಱೊಡ್ಡಿ ಏಱೆನಿಂದ ಗೀರ್ವಾಣ ಮುಖ್ಯರಂ ತೋಱುತ್ತಿರ್ಪ ಸಮಯದೊಳಮರಪತಿ ಸಮರಕ್ಕೆ ಸನ್ನದ್ಧಮಾದ ತನ್ನ ಬಲಕ್ಕೆ ಸನ್ನೆದೋಱೆ ಹೊಯ್ವನಿಸ್ಸಾಳದ ಭೇರಿಯ ತಂಬಟದ ಚಂಬಕದ ವೀರವೃಂದದ ದೌಡೆಯ ಪಟಹದ ಢಕ್ಕೆಯ ಧವಳ ಶಂಖದ ಜವಳಿಗಾಳೆಯ ತಿತ್ತಿರಿಯ ಕಿನ್ನರಿಯ ಹೊನ್ನ ಬೊಂಬುಳಿಯ ರನ್ನದ ಕೊಂಬಿನ ಕೋಳಾಹಳಂ ನೆಗಳೆ, ಮಸಗಿಬೊಬ್ಬಿಟ್ಟು ದೆಸೆದೆಸೆಗೆ ಪರಿದು ಮೂದಲಿಸಿ ಮುಂಗುಡಿಗೆದಱೆ ವೊಗ್ಗರಂಬೊಯ್ದುಗ್ಗಲಿಸಿ ನಡೆದು ಬಗ್ಗಿಸಿ ಬಯ್ದೊಗ್ಗುಗೆಡದೆ ಮುಂಕಣಿಸಿ ಭೋಂಕನೆ ನೂಂಕಿ ಪದಾತಿಬಲಂ ಪಡಿತಳಿಸಿ ರಥವ್ರಾತಮಂ ತುರಂಗ ಸಂಘಮಂ ಗಜಘಟಾ ಪಟಳಮಂ ಸಂಗಡಿಸಿ ಪಿಂಗದೊತ್ತರಿಸಿ ತನಗಿದಿರಂ ಬರ್ಪ ಚತುರಂಗಬಲದ ಭಾರದುರವಣೆಯ ತಾರಕಾಸುರಂ ಕಂಡು ಕೋಪಮನೆಡೆಗೊಂಡಾಸ್ಫೋಟಿಸಿ ಬಾಹಾಸ್ಫಾಲನಂಗೆಯ್ದು ಗಜರಿ ಗರ್ಜಿಸಿ ಗದ್ದುಗೆವೊಯ್ದೆರ್ದ್ದ ಪೊರ್ದಿನಿಂದು ಮಿಕ್ಕುಮೀಱುವ ರಕ್ಕಸವಡೆಗೆ ಕಾಯ್ದು ಕಡುಕೆಯ್ದು ಮೆಯ್ದೋಱೆ ಕೆಯ್ವೀಸಿದಾಗಳ್

ಚಂ ॥ ಚರಣದ ಧೂಳಿ ಬಾಂದೊಱೆಗೆ ಬಾಸಣಮಾಗಿರೆ ಹೇಷಿತಂ ದಿಶಾ
ಕರಿಗಳನೆಳ್ಚೆ ಬೃಂಹಿತಮಜಾಂಡಮನಾಂತಿರೆ ಚೀತ್ಕೃತಂ ಧರಾ ।
ಧರಮನದಿರ್ಪೆ ತಾಗಿದು ಪದಾತಿ ಪದಾತಿಯೊಳಶ್ವಮಶ್ವದೊಳ್
ಕರಿ ಕರಿಯೊಳ್ ರಥಂ ರಥದೊಳದ್ಭುತಮಾಹವಭೂಮಿಗಪ್ಪಿನಂ ॥ ೬೭

ಗಳಿಂದ ಬರುತ್ತಿರುವವನೇ ಚತುರ್ಮುಖ. ವ|| ಹೀಗೆ ತಾರಕಾಸುರನಿಗೆ ಭಾರ್ಗ (ಶುಕ್ರಾಚಾರ್ಯ)ನು ಬೇರೆ ಬೇರೆ ಪ್ರತಿವ್ಯೂಹ ರಚಿಸಿ ಮಾರಿರುವ ದೇವತೆಗಳನ್ನು ತೋರುತ್ತಿರುವ ಸಮಯದಲ್ಲಿ ದೇವೇಂದ್ರನು ಯುದ್ಧಕ್ಕೆ ಸಿದ್ಧವಾದ ತನ್ನ ಸೈನ್ಯಕ್ಕೆ ಸಂಜ್ಞೆ ಮಾಡಿದನು. ಭೇರಿ, ತಮಟೆ, ಚಂಬಕ (ಭೇರಿವಿಶೇಷ)ವುಳ್ಳ ವೀರರು ತಮ್ಮ ತಮ್ಮ ವಾದ್ಯ ಬಾರಿಸಿದರು, ಡೌಡೆ, ಪಟಹ, ಢಕ್ಕೆ ಧವಳಶಂಖ, ಅವಳಿಕಹಳೆ, ತಿತ್ತಿರಿ, ಕಿನ್ನರಿ, ಹೊನ್ನ ಬೊಂಬುಳಿ, ರನ್ನದಕೊಂಬು ಇವುಗಳ ಕೋಲಾಹಲ ಮೊಳಗಿತು, ಕೂಡಲೆ ಪದಾತಿಬಲ ದಿಕ್ಕು ದಿಕ್ಕಿಗೆ ಪರಿದು ಮೂದಲಿಸಿ, ಮುಂಗುಡಿಗೆದರಿ, ಒಟ್ಟುಗೂಡಿ, ಅಗ್ಗಲಿಸಿ, ನಡೆದು ಒಯ್ದು ಒಗ್ಗುಗೆಡದೆ ಮುನ್ನುಗ್ಗಿ, ತಕ್ಷಣನೂಂಕಿ ಪದಾತಿಬಲ ಪ್ರವೃತ್ತವಾಯಿತು, ರಥ ಗಳು, ಅಶ್ವಗಳು, ಗಜ ಬಲಗಳು ತನತನಗೆ ಇದಿರಾದ ಚತುರಂಗ ಬಲದ ಕ್ರೌರ್ಯವನ್ನು ತಾರಕಾಸುರನು ಕಂಡು ಕೃದ್ಧನಾಗಿ ಗದರಿಗರ್ಜಿಸಿ, ಭುಜತಟ್ಟಿ ದಿಗ್ಗನೆದ್ದು ತನ್ನ ರಕ್ಕಸ ಪಡೆಗೆ ಬಿಸಿಯೇರಿಸಿ ಕೈಬೀಸಿ ಸೂಚನೆ ಕೊಟ್ಟನು. ೬೭. ಕಾಲ್ತುಳಿತದಿಂದ ಎದ್ದ ಧೂಳು ಗಗನಾಂಗಣವನ್ನು ವ್ಯಾಪಿಸಿತು; ಕುದುರೆಗಳ ಹೇಷಾರವ ದಿಗ್ಗಜಗಳನ್ನು ಎಚ್ಚರಿಸಿತು, ಆನೆಗಳ ಬೃಂಹಿತ ಬ್ರಹ್ಮಾಂಡವನ್ನು ತುಂಬಿತು, ಚೀತ್ಕಾರ ಪರ್ವತಗಳನ್ನು ಕದಲಿಸಿತು, ಕಾಲಾಳು ಕಾಲಾಳುಗಳೊಡನೆ, ಅಶ್ವಗಳು ಅಶ್ವಗಳೊಡನೆ, ಕರಿ ಕರಿಗಳೊಡನೆ, ರಥ ರಥಗಳೊ

ವ॥ ಅಂತು ತಾಗಿದಾಗಳ್

ಚಂ॥ ಬೆರಸಿ ಪದಾತಿ ನೆಕ್ಕು ನೆರಿಲೆಂಬ ನೆಳಿಲ್‌ನೆಳಿಲೆಂಬ ಘಾರು ಘ
ರ್ಘರ ಘರಿಲೆಂಬ ದೊಪ್ಪುಧಡಲೆಂಬ ಬುದಿಲ್ ಬುದಿಲೆಂಬ ಸಂಭ್ರಮಂ।
ನೆರೆದು ಖಣಿಲ್ ಖಣಿಲ್ ದೊಗಹು ಧೊಕ್ಕು ದುಡುಮ್ಮು ತಟಿಲ್ ನಿಟಿಲ್ ಪಟಿಲ್
ಗರಿಗರಿಲೆಂಬ ನಿಷ್ಠುರರವಂ ಮಿಗೆ ತಳ್ತುಱಿದತ್ತು ಯುದ್ಧದೊಳ್ ೧೮

ವ॥ ಅನಂತರದಲ್ಲಿ,

ಚಂ॥ ಗಿರಿಗಿರಿಯೊಳ್ ಪಳಂಚುವವೊಲೆಯ್ದಿ ರಥಂ ರಥದೊಳ್ ಪಳಂಚೆ ಸೂ
ತರ ರಥಚಕ್ರಸಂಚಯದ ಕಾರ್ಮುಕವೀಥಿಯ ಮುಕ್ತಮಾರ್ಗಣೋ।
ತ್ಕರದ ವಿಶಾಲಹುಂಕೃತಿ ಸಮುದ್ಧತ ಚೀತ್ಕೃತಿ ಚಾರು ಟಂಕೃತಿ
ಸ್ಫುರಿತ ನವೀನ ಭೀಂಕೃತಿ ಚಮತ್ಕೃತಿಯಾಯ್ತು ಮಹಾಜಿರಂಗದೊಳ್॥ ೧೯

ವ॥ ಅಂತು ತಾಗಿದ ರಥಪೃತಾನದ ಕಾಳೆಗಮಂ ಕಂಡು,

ಚಂ॥ ಜಳಧಿತರಂಗಸನ್ನಿಭತುರಂಗಬಲಂ ಮುಳಿದೇಱಿವಾಹಕಾ
ವಳಿಯ ನಿಶಾತಖಡ್ಗದ ಖಣಿಲ್ ಖಟಿಲೆಂಬ ಮಹಾರವಂ ಮುಖೋ।
ಚ್ಚಳಿತರವಂ ಖುರೋದ್ಗತರವಂ ಕಳಿಕೋಚ್ಚರವಂ ಕಶಾರವಂ
ಬಳಸಿ ನಭಃಸ್ಥಲಕ್ಕೆ ಬಳೆಯುತ್ತಿರೆ ತಾಗಿದುದಾಜಿರಂಗದೊಳ್॥ ೨೦

ಡನೆ ಯುದ್ಧವನ್ನು ಆರಂಭಿಸಿದವು. ೧೮. ಆ ಯುದ್ಧಪ್ರದೇಶದಲ್ಲಿ ಕಾಲಾಳು ಮೊದಲಾದ ಸೈನ್ಯ ಪರಸ್ಪರ ರಭಸದಿಂದ ಹೋರಾಡುತ್ತಿರುವಾಗ ಎಲ್ಲಿ ನೋಡಿದರೂ ನೆಕ್ಕುನೆರಿಲ್, ನೆಳಿಲ್ ನೆಳಿಲ್, ಘಾರು ಘರ್ಘರ ಘರಿಲ್, ಧೊಪ್ಪಧಡಲ್ ಮುಂತಾದ ಅನುಕರಣ ಶಬ್ದ ತುಂಬಿಹೋಗಿತು. ೧೯. ಒಂದುಗಿರಿ ಮತ್ತೊಂದುಗಿರಿಯಲ್ಲಿ ತಾಗುನಂತೆ ರಥವು ರಥವನ್ನು ತಾಗಿತು, ಸೂತರ ರಥಚಕ್ರಗಳ ಸಮೂಹ, ಬಿಲ್ಲುಗಳ ಬೀದಿ, ಬಿಟ್ಟಬಾಣಗಳ ಸಂದಣಿ, ವಿಶಾಲಹುಂಕಾರ, ಚೀತ್ಕಾರಗಳು, ಟಂಕಾರಗಳು ಇವೆಲ್ಲವುಗಳಿಂದ ಭಯಂಕರ ಸನ್ನಿವೇಶವು ಆ ರಣರಂಗದಲ್ಲಿ ಒಂದು ಚಮತ್ಕೃತಿಯೆನಿಸಿತು. ೨೦. ಆ ರಣರಂಗದಲ್ಲಿ ಒಂದೆಡೆ ಕುದುರೆಕಾಳಗ ; ಅದು ಸಾಗರ ತರಂಗಗಳಂತೆ ತೆರೆ ತೆರೆಯಂತೆ ಅನೇಕ ಪಟಲಗಳಿಂದ, ಕ್ರುದ್ಧರಾದ ಭಟರು ಕುದುರೆ ಏರಿಹೋರಾಡುವಾಗ ಅವರ ತೀಕ್ಷ್ಣ ಖಡ್ಗಗಳ ಖಣಿಲ್ ಖಟಲೆಂಬ ಶಬ್ದ, ಅವರ ಬಾಯಿಂದ ಹೊರಡುವ ವೀರಾಲಾಪಗಳ ಶಬ್ದ, ಕುದುರೆ ಗೊರಸುಗಳ ಶಬ್ಧ, ತೀಕ್ಷ್ಣವಾದ ಚಾಟಿಯಶಬ್ದ ಇದೆಲ್ಲವೂ ಏಕವಾಗಿ ಗಗನ ತಳದವರೆಗೆ

ಚಂ॥ ನೆರೆದುಬುಬೆಂಬ ಕಟ್ಟದಿರ ತಟ್ಟನ ರಾವುತರೊಳ್ ಕಡಂಗಿ ಮ-
ಚ್ಚರಿಸಿ ಮರಳ್ದು ಮೂದಲಿಸಿ ಕೂರಸಿಯಿಂ ತಲೆ ಪಾಱೆ ಬೀಳ್ವಿನಂ ॥
ಸರಿಬೆಸನಾಗಿ ಪೊಯ್ಯೆ ತಲೆ ಮಾರ್ತಲೆಯೊಳ್ ನಿಮಿರ್ದಟ್ಟೆಯಿಟ್ಟೆಯೊಳ್
ಹರಿಹರಿಯೊಳ್ ಪಳಂಚೆ ಪೊಸತಾದುದು ಸಂಗರರಂಗಭೂಮಿಯೊಳ್ ॥ ೭೧

ವ॥ ಆ ಕಾಳೆಗದ ಕಡುಪಂ ಚಂಡ ಗಜಾರೋಹಕರ್ ಕಂಡು,

ಉ॥ ಮುಂಕಣೆಸುತ್ತೆ ಚಪ್ಪರಿಸುತುಂಗುಟದಿಂದೊದೆದಾರ್ದು ಸಾರ್ದು ಕೂ
ರಂಕಸಮಿಟ್ಟು ಭೈ ಭಲರೆ ಭೈಯೆನುತುಂ ಕಡುಪಿಂದೆ ನೂಂಕೆ ನಿ।
ಶ್ಶಂಕತೆಯಿಂದ ತೂಳ್ದು ಘಟೆಯೊಳ್ ಘಟೆ ಜೋಡಿಸಿ ದಂತಜಾಲದೊಳ್
ಭೋಂಕನೆ ಪೊಣ್ಮೆ ತೋರಕಿಡಿ ಸೂಸೆ ಕಱುತ್ತುಱೆ ತಾಗಿತಾಜಿಯೊಳ್ ॥ ೭೨

ವ॥ ಆಗಳ್

ಕಂ ಭರಿಕೆಯ್ ಭರಿಕೆಯ್ಯೊಳ್ ನಿ
ನಿಷ್ಠುರದಂತಂ ದಂತದೊಳ್ ಮುಖಂ ಮದಮುಖದೊಳ್ ।
ವರಜೋದರ್ ಜೋದರೊಳೊ
ತ್ತರಿಸಿದರಾರೋಹಕರ್ಕಳಾರೋಹಕರೊಳ್ ॥ ೭೩

ಮುಂತಿದಿರೊಳ್ ನೂಂಕಿದ ಮಾ
ವಂತರ ಗಳಗರ್ಜನಕ್ಕೆ ಕಡುಮುಳಿಯುತ್ತ ।

ವ್ಯಾಪಿಸಿತ್ತು. ೭೧. ಆ ಯುದ್ಧಭೂಮಿಯಲ್ಲಿ ಕಟ್ಟಾಳುಗಳಾದ ರಾವುತರು ಎದುರಾಳಿಗಳೊಡನೆ ಕುಪಿತರಾಗಿ, ಮತ್ಸರಿಸಿ, ಮತ್ತೆ ಮತ್ತೆ ಮೂದಲಿಸಿ, ತಮ್ಮ ಕ್ರೂರವಾದ ಖಡ್ಗಗಳಿಂದ ಅವರ ತಲೆಗಳನ್ನು ಚೆಂಡಾಡಿದಾಗ ಆ ತಲೆಗೆ ಗಳು ಕೆಳಕ್ಕೆ ಬೀಳುವಾಗ ಇತರ ತಲೆಗಳನ್ನು ತಾಗಿದವು; ತಲೆಹೋದ ಅಟ್ಟೆ (ರುಂಡಗಳು) ಅಟ್ಟೆಗಳೊಡನೆ, ಹರಿ ಹರಿಯಲ್ಲಿ ತಾಗುತ್ತಿದ್ದುದು ಹೊಸ ಬಗೆಯಾಗಿತ್ತು. ವ॥ ಆ ಯುದ್ಧದ ತೀವ್ರತೆಯನ್ನು ಆನೆ ಏರಿದವರು ನೋಡಿದರು. ೭೨. ಆನೆಪಡೆ ಮುಂದುವರಿಯಿತು. ಅವುಗಳ ಮೇಲೆ ಕುಳಿತ ಭಟರು ಗಜವನ್ನು ಬೆನ್ನುತಟ್ಟಿ ಅಂಗುಷ್ಠದಿಂದ ಒದೆದು, ಆವೇಶದಿಂದ ಮುನ್ನುಗ್ಗಿ, ತೀಕ್ಷ್ಣವಾದ ಅಂಕುಶವಿಟ್ಟು, ಭೈ ಭಲರೆ ಮುಂತಾಗಿ ಧ್ವನಿಮಾಡುತ್ತಾ ಕೋಪದಿಂದ ನೂಂಕಲು ಆನೆಗಳು ಒಂದಕ್ಕೊಂದು ತಾಗಿ ಅವುಗಳ ದಂತಗಳ ಘರ್ಷಣೆಯಿಂದ ಕಿಡಿಗಳು ಸೂಸುತ್ತಿರಲು ಗಜಕಾಳಗ ಭಯಂಕರವಾಗಿತ್ತು. ೭೩. ಆನೆಗಳ ಸೊಂಡಿಲು ಸೊಂಡಿಲಿಗೆ, ಕಠಿನ ದಂತಗಳು ದಂತಗಳಿಗೆ, ಮುಖಗಳು ಮದ ಮತ್ತು ಮುಖಗಳಿಗೆ, ಯೋಧರು ಯೋಧರಿಗೆ, ಗಜಾರೂಢರು ಗಜಾರೂಢರಿಗೆ ಮುಖಾಮುಖಿ ಸಮರ ನಡೆದಿತ್ತು! ೭೪. ಎದುರೆದುರಿನಲ್ಲಿ ಆನೆಪಡೆಯನ್ನು ತಾಗಿಸಿದ ಮಾವಟಿಗರ-ಗರ್ಜನೆಗೆ

ತ್ಯಂತಂ ಪೊಣ್ಮಿತು ದಂತಾ
ದಂತಿ ನಖಾನಖಿಯೆನಿಪ್ಪ ಕಾಳೆಗಮಾಗಳ್ ॥ ೭೪

ವ॥ ಅಂತು ಪೋಗದೆ ನಿಂದು ತಾಗಿ ತಳ್ತಿಱಿದು ರಕ್ಕಸವಡೆಯೊಳ್ ಮಿಕ್ಕುಮೀಱುವ ದೇವರ್ಕಳ ದೆಪ್ಪಾ ದೆಪ್ಪಿಯು ಕಾಳೆಗಮಂ ಕಂಡು ಕಡುಮುಳಿದು ತಾರಕಾಸುರಂ ವಾರಣಾರೂಢ ನಾಗಿ ತನ್ನ ಕೆಲಬಲದ ಪಿಂತಣ ಮುಂತಣ ಚತುರಂಗಬಲಂ ಬೆರಸಿ ಬಿಲ್ಲನುಗಿದು ನಿಲ್ಲದೆ ನೂಂಕಿ ದಾಗಳ್,

ಚಂ॥ ಅರರೆ ಚತುರ್ಬಲಂಬೆರಸು ಭೋಂಕನೆ ನೂಂಕಿದ ವೀರತಾರಕಾ
ಸುರನೊಳದಾವನೇಱುವನದಾವನಮರ್ಚುವನಾವನೆಯ್ದಿ ಮು ।
ಚ್ಚರಿಸುವನಾವನೊಡ್ಡುವನದಾವನೊಡರ್ಚುವನಾವನಾಂತು ನಿ
ತ್ತರಿಸುವನಾವನಣ್ಮಿ ತಲೆದೋರ್ಪನದಾವನಿದಿರ್ಚಿ ತಾಗುವಂ ॥ ೭೫

ವ॥ ಎಂಬ ಸಂಭ್ರಮಮಂತರಿಕ್ಷದೊಳೀಕ್ಷಿಪ ಯಕ್ಷಕುಲದೊಳ್ ನೆಗಳೆ,

ಚಂ॥ ಕುಳಿಕನ ಕೂರ್ಪೊ ಬಾಡಬನ ತೀವ್ರತೆಯೊ ಸಿಡಿಲೇಳ್ಗೆಯೋ ದವಾ
ನಳನ ಪೊಡರ್ಪೊ ಭೈರವನಳುರ್ಕೆಯೊ ಕಾಲನ ಕಾಯ್ಪೊ ತದ್ದಿಶಾ ।
ನಿಳನತಿವೇಗವೋ ಪರಿವ ಮೃತ್ಯುವಿನುಗ್ರತೆಯೋ ಮಹಾಲಯ
ಜ್ವಲನನ ದಾಳಿಯೊ ತಿಳಿಯೆ ಪೇಳೆನೆ ನೂಂಕಿದನುಗ್ರತಾರಕಂ ॥ ೭೬

ವ॥ ಅಂತು ನೂಂಕಿದತುಳಬಳವೀರತಾರಕನ ಚತುರಂಗಬಲದುರವಣೆಗಿರಲಾಱದೆ ಸುರರ

ಕೋಪಗೊಂಡ ಆನೆಗಳು ಒಂದನ್ನೊಂದು ತಾಗಿದಾಗ ದಂತಾದಂತಿ, ನಖಾನಖಿ ಎಂಬ ಕಾಳಗ ಆರಂಭವಾಗಿತ್ತು. ವ॥ ಹೀಗೆ ಹೋಗದೆ ನಿಂತು ತಾಗಿ ಜೋರಿನಿಂದ ತಿವಿದಾಗ ರಕ್ಕಸ ಪಡೆಗೆ ಮೀರಿದ ದ್ವಷ್ಟಿಯುದ್ಧವನ್ನು ಕಂಡು ಬಹುವಾಗಿ ಕೋಪಿಸಿಕೊಂಡ ತಾರಕಾ ಸುರನು ಆನೆಯನ್ನೇರಿ ತನ್ನ ಸುತ್ತು ಮುತ್ತಿನ ಹಿಂದಿನ ಮುಂದಿನ ಚತುರಂಗ ಬಲವನ್ನು ಕೂಡಿಸಿ ಬಿಲ್ಲನ್ನು ಜಗ್ಗಿ ಮುನ್ನಡೆಸಿದಾಗ,೭೫. ಓಹೋ! ಚತುರ್ಬಲದೊಡನೆ ಮುನ್ನುಗ್ಗಿದ ವೀರ ತಾರಕಾಸುರನ ಮೇಲೆ ಯಾರು ಎದುರಾದಾರು ? ಯಾರು ಅನುರ್ಚುವರು, ಯಾವನು ಮತ್ಸರಿಸುವನು ? ಯಾವನೊಡ್ಡುವನು ? ಯಾವನು ಒಡರ್ಚುವನು ? ಎದು ರಿಸಿ ನಿತ್ತರಿಸುವನಾರು ? ಪರಾಕ್ರಮದಿಂದ ಅವನಿಗೆ ತಲೆದೋರುವನಾರು ? ೭೬. ಉಗ್ರ ನಾದ ತಾರಕನು ಯುದ್ಧಕ್ಕೆ ನುಗ್ಗಿದುದನ್ನು ನೋಡಿದರೆ ಇದೇನು ಕುಳಿಕನೆಂಬ ವಿಷ ಸರ್ಪನ ತೀವ್ರತೆಯೋ, ಬಡಬಾಗ್ನಿಯ ತೀಕ್ಷ್ಣತೆಯೋ, ಸಿಡಿಲ ಏಳ್ಗೆಯೊ, ಕಾಡ್ಗಿಚ್ಚಿನ ಪರಾಕ್ರಮವೊ, ಭೈರವನ ಭೀಕರತೆಯೊ, ಕಾಲಯಮನ ಬಿಸಿಯೊ, ಮೃತ್ಯುವಿನ ಉಗ್ರ ತೆಯೊ, ಕಾಲಾಗ್ನಿಯ ಧಾಳಿಯೋ ಎಂಬಂತೆ ಇತ್ತು. ವ॥ ಹೀಗೆ ತಾರಕನು ಅತುಲ ಬಲಪರಾಕ್ರಮದಿಂದ ನುಗ್ಗಿಬರಲು ಅವನ ಚತುರಂಗ ಬಲದ ರಭಸಕ್ಕೆ ತಡೆಯಲಾರದೆ

ಪದಾತಿಬಲಂ ಪರಿಭವಂಬಡೆದು ರಥಾನೀಕಂ ವಿರಥಮಾಗಿ ತುರಂಗಕುಲಂ ತರಪರಿಸಲಾಟಿದೆ, ಗಜ ದೊಡ್ಡು ಗಂಡುಗೆಟ್ಟು ಬೆಂಗೊಟ್ಟು ನಿಲ್ಲದೋಡಿ ಕಲೆಯುಂ ಕವಿಯುಮಾಗೆ

ಉ॥ ಕಂಡತಿವೀರತಾರಕನಣಂ ಪರಿಹಾಸಮನಾಳ್ದು ಮಾಱು ಬೆಂ
ಕೊಂಡು ಭಯಾಕುಳವ್ರಜದ ಬೆಂಬಳಿಯಂ ನೆಱೆಬಿಟ್ಟು ನಿಂದು ವೇ ।
ದಂಡಮನೋಜೆಯಿಂ ತಿರುಪಿ ನೂಂಕಿ ಮರಳ್ದು ರಣಾಗ್ರರಂಗಭೂ
ಮಂಡಳಮಂ ನಿರೀಕ್ಷಿಸುತೆ ಪೋದನಪಾರಗಭೀರವಿಕ್ರಮಂ ॥ ೭೭

ವ॥ ಅಂತು ಪೋಗೆ,

ಉ॥ ಇತ್ತಲನಂತರಂ ತ್ರಿದಶರೋಡಿ ಸುರಾದ್ರಿಪರಾದ್ರಿಯೊಳ್ ಭಯಂ
ಬೆತ್ತು ಮಹಾಗುಹಾವಳಿಗಳಂ ಘನಗಹ್ವರಘೋರವೀಥಿಯಂ ।
ಸುತ್ತಿದರಣ್ಯದಂಧತಮಮಂ ತವಕಂ ಮಿಗೆ ಸಾರ್ದು ಪೊಕ್ಕು ಶೌ
ರ್ಯೋತ್ತರರಿರ್ದರಪ್ರತಿಮತಾರಕಸಂಗರರಂಗಭಂಗಿತರ್ ॥ ೭೮

ಕಂ॥ ಓಡಿದರಡಗಿದರಗಿದರ್
ಕೋಡಿದರನುಗೆಟ್ಟರಳ್ಕಿದರ್ ಸೊರ್ಕಳಿದರ್ ।
ಬಾಡಿದರಂಜಿದರಮರರ್
ಪಾಡಳಿದರ್ ಮಣಿದರಳ್ದರಳಿದರ್ ಕಳಿದರ್ ॥ ೭೯

ವ॥ ಇಂತು ಭಯಾಕುಳರಾಗಿ ಮೇರುಗಿರಿಯ ರಜತಾದ್ರಿಯ ಗುಹೆ ಗಹ್ವರಂಗಳಂ ಪೊಕ್ಕು ಗಾಡಿಗೆಟ್ಟು ಗಂಡುಡುಗಿರ್ದದೇವರ್ಕಳನಲ್ಲಲ್ಲಿ ಕರೆದು ಮೆಲ್ಲಮೆಲ್ಲನೆ ನೆರಪಿ ಸುರಕುಲಂಬೆರಸು

ಸುರರ ಕಾಲಾಳು ಸೈನ್ಯ ಸೋತಿತು, ರಥಗಳು ವಿರಥವಾದವು, ಕುದುರೆ ಸೈನ್ಯ ತತ್ತರಿಸಿತು, ಗಜಪಡೆ ಧೃತಿಗೆಟ್ಟಿತು, ಸುರಸೈನ್ಯವೆಲ್ಲ ಯುದ್ಧವಿಮುಖವಾಗಿ ಚೆಲ್ಲಾಪಿಲ್ಲಿಯಾಗಿ ಹಿಮ್ಮೆಟ್ಟಿತು. ೭೭. ಅದನ್ನು ಕಂಡ ವೀರತಾರಕಾಸುರನು ನಸುನಕ್ಕು ಅವರನ್ನು ಬೆನ್ನಟ್ಟಿ ಭಯಗ್ರಸ್ತವಾಗಿ ಓಡುತ್ತಿರುವ ಸೈನ್ಯದ ಬೆಂಬಳಿಯನ್ನು ಕೈಬಿಟ್ಟು, ಆನೆಗಳನ್ನು ಗರಗರ ತಿರುಗಿಸಿ, ಅಲ್ಲಿಂದ ಮರಳಿ ರಣರಂಗವನ್ನೆಲ್ಲ ನೋಡುತ್ತಾ ಹೋದನು. ೭೯. ದೇವತೆಗಳು ಓಡಿದರು, ಅಡಗಿಕೊಂಡರು, ಹುಲ್ಲುಕಚ್ಚಿದರು, ದಿಕ್ಕೆಟ್ಟರು, ಅಳುಕಿದರು, ಸೊರಗಿದರು, ಬಾಡಿದರು, ಅಂಜಿದರು, ಮುಂದುಗಾಣದೆ ಶರಣಾದರು. ವ॥ ಹೀಗೆ ಭಯವಿಹ್ವಲರಾದ ದೇವತೆಗಳು ರಕ್ಷಣೆಗಾಗಿ ಮೇರುಗಿರಿ ಮತ್ತು ರಜತಗಿರಿಗಳ ಗುಹೆಗರ್ತಗಳನ್ನು ಆಶ್ರಯಿಸಿದರು. ಶೌರ್ಯವಡಗಿದ ದೇವತೆಗಳೆಲ್ಲ ಗುಟ್ಟಾಗಿ ವಿಷ್ಣುವಿನ ಹತ್ತಿರ ಬಂದು ಯೋಚಿಸಿ

ಹಿರಣ್ಯ ಗರ್ಭನುಂ ಜಿಷ್ಣುವುಂ ವಿಷ್ಣುವಿರ್ದತಾಣಕ್ಕೆ ಜಾಣಂಬಂದು ಕಂಡು ಕುಳ್ಳಿರ್ದು ಕಾಳೆಗದಿಂ ನೊಂದಾಳೋಚನಂಗೆಯ್ವಲ್ಲಿ ಮುನ್ನಿನಂತಲ್ಲದಿನ್ನೊರ್ಮೆ ಸಂಗರಮಂ ಸಮಕಟ್ಟಲ್ವೇಳ್ಕುಮಾನಿರ್ದ ಪೆಂ ನೀವಿರ್ದ ಪಿರಜನಿರ್ದ ಪನಂಜಲೇತರ್ಕೆಂದು ಶಕ್ರಂ ಮಿಕ್ಕು ನುಡಿಯೆ,

ಕಂ॥ ನೆನೆದು ವಿಚಾರಿಸಿ ನಿಶ್ಚಯ
ಮನನತುಳೋಪಾಯಕೋವಿದಂ ಸ್ಥಿತಿಕರ್ತಂ ।
ವನಜಾಕ್ಷಂ ಘನನಿರ್ಮಲ
ನನಾಗತಜ್ಞಾನಿ ಶಕ್ರನೊಡನಿಂತೆಂದಂ ॥ ೮೦

ಆನಿರ್ದುಂ ತಾನಿರ್ದುಂ
ನೀನಿರ್ದುಂ ಮೂವರಿರ್ದುಮೇನಾದುದು ಪೇಳ್ ।
ನಾನಾನಿಷ್ಠುರತಾರಕ
ಸೇನಾಮುಖನಿಖಿಳಭುವನವಿಧ್ವಂಸನದೊಳ್ ॥ ೮೧

ವ॥ ಅಂತುಮಲ್ಲದೆ

ಕಂ॥ ಆಯ್ದುಂ ಮುಖದ ಭವಂಗೀ
ರಯ್ದುಂ ಭುಜದೀಶ್ವರಂಗೆ ಷಣ್ಮುಖನುದಯಂ ।
ಗೆಯ್ದೇಳನೆಯ ದಿನಂ ಬಂ
ದೆಯ್ದಿದೊಡತ್ಯುಗ್ರತಾರಕಾಸುರನಳಿವಂ ॥ ೮೨

ಎಂದಬ್ಜಜನಿತ್ತಾದೇ
ಶಂ ದಿಟಮದುಕಾರಣಂ ಕಪರ್ದಿಯ ತಪಮಂ ।

ದರು. ವಿಷ್ಣು ಅವರಿಗೆ ಧೈರ್ಯವಿತ್ತನು. ಮತ್ತೊಮ್ಮೆ ಯುದ್ಧ ಹೂಡೋಣ ! ನಾನಿರುತ್ತೇನೆ, ನೀವಿದ್ದೀರಿ, ಬ್ರಹ್ಮನಿದ್ದಾನೆ ಅಂಜುವುದು ಬೇಡ ಎಂದು ಇಂದ್ರನು ಮತ್ತೆ ಹುರಿದುಂಬಿಸಿದ. ೮೦. ಅದನ್ನೆಲ್ಲ ಪರ್ಯಾಲೋಚಿಸಿದ ವಿಷ್ಣು. ಆತ ಅತುಲ ಉಪಾಯ ಕೋವಿದ, ಸ್ಥಿತಿಕರ್ತ, ಹಿಂದು ಮುಂದುಗಳನ್ನೆಲ್ಲ ಅರಿಯಬಲ್ಲ ಅಪರೋಕ್ಷ ಜ್ಞಾನಿ; ಆದ್ದರಿಂದಲೇ ಆತ ಇಂದ್ರನಿಗೆ ಹೇಳಿದ. ೮೧. “ಮಹಾವೀರನಾದ ತಾರಕನು ಸೇನಾಮುಖದಲ್ಲಿ ನಿಂತು ಅಖಿಲಭುವನ ವಿಧ್ವಂಸಮಾಡುತ್ತಿರುವಾಗ ನಾನಿರಲಿಲ್ಲವೆ ? ಬ್ರಹ್ಮನಿರಲಿಲ್ಲವೆ ? ನೀನಿರಲಿಲ್ಲವೆ ? ನಾವೆಲ್ಲ ಇದ್ದು ಏನು ಮಾಡಿದೆವು” ಎಂದನು. ೮೨. ಐದು ಮುಖ, ದಶಭುಜಗಳೊಡನೆ ಶೋಭಿಸುವ ಜಗದೀಶ್ವರನಿಗೆ ಷಣ್ಮುಖನು ಉದಿಸಿದರೆ, ಅವನು ಹುಟ್ಟಿದ ಏಳನೆಯ ದಿನದಲ್ಲಿಯೇ ತಾರಕನನ್ನು ಕೊಲ್ಲುವನು ೮೩. ಎಂದು ಹೇಳಿದ ವಿಷ್ಣುವು ಹಿಂದೆ ಬ್ರಹ್ಮನು ತಾರಕನಿಗೆ ವರವನ್ನು ಕೊಟ್ಟಿದ್ದಾನೆ. ಆದ್ದರಿಂದ

ಭಂದಂಗೆಡಿಸುವ ವೀರನ
ನಿಂದೆ ವಿಚಾರಿಸಲೆ ವೇಳ್ಕುದಿಂತಿದೆ ಕಜ್ಜಂ ॥ ೮೩

ಕಾಳೆಗದ ಮಾತನಾಡದಿ
ಶಾಳ್ಳಾಪಂಗೊಳ್ಳಸುರನತಿಬಳನದಜಿಂ ।
ಸೂಳಿಯ ತಪಮಂ ಚಲಿಯಿಸು
ವಾಳಾಪಂಗೆಯ್ವುದುಚಿತಕಾರ್ಯಂ ಶೌರ್ಯಂ ॥ ೮೪

ವ॥ ಎಂದು ಚಕ್ರಧರಂ ಶಕ್ರನೊಳ್ ತಕ್ಕಳಿದು ಸುಡಿಯೆ ತಮ್ಮೊಳೊಂದಾಗಿ ವಚನನಿಚಯದಿಂ ವಿಚಾರಿಸಿ ನೋಡಿ ಸಕಳ ಜಗಜ್ಜನ ವಶೀಕರಣಪಟುತರಕುಸುಮಕೋದಂಡ ಟಂಕಾರ ಪ್ರತಾಪಮುಖಂ ಮಕರ ಪತಾಕನೆಂದಚ್ಚರಿಮಿಗೆ ನಿಶ್ಚಯಿಸಿ ಪಂಚೇಶುವಿಂದಲ್ಲದೆ ಪಂಚಮುಖನ ತಪಂ ಸಂಚಲಿಸದೆಂಬ ಸಂಚಮನಱಿದು ಕಾಮನಂ ಕರೆಯಿಸಲ್ವೇಡಿ ಸರಸಿಜಾಕ್ಷಂ ಪುರಂದರನ ಮುಖಮಂ ನೀಡಾಗದೆ ನೋಡಿದಾ ಪ್ರಸ್ತಾವದೊಳ್,

ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಿಸಂ
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರ ಶಂಭು ಶಂ ।
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನ ವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ॥ ೮೫

ಈಗ ನಾವು ಮಾಡಬೇಕಾದದ್ದು ಇಷ್ಟು–ಏನೆಂದರೆ– ಪರಶಿವನು ತಪೋಮಗ್ನನಾಗಿದ್ದಾನೆ. ಅವನ ತಪಸ್ಸನ್ನು ಕೆಡಿಸುವ ವೀರನೊಬ್ಬನನ್ನು ಸಿದ್ಧ ಪಡಿಸತಕ್ಕದ್ದು. ೮೪. ಯುದ್ಧದ ಮಾತು ಸಾಕು; ಅದಕ್ಕೆ ಅಸುರತಾರಕ ಜಗ್ಗುವುದಿಲ್ಲ; ಏಕೆಂದರೆ ಅವನು ಎಲ್ಲರನ್ನೂ ವಿಾರಿಸಿದ ಬಲಶಾಲಿ; ಆದ್ದರಿಂದ ಶೂಲಿ ಪರಶಿವನ ತಪೋಭಂಗ ಮಾಡುವುದೇಸರಿ! ಅದೇ ನಮ್ಮ ಶೌರ್ಯ ಹಾಗೂ ಕಾರ್ಯ. ವ|| ಎಂದು ವಿಷ್ಣುವು ದೇವೇಂದ್ರನಿಗೆ ತಿಳಿಸಿದನು. ಎಲ್ಲರೂ ಒಂದಾಗಿ ಯೋಚಿಸಿದರು. ಇದಕ್ಕೆ ಸಕಲ ಜಗಜ್ಜನವಶೀಕರಣ ಪಟುವೂ ಕುಸುಮಾಯುಧನೂ ಮಕರಕೇತನನೂ ಆದ ಮನ್ಮಥನಲ್ಲದೆ ಇತರರಿಗೆ ಸಾಧ್ಯವಿಲ್ಲ ಎಂದು ಎಲ್ಲರೂ ಒಪ್ಪಿದರು. ಈ ಸಂದರ್ಭದಲ್ಲಿ ಮನ್ಮಥನನ್ನು ಕರೆಯಿಸಬೇಕೆಂದು ಬಯಸಿ ನಾರಾಯಣನು ದೇವೇಂದ್ರನ ಕಡೆ ದೃಷ್ಟಿಹೊರಳಿಸಿದನು.

ಇದು ಸಮಸ್ತ ಸುರಾಸುರಮಕುಟ ಖಚಿತ
ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪುಂಜರಂಜಿತಚರಣ
ನೆನಿಪ ಪಂಪಾವಿರೂಪಾಕ್ಷ ಶ್ರೀಪಾದಕಮಲ
ಮಕರಂದ ಮಧುಕರಾಯಮಾಣ
ಸತ್ಕವೀಶ್ವರ ಹಂಪೆಯ
ಹರಿಹರದೇವ ವಿರಚಿತಮಪ್ಪ

ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ತಾರಕಾಸುರ ಯುದ್ಧ ವರ್ಣನಂ
ಷಷ್ಠಾಶ್ವಾಸಂ

## ಸಪ್ತಮಾಶ್ವಾಸಂ

### ವ॥ ತೋಟ್ಯಾನ ಮದನಪ್ರಯಾಣ ಪ್ರಾರಂಭ ವರ್ಣನಂ

ಕಂ॥ ವರಸುರನರೋರಗವ್ರಜ-
ಕಿರೀಟಪದಯುಗನತಿಸ್ವತಂತ್ರಂ ಶರ್ವಂ ।
ಪರನಧಿಕಾಕ್ಷಂ ಸಲೆ ಭ-
ಕ್ತಿರಸಮನೆಮಗೀಗೆ ಹಂಪೆಯ ವಿರೂಪಾಕ್ಷಂ ॥ ೧

ಪುರುಹೂತಂ ಹರಿ ನೋಡಿದ
ಪರಿಯಂ ತಾನಱಿದು ಮಂತ್ರಿವಾಚಸ್ಪತಿಯಂ ।
ಕರೆದೀಗಳೆ ಕಾಮನನತಿ-
ಭರದಿಂದೊಡಗೊಂಡು ಬರ್ಪುದೆಂದಿಂತೆಂದಂ ॥ ೨

ಇರ್ದೀ ತೆಱನಿದು ನೀನಱಿ-
ದಿರ್ದುದೆ ನಿನಗಱಿಪಲಿಲ್ಲ ಕಾರ್ಯಸ್ಥಿತಿಯಿಂ ।
ಸಾರ್ದತಿವೇಗದೆ ಶೂರ್ಪಕ-
ಮರ್ದನಸಂ ತರ್ಪುದಾವ ತೆಱದಿಂ ಜೀವಾ ॥ ೩

ಎಂದು ಬೆಸಸುತ್ತುಮಿಱಿ ನಡೆ
ತಂದಂ ಗುರು ಮದನನಲ್ಲಿಗಮಲಿನದೇಹಂ ।
ಸಂದ ಕಳಾವ್ಯೂಹಂ ಗುಣ
ಸಂದೋಹಂ ಗಗನಗಮನಪುಷ್ಪಕವಾಹಂ ॥ ೪

೧. ಶ್ರೇಷ್ಠರಾದ ಸುರರು, ನರರು ಮತ್ತು ಉರಗ (ನಾಗ)ರು ಇವರಿಂದ ನಮಸ್ಕರಿಸಲ್ಪಟ್ಟ ಪದಯುಗವುಳ್ಳ ಸ್ವತಂತ್ರನೂ, ಶರ್ವನೂ, ಮುಕ್ಕಣ್ಣನೂ ಆದ ಹರನೆನಿಸಿದ ಹಂಪೆಯ ವಿರೂಪಾಕ್ಷನು ನಮಗೆ ಸದ್ಭಕ್ತಿಯನ್ನು ಕರುಣಿಸಲಿ. ೨. ವಿಷ್ಣು ತನ್ನ ಕಡೆ ನೋಡಿದುದರ ಇಂಗಿತವನ್ನು ಇಂದ್ರನು ಅರಿತನು. ಆತ ಮಂತ್ರಿಮುಖ್ಯನಾದ ಬೃಹಸ್ಪತಿಯನ್ನು ಕರೆದು "ಈ ಕೂಡಲೆ ಕಾಮನನ್ನು ಕರೆದು ತರಬೇಕು" ಎಂದು ಸೂಚಿಸಿದನು. ೩. ಎಲೈ ದೇವಗುರುವೆ, ಇರುವ ವಿಷಯ ಇದಿಷ್ಟು! ಇವೆಲ್ಲವೂ ನಿನಗೆ ತಿಳಿದೇ ಇದೆ! ಈ ಬಗೆಗೆ ಹೆಚ್ಚು ಹೇಳಬೇಕಾದುದೇನೂ ಇಲ್ಲ! ಈಗ ಅತಿತ್ವರೆಯಿಂದ ಮನ್ಮಥನನ್ನು ಹೇಗಾದರೂ ಮಾಡಿ ಕರೆತರಬೇಕು! ೪. ಇಂದ್ರನ ಮಾತಿನಂತೆ ನಿರ್ಮಲಾತ್ಮನಾದ ಗುರು ಮನ್ಮಥನಲ್ಲಿಗೆ ಬಂದನು. ಆತ ಸಕಲ ಕಲಾಪ್ರವೀಣ, ಸದ್ಗುಣಶಾಲಿ; ಪುಷ್ಪಕವಿಮಾನ

ಕಂ॥ ನಡೆತಂದು ಮುಂದೆ ಚೆಲ್ವಿಂ
ದಿಡಿದ ರತೀಶ್ವರನ ರಾಜಧಾನಿಯನೊಳಪೊ।
ಕ್ಕೆಡೆಯುಡುಗದೆ ನೆರೆದರಮನೆ
ಗೆಡೆಯಾಡುವ ಲಲನೆಯರ್ಕಳಂ ನೋಳ್ಪಾಗಳ್॥ ೫

ತೆಗೆದೆಸುವ ಪುಷ್ಪಚಾಪನ
ಮುಗುಳಂಬಿಂಗೆಣೆಯೆನಿಪ್ಪ ವಧುವೊರ್ವಳ್ ಮೆ।
ಲ್ಲಗೆ ಬಂದಳ್ ಮನ್ಮಥನೋ
ಲಗಕ್ಕೆ ಶತಪತ್ರದಾತಪತ್ರದ ನೆಳಲೊಳ್॥ ೬

ನೇವುರದ ಮುದ್ರಿಕೆಯ ಮಧು
ರಾವರಣಧ್ವನಿ ಬೃಹಸ್ಪತಿಯ ಕಿವಿವುಗೆ ಸದ್।
ಭಾವಕಿಯೊರ್ವಳ್ ಬಂದಳ್
ಕಾಮನ ಸಭೆಗೆಸೆವ ರತ್ನಮುಕುರದ ತೆಱದಿಂ॥ ೭

ಬಿಸರುಹದಳದೊಳ್ ಚಂದನ
ರಸಮಂ ನೆಱೆ ತೀವಿಕೊಂಡು ಮೆಲ್ಲಡಿಯಿಡುತುಂ।
ಪೊಸಜವ್ವನೆ ನಡೆತಂದಳ್
ಕುಸುಮಾಸ್ತ್ರನ ಗಟ್ಟವಳ್ತಿಯೊರ್ವಳ್ ಬನದಿಂ॥ ೮

ಇಂಬಾಗಿರೆ ವರಹಿಮಕರ
ಬಿಂಬದ ಬೆಂಬಲಿಯೊಳಿಳಿವ ತಣ್ಗದಿರ್ಗಳೆನಲ್।
ಪೊಂಬಾಳೆಯ ಚಮರಮದಾ
ಲಂಬಿಸೆ ಪಿಡಿದೊರ್ವ ಚಂದ್ರಮುಖಿ ನಡೆತಂದಳ್॥ ೯

ದಲ್ಲಿ ಗಗನ ಮಾರ್ಗದಿಂದ ಆಗಮಿಸಿದನು. ೫. ಬಂದ ಬೃಹಸ್ಪತಿ ಚೆಲುವುವೆತ್ತ ರತೀಶ್ವರ ರಾಜಧಾನಿಯನ್ನು ಪ್ರವೇಶಿಸಿದನು. ಅಲ್ಲಿಯ ಅರಮನೆಯಲ್ಲಿ ಚೆಲುವೆಯರಾದ ಲಲನೆಯರು! ಎಡೆಯುಡುಗದೆ ಅವರನ್ನು ಕಂಡನು! ೬. ಅವರಲ್ಲಿ ಒಬ್ಬಳು ವಧು; ಅವಳು ಕುಸುಮಾಯುಧನ ಮೊಗ್ಗೆಯ ಅಂಬಿನಂತೆ ಬೆಳಗುತ್ತಿದ್ದಾಳೆ. ಆಕೆ ಕಮಲದ ಕೊಡೆಯ ನೆರಳಿನಲ್ಲಿ ಮೆಲ್ಲಗೆ ಕಾಮನ ಓಲಗಶಾಲೆಗೆ ಬಂದಳು. ೭. ಮತ್ತೊರ್ವ ಭಾವಕಿ; ಆಕೆಯ ನೂಪುರ ಮುದ್ರಿಕೆಯ ಮಧುರನುಣ್ಚರ ದೇವ ಗುರುವಿನ ಕಿವಿಗೆ ಕೇಳುತ್ತಿರಲು ಆಕೆ ರತ್ನ ದರ್ಪಣದಂತೆ ಕಾಮನ ಸಭೆಗೆ ಬಂದಳು. ೮. ಮತ್ತೊಬ್ಬಳು ಹೊಸಯೌವನದ ಗಟ್ಟಿಗಾರ್ತಿ. ಅವಳು ಕಮಲದೆಲೆಯಲ್ಲಿ ಚಂದನರಸವನ್ನು ತುಂಬಿಕೊಂಡು ಮೆಲ್ಲಡಿಯಿಡುತ್ತಾ ಬನದಿಂದ ಪುಷ್ಪಚಾಪನ ಓಲಗಕ್ಕೆ ನಡೆತಂದಳು. ೯. ಮತ್ತೊಬ್ಬಳು ಇಂದುಮುಖಿ; ಅವಳು ಚಂದ್ರಬಿಂಬದಿಂದ ಇಳಿವ ತಣ್ಣನೆಯ ಕಿರಣಗಳೊ ಎಂಬಂತೆ ಇರುವ

ಕಂ॥ ಪ್ರಬಳನವರತ್ನರೋಚಿಃ
ಶಬಳಿತ ದರ್ಪಣಮನಾಂತು ಮುಂದೆಯ್ತಂದಳ್ ॥
ನಿಬಿಡತರ ಸುಕರ ಪುಷ್ಪ-
ಸ್ತಬಕದ ಬೆಳ್ಗೊಡೆಯ ನೆಳಲೊಳಂಗನೆಯೊರ್ವಳ್ ॥ ೧೦

ವ॥ ಅಂತವರ ನಿರತಿಶಯ ಸ್ವಭಾವ ಸೌಂದರ್ಯಸೌಕುಮಾರ್ಯಂಗಳಂ ಕಂಡು ಬೃಹಸ್ಪತಿ ಮನದೊಳಳಿಪುತ್ತುಂ ಬುದ್ಧಿಯೊಳ್ ಬೆದರುತ್ತುಂ ಚಿತ್ತದೊಳ್‌ಕೌತುಕಂಬಡುತ್ತುಂ ನಡೆತಂದರ ಮನೆಯಮುಂದೆ ಪುಷ್ಪಕಮನಿಳಿದೊಪ್ಪುವ ದರ್ಪಭೂಷಣಮೆನಿಸಿದ ದರ್ಪಕಾಸ್ಥಾನಮಂ ಪುಗುತರ್ಪಲ್ಲಿ,

ಸ್ರ॥ ಮುಂತಿರ್ದಂ ಪುಷ್ಪಮಾಲಾನಿಚಯರಚಿತ ಸೌರಭ್ಯಲೋಲುಪ್ತಭೃಂಗೀ-
ಸಂತಾನಾಬದ್ಧಧಾರಾನಿಳಯವಳಯ ಮಧ್ಯ ಪ್ರದೇಶಪ್ರರತ್ನಾ- ।
ನಂತಪ್ರದ್ಯೋತವೀಥೀಪ್ರಯುತನಿಯತ ಸಿಂಹಾಸನಾರೂಢತಾನಿ-
ಶ್ಚಿಂತಂ ಶೃಂಗಾರಕಾಂತಂ ಜನವಿನುತರತೀನಾಥನಾನಂದಯೂಥಂ ॥ ೧೧

ವ॥ ಅಂತಿರ್ದ ಮದನ ಭೂಭುಜನಂ ತ್ರಿದಶಾಚಾರ್ಯಂ ದೂರದಿಂ ನಿರೀಕ್ಷಿಸುತ್ತುಂ ಬರ್ಪಾಗಳ್ ಮುಂತೆ ಮಗಮಗಿಪ ಕದಂಬಕುಸುಮದ ಪೊಸಗಂಪಿಂ ಪೊರೆದು ಸಾರ್ವರ್ತುಕಮೆನಿಸಿ ಕೊರ್ಬಿ ಬೆಳೆದ ಕೇಳೀವನದ ನಡುವೆ ನಿಂದ ನೀಲದ ನೆಲೆಗಟ್ಟಂಗೆ ನೆಲೆಯಾದ ಮುತ್ತಿನ ಬೆಳಗಿನ

ಹೊಂಬಾಳೆಯ ಚಾಮರವನ್ನು ಹಿಡಿದು ನಡೆತಂದಳು. ೧೦. ಮತ್ತೊಬ್ಬಳು ಅಂಗನೆ; ಆಕೆ ನವರತ್ನ ಖಚಿತವಾದ ದರ್ಪಣವನ್ನು ಹಿಡಿದು, ದಟ್ಟವಾದ ಶ್ರೇಷ್ಠ ಕುಸುಮಗಳ ಗೊಂಚಲುಗಳುಳ್ಳ ಬೆಳ್ಗೊಡೆಯ ನೆಳಲಿನಲ್ಲಿ ಬರುತ್ತಿದ್ದಾಳೆ. ವ|| ಹೀಗೆ ಅವರ ಸ್ವಭಾವ ಸೌಂದರ್ಯಗಳನ್ನು ಕಂಡು ಬೃಹಸ್ಪತಿಯೂ ಅಳುಕಿದನು; ಆತ ಪುಷ್ಪಕದಿಂದ ಇಳಿದು ಕಾಮನ ಆಸ್ಥಾನವನ್ನು ಪ್ರವೇಶಿಸುವಾಗ– ೧೧. ಮುಂದೆ ನೋಡಿದರೆ ಮನ್ಮಥ! ಆತ ಓಲಗದಲ್ಲಿ ಸಿಂಹಾಸನಾರೂಢನಾಗಿದ್ದಾನೆ; ಅಲ್ಲಿ ಅಲಂಕರಿಸಿರುವ ಪುಷ್ಪಮಾಲೆಗಳ ಸುಗಂಧಕ್ಕೆ ಮುತ್ತಿರುವ ದುಂಬಿಗಳ ಮೊತ್ತಗಳು, ಶ್ರೇಷ್ಠರತ್ನಗಳ ಪ್ರಭೆಗಳಿಂದ ದೇದೀಪ್ಯಮಾನವಾದ ಸಿಂಹಾಸನ; ಅದರ ಮೇಲೆ ಜನಸ್ತುತ್ಯನೂ, ಸ್ವತಂತ್ರನೂ, ಆನಂದಮೂರ್ತಿಯೂ ಆದ ಶೃಂಗಾರಕಾಂತ ಮನ್ಮಥನು ನಿಶ್ಚಿಂತನಾಗಿ ಕುಳಿತಿದ್ದಾನೆ. ವ|| ಮನ್ಮಥನು ಬಂದಾಗ ಆದ ವಿಚಿತ್ರಗಳ ವರ್ಣನೆ– ಹಾಗಿದ್ದ ಮನ್ಮಥರಾಜನನ್ನು ದೇವ ಗುರು ದೂರದಿಂದ ನಿರೀಕ್ಷಿಸುತ್ತ ಬರುತ್ತಿರುವಾಗ ಮುಂದೆ ಗಮಗಮಿಪ ನೀಪಕುಸುಮಗಳ ಹೊಸಕಂಪು ಹಬ್ಬಿದೆ, ಎಲ್ಲ ಋತುಗಳಲ್ಲಿಯೂ ಕೊಬ್ಬಿ ಬೆಳೆದ ಕದಳೀವನ, ಅದರ ನಡುವೆ ನಿಂದ ನೀಲದ ನೆಲೆಗಟ್ಟಿಗೆ ನೆಲೆಯಾದ ಮುತ್ತಿನ ಬೆಳ್ದಿಂಗಳ ಭಿತ್ತಿಗಳು, ಅವುಗಳ ಮೇಲೆ

ಬೆಳ್ದಿಂಗಳ ಭಿತ್ತಿಗಳ ಮೇಲೆ ತರತರದಿಂ ಪರಪಿದ ಕೈರವದ ಸುಣ್ಣೆಸಳ ಸಣ್ಣ ಜಂತೆಗಳನಾಂತ ಕೇತಕಿಯ ನೀಳ್ದದಳದ ಪೆಟ್ಟಿಗೆಗಳೊಟ್ಟಜೆಗಳಿಂ ಮತ್ತಂ ಮುತ್ತಿ ಮತ್ತವಾರಣಮಂ ನವೀನ ಗ್ರಂಥದಿಂ ತವೆ ಪೊರೆದ ದವನದ ದಾರವಂದದೊಳಚ್ಚೊತ್ತಿ ಬೆಚ್ಚಂತಿರ್ದ ಲಾಮಂಚದ ಮುಚ್ಚುಳಮಂ ನೆಮ್ಮಿನಿಂತಿರ್ದಪದಿಯರಗೋಗಿಲೆಗಳಿಂ, ಮತ್ತಂ ರವಿಕರಕೆಡೆಗುಡದಿಡಿದು ಸುತ್ತಿ ಮುತ್ತಿ ಕವಲಿಱಿದು ಕವಿದ ಲತಾಂತಜಾಳದ ತಳ್ತನೆಳಲಿಂ ಕಳ್ತಲಿಸುವ ಓಲಗ ಸಾಲೆಯೊಳ್ ಬಂದುಗೆಯ ಬಣ್ಣದ ತಿಣ್ಣವೆಳಗುಂ ಕಣ್ಣ ಬೆಳಗುಂ ತವೊಮ್ಮಳಿರ್ಪುಡಿ ಮೆಯ್ದೋಱಿ ಕೆಯ್ದೀವಿಗೆ ವಿಡಿದಿರ್ಪ ಖೇಚರಾಂಗನೆಯರಿಂ, ಕಾಮನ ರತಿಯ ನನೆಯ ಸಿಂಹಾಸನದಿರ್ಕೆಲದೊಳ್ ನಿಂದು ಮರುಗದ ಪೊಂಬಾಳೆಯ ಸೀಗುರಿಯ ಚಾಮರಂಗಳಂ ಪಿಡಿದಿರ್ಪಹಸ್ತಿನಿಯರಿಂ, ನೆರೆದು ನಿಂದ ಕೀರಾಳಿಗೆ ಕಾಮಾದ್ವೈತ ಶಾಸ್ತ್ರ ಸೂತ್ರಮಂ ಪಾಠವೋದಿಪ ಪರಿಜ್ಞಾನದಿಂ ಮೆಱೆವ ಚಿತ್ತಿನಿಯರಿಂ, ಮೇಲೆ ಬೀಳ್ವ ಕಾಮದೇವನ ಕಟಾಕ್ಷಕಂಜಿ ರತಿದೇವಿಗಡಿಗಡಿಗೆ ಕೆಯ್ ಮುಗಿದು ಕೆಲಸಾರ್ದಿರ್ಪ ಶಂಖಿನಿಯರಿಂ, ಮತ್ತಂ ಶತಪತ್ರದೊಳಮೃತರಸಮನೋವಿ ತೀವಿ ಮುದದಿಂ ಪಿಡಿದಿರ್ಪ ಪದ್ಮಿನೀನಾಯಕಿಯರಿಂ, ಹಂಸೆವಿಂಡಿಂಗೆ ನಡೆಗಲಿಪ ಮದಕರಿಯಾನೆಯರಿಂ, ನವಿಲನಾಡಿಪ ನರ್ತಕಿಯರಿಂ, ಮತ್ತಂ ಮಧುಕರಮಂಡಳಿಗೆ ಮಾರಭೂಪನ ಬಿರುದಿನೇಳ್ಗೆಗಳ ಗೀತಗೋಷ್ಠಿಯನೀವ ನೂತನಗಾಯಕಿಯರಿಂ, ಶತಪತ್ರವೀಜನ ಸಮಾಜದಿಂ ರಥಾಂಗ ಮಿಥುನದ ಸುರತ

ವಿಧವಿಧದಿಂದ ಹರಡಿದ ನೈದಿಲೆಯ ಸುಣ್ಣೆಸಳ ಸಣ್ಣ ಜಂತೆಗಳು, ಅವುಗಳನ್ನು ಹೊಂದಿದ ಕೇದಿಗೆಯ ಉದ್ದದಳಗಳ ಪೆಟ್ಟಗೆಗಳ ಸಮೂಹಗಳಿಂದಲೂ, ಮದ್ದಾನೆಯನ್ನು ಮುತ್ತಿ ನೂತನಗ್ರಂಥದಿಂದ ತುಂಬಿದ ದವನದ ಬಾಗಿಲ ಕದದಲ್ಲಿ ಅಚ್ಚೊತ್ತಿ ಬೆಚ್ಚಿರುವ ಲಾಮಂಚದ ಮುಚ್ಚುಳಗಳು,ಅವುಗಳನ್ನು ಆಶ್ರಯಿಸಿರುವ ರಾಜಕೋಗಿಲೆಗಳಿಂದಲೂ; ಮತ್ತು ರವಿಕಿರಣಗಳಿಗೆ ಅವಕಾಶಕೊಡದೆ ಹಬ್ಬಿರುವ ಪೊದೆಗಳು, ಅವುಗಳ ನೆಳಲಿನಿಂದ ಕತ್ತಲಾಗಿರುವ ಓಲಗಶಾಲೆಗಳಲ್ಲಿ ಬಂದುಗೆಯ ಬಣ್ಣದ ಬೆಳಕು ಮತ್ತು ಕಣ್ಣ ಕಾಂತಿಯೂ ಸೇರಿದ್ದರಿಂದ ಮೈದೋರಿದಂತೆ ಕೈದೀವಿಗೆ ಹಿಡಿದಿದ್ದ ಖೇಚರಿಯರಿಂದಲೂ ; ಕಾಮನಪತ್ನಿ ರತಿ, ಅವಳ ಮೊಗ್ಗಿನ ಸಿಂಹಾಸನ, ಅದರ ಎರಡೂ ಕಡೆ ನಿಂತು ಮರುಗಹೊಂಬಾಳೆಯ ಚಾಮರಗಳನ್ನು ಹಿಡಿದಿರುವ ಹಸ್ತಿನಿ ಜಾತಿಯ ಸ್ತ್ರೀಯರಿಂದಲೂ, ನೆರೆದಿರುವ ಕೀರಪಕ್ಷಿಗಳಿಗೆ ಕಾಮಾದ್ವೈತ ಶಾಸ್ತ್ರಸೂತ್ರವನ್ನು ಪಾಠಓದಿಸುವ ಪ್ರಜ್ಞೆಯುಳ್ಳ ಚಿತ್ತಿನಿಯರಿಂದಲೂ, ತಮ್ಮ ಮೇಲೆ ಬೀಳುವ ಕಾಮದೇವನ ಕಟಾಕ್ಷಕ್ಕೆ ಹೆದರಿ ರತಿದೇವಿಯ ಅಡಿಗೆ ಮಣಿದು ಪಕ್ಕಕ್ಕೆ ಸರಿದಿರುವ ಶಂಖಿನಿಯರಿಂದಲೂ, ಮತ್ತು ಕಮಲಗಳಲ್ಲಿ ಅಮೃತರಸ ತುಂಬಿ ಹಿಡಿದಿರುವ ಪದ್ಮಿನೀಸ್ತ್ರೀಯರಿಂದಲೂ, ಹಂಸಗಳಿಗೆ ನಡೆಗಲಿಸುವ ಗಜಗಮನೆಯರಿಂದಲೂ, ನವಿಲನ್ನು ಶಿಕ್ಷಿಸುವ ನರ್ತಕಿಯರಿಂದಲೂ; ದುಂಬಿಯಹಿಂಡಿಗೆ ಮದನನ ಬಿರುದಿನ ಗೀತಗೋಷ್ಠಿಯನ್ನು ಏರ್ಪಡಿಸುವ ಗಾಯಕಿಯರಿಂದಲೂ, ಕಮಲಗಳನ್ನು ಬೀಸುವವರಿಂದಲೂ, ಚಕ್ರವಾಕಗಳ

ಪ್ರಾಂತಿಯಸಾದರದಿಂದಾದರಿಸುವ ಚಕ್ರಕುಚೆಯರಿಂ, ಹರಿಣಗಳ ಮುಳಿಸಂ ತಿಳಿಪಿ ಪರಿಣಂಗಳ ನೊಡಗೂಡುವ ಹರಿಣಾಕ್ಷಿಯರಿಂ, ಅಶೋಕೆಯನೊದೆದಂಕುರಮಂ ಪುಟ್ಟಿಪ ಪದ್ಮಮುಖಿಯರಿಂ, ಕುರುವಕಮಂ ಪರಿರಂಭಣದಿಂ ಪೊಚೆಯೇರಿಸುವ ತರುಣಿಯರಿಂ, ಕುಸುಮರಸ ಗಂಡೂಷದಿಂ ವಕುಳಕುಳಮಂ ಕೋರಕಿತಂ ಮಾಳ್ಪ ಸಾರಮುಖಿಯರಿಂ, ಹೂವಿನ ಬಿಲ್ಲನೊಚ್ಚತಂ ಗೊಂಡರ್ಚಿಸುತ್ತಿರ್ಪ ನಿಡುಪುರ್ವಿನ ನೀಚೆಯರಿಂ, ನನೆಯಂಬಂ ಕೆಯ್ಗೆಯ್ವ ಸವಿನೋಟದ ಸಾಧಾರಣೆಯರಿಂ, ಮತ್ತಂ ಮಕರಕೇತನನ ಕೇತಕಿಯಲಗಂ ಪರಾಗದ ಸಾರಣೆಯೊಳ್ ಪರಿಮಳದ ಹೊರಗೆತ್ತುವಳಿಕುಂತಳೆಯರಿಂ, ನನೆಯ ಕಠಾರಿಯಂ ಸಿಂಗರಿಪ ಸಂಗಡದ ಮುಗ್ಧೆಯರಿಂ, ತಳಿರ ತೋಮರಮಂ ತಿರ್ದುವ ಕಳಕಂಠ ನಿನಾದೆಯರಿಂ, ಕೈರವದ ಸಬಳಮನೊಪ್ಪವಿಡಿವ ಕುಮುದಾಕ್ಷಿಯರಿಂ, ಚಕೋರಿಯಕುಳಕ್ಕೆ ಬೆಳ್ದಿಂಗಳ ನೂಡುವ ರೋಹಿಣೀವಿಳಾಸಿನಿಯರಿಂ, ಪೂಗೋಳನಂ ಸಾಗಿಪ ಭೋಗವತಿಯರಿಂ, ಬನಮಂಬಳೆಯಿಸುವ ವನಲಕ್ಷ್ಮಿಯರಿಂ, ಮತ್ತಂ ವಿರಿಂಚಿಯ ಹಾಹೆ ಕಾಲೊಳೆಳಲೆನಿಂದಿರ್ಪ ನಾಯಕಿಯರಿಂ, ಇಂದ್ರನ ಮೆಯ್ಗಣ್ಣ ಬಾವುಲಿಯ ದರ್ಪಾಯಿತಿಯರಿಂ, ಕುಬೇರನರೂಪು ನೇವುರದೊಳೆಳಲ್ವ ಚಾಪಳೆಯರಿಂ, ಜಿತೇಂದ್ರಿಯರಂ ಗೆಲ್ವ ವಿಜಯಧ್ವಜದ ವೀರೆಯರಿಂ, ತಳಿರಗದ್ದುಗೆಯೊಳ್ ಕೆಳಗೆ ಕುಳ್ಳಿರ್ಪ ವಸಂತರಾಜನಿಂ, ಬೆಳ್ದಿಂಗಳ ಹಸೆಯೊಳ್ ಬಳಸಿಕುಳ್ಳಿರ್ಪ ಕಳಾಮಾಳೆಯರಿಂ, ಅರಸಾಳ್ ಬೆಸನಂ ಸಾರ್ದಿರ್ಪ ಮಳಯಾನಿಳನಿಂ, ಕೆಲದೊಳ್

ಸುರತಶ್ರಮವನ್ನು ಆದರದಿಂದ ಆರಿಸುವ ಚಕ್ರಕುಚೆಯರಿಂದಲೂ, ಹೆಣ್ಣು ಚಿಗರಿಗಳ ಹುಸಿ ಮುನಿಸನ್ನು ತಿಳಿಸಿ ಹರಿಣಗಳನ್ನು ಒಡಗೂಡುವಂತೆ ಮಾಡುವ ಹರಿಣಾಕ್ಷಿಯರಿಂದಲೂ, ಅಶೋಕೆಯನ್ನು ಒದ್ದು ಚಿಗುರಿಸುವ ಪದ್ಮಮುಖಿಯರಿಂದಲೂ, ಗೋರಂಟೆ (ಮದರಂಗಿ ಯನ್ನು ಆಲಿಂಗಿಸಿ ಮೈಯುಬ್ಬಿಸುವ ಯುವತಿಯರಿಂದಲೂ, ಪುಷ್ಪರಸಮುಕ್ಕಳಿಸುವುದರಿಂದ ಬಕುಳವೃಕ್ಷವನ್ನು ಮೊಗ್ಗು ಬಿಡುವಂತೆ ಮಾಡುವ ಕಮಲಮುಖಿಯರಿಂದಲೂ, ಕುಸುಮಾ ಯುಧನನ್ನು ಅರ್ಚಿಸುವ ಸುಭ್ರು (ಒಳ್ಳೆಯ ಹುಬ್ಬುಳ್ಳ)ಗಳಿಂದಲೂ, ಹೂಬಾಣನನ್ನು ಆರಾಧಿಸುವ ರಮ್ಯ ದೃಷ್ಟಿಯ ಸಾಧಾರಣಸ್ತ್ರೀಯರಿಂದಲೂ, ಮತ್ತು ಮೀನಕೇತನನ ಕೇತ ಕಿಯ ಬಾಣವನ್ನು ಕುಸುಮಧೂಳಿಯ ಸಾರಣೆಯಿಂದ ಪರಿಮಳಗೊಳಿಸುವ ಅಳಿಕುಂತಳೆಯ ರಿಂದಲೂ, ಹೂವಿನಕಠಾರಿಯನ್ನು ಶೃಂಗರಿಸುವ ಸುಂದರಿಯರಿಂದಲೂ, ಚಿಗುರು ಎಂಬ ತೋಮರ (ಆಯುಧ ವಿಶೇಷ)ವನ್ನು ತಿದ್ದುವ ಕಲಕಂಠ ನಿನಾದೆಯರಿಂದಲೂ, ನೈದಿಲೆ ಯೆಂಬ ಬರ್ಜಿ (ಸಬಳ)ಯನ್ನು ಒಪ್ಪವಾಗಿ ಹಿಡಿವ ಕುಮುದಾಕ್ಷಿಯರಿಂದಲೂ, ಚಕೋರಿ ಗಳಿಗೆ ಬೆಳ್ದಿಂಗಳನ್ನು ಉಣ್ಣಿಸುವ ರೋಹಿಣೀ ವಿಳಾಸಿನಿಯರಿಂದಲೂ, ಹೂವಿನ ಕೊಳ ಗಳನ್ನು ಸಾಗಿಸುವ ಭೋಗವತಿಯರಿಂದಲೂ, ವನವನ್ನು ಬೆಳೆಸುವ ವನಲಕ್ಷ್ಮಿಯ ರಿಂದಲೂ, ಮತ್ತು ವಿರಿಂಚಿಯಗೊಂಬೆಕಾಲಿನಲ್ಲಿ ಧರಿಸಿದನಾಯಕಿಯರು, ಇಂದ್ರನ ಮೈಯ್ಗಣ್ಣ ಬಾವುಲಿಯನ್ನುಳ್ಳ ದರ್ಪಗಾತಿಯರು, ಕುಬೇರನ ರೂಪವನ್ನು ನೂಪುರದಲ್ಲಿ ಎಳೆವ ಚಪಲೆಯರು, ಜಿತೇಂದ್ರಿಯರನ್ನು ಗೆಲ್ಲುವ ವಿಜಯಧ್ವಜದ ವೀರೆಯರು, ಚಿಗುರಿನ ಗದ್ದುಗೆಯ ಕೆಳಗೆ ಕುಳಿತಿದ್ದ ವಸಂತರಾಜನಿಂದಲೂ, ಬೆಳ್ದಿಂಗಳ ಹಸೆಯಲ್ಲಿ ಬಳಸಿಕುಳಿತಿ

ನಿಲಿಸಿದಿಕ್ಷು ಚಾಪದಿಂ, ಮಲಂಗಿಸಿದ ಪುಷ್ಪಬಾಣಂಗಳಿಂ, ಸಮಸ್ತ ವಸ್ತುವಿಸ್ತಾರ ವಿಳಸದ್ ವಿಲಾಸವಿಭ್ರಮಮುಂ ಪಡೆದು ಪರಾಗಮುಂ ಪಸರಿಸುವ ಸರಸೀರುಹದೆಸಳ ತುಱುಂಗಲ ಸಿಂಹಾಸನ ದೊಳ್ ಸುರತರುವಂ ಮಲಂಗಿ ವಸಂತನಮೇಲೆ ಕಾಲಂನೀಡಿ ಶೀತಕರನಿಂ ಶ್ರೀಹಸ್ತಮನೊತ್ತಿಸಿ ಕೊಳುತ್ತುಂ ನಳಿನಗುಣದುಕೂಲದ ಮಲ್ಲಗಂಟುಂ ಮೊಲ್ಲೆಯ ಮುಗುಳ ಕಂಕಣಮುಂ ಮಲ್ಲಿ ಗೆಯ ನನೆಯಹಾರಮುಂ ಬಂದುಗೆಯ ಬಾಹುಪೂರಮುಂ ದಾಡಿಮೀ ಬೀಜದ ಕರ್ಣಾವತಂಸಮುಂ ಚಂದನ ತಿಲಕಮುಂ ಶ್ಯಾಮವರ್ಣಮುಂ ಕೋಮಲಾಂಗಮುಂ ಕಣ್ಣಬೆಳಗುಂ ಮುಖದಕಾಂತಿಯುಂ ಮಿಗೆಸೊಗಸಂ ಮೂವಡಿಸೆ ಮೂಱುಂಜಗಮಂ ಮೀರಿ ಗೆಲಲೆಂದು ಸಂಗಡಿಸಿ ಶೃಂಗಾರ ರಸಮಂಗಂ ಬಡೆದಂತೆ ಸುಕುಮಾರತೆ ಸಾಕಾರಂಗೊಂಡಂತೆ ಸೊಬಗು ಸಂದಣಿಸಿದಂತೆ ನಳನಳಿಕೆ ಬಳೆದಂತೆ ಕಣ್ಗಳ ಭಾಗ್ಯಂ ಕಪಲ್ತಂತೆ ಮನೋರಥಂ ಮದವೇಱಿದಂತೆ ಪುಟವಿಟ್ಟಪುಣ್ಯಂ ಪುರುಷಾಕಾರ ಮಾದಂತಿರ್ದ ಕಂದರ್ಪರಾಜನ ಕಮನೀಯ ರೂಪಂ ಬೃಹಸ್ಪತಿಯ ಕಣ್ಗಳೊಳಪೊಕ್ಕು ಮನ ಮನಲ್ಲಾಡಿಸೆ ಬುದ್ಧಿಬೆದಱಿಯಹಂಕಾರವಳಿದು ಚಿತ್ತಂಸೂಸಿ ಮದನವಿಕಾರದ ಜಮ್ಮುಜಕ್ಕುಲಿಸಿ ಹಮ್ಮದಂ ಬೋಗಿ ಜೀವಂ ಸುಖದ ಜೀವಕಳೆಯ ಕಳಾಸದಕುಣಿಕೆ ಕಳಲ್ಚಿ ತನ್ನನಱಿಯದಿದಿರ ನಱಿಯದೆ ಬಂದುದಂಮಱೆದು ಕಜ್ಜಮುಂ ತೊಱೆದಿನಿತುಂ ಬೇಗಂ ಸುಖದ ಸೋಂಕಿಂದುರ್ಕುವ ಕಾಮರಸದ ತೆರೆಯೊಳ್ ತೇಂಕಾಡುತಿರ್ದೆಂತಾನುಮೆಳ್ಚತ್ತು ಸಂತೈಸಿಕೊಂಡು,

ರುವ ಕಲಾಮಾಲೆಯರಿಂದಲೂ, ಅರಸಾಳುಗಳ ವ್ಯಸನವರಿಯುದ ಮಲಯಾನಿಲನಿಂದಲೂ, ಪಕ್ಕದಲ್ಲಿ ನಿಲಿಸಿದ ಕಬ್ಬಿನಬಿಲ್ಲಿನಿಂದಲೂ, ಮಲಗಿಸಿದ ಹೂಬಾಣಗಳಿಂದಲೂ, ಸಮಸ್ತ ವಿಲಾಸವಿಭ್ರಮವನ್ನು ಪಡೆದು ಪರಾಗವನ್ನು ಹರಡುವ ಕಮಲದೆಸಳುಗಳ ಸಿಂಹಾಸನ ದಲ್ಲಿ ಸುರತರುವನ್ನು ಮಲಗಿಸಿ, ವಸಂತನಮೇಲೆ ಕಾಲುನೀಡಿ, ಚಂದ್ರನಿಂದ ಶ್ರೀಹಸ್ತವನ್ನು ಒತ್ತಿಸಿಕೊಳ್ಳುತ್ತಿರುವ; ಕಮಲದಂಟಿನಲ್ಲಿ ಎಳೆಗಳಿಂದ ಮಾಡಿದಬಟ್ಟೆಯ ಮಲ್ಲಗಂಟು ಮತ್ತು ಮಲ್ಲಿಗೆ ಮೊಗ್ಗಿನ ಕಂಕಣವೂ, ಮಲ್ಲಿಗೆ ಹೂವಿನಹಾರವೂ, ಬಂದುಗೆಯ ಬಾಹು ಪೂರವೂ,ದಾಡಿಮಬೀಜಗಳ ಕರ್ಣಾಭರಣವೂ,ಶ್ರೀಗಂಧದ ತಿಲಕವೂ,ಶ್ಯಾಮಲವರ್ಣವೂ ಕೋಮಲಾಂಗವೂ, ಕಣ್ಣಕಾಂತಿಯೂ ಹೆಚ್ಚುಸೌಂದರ್ಯವನ್ನು ಮೂಡಿಸಲು, ಮೂರು ಲೋಕಗಳನ್ನು ಜಯಿಸಲೆಂದು ಶೃಂಗಾರರಸವೇ ದೇಹಧರಿಸಿದಂತೆ, ಸೌಕುಮಾರ್ಯವೇ ಆಕಾರ ಪಡೆದಂತೆ, ಸೊಬಗು ಒಟ್ಟುಗೂಡಿದಂತೆ ಕೋಮಲತೆ(ನಳನಳಿಕೆ) ಬೆಳೆದಂತೆ, ಕಣ್ಣು ಗಳ ಭಾಗ್ಯವು ಕವಲೊಡೆದಂತೆ, ಮನೋರಥವು ಮದವೇರಿದಂತೆ,ಪುಟವಿಟ್ಟಪುಣ್ಯವು ಪುರು ಷಾಕಾರವನ್ನು ತಳೆದಂತಿದ್ದ ಕಂದರ್ಪರಾಜನ ಕಮನೀಯರೂಪವು ಬೃಹಸ್ಪತಿಯ ಕಣ್ಣ ಒಳಹೊಕ್ಕು ಮನಸ್ಸನ್ನು ಅಲ್ಲಾಡಿಸಲು,ಬುದ್ಧಿಯು ಬೆದರಿ,ಅಹಂಕಾರವು ಅಳಿದು,ಚಿತ್ತವು ಸೂಸಿ, ಮದನಾಕಾರದ ಜಮ್ಮುಜಕ್ಕುಲಿಸಿ, ಮೈಮರೆದು (ಹಮ್ಮದಂಬೋಗು), ಜೀವವು ಸುಖದ ಜೀವಕಳೆಯ ಕುಣಿಕೆ ಸಡಲಿ, ತನ್ನನ್ನೂ ಇದಿರನ್ನೂ ಅರಿಯದೆ ತಾನು ಬಂದಕಾರ್ಯ ವನ್ನೇ ಮರೆತು, ತನ್ನ ಕೆಲಸವನ್ನು ಕೈಬಿಟ್ಟು, ಅದಷ್ಟುಬೇಗ ಸುಖದಸೊಕ್ಕಿನಿಂದ ಉಕ್ಕುವ ಕಾಮರಸದ ತೆರೆಗಳಲ್ಲಿ ಓಲಾಡುತ್ತಿದ್ದೂ, ಎಚ್ಚತ್ತು ಅವನು ಸ್ವಲ್ಪ ಸಂತೈಸಿ

ಕಂ॥ ಮಱೆಯುತ್ತೆಳ್ಚಱುತುಂ ಕುಱು–
ಕುಱುಮೆಟ್ಟುತ್ತಡಿಯನೆತ್ತಿ ತಾನೆಂದಿದಿರೆಂ ।
ದಱಿಯದೆ ಕಾಮವಿಕಾರಂ
ನೆಱೆ ಪತ್ತಿ ಸುರೇಂದ್ರಮಂತ್ರಿ ದಡದಡಿಸುತ್ತುಂ ॥ ೧೨

ಮೆಲ್ಲನೆ ಮೆತ್ತನೆ ನಡೆತರು
ತಲ್ಲಲ್ಲಿ ಕುನುಂಗಿ ಕುರ್ಗಿ ಪಂಚಶರಂ ಗು ।
ತ್ಫುಲ್ಲನವಕುಸುಮ ಸಂಕುಳ
ವಲ್ಲರಿಯಂ ಕಾಣ್ಕೆಯಿತ್ತನಮರಾಚಾರ್ಯಂ ॥ ೧೩

ವ॥ ಮತ್ತಮನಂತರಂ

ಕಂ॥ ಕಂಪಂ ಕೆಯ್ಕೊಳುತುಂ ಮೆಯ್
ಜೊಂಪಿಸಿ ಬೀಳ್ವಳಿನಿಕಾಯ ಸಹಿತಂ ಜೀವಂ ।
ಪೆಂಪಿನ ಸೊಂಪಿನಲಂಪಿನ
ಸಂಪಗೆಯಲರ್ದೊಂಗಲಂ ರತೀಶಂಗಿತ್ತಂ ॥ ೧೪

ವ॥ ಅಂತು ಕಾಣ್ಕೆಯಿತ್ತು ಕುಳ್ಳಿರ್ದ ವಾಚಸ್ಪತಿಯ ಮುಖಮಂ ಮಕರಧ್ವಜಂ ನೋಡಿ,

ಕಂ॥ ಸುರಪತಿ ಸರಸಿಜಭವ ಪಂ
ಕರುಹಾಕ್ಷರ್ ಸುಖದೊಳಿರ್ದಪರೆ ತಾರಕನಂ ।

ಕೊಂಡನು. ೧೨. ಮದನರಾಜನ ಸಂದರ್ಶನದಿಂದ ಬೃಹಸ್ಪತಿಗೆ ಕಾಮವಿಕಾರ ಹೆಡೆ ಯಾಡ ತೊಡಗಿತ್ತು ; ಆತ ಮರೆವು–ಎಚ್ಚರಗಳಲ್ಲಿ ಮುಳುಗಿದ್ದುದರಿಂದ ತಾನು ಯಾರು, ಎದಿರು ಯಾರು ಎಂಬುದರ ಅರಿವೇ ಅವನಿಗಿರಲಿಲ್ಲ; ಈ ಸ್ಥಿತಿಯಲ್ಲಿ ಸುರೇಂದ್ರಮಂತ್ರಿ ತಳಮಳಗೊಂಡಿದ್ದನು. ೧೩. ಅಮರಾಚಾರ್ಯನು ಮೆಲ್ಲ ಮೆಲ್ಲನೆ ಅಡಿಯಿಡುತ್ತಾ ನಡೆ ತಂದು ಅಲ್ಲಲ್ಲಿ ವಿಶ್ರಮಿಸಿಕೊಂಡು ಮುಂದೆ ಬಂದು ಕುಗ್ಗಿ ನಿಂತು ಪಂಚಶರನಿಗೆ ನವ ಕುಸುಮವಲ್ಲರಿ (ಹೊಸ ಹೂವಿನ ಗೊಂಚಲು)ಯನ್ನು ಕಾಣಿಕೆಯಾಗಿ ಒಪ್ಪಿಸಿದನು. ೧೪. ಜೀವನು (ಬೃಹಸ್ಪತಿ) ರತೀಶನಿಗೆ ಸೊಗಸಾದ ಸಂಪಿಗೆ ಹೂವುಗಳ ಗೊಂಚಲನ್ನು ಒಪ್ಪಿಸಿದನು. ದುಂಬಿಗಳು ಅದರ ಕಂಪನ್ನು ಹೀರಿ, ಮೈಜೊಂಗಸಿ ಕೆಳಕ್ಕೆ ಬೀಳುತ್ತಿದ್ದವು. ವ॥ ಬೃಹಸ್ಪತಿಯನ್ನು ಕುರಿತು ಮನ್ಮಥ ಹೀಗೆಂದನು ೧೫. ದೇವರಾಜ, (ಇಂದ್ರ) ಕಮಲಾಸ (ಬ್ರಹ್ಮ) ಮತ್ತು ಕಮಲಾಕ್ಷರು (ವಿಷ್ಣು) ಇವರು ಸುಖವಾಗಿರುವರೆ " ತಾರಕನೊಂದಿಗೆ

ಗರಮೇನಾದುದು ಸುರಕುಲ
ಗುರುವೇ ನೀಂ ಬಂದಕಜ್ಜಮೇನೀ ಪದದೊಳ್ ॥ ೧೫

ಎನೆ ಗುರುವೆಂದಂ ತಾರಕ
ನನುವರಮಂ ಮಾಣ್ದು ಮೇರುಗಿರಿತಟದೊಳ್ ಶ ।
ಕ್ರನುಮಜನುಂ ಸರಸಿಜನಾ
ಭನುಮೇಕಾಂತದೊಳಗಿರ್ದು ಕಳುಪಿದರೆನ್ನಂ ॥ ೧೬

ಅತುಳತರಗುಪ್ತಕಾರ್ಯ
ಸ್ಥಿತಿಯಾಳೋಚನೆಗಳುಂಟು ನೀಂ ಬೆಚ್ಚರನು ।
ಪ್ರತಿಮಂ ಕಾಮನನೊಡಗೊಂ
ಡು ತರ್ಪುದೆನೆ ಬಂದೆನಿದೆ ಪದಂ ನಡೆ ಮದನಾ ॥ ೧೭

ಎನುತಂ ಗುರು ನುಡಿಯೆ ಸುಖಾ
ಸನದಿಂದಿದಿರೆಳ್ದು ಶಶಿವಸಂತಾದಿಗಳಂ ।
ಬನದೊಳ್ ಪಿಂತಿರಿಸುತೆ ಭೋಂ
ಕನೆ ರತಿವೆರಸೇಱ ದರ್ಪಕಂ ಪುಷ್ಪಕಮಂ ॥ ೧೮

ತಾನುಂ ವಾಚಸ್ಪತಿಯುಂ
ನಾನಾವಿಧಕಾರ್ಯಗತಿಗಳಂ ನುಡಿಯುತ್ತುಂ ।
ಸಾನಂದಂ ಪರಿಯಜರಾ
ಸ್ಥಾನನಿಕೇತನದ ಮುಂದೆ ಬಂದಿಳಿತಂದರ್ ॥ ೧೯

ಪ್ರಾರಂಭಿಸಿದ ಯುದ್ಧ ಎಲ್ಲಿಗೆ ಬಂತು ? ಹೇ ಗುರು, ನೀನು ಇಲ್ಲಿಗೆ ಬಂದ ಕಾರಣವೇನು ? ೧೬. ಅದಕ್ಕೆ ಗುರು ಹೇಳಿದನು;–ತಾರಕನೊಡನೆ ಆರಂಭಿಸಿದ ಯುದ್ಧ ಮುಗಿದಿಲ್ಲ; ಇಂದ್ರ, ಬ್ರಹ್ಮ, ವಿಷ್ಣುಗಳು ಯುದ್ಧವನ್ನು ಕೈಬಿಟ್ಟು ಮೇರುಗಿರಿಯ ತಪ್ಪಲಲ್ಲಿ ಮಂತ್ರಾಲೋಚನೆಯಲ್ಲಿ ತೊಡಗಿ ನನ್ನನ್ನು ಇಲ್ಲಿಗೆ ಕಳುಹಿಸಿದರು. ೧೭. ಅವರು ಗುಪ್ತಾಲೋಚನೆಯಲ್ಲಿ ತೊಡಗಿದ್ದಾರೆ. ಅನುಪಮವಾದ ಎಷ್ಟೋ ರಹಸ್ಯಾಲೋಚನೆಗಳಿವೆ. “ನೀನು ಕೂಡಲೆ ಅಂಥ ವಿಷಯಗಳಲ್ಲಿ ಪ್ರವೀಣನಾದ ಕಾಮದೇವನನ್ನು ಕರೆದು ತಾ !” ಎಂದು ಅಪ್ಪಣೆ ಮಾಡಿದರು. ಅದಕ್ಕಾಗಿ ಬಂದೆ ; ಮದನನೆ, ಕೂಡಲೆ ಹೊರಡು ! ಎಂದನು ಬೃಹಸ್ಪತಿ. ೧೮. ಹೀಗೆ ದೇವಗುರು ಹೇಳಲು ದರ್ಪಕ (ಮನ್ಮಥನ)ನು, ಸುಖಾಸನದಿಂದ ಮೇಲೆದ್ದನು ; ಚಂದ್ರ ಮತ್ತು ವಸಂತರನ್ನು ವನದಲ್ಲಿರಿಸಿ ರತಿಯೊಡನೆ ಪುಷ್ಪಕವಿಮಾನವನ್ನು ಏರಿದನು. ೧೯. ವಿಮಾನವನ್ನು ಏರಿದ ಕಾಮ ಮತ್ತು ಬೃಹಸ್ಪತಿಗಳು ನಾನಾವಿಧ ಕಾರ್ಯಗತಿಗಳನ್ನು ಕುರಿತು ಮಾತನಾಡಿದರು, ಆನಂದದಿಂದ ಹೊರಟ ಅವರು ಹರಿಯ

ಉ॥ ಬಂದೊಳಪೊಕ್ಕು ಚಕ್ರಿಗೆ ವಿರಿಂಚಿಗೆ ವಜ್ರಧರಂಗೆ ವಂದನಾ
ನಂದಶರೀರರಾಗಿ ಕುಸುಮಾಯುಧನುಂ ರತಿಯುಂ ಪ್ರಸಿದ್ಧ ಸಂ।
ಕ್ರಂದನಮಂತ್ರಿಯುಂ ಮುದದೆ ಕುಳ್ಳಿರೆ ಕಾಮನನೀಕ್ಷಿಸುತ್ತೆ ಗೋ
ಗೋವಿಂದನನಿಂದಿತಂ ನುಡಿದನಾತ್ಮಗತಾರ್ಥವಿಚಾರಸಾರಮಂ॥ ೨೦

ಕಂ॥ ಕೇಳೆಲೆ ದರ್ಪಕ ತಾರಕ
ನೂಳಿಗದಿಂದುರಗ ಮರ್ತ್ಯ ನಿರ್ಜರಲೋಕಂ।
ಗೋಳುಂಡೆಗೊಳುತಮಿದೆ ವೀ
ರಾಳಾಪಂಗೊಳ್ಳದಸುರನತ್ಯಧಿಕಬಲಂ॥ ೨೧

ಹರನತ್ಯಧಿಕತಪೋವಿ
ಸ್ತರಮನನಾಗಿರ್ದಪಂ ಮದನ ತತ್ತಪಮಂ।
ಕರಗಿಸಿ ವರಗಿರಿಸುತೆಯೊಳ್
ನೆರೆಪಲ್ಲಿಗೆ ನೀನೆ ಬಲ್ಲೆ ನೀನೆ ಸಮರ್ಥಂ॥ ೨೨

ತಪಮಂ ಕೆಡಿಪುದು ಮಾಡುವ
ಜಪದಕ್ಷರದೊಳಗೆ ನಿನ್ನ ನನೆಯಂಬಂ ಕೀ।
ಲಿಪುದಾ ಗಿರಿಜಾವಧುಸೌ
ಖ್ಯಪದಾವರಣಾತ್ಮನೆನಿಸುವುದು ಶಶಿಧರನಂ॥ ೨೩

ವ॥ ಅಂತುಮಲ್ಲದೆ,

ಜರ ಮಂತ್ರಾಲೋಚನೆಯ ಸಭೆಯ ಮುಂದೆ ಬಂದಿಳಿದರು. ೨೦. ಬಂದವರು ಒಳ ಹೊಕ್ಕು ವಿಷ್ಣು ಬ್ರಹ್ಮ ಇಂದ್ರರಿಗೆ ವಂದಿಸಿದರು. ರತಿ–ಮನ್ಮಥರು ಹರ್ಷದಿಂದ ಸುಖಾಸನಗಳಲ್ಲಿ ಕುಳಿತರು. ಬೃಹಸ್ಪತಿಯೂ ಪೀಠವನ್ನು ಅಲಂಕರಿಸಿದನು. ಹರಿಯು ಕಾಮನ ಮುಖವನ್ನು ನೋಡಿ ತನ್ನ ಮನೋಗತವನ್ನು ತಿಳಿಸಿದನು. ೨೧. ಎಲೈ ದರ್ಪಕನೆ, ತಾರಕನ ಉಪಟಳದಿಂದ ಸ್ವರ್ಗ ಮರ್ತ್ಯಲೋಕಗಳು ತಲ್ಲಣಗೊಂಡಿವೆ. ಅವನು ಕೇವಲ ವೀರಾಲಾಪಗಳನ್ನು ಆಡುವನಲ್ಲ. ಏಕೆಂದರೆ ಅವನು ಅಧಿಕಬಲಶಾಲಿ. ೨೨. ಆದರಿಂದ ಅವನಿಗೆ ಸಾವಿಲ್ಲ; ಪರಶಿವನಿಗೆ ಹುಟ್ಟಿದಕುಮಾರನಿಂದಲ್ಲದೆ ಅವನಿಗೆ ಬೇರೆ ಮರಣವೇ ಇಲ್ಲ. ಆದ್ದರಿಂದ ಈ ದಿಸೆಯಲ್ಲಿ ನಾವು ಮಾಡಬೇಕಾದ ಕಾರ್ಯವೊಂದುಂಟು! ೨೩. ಪರಮೇಶ್ವರನು ಅತ್ಯಧಿಕ ತಪಸ್ಸಿನಲ್ಲಿ ತನ್ಮಯನಾಗಿದ್ದಾನೆ. ಎಲೆ ಮನ್ಮಥ, ಆ ತಪವನ್ನು ಕರಗಿಸಿ ಗಿರಿಸುತೆಯಲ್ಲಿ ಅವನ ಮನಸ್ಸು ನೆಲೆಸುನಂತೆ ಮಾಡುವುದಕ್ಕೆ ನೀನೊಬ್ಬನೇ

ಕಂ॥ ಪುರುಷರ್ ವಧುಗಳ್ಗೆ ವಧೂ
ತ್ಕರಮಾ ಪುರುಷರ್ಗೆ ಸೋಲ್ವುದುಚಿತಮದಿಲ್ಲೀ ।
ಧರೆಯೊಳ್ ಮದನ ವರಸ್ತ್ರೀ
ಪುರುಷರ್ ನೆರೆ ನಿನಗೆ ಸೋಲ್ವುದೆನಗಿದು ಚಿತ್ರಂ ॥ ೨೪

ಇಂತಪ್ಪ ನಿನಗೆ ಮನ್ಮಥ
ಮುಂತಿದಿರಪ್ಪವರದಾರೊ ಶಶಿಚೂಡನ ತ ।
ಚ್ಛಾಂತಿಯನುಡುಗಿಸಿ ಗಿರಿಜಾ
ಕಾಂತೆಯ ಸಮಸುಖಸಮುದ್ರಮಧ್ಯದೊಳಿರಿಸೈ ॥ ೨೫

ಎನೆ ಮದನಂ ನುಡಿದಂ ನಿಜ
ಜನಕನೊಳಕ್ಕಕ್ಕಿದಪ್ಪದಪ್ಪದು ಸರ್ವೇ ।
ಶನನನವಧಿಗುಣನಂ ಶ
ರ್ವನನೆಸುವುದನೆನಗೆ ಬೆಸಸುವುದು ನಿಮಗರಿದೇ ॥ ೨೬

ಶ್ರುತಿಗಳ್ ಕಾಣದ ಮನುಗಳ
ಮತಿಯೆಯ್ದದ ಮುನಿಗಳಱಿವು ನಿಲ್ಕದ ಶಾಸ್ತ್ರ ।
ಪ್ರತತಿ ನೆಱೆಯಱಿಯದಪ್ರತಿ
ಹತರೂಪನನನೆಂತು ಕಾಣ್ಬೆನೆಂತಾನೆಸುವೆಂ ॥ ೨೭

ಸಮರ್ಥ ! ೨೪. ಪರಶಿವನ ತಪಸ್ಸನ್ನು ಕೆಡಿಸಬೇಕು. ಆತ ಮಾಡುವ ಜಪಾಕ್ಷರಗಳಿಗೆ ನಿನ್ನ ಕುಸುಮಾಸ್ತ್ರಗಳನ್ನು ಬಿಡಬೇಕು. ಶಿವನು ಗಿರಿಜೆಯ ಸುಖಲೋಲನಾಗುವಂತೆ ನೀನು ಮಾಡಬೇಕು. ೨೫. ಪುರುಷರು ವಧುಗಳಿಗೆ ಮತ್ತು ವಧುಗಳು ಪುರುಷರಿಗೆ ಸೋಲುವುದು ಉಚಿತ; ಆದರೆ ಎಲೆ ಮದನ, ನಿನಗೆ ಸ್ತ್ರೀಪುರುಷರೆಲ್ಲರೂ ಸೋಲುವರೆಂಬುದು ಅತಿವಿಚಿತ್ರವಾಗಿದೆ. ೨೬. ಎಲೈ ಮನ್ಮಥ, ಇಂತಹ ಅಸಹಾಯಶೂರ ನೀನು ! ನಿನ್ನ ಎದುರಿಗೆ ನಿಲ್ಲುವರು ಯಾರು ? ಅದಕ್ಕಾಗಿ ನೀನು ಆ ಚಂದ್ರಮೌಳಿಯ ತಪಸ್ಸನ್ನು ಕೆಡಿಸಿ ಅವನು ಗಿರಿಜೆಯೊಡನೆ ಸುಖಸಾಗರದಲ್ಲಿ ಮಗ್ನನಾಗುವಂತೆ ಮಾಡು ! ೨೭. ಎಂದ ಹರಿಯಮಾತಿಗೆ ಮದನ, ತನ್ನ ತಂದೆ ವಿಷ್ಣುವಿಗೇ ಹೀಗೆಂದನು: ಆಗಲಾಗಲಿ ! ಒಳ್ಳೆಯ ಮಾತನ್ನೇ ಆಡಿದಿರಿ ! ಸರ್ವೇಶ್ವರನೂ, ಅಪಾರಗುಣನಿಧಿಯೂ ಆದ ಶರ್ವನಿಗೇ ಗುರಿಯಿಡುವ ಕೆಲಸವನ್ನು ಬೆಸಸುವುದು ನಿನಗೆ ಉಚಿತವೆ ? ೨೮. ಆ ಪರಶಿವನನ್ನು ಶ್ರುತಿಗಳು ಕಾಣವು, ಮನುಗಳ ಮತಿ ಅವನನ್ನು ಹೊಂದದು, ಮುನಿಗಳ ಅರಿವು ಅರಿಯದು, ಶಾಸ್ತ್ರ

ಕಂ॥ ಇಸುಹೆನ್ನೀ ಮನಮಂ ಪ್ರೇ
ರಿಸುವೀತನನಖಿಳಲೋಕಗುರುವಂ ಭರದಿಂ ।
ದಸಮಾಕ್ಷನನಿರದಾರ್ದಿಸು
ವಸಮಾಸ್ತ್ರರ್ ಜಲಧಿವಸನ ವಸುಧೆಯೊಳುಂಟೇ ॥ ೨೮

ತಿಳಿಯದೆ ಶೂಲಿಯ ತಪಮಂ
ಚಲಿಯಿಸು ನೀನೆಂಬುದಹಿತಮೆನಗೆ ಹೆಱರ ಮ ।
ಕ್ಕಳನಿಕ್ಕಿ ನೆಲೆಯನರಿವುದ
ನಿಳೆಯೊಳಗೆನ್ನಲ್ಲಿ ಮಾಳ್ಪರೇ ಕಮಲಾಕ್ಷಾ ॥ ೨೯

ವ॥ ಅಂತುಮಲ್ಲದೆ

ಕಂ॥ ಹರಿಯಲ್ಲಿಗೆ ತಮಮಂ ಕೇ
ಸರಿಯಲ್ಲಿಗೆ ಕರಿಯನಭ್ರಶಿಖಿಯಲ್ಲಿಗೆ ಕೇ ।
ಳುರಗನನಟ್ಟುವ ತೆಱದಿಂ
ಹರನಲ್ಲಿಗೆ ತಂದೆ ಕಳಿಪುವರೆ ನೀವೆನ್ನಂ ॥ ೩೦

ಎಂದೊಡೆ ಮುಕುಂದನೆಂದಂ
ಕಂದರ್ಪ ಬಹೂಕ್ತಿಯಿಂದಮೇನಪ್ಪದು ನಿ ।
ನ್ನಿಂದಂ ಸಕಳಜಗಂ ಸುಖಿ
ದಿಂದಿರ್ಪೊಡೆ ಹರಣದೊಂದು ಹುರುಳೞಿಸುವರೇ ॥ ೩೧

ಗಳು ಕಾಣವು, ಅಂತಹ ಹರನನ್ನು ನಾನು ಹೇಗೆ ಕಾಣಲಿ, ಹೇಗೆ ಗುರಿಯಿಟ್ಟು ಹೊಡೆಯಲಿ. ೨೮. ಬಾಣಬಿಡುವ ನನ್ನ ಮನಸ್ಸನ್ನು ಪ್ರೇರಿಸುವವನೇ ಈ ಲೋಕ ಗುರು, ಇಂತಹ ಮುಕ್ಕಣ್ಣನನ್ನು ಗುರಿಯಿಟ್ಟು ಹೊಡೆಯುವ ಅಸಮಾಸ್ತ್ರರು ಈ ಜಗತ್ತಿನಲ್ಲಿದ್ದಾರೆಯೆ ? ೨೯. ಎಲೈ ಕಮಲನಯನ, "ಶೂಲಿಯ ತಪಸ್ಸನ್ನು ಚಲಿಸುವಂತೆ ಮಾಡು ಎಂದು ನೀನು ಹೇಳಿದ್ದು ತಿಳಿವಳಿಕೆಯಿಲ್ಲದ ಮಾತು ! ಇದು ಹೆರರ ಮಕ್ಕಳನ್ನು ಬಾವಿಗೆ ತಳ್ಳಿ ಆಳ ನೋಡುವಂತೆ ಇದೆಯಲ್ಲವೆ ? ೩೦. ಎಲೈ ತಂದೆಯೆ, ನೀವು ನನ್ನನ್ನು ಹರನಲ್ಲಿಗೆ ಕಳಿಸುವುದು ಸೂರ್ಯನ ಹತ್ತಿರಕ್ಕೆ ಕತ್ತಲನ್ನೂ, ಸಿಂಹದ ಹತ್ತಿರಕ್ಕೆ ಆನೆಯನ್ನೂ ನವಿಲಿನ ಹತ್ತಿರಕ್ಕೆ ಸರ್ಪವನ್ನೂ ಕಳುಹಿಸಿದಂತೆ ಇರುವಾಗ ನೀವು ಹೀಗೆ ಮಾಡಬಹುದೆ ? ೩೧. ಅದಕ್ಕೆ ಮುಕುಂದ ಹೀಗೆಂದನು–"ಅಪ್ಪ ಮನ್ಮಥ, ಹೆಚ್ಚು ಮಾತನಾಡುವುದರಿಂದ ಏನು ಪ್ರಯೋಜನ ! ನಿನ್ನಿಂದ ಎಲ್ಲ ಜಗತ್ತುಗಳಿಗೂ ಸುಖವಾಗುತ್ತದೆ ಎಂದ

ಕಂ॥ ಎನೆ ಕಂದರ್ಪಂ ಸಕಳ ಭು
ವನಮೆನ್ನಿಂ ಪರಮಸುಖದೊಳಿರ್ಪುದು ಗಡಮಾ ।
ನೆನಿತಱವನೆನ್ನ ಪರಣಂ
ಘನವೇ ತೆಗೆಯಿಂದೆ ನೂಱು ತೀವಿತ್ತೆಂದಂ॥ ೩೨

ವ॥ ಎಂದು ಮಾಱು ನುಡಿಯುತ್ತೊಡಂಬಟ್ಟು ಬೀಳ್ಕೊಂಡು ನಡೆತಂದು ಪೊಱಗಿಕ್ಕಿದ ಸಿಂಹವಿಷ್ಟರಮನವಷ್ಟಂಭಿಸುತುನ್ನತಚಿತ್ತಂ ಪುಷ್ಪಧನ್ವಂ ತನ್ನೊಳಿಂತೆಂದಂ

ಚಂ॥ ಪೊಡವಿಯೊಳುಳ್ಳ ಮುಖ್ಯಮುನಿಗಳ್ ಮನುಗಳ್ ಜಿತಕಾಮರುಂ ಸಮಂ-
ತೆಡೆಗುಡದೆನ್ನ ಕಾರ್ಮುಕದ ಟಂಕೃತಿಮಾತ್ರದೊಳತ್ತಲಿತ್ತಲುಂ ।
ಸೆಡೆದು ಸುರುಳ್ದುರುಳ್ದು ರತಿಯುನ್ನತಿಯಿಂ ರತರಪ್ಪರೆಂದೊಡೀ
ಸಡಿಘಡ ಶೂಲಿಗೀಲಿಯ ತಪಂಗಿಪಮೊಡ್ಡಿಪುದೇ ರತೀಶನೊಳ್ ॥ ೩೩

ವ॥ ಎಂದು ಕಂದರ್ಪಕಂ ತನ್ನೊಳ್‌ತಾನೆ ಗಜಱು ಗರ್ಜಿಸಿ ಮಧುದೂತಿಯೆನಿಪ್ಪದಿರ್ಗಂತಿಯಂ ಕರೆದು ವಸಂತಾದಿ ಚತುರಂಗಬಲಮಂ ಬರಲ್ವೇಳೆಂದು ಕಳಿಪುವಸಮಯಮೇ ವಸಂತಸಮಯಮಾಗೆ

ಕಂ॥ ಶಿಶಿರದ ತವುದಲೆಯುಂ ನವ
ವಸಂತಸಮಯಪ್ರವೇಶಮುಂ ತಮ್ಮೊಳ್ ಸಂ ।
ದಿಸೆ ಬಣ್ಣಿಸಲರಿದಾದೊಡ
ಮೆಸೆವಾ ಋತುಸಂಧಿಯುಂ ವಿಭಾಗಿಸಿ ಪೇಳ್ವೆಂ ॥ ೩೪

ಮೇಲೆ ಒಂದು ಜೀವದ ಹುರುಳನ್ನು ಅರಸಬಹುದೆ? ೩೨. ಅದಕ್ಕೆ ಕಂದರ್ಪನು ಹೇಳಿದನು: –ನನ್ನಿಂದ ಎಲ್ಲ ಜಗತ್ತುಗಳಿಗೂ ಸುಖವಾಗುವುದಾದರೆ ನಾನು ಎಷ್ಟರವನು ! ನನ್ನ ಪ್ರಾಣವು ಅದೆಷ್ಟರದು ? ಬಿಡಿ, ನನಗೆ ಈಗಾಗಲೇ ನೂರುವರ್ಷ ತುಂಬಿತೆಂದುಕೊಳ್ಳುವೆನು ವ॥ ಎಂದು ಮನ್ಮಥನು ಮಾರಿನುಡಿದು, ಒಡಂಬಟ್ಟು, ಅಲ್ಲಿಂದ ಬೀಳ್ಕೊಂಡು ಹೊರಗಡೆಯ ಸಿಂಹಾಸನಕ್ಕೆ ಒರಗಿಕೊಂಡು ಮನಸ್ಸಿನಲ್ಲಿ ಹೀಗೆ ಯೋಚಿಸಿದನು, ೩೩. ಈ ಜಗತ್ತಿನಲ್ಲಿರುವ ಮುಖ್ಯಮುನಿಗಳು, ಮನುಗಳು, ಜಿತೇಂದ್ರಿಯರು, ಮೊದಲಾದವರೆಲ್ಲರೂ ನನ್ನ ಬಿಲ್ಲಿನ ಟಂಕಾರಕ್ಕೆ ತತ್ತರಿಸುತ್ತಾರೆ, ತಬ್ಬಿಬ್ಬಾಗಿ ರತಾಸಕ್ತರಾಗುತ್ತಾರೆ ಎಂದ ಮೇಲೆ ಈ ಶೂಲಿಯ ತಪಸ್ಸು ಈ ರತೀಶನಿಗೆ ಯಾವ ಲೆಕ್ಕ ? ವ॥ ಹೀಗೆ ದರ್ಪಕನು ಯೋಚಿಸಿ ಮಧುದೂತಿ ಎಂಬ ದೂತಿಯನ್ನು ಕರೆದು ವಸಂತನೇ ಮೊದಲಾದ ತನ್ನ ಚತುರಂಗ ಬಲವನ್ನು ಬರಹೇಳಿದನು. ಆ ಸಮಯವು ವಸಂತಋತುವೇ ಆಗಿತ್ತು ! ೩೪. ಶಿಶಿರ ಋತುವಿನ ಕಡೆಯದಿನಗಳು ಮತ್ತು ನವವಸಂತಋತುವಿನ ಪ್ರವೇಶ ಇವೆರಡು ಕೂಡಿದ ಸಮಯದ ಬೆಡಗನ್ನು ವರ್ಣಿಸಲು ಅಸಾಧ್ಯ ಆದರೂ ಆ ಋತುಸಂಧಿಯನ್ನು ಬಿಡಿಸಿ

ವ॥ ಅದೆಂತೆಂದೊಡೆ

ಚಂ॥ ಪೊಳೆವದಿರ್ಗಂತಿಯುಣ್ಮೆ ಮಧುಮಾಸವೊಡರ್ಚಿದುದನ್ಯಪುಷ್ಪಸಂ
ಕಳರುತಿ ಪತ್ತೆಸಾರ್ದುದು ನವಾಮ್ರಕುಳಂಗಳೊಳಂಕುರಸ್ಥಳಂ ।
ತಳೆದುವು ತಂಬೆಲರ್ ಜನಿಯಿಸಿರ್ದುದು ಬಾಲ್ಯದೊಳತ್ತ ಮಾರನ
ಗ್ಗಳಿಸುವ ಮಾರ್ಗಣಂಗಳೆನೆ ಚಿಂತಿಸುತಿರ್ದನದಾವ ಕಾಲಮೋ ॥ ೩೫

ವ॥ ಆ ಸಮಯದೊಳ್

ನನೆಯಂ ಪೆತ್ತುದು ಮಾಧವಿ
ಮೊನೆಸಿದುವಂಕುರಿಪ ತಾಣಮಿಮ್ಮಾವುಗಳೊಳ್ ।
ಜಿನುಗಿದುವು ಕೊರಲೊಳಗೆ ಪಿಕ
ನನಂತರಂ ಬಿಲ್ಗೆ ಮದನನನುಮಾನಿಸಿದಂ ॥ ೩೬

ಮ॥ ಮುಗುಳೊತ್ತಿತ್ತದಿರ್ಗಂತಿಯಂಕುರಿಸಿತಾಮ್ರಂ ಬಂದು ಮಂದಾನಿಳಂ
ಪುಗುತೊಂದೊಂದಡಿಯಿಟ್ಟನನ್ಯಭೃತನಂತೋರೊರ್ಮೆ ಕೂಗಿತ್ತು ಮ ।
ಲ್ಲಗೆ ಬಿಲ್ಲಂ ಗೊಲೆಗೆತ್ತಿ ಹೂಡಿದನಮೋಘಾಸ್ತ್ರಂಗಳಂ ದರ್ಪಕಂ
ದಿಗಿಲೆಂದಿತ್ತು ವಿಯೋಗಿವೃಂದಹೃದಯಂ ವಾಸಂತಿಕಾಮಾಸದೊಳ್ ॥ ೩೭

ಚಂ॥ ಕಳಿದುದು ಮಾಗಿ ಕೂಗಿದುದು ಕೋಗಿಲೆ ಪಲ್ಲವಿಸಿತ್ತು ಮಾಮರಂ
ತಳವೆಳಗಾಯ್ತು ಪಾಂಥಜನಮೊಲ್ದವರೊಳ್ ನವಭೋಗದುಜ್ಜುಗಂ ।
ಮೊಳೆತುವು ಕಾಮನೇಸು ಗುಱಿಗಂಡುದು ತಂಡದೆ ನಿಂದ ನಂದನಂ
ತಳೆದುವು ಕೂಡೆ ಕೆಂಪಿನ ಪಸುರ್ಪಿನ ಕರ್ಪಿನ ಬೆಳ್ಪನಂದಮಂ ॥ ೩೮

ಹೇಳುವೆನು. ೩೫. ಹೊಳೆಯುವ ಮಾಧವಿ ಪುಷ್ಪಗಳು ಕಾಣಿಸಿಕೊಂಡವು, ವಸಂತ ಋತು ಅಡಿಯಿಟ್ಟಿತು. ಕೋಗಿಲೆಯಧ್ವನಿ ಕೇಳತೊಡಗಿತು, ಮಾವಿನಮರ ಚಿಗುರಿದವು. ತಂಗಾಳಿ ತೀಡಿತು, ವಸಂತೋದಯದ ಪ್ರಾರಂಭದಲ್ಲಿ ಅಗ್ಗಳಿಸುವ ಮಾರನಬಾಣಗಳೊ ಎಂಬಂತೆ ತೋರುವ ಈ ಚಿಹ್ನೆಗಳನ್ನು ಸ್ವಯಂ ಮಾರನೇ ನೋಡಿ ಇದು ಯಾವಕಾಲ ಎಂದು ಚಿಂತಿಸುವಂತೆ ಇತ್ತು. ೩೬. ಮಾಲತಿ ನನೆಯಿಟ್ಟಿತು. ರಸಪುರಿ ಮಾವಿನ ಮರಗಳು ಚಿಗುರಿದವು. ಕೋಗಿಲೆಯ ಕಂಠದಲ್ಲಿ ಸ್ವರ ಬದಲಾಯಿತು, ಆಗ ಮನ್ಮಥನು ಬಿಲ್ಲೆತ್ತಲು ಅನುಮಾನಿಸಿದನು. ೩೭. ಆ ವಸಂತಮಾಸದಲ್ಲಿ ಅದಿರ್ಗಂತಿ (ಮಾಧವಿಲತೆ) ಮೊಗ್ಗುಬಿಟ್ಟಿತು, ಮಾವುಚಿಗುರಿತು, ಮಂದಮಾರುತ ತೀಡಿತು. ಕೋಗಿಲೆ ಒಮ್ಮೊಮ್ಮೆ ಕೂಗತೊಡಗಿತು, ದರ್ಪಕನು ಬಿಲ್ಲಿಗೆ ಸಿಂಜಿನಿ ಬಿಗಿದು ಅಮೋಘಾಸ್ತ್ರಗಳನ್ನು ಹೂಡಿದನು. ವಿರಹಿಗಳ ಹೃದಯಗಳು ಝಲ್ಲೆಂದವು. ೩೮. ಮಾಗಿಕಳೆಯಿತು, ಕೋಗಿಲೆಕೂಗಿತು, ಮಾವು ಚಿಗುರಿತು, ದಾರಿಗರಿಗೆ ತಾವು ಒಲಿದವರಲ್ಲಿ ನೆರೆಯುವ ಬಯಕೆಯಾಯಿತು. ಕಾಮನು ಬಿಟ್ಟಬಾಣ ಗುರಿಮುಟ್ಟಿದವು, ನಂದನವನದಲ್ಲಿ ಕೆಂಪು, ಹಸುರು, ಕಪ್ಪು,

ವ॥ ಆ ಸಮಯದೊಳ್,

ಚಂ॥ ಜನಮನುರಾಗಮೇಱಿ ಲಲನಾಜನಮಂ ತೆಗೆದಪ್ಪಿ ಮಿಾಱಿ ಸ
ನ್ಮುನಿನಿಕರಂ ಜಪಂ ತಪಮನೋವದೆ ಬಿಟ್ಟತಿದೈನ್ಯದಿಂ ವಧೂ ।
ಸ್ತನತಟವಕ್ಷರಾಗೆ ಮೃಗವೀಧಿಮೃಗೀಕುಲದತ್ತ ಸಾರ್ದು ಪೆ
ನ್ನನೆ ಮಿಗೆ ಪೋಗೆ ಪರ್ಬಿತಿಳೆಯಲ್ಲಿ ವಸಂತವಿಶಾಲಸಂಪದಂ ॥ ೩೯

ವ॥ ಆಗಳ್

ಮ॥ ಮುದದಿಂದಂ ಮಧುದೂತಿಯಂ ಮೊಗಮೊಲರ್ಚುತ್ತುಂ ವಿರಾಜಿಪ್ಪ ಚೂ
ತದ ಮೆಯ್ಯೊಳ್ ಪುಳಕಂಗಳಂ ನೆಗೆಪುತುಂ ಸಾರ್ದನ್ಯಪುಷ್ಟಕ್ಕೆ ಕಂ ।
ಠದ ಕಾಕಂ ನೆಲೆವೆರ್ಚಿಸುತ್ತೆ ವನಮಂ ವೈವರ್ಣಮಂ ಮಾಡುತು
ರ್ವಿದಲಂಪಿಂದೆ ವಸಂತರಾಜನೊಸೆದೇಳ್ತಂದಂ ಜಗದ್ವಲ್ಲಭಂ ॥ ೪೦

ಚಂ॥ ನಡುಗಿ ವಿಯೋಗಿಗಳ್ ಸೆಡೆದು ಜೀವಮನೊಪ್ಪಿಸೆ ದರ್ಪಕಂಗೆ ಮುಂ
ತಡಿಯಿಡಲಾರದೊತ್ತರಿಸೆ ಪಾಂಥಜನಂ ಕಳೆಗುಂದಿನಿಂದು ಪಾ
ವಡರ್ದವೊಲಾಗುತುಂ ಬೆದಱಿ ನಲ್ಲರ ಮೆಯ್ಸಿರಿ ನವ್ಯಭೋಗದೊಳ್
ತೊಡರ್ದಿರೆ ಬಂದನಿಂದುಕಳೆಯಂ ದಳವೇಱಿಸುತುಂ ವಸಂತಕಂ ॥ ೪೧

ವ॥ ಇಂತು ವಸುಮತಿಯ ಪೆಂಪಿನ ಸಂಪದಮಂ ಸೊಂಪೇಱಿಸುತುಂ ನವ್ಯವನಂಗಳ್ಗೆ ನಳನಳಿಕೆಯನೀಯುತುಂ ಚೂತದ ಮೆಯ್ಯೊಳಂಕುರಮನಾಗಿಸಿ ಕೋಗಿಲೆಗಳ ಕೊರಲಂ ಕೆಳೆಯೇಱಿ

ಬಿಳುಪುಗಳ ಅಂದವೇರ್ಪಟ್ಟಿತು. ೩೯. ಜನ ಅನುರಾಗವೇರಿ ಲಲನೆಯರನ್ನು ಬಿಗಿದಪ್ಪಿದರು. ಮುನಿಗಳು ಜಪತಪಗಳನ್ನು ಕೈಬಿಟ್ಟು, ದೈನ್ಯದಿಂದ ವಧುಗಳನ್ನು ಆಲಿಂಗಿಸಿದರು. ಚಿಗರಿಗಳು ಹೆಣ್ಣು ಜಿಂಕೆಗಳನ್ನು ಬೆನ್ನಟ್ಟಿದವು, ವಸಂತವೈಭವವು ಜಗತ್ತಿನಲ್ಲೆಲ್ಲ ಹರಡಿತು. ೪೦. ಮುದದಿಂದ ಮಧುದೂತಿಯ ಮುಖವನ್ನು ಅರಳಿಸುತ್ತಾ, ಬೆಳಗುವ ಮಾವಿನಮೈಯಲ್ಲಿ ನವಿರೇರಿಸುತ್ತಾ, ಕೋಗಿಲೆಯಕಂಠಕ್ಕೆ ಇಂಪುಧ್ವನಿಯನ್ನುಂಟುಮಾಡುತ್ತಾ, ವನವನ್ನು ವಿವರ್ಣಗೊಳಿಸುತ್ತಾ ಹೆಚ್ಚಿದ ಸೊಗಸಿನಿಂದ ಜಗದ್ವಲ್ಲಭನಾದ ವಸಂತರಾಜನು ಆಗಮಿಸಿದನು. ೪೧. ವಸಂತಮಾಸವು ಅಡಿಯಿಟ್ಟ ಆ ಸಮಯದಲ್ಲಿ ವಿಯೋಗಿಗಳು ನಡುಗಿಸೆಡೆದು ಕಾಮನಿಗೆ ಜೀವವನ್ನು ಒಪ್ಪಿಸಿದರು. ದಾರಿಗರು ಮುಂದೆ ಅಡಿಯಿಡಲಾರದೆ ಕಳೆಗುಂದಿ, ಹಾವು ಮೇಲೆಬಿದ್ದವರಂತೆ ಹೆದರಿ, ನಲ್ಲರ ಮೆಯ್ಸಿರಿ ನವ್ಯಭೋಗದಲ್ಲಿ ತೊಡಗಿತ್ತು, ವ॥ ಹೀಗೆ ಭೂಮಿಯ ಸಂಪತ್ತನ್ನು ಸೊಂಪೇರಿಸುತ್ತಾ, ನವವನಗಳಿಗೆ ಕೋಮಲತೆಯನ್ನು ಕೊಡುತ್ತಾ, ಚೂತದ ಮೈಯಲ್ಲಿ ಅಂಕುರವನ್ನು ಹುಟ್ಟಿಸಿ, ಕೋಗಿಲೆಯಕೊರಲದನಿಗೆ ಕಳೆಯೇರಿಸುತ್ತಾ, ಅಶೋಕೆಯಲ್ಲಿ ಚಿಗುರಾಗಿಸಿ ಕಾಂತೆಯರ

ಸುತುಂ ಅಶೋಕೆಯೊಳ್ ಪಲ್ಲವಮಂ ಪಡೆದು ಕಾಂತಾಜನದ ಕಣ್ಣಪುಣ್ಯಮಂ ಕವಲ್ವರಿಯಿಸುತುಂ ಲತಾವಿಸರದೊಳ್ ಕುಸುಮ ಕುಲಮಂ ಪಸರಿಸಿ ಮಧುಕರಂಗಳ ಮನೋರಥಂಗಳಂ ಪಡೆಯುತುಂ ತರುನಿಕರಕ್ಕೆ ನವೀನ ಫಲಮಂ ಕೊಟ್ಟು ಶುಕಂಗಳ ಜಿಹ್ವೆಯ ವಿಕಸನಮಂ ಮಾಡುತ್ತುಂ ಪೂಗೊಳ ನಂ ತಿಳಿಯಿಟ್ಟು ನೀರ್ವಕ್ಕಿಗಳಂ ನೆಲೆವೆರ್ಚಿಸುತ್ತುಂ ರವಿಕಿರಣಂಗಳಂ ಪುಟವಿಟ್ಟು ರಥಾಂಗಮಂ ನಲವೇಱಿಸುತ್ತುಂ ನಳಿನಕುಲಮನಲರ್ಚಿ ಕಲಹಂಸಂಗಳಂ ತಣಿಪುತ್ತುಂ ನದೀಜಳಮಂ ನಿರ್ಮಳ ಮಂ ಮಾಡಿ ಮೃಗಪಕ್ಷಿಕುಳಮಂ ಮಿಗೆ ತುಷ್ಟಿವಡಿಸುತ್ತುಂ ಚಂದ್ರಕಳೆಯಂ ದಳವೇಱಿಸಿ ಚಕೋರಮಾಲೆಗೆ ಸುಖಮಂ ಕೂಡುತ್ತುಂ ಇಳೆಯೊಳ್ ಬೆಳ್ದಿಂಗಳಂ ಪಸರಿಸಿ ವಿರಹಿಗಳಂ ವಿಠಥರಂ ಮಾಡುತ್ತುಂ ಕಾಮನಬಾಣಕ್ಕೆ ಕಂಪನಿತ್ತುಂ ಕಾಮಿಗಳ ನಿರ್ಮೆಯ್ಯಾಗಿಣಸುತ್ತುಂ ಮಳಯಾನಿಳಂಗೆ ಶೈತ್ಯಸೌರಭ್ಯಮಾಂದ್ಯಮನಿತ್ತು ಸುಖಿಮಿಥುನದ ಸುರತ ಶ್ರಾಂತಿಯನಾಱಿಸುತ್ತುಂ ಮುನಿಗಳ ಮನಮನನನ್ವಿತಂ ಮಾಡಿ ವನಿತಾಜನದ ವದನಮನಲರ್ಚುತ್ತುಂ ಸಕಳಭುವನಕ್ಕೆ ರಾಗಾಂಧತೆಯ ನಿತ್ತು ಸತೀಜನಮನೇಪೊಳ್ತುಂ ನೆರೆಪುತ್ತುಂ ಇಂತು ತನ್ನ ಬರವಿಸುರವಣೆಯನುರಾಗಕ್ಕೆ ಅನು ರಾಗವೇಱಿ ಮನ್ಮಥರಾಜಂ ರತಿಯನಾಲಿಂಗಿಸಲನುಗೆಯ್ಯುತ್ತಿರೆ ವಸಂತಂ ಸಂತಸದಿಂ ನಡೆತಂದೆಳ ಗೆಂಪಂ ಪಸರಿಪ ಕಿಸಲಯ ವಿಸರಮಂ ಕಂಪಂ ಕವಲ್ವರಿಯಿಸುವ ಕುಸುಮಮಂಜರಿಯಂ ಮಧುರ ರಸಮಂ ತೆರೆಮಸಗಿಪ ನವ್ಯಫಲಂಗಳಂ ಮಕರಪತಾಕಂಗೆ ಕಾಣ್ಕೆಯಿಕ್ಕಿ ಮೆಯ್ಯಿಕ್ಕಿ ಕೆಯ್ಯಂಮುಗಿದು ನಿಂದು •

ಕಣ್ಣಪುಣ್ಯವನ್ನು ಕವಲುಗೊಳಿಸುತ್ತಾ, ಬಳ್ಳಿಗಳಲ್ಲಿ ಹೂಬಿಡುವಂತೆ ಮಾಡಿ ದುಂಬಿಗಳ ಮನೋರಥಗಳನ್ನು ಪಡೆಯುತ್ತಾ, ತರುಗಳಿಗೆ ಹೊಸಫಲವನ್ನು ಇತ್ತು ಗಿಳಿಗಳ ನಾಲ ಗೆಯ ರುಚಿಯನ್ನು ಅರಳಿಸುತ್ತಾ, ಹೂಕೊಳಗಳನ್ನು ತಿಳಿಯಾಗುವಂತೆ ಮಾಡಿ ನೀರು ಹಕ್ಕಿಗಳನ್ನು ಆನಂದಗೊಳಿಸುತ್ತಾ ರವಿಕಿರಣಗಳನ್ನು ಪುಟಗೊಳಿಸಿ ಚಕ್ರವಾಕಗಳನ್ನು ಹರ್ಷಗೊಳಿಸುತ್ತಲೂ, ಕಮಲಗಳನ್ನು ಅರಳಿಸಿ ಕಲಹಂಸಗಳನ್ನು ತಣಿಸುತ್ತಲೂ, ನದಿ ಗಳ ನೀರನ್ನು ತಿಳಿಗೊಳಿಸಿ ಮೃಗಪಕ್ಷಿಕುಲವನ್ನು ತುಷ್ಟಿಪಡಿಸುತ್ತಾ, ಚಂದ್ರಕಳೆಯನ್ನು ಹೆಚ್ಚಿಸಿ ಚಕೋರಪಕ್ಷಿಗಳಿಗೆ ಸುಖವನ್ನು ಕೊಡುತ್ತಲೂ ಇಳೆಯಲ್ಲಿ ಬೆಳುದಿಂಗಳನ್ನು ಹರಡಿ ವಿರಹಿಗಳನ್ನು ವಿಫಲಮನೋರಥರನ್ನು ಮಾಡಿಸುತ್ತಾ, ಕಾಮನ ಬಾಣಕ್ಕೆ ವಾಸನೆ ಕೊಟ್ಟು ಕಾಮಿಗಳನ್ನು ಮೈಎರಡು ಮಾಡಿಸುತ್ತಾ, ಮಲಯಾನಿಲನಿಗೆ ತಂಪು–ಕಂಪು– ಮಾಂದ್ಯತೆಗಳನ್ನಿತ್ತು ದಂಪತಿಗಳ ಸುರತಶ್ರಾಂತಿಯನ್ನು ಆರಿಸುತ್ತಾ, ಮುನಿಗಳ ಮನಸ್ಸನ್ನು ಚಲನಗೊಳಿಸಿ, ವನಿತೆಯರ ಮನಸ್ಸನ್ನು ಅರಳಿಸುತ್ತಾ, ಎಲ್ಲ ಲೋಕಗಳಿಗೆ ಅನುರಾಗದ ಮೋಹವನ್ನು ಇತ್ತು ಸತಿಯರನ್ನು ಯಾವಾಗಲೂ ಆದರಿಸುತ್ತಾ ಹೀಗೆ ಆಗಮನದ ವೈಭವದ ಅನುರಾಗಕ್ಕೆ ಮತ್ತಷ್ಟು ಅನುರಾಗವೇರಿಸಿ ಮನ್ಮಥರಾಜನು ರತಿಯನ್ನು ಆಲಿಂಗಿಸಲು ಯತ್ನಿಸುತ್ತಿರಲು, ವಸಂತನು ಸಂತಸದಿಂದ ಬಂದು, ಎಳೆಕೆಂಪು ಹರಡುವ ಚಿಗುರನ್ನು, ಸುವಾಸನೆಯನ್ನು ಹೆಚ್ಚಿಸುವ ಕುಸುಮಗಳನ್ನು, ಮಧುರರಸವನ್ನು ಹೆಚ್ಚು ಗೊಳಿಸುವ ನವಫಲಗಳನ್ನು ಮೀನಕೇತನನಿಗೆ ಕಾಣಿಕೆಯಾಗಿಕೊಟ್ಟು, ಅಡ್ಡಬಿದ್ದು

ಕಂ॥ ಇದೆ ಚತುರಂಗಬಲಂ ಬಂ
ದುದು ಮನ್ಮಥಭೂಪ ನೋಡು ಚಿತ್ತವಿಸೆನುತುಂ ।
ಸದಮಳಮೋಹನಜನಕಾ
ಸ್ಪದಸೇವೆಯನೊಲ್ದು ತೋಱುತಿರ್ದಂ ಚೈತ್ರಂ ॥ ೪೨

ವ॥ ಅದೆಂತೆಂದೊಡೆ,

ಕಂ॥ ಮಿಳಿ ಲತೆ ಗುಳಮೇ ಪತ್ರಂ
ಫಳರಸಮೆ ಮದಾಂಬು ನೀಳ್ದ ಕೊಂಬೆ ಕರಂ ಪೂ ।
ತೆಳಗೊಂಬುಗಳೇ ದಂತಂ
ಕಳಕಂಠನಿನಾದಮೆಸೆವ ಬೃಂಹಿತನಾದಂ ॥ ೪೩

ವಿಪುಳೋನ್ನತಪಲ್ಲವ ಮ
ಗ್ರಪಲ್ಲವಂ ಡಿಂಡಿಮಸ್ವನಂ ಮತ್ತಾಳೀ ।
ಚಪಳಸ್ವನಮೆನೆ ಚೂತ
ದ್ವಿಪಘಟೆಯಂ ತೋಱಿದಂ ಸಮಂತು ವಸಂತಂ ॥ ೪೪

ವರಮುಖರಾಗದ ಮೊಗವಡ
ದುರುಕಾಂತಿಯ ವಾಘೆ ಚರಣಡಂಕಣಿಯಿಂ ಭಾ ।
ಸುರಪಕ್ಷದ ಪಕ್ಷೆಯ ಪ
ಕ್ಕರಿಯೆಸೆವ ಶುಕಾಶ್ವವೀಥಿಯಂ ಕಾಣಿಸಿದಂ ॥ ೪೫

ಕೈಮುಗಿದು ನಿಂತುಕೊಂಡನು. ೪೨. ಚೈತ್ರನು ಮನ್ಮಥಭೂಪನನ್ನು ಕುರಿತು "ಇಗೋ, ಚತುರಂಗಬಲ ಬಂದಿದೆ; ಪರಾಂಬರಿಸು!" ಎಂದು ಮೋಹಜನಕವಾದ ತನ್ನ ಸದಮಲ ಸೇನೆಯನ್ನು ನಿವೇದಿಸುತ್ತಿದ್ದಾನೆ. ೪೩. ಇಲ್ಲಿ ಯುದ್ಧಸಾಮಗ್ರಿಗಳು ಇವು–ಲತೆ (ಬಳ್ಳಿ) ಮಿಣಿ, ಪತ್ರ (ಎಲೆ)ವೇ ಗುಳ (ಆನೆಗಳ ಬೆನ್ನ ಮೇಲೆ ಕಟ್ಟುವ ತೊಟ್ಟಿಲು), ಹಣ್ಣುಗಳರಸವೇ ಮದೋದಕ, ಉದ್ದವಾದ ಕೊಂಬುಗಳೇ (ಕರಂ) ಸೊಂಡಿಲು, ಹೂಬಿಟ್ಟ ಎಳೆಗೊಂಬುಗಳೇ ಆನೆಯದಂತಗಳು, ಅವ್ಯಕ್ತಮಧುರವಾದ ಕಂಠಧ್ವನಿಗಳೇ ಆನೆಗಳ ಬೃಂಹಿತ; ೪೪. ಮಾವಿನಮರಗಳನ್ನು ಆನೆಪಡೆಗೆ ಹೋಲಿಸಿರುವ ವರ್ಣನವಿದು–ಎತ್ತರದಲ್ಲಿರುವ ಅಗಲವಾದ ಎಲೆಗಳೇ ಬಾವುಟಗಳು, ದುಂಬಿಗಳ ಮೊರೆಯೇ ಡಿಂಡಿಮಸ್ವನ (ನಗಾರಿಧ್ವನಿ) ಎಂಬಂತೆ ಇರುವ ಮಾವಿನಮರಗಳೆಂಬ ಆನೆಪಡೆಯನ್ನು ವಸಂತನು ಮದನನಿಗೆ ಪರಿಚಯಮಾಡಿಕೊಟ್ಟನು. ೪೫. ಈ ಸೈನ್ಯದಲ್ಲಿ ಗಿಳಿಗಳೇ ಕುದುರೆಪಡೆ. ಅದರ ವರ್ಣನವಿದು–ಗಿಳಿಗಳ ಕೊಕ್ಕಿನಕೆಂಪು, ಕುದುರೆಮುಖವಾಡ, ಶ್ರೇಷ್ಠಕಾಂತಿಯೇ (ವಾಘೆ) ಲಗಾಮು,ಚರಣದಂಕಣೆಯಿಂದ–ಪ್ರಕಾಶಮಾನವಾದ ರೆಕ್ಕೆಗಳೇ ಪಕ್ಷೆಯಥಡಿ; ಹೀಗಿರುವ ಶುಕಗಳೆಂಬ ಕುದುರೆಯ ಸಾಲುಗಳನ್ನು ವಸಂತನು ಕಾಮನಿಗೆ ತೋರಿಸಿದನು.

ಎರಡುಂ ಪಕ್ಷಂ ಚಕ್ರಂ
ಪೊರೆದಾಲಿಂಗನಮೆಯುಚ್ಚು ಚಂಚುಪುಟಂ ಪೊ ।
ತ್ತರಿಸುವ ಮುಂಕಣಿಯಾಗಿರೆ
ನೆರೆದಿರ್ದ ರಥಾಂಗರಥಮನೊಪ್ಪಿರೆ ತಂದಂ ॥ ೪೬

ವ॥ ಇಂತು ವಸಂತಂ ಹಸ್ತ್ಯಶ್ವರಥಂಗಳಂ ತೋಱಿದ ಸಮನಂತರದೊಳ್ ಪದಾತಿಬಲಂ ಬರುತಿರ್ದುದದೆಂತೆನೆ

ಕಂ॥ ಪಾಡುವ ತುಂಬಿಯ ತಲೆಯ
ಲ್ಲಾಡುತ್ತಿರೆ ಬಂದಳಮಮ ಕೃಷ್ಣನ ಮನಮಂ ।
ಷೋಡಶಸಹಸ್ರಭಾಗಂ
ಮಾಡಿದ ಮನ್ಮಥನ ಮೊನೆಯ ನಾಯಕಿಯೊರ್ವಳ್ ॥ ೪೭

ಅನವದ್ಯಕಳಾಕೋವಿದ
ನೆನಿಸಿಯುಮಾತ್ಮಜೆಯೊಳೊಲ್ದು ಬೆರಸಿದ ಚತುರಾ ।
ಸ್ಯನ ರೂಪು ಕಾಲ ಪೊಸಪೂ
ವಿನ ಹಾಹೆಯೊಳೆಳಲೆ ಬಂದಳಂಗನೆಯೊರ್ವಳ್ ॥ ೪೮

ಭಾಸುರತರಸುಕುಮಾರೆ ವಿ-
ಲಾಸದೆ ನಡೆತಂದಳಂದಹಲ್ಯೆಯ ಕತದಿಂ ।

೪೬. ಚಕ್ರವಾಕ ಪಕ್ಷಿದಳವೇ ಸೈನ್ಯಕ್ಕೆ ಅಂಗವಾದ ರಥಗಳು, ಚಕ್ರವಾಕಗಳ ಎರಡು ರೆಕ್ಕೆಗಳೇ ರಥದ ಎರಡು ಚಕ್ರಗಳು, ಸ್ತ್ರೀಪುರುಷ ಚಕ್ರವಾಕಗಳ ಆಲಿಂಗನವೇ ರಥದ ಅಚ್ಚು, ಮುಂದುವರಿದ ಚಂಚುಪುಟವೇ ರಥದ ಮುಂಕಣಿ (ಮೂಗುಮರ) ಈ ಬಗೆಯ ರಥಗಳ ಪಡೆಯನ್ನು ತೋರಿಸಿದನು. ವ॥ ವಸಂತನು ಮನ್ಮಥನಿಗೆ ಆನೆ–ಕುದುರೆ–ರಥಗಳ ಪಡೆಗಳನ್ನು ತೋರಿದಮೇಲೆ ಅವನ ಕಾಲ್ಪಡೆ ಬರುತ್ತಿರುವ ಬೆಡಗು ಇದು–೪೭. ಅಗೋ! ಆ ಪಡೆಯಲ್ಲಿ ಒಬ್ಬ ಅಗ್ರಗಾಮಿನಾಯಕಿ ಅವಳು; ಶ್ರೀಕೃಷ್ಣನ ಮನಸ್ಸನ್ನು ಹದಿನಾರು ಸಾವಿರ ಭಾಗವಾಗಿ ಮಾಡಿದ ಮೊನೆಯನಾಯಕಿ ಇವಳೇ! ದುಂಬಿಗಳು ತಲೆಯಲ್ಲಾಡಿಸಿ ಹಾಡುತ್ತಿರುವಾಗ ಅವಳು ಅಲ್ಲಿಗೆ ಬಂದಳು. ೪೮. ಮತ್ತೊರ್ವ ಅಂಗನೆ ಅಲ್ಲಿಗೆ ಬಂದಳು. ಅವಳ ಸವಾಡವೆಂತಹುದು? ಅನವದ್ಯ (ಶ್ರೇಷ್ಠ) ಕಲಾಕುಶಲನಾದರೂ ಚತುರ್ಮುಖನು ತಾನು ಹುಟ್ಟಿಸಿದ ಮಗಳ (ಶಾರದೆ)ಲ್ಲಿಯೇ ಒಲಿದು ಬೆರೆವಂತೆ ಮಾಡಿದ ಕಲಾಕೋವಿದೆ ಅವಳು. ೪೯. ಮತ್ತೊರ್ವಳು ಮನೋಹರ ಸುಕುಮಾರಿ; ಅವಳು ಅಲ್ಲಿಗೆ ನಡೆತಂದಳು. ಅಹಲ್ಯೆಯ ನಿಮಿತ್ತವಾಗಿ ದೇವಲೋಕದಿಂದ ಇಳಿದ ಸಾವಿರ

ಸಾಸಿರಕಣ್ಣಂ ಮಾಡಿಪ
ವಾಸವವಿಜಯಧ್ವಜಪ್ರತಾಪದಿನೊರ್ವಳ್ ॥ ೪೯

ವ॥ ಮತ್ತಮಲ್ಲದೆ,

ಕಂ॥ ನೆರೆದು ಪಳಂಚುವ ಕಾಲುಂ
ಗುರದ ರವಂ ಮುಂದೆ ಡೌಡೆವಱೆಯಂ ಪೊಯ್ಯು ।
ತ್ತಿರೆ ಕುಸುಮಾಸ್ತ್ರನ ಮದವತ್
ಕರಿಯಂತೆ ಕರೆಂಪ್ರಯಾನೆ ಬಂಡಳದೊರ್ವಳ್ ॥ ೫೦

ವ॥ ಮತ್ತಂ ವಸಂತಂ ಪದಾತಿಬಲಮಂ ತೋಱಿಸುತಿರ್ದನದೆಂತೆಂದೊಡೆ–

ಕಂ॥ ಅದೆ ನನೆಯ ಕಠಾರಿಯ ಮರು
ಗದ ಪಱಿಗೆಯ ತಾಮರಸದ ಘಂಟೆಯ ಮುಡಿವಾ ।
ಳದ ಚಮರಿಯ ಕುಮುದದ ಕೊಂ
ತದ ಕೇತಕಿಯೆಸಳ ಸುರಗಿಯಬಲಾನೀಕಂ ॥ ೫೧

ತಳಿರ್ಗಳ ಚಕ್ರದ ಕದಳೀ
ದಳಫಲಕದ ಸುರಗಿಯರಲ ಕೌಕ್ಷೇಯದ ಪ ।
ಡ್ದಳಿಗಳ ಸಬಳದ ಬಂದುಗೆ
ಗಳ ತಿಸುಳದ ಮೊಲ್ಲೆಯಿಟ್ಟಿಗಳ ಕಾಮಿನಿಸುರ್ ॥ ೫೨

(ಹೈಗಣ್ಣ) ಕಣ್ಣನಾಪ ದೇವೇಂದ್ರನನ್ನು ಗೆದ್ದ (ವಾಸವ ವಿಜಯ) ಪತಾಕೆಯ ಪ್ರತಾಪವೊ ಎಂಬಂತೆ ಅವಳು ಬಂದಳು. ೫೦. ಮತ್ತೊಬ್ಬಳು ಗಜಗನುನೆ, ಅವಳು ನಡೆತರುವಾಗ ಅವಳ ಮಿಂಚುವ ಕಾಲುಂಗುರದ ಶಬ್ದವು ಮುಂದೆ ಡೌಡೇ(ವಾದ್ಯವಿಶೇಷ) ಹರೆ (ತಮಟೆ) ಬಾರಿಸುವಂತೆ ಇತ್ತು; ಅವಳು ಹೂಬಾಣ (ಕಾಮ)ನ ಮದಗಜದಂತೆ ಬಂದಳು. ವ॥ ವಸಂತನು ಈ ಕಾಲ್ಪಡೆಯನ್ನು ಕಾಮನಿಗೆ ಪರಿಚಯ ಮಾಡುತ್ತಿದ್ದಾನೆ— ೫೧. ಅಗೊ! ಮೊಗ್ಗುಗಳೇ ಕಠಾರಿ, ಮರುಗಸೇ(ಪತ್ರವಿಶೇಷ) ಡಾಲು, ಕಮಲದ ಘಂಟೆ, ಮುಡಿವಾಳ (ಬೇರು)ವೇ ಚಾಮರ, ನೈದಿಲೆಯೇ ಕೊಂತಾಯುಧ, ಕೇದಗೆಯ ಎಸಳೇ ಸುರಗಿ ಭರ್ಜಿಗಳು, ಅಬಲೆಯರೇ ಕಾಲ್ಪಡೆ. ೫೨. ತಳಿರೇ ಚಕ್ರ, ಬಾಳೆ ಎಲೆಗಳೇ ಫಲಕ (ಹಲಗೆ)ಗಳು, ಸುರಗಿ ಹೂವುಗಳೇ ಖಡ್ಗಗಳು, ಪಡ್ದಳಿ (ಕಣಿಗಿಲೆ)ಗಳೇ ಸಬಳ (ಭರ್ಜಿ), ಬಂದುಗೆ (ಬಂಧೂಕ)ಗಳೇ ತ್ರಿಶೂಲ (ತಿಸುಳ), ಮಲ್ಲಿಗೆಯೇ ಈಟಿಯಾಗಿರುವ ಕಾಮಿನಿ

ಸುರಹೊನ್ನೆಯ ಮುಗುಳ್‌ಗಳ ತೋ
ಮರದ ಲತಾವಳಿಯ ಸೆಲ್ಲೆಹಂಗಳ ಪೊಸಪಾ ।
ದರಿಗಳ ಬಲ್ಲೆಹದೆಸವಂ
ಕುರವೀಧಿಯ ವಜ್ರಮುಷ್ಟಿಯಂಗನೆಯರ್ಕಳ್ ॥ ೫೩

ದವನದ ಸೀಗುರಿಗಳ ಪೊ
ಣ್ಮುಪ ಪೊಂಬಾಳೆಗಳ ಚಾಮರಂಗಳ ಕಂಪೇ ।
ಱುವ ಸಂಪಗೆಗಳ ಸತ್ತಿಗೆ
ಯ ವಿಚಕಿಲನಿಕಾಯ ಕೇತುದಂಡವ ಸತಿಯರ್ ॥ ೫೪

ತರದಿಂದಂ ಕ್ಷೀರಾಬ್ಧಿಯ
ತರಂಗದಂತೆಸೆವ ಶಶಿಯ ಹಾದಿಯವೋಲ್ ಸುಂ- ।
ದರಿಯರ ಮೋಹರಮಿಂತೊ
ತ್ತರಿಸೆ ನಿರೀಕ್ಷಿಸುತೆ ದರ್ಪಕಂ ಬೆಱಗಾದಂ ॥ ೫೫

ವ॥ ಇಂತು ಬೆಱಗಾಗುತ್ತುಮಿರೆಯಿರೆ ಮತ್ತಂ ಕಂದರ್ಪರಾಜನ ಮುಂಡೆ,

ಚಂ॥ ನಳನಳಿಪಿಕ್ಷುದಂಡದ ಧನುವ್ರಜದಿಂ ಶತಪತ್ರಸೂತ್ರದಿಂ
ತೊಳಗುವ ನಾರಿಯಿಂ ತಳಿರ ಕೆಯ್ಪೊಡೆಯಿಂ ಕುಸುಮಾಸ್ತ್ರಮಾಲೆಯಿಂ ।
ದಳಪಡೆ ಬಂದು ನೀಡಡಿಗೆ ನೀಡಡಿ ಸೇರ್ದಿರೆ ಸಾರ್ದು ಬೊಬ್ಬೆಗೊ
ಟ್ಟೆಳೆ ಬೆಱಗಾಗೆ ನಾರಿಯರ ಬಿಲ್ಪಡೆ ತೋಱಿತು ಮಾಱಿ ಲೋಕಮಂ ॥ ೫೬

ಯರು, ೫೩. ಸುರಹೊನ್ನೆಯ ಮೊಗ್ಗುಗಳೇ ಕಬ್ಬಿಣದ ಒನಕೆಗಳು (ತೋಮರ), ಬಳ್ಳಿಗಳೇ ಚುಚ್ಚುವ ಆಯುಧಗಳು (ಸೆಲ್ಲೆಹ), ಹೊಸಪಾದರಿ ಹೂವುಗಳೇ ಬಲ್ಲೆಹಗಳು, ಅಂಕುರಗಳೇ ವಜ್ರಮುಷ್ಟಿಗಳು, ೫೪. ಅಲ್ಲಿರುವ ಸತಿಯರಲ್ಲಿ ಕೆಲವರು ದವನದ ಸೀಗುರಿ (ನವಿಲುಗರಿಯಿಂದ ಮಾಡಿದ ಚವರಿ) ಹಿಡಿದಿದ್ದಾರೆ. ಕೆಲವರು ಹುಟ್ಟಿಬರುತ್ತಿರುವ ಹೊಂಬಾಳೆಗಳ ಚಾಮರ ಹಿಡಿದಿದ್ದಾರೆ. ಕೆಂಪೇರುವ ಸಂಪಿಗೆ ಛತ್ರಿ ಹಿಡಿದಿದ್ದಾರೆ. ಮತ್ತೆ ಕೆಲವರು ಮಲ್ಲಿಗೆ ಮೊತ್ತದ ಕೇತು (ಬಾವುಟ) ದಂಡ ಹಿಡಿದಿದ್ದಾರೆ. ೫೫. ಹಾಲು ಕಡಲಿನ ಸಾಲುಗಳಂತೆ, ಚಂದ್ರವೀಥಿಯಂತೆ ಬಗೆ ಬಗೆಯಾಗಿ ಕಿಕ್ಕಿರಿದು ಬರುವ ಸುಂದರ ಸ್ತ್ರೀಯರ ಸೈನ್ಯವನ್ನು ನೋಡಿ ದರ್ಪಕನೇ ಬೆರಗಾದನು. ವ॥ ಹೀಗಿರುವಾಗ ಆ ಕಾಮನ ಮುಂದೆ, ೫೬. ನಾರಿಯರ ಬಿಲ್ಲಪಡೆ ಲೋಕವನ್ನು ಮಾರಿತೋರಿತು–ಅದರ ಸ್ವರೂಪವಿದು. ಅವರ ಕೈಗಳಲ್ಲಿ ನಳನಳಿಸುವ ಕಬ್ಬಿನ ಬಿಲ್ಲುಗಳು, ತಾವರೆದಂಟಿನೊಳಗಣ ಎಳೆಗಳೇ ಆ ಬಿಲ್ಲಿಗೆ ಏರಿಸಿದ ದಾರಗಳು (ಸಿಂಜಿನಿ), ತಳಿರುಗಳೇ ಕೈಯಿಂದ ಬಾರಿಸುವ

ವ॥ ಅಂತುಮಲ್ಲದೆ

ಕಂ॥ ತೊಳತೊಳಪಮೃತಮಯೂಖಂ
ಗಳನೊಸೆದೆಣ್ದೆಸೆಗೆ ಪಸರಿಸುತ್ತೆ ಚಕೋರಾ।
ವಳಿ ಬಳಸೆ ನೆರೆದ ಕೈರವ
ಕುಳದೊಳ್ ನಡೆತಂದನಮಮ ತಾರಾಧೀಶಂ ॥ ೫೭

ಕ್ರಮದಿಂದೆ ಶೈತ್ಯಸೌರ
ಭ್ಯಮಾಂದ್ಯಮೆಂದೆಂಬ ತನ್ನಗುಣದೊಳ್ಪು ರತೀ।
ರಮಣನನಲ್ಲಾಡಿಸೆ ಮಂ
ದಮಾರುತಂ ಮೋಹಿಸುತ್ತೆ ಮುಂದೆಯ್ತಂದಂ ॥ ೫೮

ವ॥ ಇಂತು ಸಹಕಾರ ಸಾಮಜಸಮಾಜಮಂ ಕೀರಕದಂಬ ತುರಂಗಸಂಘಮಂ ರಥಾಂಗ ರಥವ್ರಾತಮಂ ಸುದತೀಸಮೂಹ ಪದಾತಿಕುಲಮಂ ನಿರೀಕ್ಷಿಸುತ್ತುಂ ಪರಮಾನುರಾಗದಿಂ ಕಂತುರಾಜಂ ಸಂತಸಮನೆಯ್ದುವಾಗಳ್ ವಸಂತನಿರ್ದಿತ್ತಲವಧರಿಸೆಂದು ನವೀನವಚೋವಿಳಾಸೋನ್ಮತ್ತತೆಯಿಂದಿಂತೆಂದಂ,

ಕಂ॥ ಕಿಸಲಯದ ಕುಸುಮವಿತತಿಯ
ಪೆಸರೇಕಾ ಸ್ಥಾಣುವಿನ ವಿನಿಶ್ಚಲಮನಮಂ।
ಬೆಸುಗೆಗಳೆದೊಡೆದು ಮೂಡಲ್
ಮಿಸುಪಂಕುರವೊಂದೆ ಸಾಲದೇ ಮದನನೃಪಾ ॥ ೫೯

ದುನ್ಮಟ್ಟ, ಹೂವಿನ ಬಾಣಗಳು, ಹೀಗೆ ಅವರು ನೀಡಡಿ ಸೇರಿಸಿ ನಿಂತಿರಲು ಲೋಕ ಬೊಬ್ಬೆ ಹಾಕಿತು. ೫೭. ಅಷ್ಟರಲ್ಲಿ ತಾರಾಧೀಶ(ಚಂದ್ರ)ನ ಅದ್ಭುತ ಉದಯವಾಯಿತು! ಆತ ತೊಳಶೊಳಗುವ ತನ್ನ ಅಮೃತಕಿರಣಗಳನ್ನು ಎಂಟು ದಿಕ್ಕುಗಳಿಗೂ ಹರಡುತ್ತಿದ್ದಾನೆ. ಚಕೋರ ಪಕ್ಷಿಗಳು ಅವನನ್ನು ಬಳಸಿವೆ. ಹೀಗೆ ಆತನು ಕನ್ನೈದಿಲೆ ಕುಲದೊಡನೆ ನಡೆತಂದನು. ೫೮. ಆಗ ತಂಗಾಳಿ ತೀಡಿತು. ಅದರಲ್ಲಿದ್ದ ಶೈತ್ಯ (ತಂಪು) ಸೌರಭ್ಯ (ಕಂಪು) ಮಾಂದ್ಯ (ಮಂದತೆ)ಗಳು ರತಿಪತಿಯನ್ನೇ ಅಲುಗಾಡಿಸಿದವು. ಹೀಗೆ ಜಗತ್ತನ್ನೇ ಮೋಹಗೊಳಿಸುತ್ತಾ ಮುದಮಾರುತನು ಆಗಮಿಸಿದನು. ವ॥ ಹೀಗೆ ಮಾವುಗಳ ಆನೆಪಡೆ, ಗಿಳಿಗಳ ಅಶ್ವಸೈನ್ಯ, ಚಕ್ರವಾಕ ರಥದಳ, ಸುದತಿಯರ ಕಾಲಾಳು ಕುಲ, ಇದೆಲ್ಲವನ್ನು ನೋಡಿದ ಕಂತುರಾಜನಿಗೆ ಪರಮಾನಂದವಾಯಿತು, ಆಗ ವಸಂತನು 'ಇತ್ತ ಅವಧರಿಸು' ಎಂದು ಕಾಮನ ಮನಸ್ಸನ್ನು ಮತ್ತೊಂದೆಡೆ ತಿರುಗಿಸಿ ನವೀನ ವಚೋವಿಳಾಸವನ್ನು ವಿಸ್ತರಿಸಿ ಹೇಳಿದನು. ೫೯. ಎಲೈ ಮದನ ನೃಪನೆ, ಸ್ಥಾಣುವೆನಿಸಿದ ಆ ಪರಶಿವನ ನಿಶ್ಚಲವಾದ ಮನಸ್ಸಿನ ಬೆಸುಗೆಯನ್ನು ಸಡಲಿಸಿ ಒಡೆಯಲು ನಮ್ಮ ಪಡೆಯಲ್ಲಿರುವ ಕಿಸಲಯ (ಚಿಗುರು) ಗಳು, ಬೆಳಗುವ ಇವುಗಳ ಅಂಕುರವೊಂದೊಂದೇ ಸಾಲದೆ? ಎಂದನು.

ಕಂ॥ ಎಸೆವ ನವಾಂಕುರರಸದಿಂ
ಮಸೆದೀ ಕೋಕಿಲನ ಕೊರಲ ಮಧುರಧ್ವನಿಯೊಂ।
ದೆ ಸಮರ್ಥಂ ಶೂಲಿಯ ತಪ
ದೆಸಕಮನುಡುಗಿಸುವೊಡುಳಿದ ಪರಿಕರಮೇಕಯ್ ॥ ೬೦

ಇಳೆಯೊಳ್ ಸರ್ವೇಶನ ನಿ
ಶ್ಚಳತಪದುರವಣೆಯ ತೇಜಮಂ ದೊರೆಗೆಡಿಸಲ್
ಕಳರವದಿಂ ಬಗ್ಗಿಸುವರ
ಗಿಳಿಗಳ ಚಪ್ಪರಣೆಯೊಂದೆ ಸಾಲದೆ ಮದನಾ ॥ ೬೧

ವ॥ ಇಂತಿವರ್ಕೆ ಸೆಡೆಯದೆ ಕಡುಂಪಿಂದುಧರಂ ನಿಂದನಪ್ಪೊಡೆ

ಕಂ॥ ಅರಗಿಳಿಗಳ ಪವಮಾನನ
ತರುಣೀನಿವಹದ ಫಳಪ್ರತಾನದ ಪುಷ್ಪೋ।
ತ್ಕರದನುಪಮ ಶಬ್ದಸ್ಪ
ರ್ಶರೂಪ ರಸಗಂಧದಿಂದೆ ಶಿವನಂ ಗೆಲ್ವೆಂ ॥ ೬೨

ವ॥ ಅಂತು ಸಕಲ ಜಗಜ್ಜನ ಮನೋನುರಾಗ ಜನನಕಾರಣ ಕರ್ತೃಕಪ್ಪ ವಸಂತಂ ಭಾಷೆಗೊಟ್ಟ ಸಮನಂತರದಲ್ಲಿ

ಕಂ॥ ಭರದಿಂದೆ ಬಂದು ನುಡಿದಂ
ವರಹಿಮಕರನಸೆವ ಚಂದ್ರಕಾಂತದ ಕಲ್ಲಂ।
ಕರಗಿಸುವೆನ್ನ ಸುಧಾಮಯ
ಕರಂಗಳಿಂ ಹರನ ಚಿತ್ತಮಂ ಕರಗಿಸುಗುಂ ॥ ೬೩

೬೦. ಸ್ವಾಮಿ, ಪ್ರಕಾಶಿಸುವ ಹೊಸ ಚಿಗುರುಗಳ ರಸದಿಂದ ಮಸೆದ ಈ ಕೋಗಿಲೆಗಳ ಕೊರಳ ನುಣ್ದನಿಯೊಂದೇ ಆ ಶೂಲಿಯ ತಪಸ್ಸನ್ನು ಕೆಡಿಸಬಲ್ಲದು ಎಂದ ಮೇಲೆ ಉಳಿದ ಸಿದ್ಧತೆಯೆಲ್ಲ ಮತ್ತೇತಕ್ಕೆ ? ಎಂದನು. ೬೧. ಎಲೆ ಮದನ ! ಸರ್ವೇಶ್ವರನ ನಿಶ್ಚಲ ತಪಸ್ಸಿನ ತೇಜಸ್ಸನ್ನು ಕೆಡಿಸಬೇಕಾದ ಪಕ್ಷದಲ್ಲಿ ಅರಗಿಳಿಗಳ ಅವ್ಯಕ್ತಮಧುರವಾದ ಗಿಳಿಗಳ ಕೂಗು (ಚಪ್ಪರಣೆ) ಸಾಲದೆ ! ಎಂದನು. ವ|| ಇನ್ನು ಇವಕ್ಕೂ ಚಂದ್ರನೌಳಿಯು ಜಗ್ಗದಿದ್ದರೆ–೬೨. ಅರಗಿಳಿಗಳು, ಮಂದಮಾರುತ, ತರುಣಿಯರು, ಫಲಗಳು, ಹೂವು ಇವುಗಳ ಕ್ರಮವಾದ ಶಬ್ದ, ಸ್ಪರ್ಶ, ರೂಪು, ರಸ, ಗಂಧ ಎಂಬ ವಿಷಯಗಳಿಂದ ಶಿವನನ್ನು ಗೆಲ್ಲುವೆನು. ವ|| ಹೀಗೆ ಸಕಲ ಜಗತ್ತಿನ ಜನರ ಮನೋನುರಾಗಕ್ಕೆ ಕಾರಣನಾದ ವಸಂತನು ಭಾಷೆಕೊಟ್ಟ ಮೇಲೆ ೬೩. ಅಷ್ಟರಲ್ಲಿ ಅಮೃತ ಕಿರಣನೆನಿಸಿದ ಚಂದ್ರನು ಪ್ರವೇಶಿಸಿ ಹೇಳಿದನು–ಚಂದ್ರಕಾಂತ ಶಿಲೆಯನ್ನೇ ಕರಗಿಸುವ ನನ್ನ ಸುಧಾಮಯಕಿರಣಗಳಿಂದ ಹರನ

ವ॥ ಆ ಸಮಯದೊಳುರವಣಿಸಿ ನಡೆತಂದು ಮುಂದೆ ನಿಂದ ಚಂದ್ರಮುಖಿಯರೊಳೊರ್ವಳ್,

ಕಂ॥ ತ್ರಿಣಯನ ತಪಮಂ ಕಿಡಿಸಲ್
ಕ್ಷಣವೇಧಿಗಳೆನಿಸುವೆನ್ನ ತರಳಕಟಾಕ್ಷೇ ।
ಕ್ಷಣಯುಗಮಿರ್ದಂತೀ ನನೆ
ಗಣೆಗಳ್ ಪರ್ಯಂತವೇಕೆ ಮಕರಪತಾಕಾ ॥ ೬೪

ವ॥ ಮತ್ತಮೊರ್ವಳ್,

ಕಂ॥ ಮಾರನೃಪ ನಿಜಧನುಷ್ಟಂ
ಕಾರಮನಾರಾಂಪರಂತದಿರ್ಕೆನ್ನಯೆ ಮಂ ।
ಜೀರದ ಮಧುರಧ್ವನಿಯಿಂ
ಘೋರತಪೋಮಯನನಭವನಂ ಪರಿಭವಿಪೆಂ ॥ ೬೫

ವ॥ ಎಂದು ಮೀಱಿ ನುಡಿವ ನೀಱೆಯರ ನಡುವಣ ಭಾಮಿನಿಯೋರ್ವಳ್ ಭಾಶೆ ಗುಡುತ್ತುಮಿರ್ದಳದೆಂತೆಂದೊಡೆ,

ಚಂ॥ ಮದನನೃಪಾಲ ಕೇಳ ಭುವನತ್ರಯಮಂ ಕ್ಷಣದಿಂದೆ ಗೆಲ್ದು ಸಿಂ
ಗದ ಘನಕೀರ್ತಿಯಿಂ ತೊಳಗುವಿಕ್ಷುವ ಚಾಪದ ಪುಷ್ಪಬಾಣದ ।
ಗ್ಗಡ ನುಡಿಯಿಲ್ಲಿಗೇಕೆ ಮಿಸುಪೆನ್ನಯೆ ಪುರ್ವಿನ ಕರ್ವುವಿಲ್ಲ ನೋ
ಟದ ನನೆಗೋಲ ಲೀಲೆಯೊಳೆ ಸೋಲಿಸುವೆಂ ಜಿತಕಾಲಶೂಲಿಯಂ । ೬೬

ಮನಸ್ಸನ್ನು ಕರಗಿಸಬಲ್ಲೆ ಎಂದು. ವ॥ ಅಷ್ಟರಲ್ಲಿ ಸಡಗರದಿಂದ ಬಂದು ಮುಂದೆ ನಿಂದ ಇಂದು ಮುಖಿಯರಲ್ಲಿ ಒಬ್ಬಳು, ೬೪. ಎಲೈ ಮಕರಧ್ವಜನೆ, ಮುಕ್ಕಣ್ಣನ ತಪಸ್ಸನ್ನು ಕೆಡಿಸುವುದಕ್ಕೆ ಕ್ಷಣವೇಧಿ (ಕ್ಷಣದಲ್ಲಿಯೇ ಭೇದಿಸುವ)ಗಳು ಎನಿಸಿರುವ ನನ್ನ ಚಂಚಲ ಕಡೆಗಣ್ಣನೋಟಗಳಿರುವಾಗ ಹೂಬಾಣಗಳವರೆಗೂ ಹೋಗುವ ಪ್ರಯಾಸವೇತಕ್ಕೆ ? ಎಂದಳು. ೬೫. ಎಲೈ ಮಾರನೃಪನೆ, ನಿನ್ನ ಧನುಷ್ಟಂಕಾರ (ಬಿಲ್ಲನ್ನು ಜೇಗೈದಧ್ವನಿ) ವನ್ನು ಯಾರುತಾನೆ ಎದುರಿಸಬಲ್ಲರು ! ಆ ಮಾತು ಹಾಗಿರಲಿ, ಆದರೆ ನನ್ನ ನೂಪುರಗಳ ನುಣ್ದನಿಯಿಂದ ಅಭವನ ಘೋರ ತಪಸ್ಸನ್ನು ಸುಲಭವಾಗಿ ಕೆಡಿಸಬಲ್ಲೆ ಎಂದಳು. ವ॥ ಹೀಗೆ ಮೀರಿ ನುಡಿವ ನೀರೆಯಲ್ಲಿ ಒಬ್ಬಳು ಹೀಗೆ ಭಾಷೆ ಕೊಟ್ಟಳು ೬೬. ಎಲೈ ಮದನರಾಜನೆ, ಮೂರುಲೋಕಗಳನ್ನು ಕ್ಷಣಮಾತ್ರದಲ್ಲಿ ಗೆದ್ದು ಅಪಾರ ಕೀರ್ತಿಯನ್ನು ಗಳಿಸಿದ ಕಬ್ಬಿನ ಬಿಲ್ಲು ಮತ್ತು ಹೂಬಾಣಗಳ ಮಾತು ಇಲ್ಲಿ ಅನವಸರ ! ಏಕೆಂದರೆ ಮೃತ್ಯುವನ್ನೇ ಗೆದ್ದ ಆ ಶೂಲಿಯನ್ನು ನನ್ನ ಕಣ್ಣ ಹುಬ್ಬು ಎಂಬ ಕಬ್ಬಿನ ಬಿಲ್ಲಿನ ಕುಡಿ

ವ॥ ಎಂದಿಂತು ಸಂದಣಿಸಿ ಭಾಷೆಗೊಟ್ಟ ವಸಂತಾದಿ ಸಂಮೋಹನ ಬಲಮುಖ್ಯರ ಸುಧಾರಸಪೂರಿತ ಚಾರುವಚನರಚನೆಗಳಂ ಕೇಳ್ದು ಕುಸುಮಾಯುಧಂ ವಿಳಸನ ವಿಜಯಿಗಳಪ್ಪ ನಿಜ ಭುಜದಂಡಯುಗಳಮಂ ನೀಡಿ ಮದೋನ್ಮತ್ತ ವೀರಾಳಾಪ ಮುಖರಮುಖನಾಗಿ

ಕಂ॥ ಇನ್ನಿರ್ಪನಿರ್ಪನಭವಂ
ಸನ್ನುತತಪದಿಂದಮಿರದೆ ಮಾಣ್ಬಂ ಕಾಣ್ಬಂ।
ತನ್ನಗ್ಗದ ವೈರಾಗ್ಯದ
ಬಿನ್ನಣಮುಮನೆನ್ನ ಪಂಚಬಾಣದ ಬಲಮಂ ॥ ೬೭

ಚಂ॥ ಗಣಿದವುದೇವುದಿಕ್ಷುಧನುವುಂ ಕುಸುಮಾಸ್ತ್ರಮುಮೆನ್ನ ಕೆಯ್ಗೆ ಸಂ
ದಣಿಸೆ ಬಳಿಕ್ಕಮೆತ್ತಣ ತಪೋಮಯರೆತ್ತಣ ಶಾಂತಿಭೂಪರೆ।
ತ್ತಣ ಜಿತಕಾಮರೆತ್ತಣ ದಿಗಂಬರರೆತ್ತಣ ಕರ್ಮನಿಷ್ಠರೆ
ತ್ತಣ ಬುಧರೆತ್ತಣಾತ್ಮವಿದರೆತ್ತಣ ನಿಸ್ಪೃಹರೆತ್ತಣುತ್ತಮರ್ ॥ ೬೮

ವ॥ ಅಂತುಮಲ್ಲದೆ,

ಕಂ॥ ಪರಿಮಳಮನೆಣ್ದೆಸೆಗೆ ಬಿ
ತ್ತರಿಸುವ ನನೆಗಣೆಗಳಿಂದೆ ಗಿರಿಪತಿತನಯಾ।
ವಿರಹಾತಪಮೊಗೆಯಲ್ ಶಂ
ಕರನ ತಪಶ್ಛತ್ರದಂಡಮಂ ಖಂಡಿಸುವೆಂ ॥ ೬೯

ಅತಿಭೀಮರ್ ಜಿತಕಾಮರ್
ನುತನಾಮರ್ ಮದನನಿದಿರೊಳಿಲ್ಲೆನೆ ಹೋಹೋ।

ನೋಟನೆಂಬ ಹೂಬಾಣದ ಚಳಕದಿಂದಲೆ ಗೆಲ್ಲಬಲ್ಲೆ! ಎಂದಳು. ವ॥ ಹೀಗೆ ಪ್ರತಿಜ್ಞೆ ಮಾಡಿದ ವಸಂತ ಸಮ್ಮೋಹನ ಮುಂತಾದ ಪ್ರಮುಖರ ಅಮೃತಮಯವಾದ ಮಧುರ ವಚನಗಳನ್ನು ಕೇಳಿ ಮನ್ಮಥನು ಯುದ್ಧವಿಜಯಿಗಳೆನಿಸಿದ ಭುಜದಂಡಗಳನ್ನು ನೋಡಿ ಮದೋನ್ಮತ್ತನಾಗಿ ಹೇಳಿದನು–೬೭. ಓಹೋ! ಇನ್ನು ಮೇಲೆ ಆ ಅಭವನು ತಪಸ್ಸಿನಲ್ಲಿರುತ್ತಾನೆ! ಇರುತ್ತಾನೆ! ತನ್ನ ತಪಸ್ಸನ್ನು ಬಿಡಲೇಬೇಕು. ಅವನು ತನ್ನ ಅದ್ಭುತ ವೈರಾಗ್ಯವನ್ನೂ ನನ್ನ ಪಂಚಬಾಣಗಳ ಬಲವನ್ನು ಕಾಣುವನು! ೬೮. ಕಬ್ಬಿನ ಬಿಲ್ಲು ಮತ್ತು ಹೂವಿನ ಬಾಣಗಳು ನನ್ನ ಕೈಸೇರಿದಾಗ ನನಗೆ ಈ ತಪಸ್ವಿಗಳು, ಶಾಂತಿ ಭೂಷಣರು, ಜಿತಕಾಮರು, ದಿಗಂಬರರು, ಕರ್ಮನಿಷ್ಠರು, ಬುಧ (ವಿದ್ವಾಂಸ)ರು, ಆತ್ಮಜ್ಞಾನಿಗಳು ಮತ್ತು ನಿಸ್ಪೃಹರು ಇವರೆಲ್ಲ ಯಾವಲೆಕ್ಕ! ೬೯. ಪರಿಮಳವನ್ನು ಎಂಟು ದಿಕ್ಕಿಗೂ ಬೀರುವ ಹೂವಿನ ಬಾಣಗಳಿಂದ ಗಿರಿಜೆಗೆ ವಿರಹತಾಪವು ಉಂಟಾಗುವಂತೆ, ಶಂಕರನ ತಪಸ್ಸೆಂಬ ಛತ್ರದ ದಂಡವನ್ನು ಕತ್ತರಿಸುವೆನು. ೭೦. ಮದನನ

ಸತಿ ಕಾಮಿತಮನದಿಂ ಪಾ
ರ್ವತಿ ಬಳೆವನ್ನೆವರಮಿರ್ಪ ತಪಮೊಡ್ಡಿಪುದೇ ॥ ೭೦

ವ॥ ಅಂತುಮಲ್ಲದೆ

ಕಂ॥ ಸೊಂಪಿಂ ಮುದದಿಂ ಮೋಹನ
ದಿಂಪಿಂ ಸಂತಾಪದಿಂ ವಶೀಕರಣೋದ್ಯತ್ ।
ಸಂಪದದಿಂ ನೆಱೆ ತೋ
ರ್ಪೆಂ ಪಂಚಮುಖಂಗೆ ಪಂಚಬಾಣದ ಸವಿಯಂ ॥ ೭೧

ವ॥ ಎಂದಿಂತು ನಿಜಭುಜಪ್ರತಾಪಾಲಂಕೃತ ವೀರಾಳಾಪಮಂ ಮಾರನೃಪಂ ನುಡಿಯುತ್ತಂ ನಳಿನ ಗುಣವಿರಚಿತ ನವ್ಯದುಕೂಲಮಂ ತೆಗೆದು ಬಿಗಿದುಟ್ಟು ದಿವ್ಯಚಂದನಮನುದ್ವರ್ತನಂಗೆಯ್ದು ಪರಾಗದ ತಿಲಕಮನಿಟ್ಟು ಕೇತಕೀದಳದ ಕೂರಲಗಂ ಕಿಗ್ಗಟ್ಟಿನೊಳಳವಡಿಸಿ ವಸಂತಂ ಪೊಸಮಲ್ಲಿಗೆಯ ನುಣ್ಣನಪ್ಪ ಸಣ್ಣನನೆಯ ವೀರಸೇಸೆಯುಂ ಸೂಸೆ ವನಲಕ್ಷ್ಮಿ ಪಳಿಕಿನ ಪರಿಯಾಣದೊಳ್ ಬೀದುಗೆಯ ಕುಸುಮದ ವಿಜಯಾರತಿಯನೆತ್ತೆ ಮಜ್ಜಯ್ಯ ಪೂತುರೆ ಎಂದು ಸರಸಿಜಾಕ್ಷಂ ಪರಸೆ ಲಕ್ಷ್ಮೀದೇವಿಯರ್ ಮೊದಲಾದ ಲಲನಾಜನಂ "ವೀರವಿಭ್ರಮವಿಜಯೀಭವ" ಎಂದು ಗೆಲ್ಪನೀಯೆ ಚತುರಾಸ್ಯನುಮಿಂದ್ರಾದಿ ದಿಗ್ವರರುಂ ಮುಂದೆ ಉರಾವುರೇ ಎಂದು ಮೆಯ್ಯಾಂತು ಕೆಯ್ವಾರಿಸೆ ಕಳಾಮಾಳಿ ಕೆಯ್ಗುಗೆ ಗರ್ವಪರ್ವತಮನೇರುವಂತೆ ಮುಂದೆ ನಿಂದ ಮಾಕಂದ ಮತ್ತ

ಎದುರಿನಲ್ಲಿ ಅತಿ ಧೀರರು, ಜಿತೇಂದ್ರಿಯರು, ಸುಪ್ರಸಿದ್ಧರು ಯಾರೂ ನಿಲ್ಲಲಾರರು ಎಂದ ಮೇಲೆ ಒಹೋ ! ಸತಿಯನ್ನು ಬಯಸಿದ ಮನಸ್ಸುಳ್ಳ, ಪಾರ್ವತಿ ದೊಡ್ಡವಳಾಗುವವರೆಗೆ ಇರುವ ಶಿವನ ತಪಸ್ಸು ಉಳಿಯಬಲ್ಲುದೆ ? ೭೧. ಸೊಂಪಿನಿಂದ ಸಂತೋಷದಿಂದ ಮೋಹಕತೆಯಿಂದ ಸಂತಾಪದಿಂದ ವಶೀಕರಣದ ಸಂಪತ್ತಿನಿಂದ ನಾನು ಪಂಚಮುಖನಿಗೆ ನನ್ನ ಪಂಚ ಬಾಣಗಳ ಸವಿಯನ್ನು ತೋರಿಸುತ್ತೇನೆ. ವ॥ ಹೀಗೆ ತನ್ನ ಭುಜಬಲಕ್ಕೆ ಅಲಂಕಾರವಾದ ವೀರಾಲಾಪವನ್ನು ನುಡಿದ ಮನ್ಮಥನು ತಾವರೆ ದಂಟಿನೊಳಗಣ ಎಳೆಗಳಿಂದ ನೆಯ್ದ ವಸ್ತ್ರವನ್ನು ಉಟ್ಟು, ಸುಗಂಧ ದ್ರವ್ಯವನ್ನು ಲೇಪಿಸಿಕೊಂಡು ಹೂವಿನ ಧೂಳಿ ಪರಾಗದ ತಿಲಕವಿಟ್ಟು, ಕೇದಗೆದಳದ ಹರಿತ ಖಡ್ಗವನ್ನು ಕಿರಿಯ ಕಟ್ಟುಗಳಲ್ಲಿ ಅಳವಡಿಸಿ ಸಿದ್ಧನಾದನು. ಆಗ ವಸಂತನು ಹೊಸ ಮಲ್ಲಿಗೆಯ ಮೃದುವಾದ ಸಣ್ಣ ಹೂವುಗಳ ವೀರಸೇಸೆಯನ್ನು ಸೂಸಿದನು; ವನಲಕ್ಷ್ಮಿಯು ಸ್ಫಟಿಕದ ಹರಿವಾಣದಲ್ಲಿ ಬಂದುಗೆ ಹೂವಿನ ವಿಜಯಾರತಿ ಬೆಳಗಿದಳು; ಕಮಲಾಕ್ಷ (ವಿಷ್ಣು)ನು ಮಜ್ಜಯ್ಯ ಪೂತುರೆ ಎಂದು ಹರಸಿದನು, ಲಕ್ಷ್ಮೀದೇವಿ, ಮುಂತಾದ ಸತಿಯರು "ವೀರವಿಭ್ರಮ ವಿಜಯೀಭವ" ಎಂದು ಗೆಲುವನ್ನು ನೀಡಿದರು, ಬ್ರಹ್ಮ ಮತ್ತು ಇಂದ್ರಾದಿ ದಿಕ್ಪತಿಗಳು ಮುಂದೆ ಉರಾವುರೇ ಎಂದು ಕೈಯ್ವಾರಿಸಿದರು, ಕಳಾಮಾಳಿ ಕೈಗೊಟ್ಟಳು. ಆಗ ಮದನ ಗರ್ವಪರ್ವತವನ್ನು ಏರುವಂತೆ ಮುಂದಿದ್ದ ಮಾವು ಎಂಬ ಮತ್ತ ಗಜವನ್ನು ಭೋಂಕನೇರಿದನು, ಹಿಂಬದಿಯಲ್ಲಿ ರತೀದೇವಿ

ಮಾತಂಗಮಂ ಭೋಂಕನೇಱಿ ಪಶ್ಚಿಮಾಸನದೊಳ್ ರತಿದೇವಿಯನಿರಿಸಿ ಪೊಳೆಪೊಳೆವ ಚಂದ್ರಮನ ಬೆಳ್ಗೊಡೆ ಮೇಲಲರೆ ಗಂಧವಹಂ ಸುಗಂಧದ ಸೀಗುರಿ ಚಾಮರವನಿಕ್ಕೆ, ಕರ್ಬಿನ ಬಿಲ್ಲು ಮಸಲರ ಸರಲುಮಂ ರೋಹಿಣೀ ದೇವಿ ಪಿಡಿದಿರೆ ಕೆಲಬಲದೊಳ್ ಶುಕಾವಳೀ ತುರಂಗ ಸಂಘಂ ಸಂದಣಿಸೆ ರಥಾಂಗ ಘನರಥಂ ಮೇಳಯ್ಸೆ, ಚೂತಗಜಂ ವೀಧಿಗೊಳೆ ಮುಂದೆ ಸುದತೀಕುಲ ಪದಾತಿಬಲಂ ಮುಂದಯ್ಯೆ, ನೆಗಪಿದ ಮಕರಧ್ವಜಂ ಗಗನಮಂ ಚುಂಬಿಸೆ ದರ್ಪಂ ಕೆಯ್ಮಿಕ್ಕು ದರ್ಪಕ ಭೂಭುಜಂ ಶೂರ್ಪಕಮರ್ದನಂ ಶಂಬರಸೂದನಂ ನತ ಜಿತೇಂದ್ರಿಯವಿತಾನಂ ಮುನಿಜನಮನೋಹಾರಿ ಯತಿವ್ರಜವಾರಣ ಪಂಚಾನನಂ ಕಾಂತಾಕುಲ ಚಕ್ರವರ್ತಿ ಅಪ್ರತಿಹತ ವಿಕ್ರಮಂ ಕಾಮದೇವಂ ಹೇಮಕೂಟಾಭಿಮುಖನಾಗಿ ನಡೆತರ್ಪಾಗಳ್,

ಮ॥ ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನ ವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಪಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೭೨

ಇದು ಸಮಸ್ತ ಸುರಾಸುರಮಕುಟ ಖಚಿತ
ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪುಂಜರಂಜಿತಚರಣ
ನೆನಿಪ ಪಂಪಾವಿರೂಪಾಕ್ಷ ಶ್ರೀಪಾದಕಮಲ
ಮಕರಂದ ಮಧುಕರಾಯಮಾಣ
ಸತ್ಕವೀಶ್ವರ ಹಂಪೆಯ
ಹರಿಹರದೇವ ವಿರಚಿತಮಪ್ಪ

ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ವಸಂತೋದಯ ಮದನಪ್ರಯಾಣ ಪ್ರಾರಂಭ ವರ್ಣನಂ
ಸಪ್ತಮಾಶ್ವಾಸಂ

ಕುಳಿತಳು; ಹೊಳೆವ ಚಂದ್ರಮನೇ ಬೆಳ್ಗೊಡೆಯಾದನು, ಮಂದ ಮಾರುತ ಸುಗಂಧದ ನವಿಲುಗರಿ ಚಾಮರವಿಕ್ಕಿದನು, ಕಬ್ಬಿನ ಬಿಲ್ಲು ಹೂ ಬಾಣಗಳನ್ನು ರೋಹಿಣೀದೇವಿ ಹಿಡಿದಿದ್ದಳು. ಅಕ್ಕ ಪಕ್ಕಗಳಲ್ಲಿ ಗಿಳಿಗಳೆಂಬ ಅಶ್ವಸೇನೆ ಕಿಕ್ಕಿರಿದು ನಿಂತಿತು. ಚಕ್ರವಾಕ ರಥಗಳು ಬಂದು ಸೇರಿದವು, ಚೂತ (ಮಾವು) ಗಜವು ಸಾಲುಗಟ್ಟಿತು. ಮುಂದುಗಡೆ ಮಹಿಳಾಪಡೆ ಮುನ್ನಡೆಯಿತು, ಮಕರ ಧ್ವಜ ಹಾರಿತು, ಹೆಮ್ಮೆಯಿಂದ ದರ್ಪಕ ರಾಜ, ಶೂರ್ಪಕಾರಿ, ಶಂಬರಹಂತಕ, ಜಿತೇಂದ್ರಿಯರು ಶರಣಾದವ, ಮುನಿಜನರ ಮನಸ್ಸನ್ನು ಸೂರೆಗೊಂಡವ, ಯತಿಗಳೆಂಬ ಗಜಗಳಿಗೆ ಸಿಂಹಪ್ರಾಯ, ಕಾಂತೆಯ ಸಾರ್ವಭೌಮ, ಅಜೇಯ, ಕಾಮದೇವನು ಹೇಮ ಕೂಟದೆಡೆ ನಡೆದನು.

ಸತಿ ಕಾಮಿತಮನದಿಂ ಪಾ
ರ್ವತಿ ಬಳೆವನ್ನೆವರಮಿರ್ಪ ತಪವೊಡ್ಡಿಪುದೇ ॥ ೭೦

ವ॥ ಅಂತುಮಲ್ಲದೆ

ಕಂ॥ ಸೋಂಪಿಂ ಮುದದಿಂ ಮೋಹನ
ದಿಂಪಿಂ ಸಂತಾಪದಿಂ ವಶೀಕರಣೋದ್ಯತ್ ।
ಸಂಪದದಿಂ ನೆಱೆ ತೋ
ರ್ಪೆಂ ಪಂಚಮುಖಂಗೆ ಪಂಚಬಾಣದ ಸವಿಯಂ ॥ ೭೧

ವ॥ ಎಂದಿಂತು ನಿಜಭುಜಪ್ರತಾಪಾಲಂಕೃತ ವೀರಾಳಾಪಮಂ ಮಾರನೃಪಂ ನುಡಿಯುತ್ತಂ ನಳಿನ ಗುಣವಿರಚಿತ ನವ್ಯದುಕೂಲಮಂ ತೆಗೆದು ಬಿಗಿದುಟ್ಟು ದಿವ್ಯಚಂದನಮನುದ್ವರ್ತನಂಗೆಯ್ದು ಪರಾಗದ ತಿಲಕಮನಿಟ್ಟು ಕೇತಕೀದಳದ ಕೂರಲಗಂ ಕಿಗ್ಗಟ್ಟಿನೊಳಳವಡಿಸಿ ವಸಂತಂ ಪೊಸಮಲ್ಲಿಗೆಯ ನುಣ್ಣನಪ್ಪ ಸಣ್ಣನನೆಯ ವೀರಸೇಸೆಯಂ ಸೂಸೆ ವನಲಕ್ಷ್ಮಿ ಪಳಿಕಿನ ಪರಿಯಾಣದೊಳ್ ಬಿಱುದುಗೆಯ ಕುಸುಮದ ವಿಜಯಾರತಿಯನೆತ್ತೆ ಮಜ್ಜಯ್ಯ ಪೂತುರೆ ಎಂದು ಸರಸಿಜಾಕ್ಷಂ ಪರಸೆ ಲಕ್ಷ್ಮೀದೇವಿಯರ್ ಮೊದಲಾದ ಲಲನಾಜನಂ "ವೀರವಿಭ್ರಮವಿಜಯೀಭವ" ಎಂದು ಗೆಲ್ವನೀಯೆ ಚತುರಾಸ್ಯನುಮಿಂದ್ರಾದಿ ದಿಗ್ವರರುಂ ಮುಂದೆ ಉರಾವುರೇ ಎಂದು ಮೆಯ್ಯಾಂತು ಕೆಯ್ವಾರಿಸೆ ಕಳಾಮಾಳಿ ಕೆಯ್ಗುಡೆ ಗರ್ವಪರ್ವತಮನೇರುವಂತೆ ಮುಂದೆ ನಿಂದ ಮಾಕಂದ ಮತ್ತ

ಎದುರಿನಲ್ಲಿ ಅತಿ ಧೀರರು, ಜಿತೇಂದ್ರಿಯರು, ಸುಪ್ರಸಿದ್ಧರು ಯಾರೂ ನಿಲ್ಲಲಾರರು ಎಂದ ಮೇಲೆ ಓಹೋ ! ಸತಿಯನ್ನು ಬಯಸಿದ ಮನಸ್ಸುಳ್ಳ, ಪಾರ್ವತಿ ದೊಡ್ಡವಳಾಗುವವರೆಗೆ ಇರುವ ಶಿವನ ತಪಸ್ಸು ಉಳಿಯಬಲ್ಲುದೆ ? ೭೧. ಸೊಂಪಿನಿಂದ ಸಂತೋಷದಿಂದ ಮೋಹಕತೆಯಿಂದ ಸಂತಾಪದಿಂದ ವಶೀಕರಣದ ಸಂಪತ್ತಿನಿಂದ ನಾನು ಪಂಚಮುಖನಿಗೆ ನನ್ನ ಪಂಚ ಬಾಣಗಳ ಸವಿಯನ್ನು ತೋರಿಸುತ್ತೇನೆ. ವ॥ ಹೀಗೆ ತನ್ನ ಭುಜಬಲಕ್ಕೆ ಅಲಂಕಾರವಾದ ವೀರಾಲಾಪವನ್ನು ನುಡಿದ ಮನ್ಮಥನು ತಾವರೆ ದಂಟಿನೊಳಗಣ ಎಳೆಗಳಿಂದ ನೆಯ್ದ ವಸ್ತ್ರವನ್ನು ಉಟ್ಟು, ಸುಗಂಧ ದ್ರವ್ಯವನ್ನು ಲೇಪಿಸಿಕೊಂಡು ಹೂವಿನ ಧೂಳಿ ಪರಾಗದ ತಿಲಕವಿಟ್ಟು, ಕೇದಗೆದಳದ ಹರಿತ ಖಡ್ಗವನ್ನು ಕಿರಿಯ ಕಟ್ಟುಗಳಲ್ಲಿ ಅಳವಡಿಸಿ ಸಿದ್ಧನಾದನು. ಆಗ ವಸಂತನು ಹೊಸ ಮಲ್ಲಿಗೆಯ ಮೃದುವಾದ ಸಣ್ಣ ಹೂವುಗಳ ವೀರಸೇಸೆಯನ್ನು ಸೂಸಿದನು; ವನಲಕ್ಷ್ಮಿಯು ಸ್ಫಟಿಕದ ಹರಿವಾಣದಲ್ಲಿ ಬಂದುಗೆ ಹೂವಿನ ವಿಜಯಾರತಿ ಬೆಳಗಿದಳು; ಕಮಲಾಕ್ಷ (ವಿಷ್ಣು)ನು ಮಜ್ಜಯ್ಯ ಪೂತುರೆ ಎಂದು ಹರಸಿದನು, ಲಕ್ಷ್ಮಿದೇವಿ, ಮುಂತಾದ ಸತಿಯರು "ವೀರವಿಭ್ರಮ ವಿಜಯೀಭವ" ಎಂದು ಗೆಲುವನ್ನು ನೀಡಿದರು, ಬ್ರಹ್ಮ ಮತ್ತು ಇಂದ್ರಾದಿ ದಿಕ್ಪತಿಗಳು ಮುಂದೆ ಉರಾವುರೇ ಎಂದು ಕೈವಾರಿಸಿದರು, ಕಳಾಮಾಳಿ ಕೈಗೊಟ್ಟಳು. ಆಗ ಮದನ ಗರ್ವಪರ್ವತವನ್ನು ಏರುವಂತೆ ಮುಂದಿದ್ದ ಮಾವು ಎಂಬ ಮತ್ತ ಗಜವನ್ನು ಭೋಂಕನೇರಿದನು, ಹಿಂಬದಿಯಲ್ಲಿ ರತೀದೇವಿ

ಮಾತಂಗಮಂ ಭೋಂಕನೇಱಿ ಪಶ್ಚಿಮಾಸನದೊಳ್ ರತೀದೇವಿಯನಿರಿಸಿ ಹೊಳೆಹೊಳೆವ ಚಂದ್ರಮನ ಬೆಳ್ಗೊಡೆ ಮೇಲಲರೆ ಗಂಧವಹಂ ಸುಗಂಧದ ಸೀಗುರಿ ಚಾಮರವನಿಕ್ಕೆ ಕರ್ಬಿನ ಬಿಲ್ಲುಮನಲರ ಸರಲುಮಂ ರೋಹಿಣೀ ದೇವಿ ಪಿಡಿದಿರೆ ಕೆಲಬಲದೊಳ್ ಶುಕಾವಳೀ ತುರಂಗ ಸಂಘಂ ಸಂದಣಿಸೆ ರಥಾಂಗ ಘನರಥಂ ಮೇಳಯ್ಸೆ, ಚೂತಗಜಂ ವೀಧಿಗೊಳೆ ಮುಂದೆ ಸುದತೀಕುಲ ಪದಾತಿಬಲಂ ಮುಂದಯ್ಯೆ ನೆಗಪಿದ ಮಕರಧ್ವಜಂ ಗಗನಮಂ ಚುಂಬಿಸೆ ದರ್ಪಂ ಕಿಯ್ಮಿಕ್ಕು ದರ್ಪಕ ಭೂಭುಜಂ ಶೂರ್ಪಕಮರ್ದನಂ ಶಂಬರಸೂದನಂ ನತ ಜಿತೇಂದ್ರಿಯವಿತಾನಂ ಮುನಿಜನಮನೋಹಾರಿ ಯತಿವ್ರಜವಾರಣ ಪಂಚಾನನಂ ಕಾಂತಾಕುಲ ಚಕ್ರವರ್ತಿ ಅಪ್ರತಿಹತ ವಿಕ್ರಮಂ ಕಾಮದೇವಂ ಹೇಮಕೂಟಾಭಿಮುಖನಾಗಿ ನಡೆತರ್ಪಾಗಳ್,

ಮ॥ ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನಹತಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನ ವೈರಾಗ್ಯಮಂ
ಕರುಣಂಗೆಯ್ಗೆಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ೭೨

ಇದು ಸಮಸ್ತ ಸುರಾಸುರಮಕುಟ ಖಚಿತ
ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪುಂಜರಂಜಿತಚರಣ
ನೆನಿಪ ಪಂಪಾವಿರೂಪಾಕ್ಷ ಶ್ರೀಪಾದಕಮಲ
ಮಕರಂದ ಮಧುಕರಾಯಮಾಣ
ಸತ್ಕವೀಶ್ವರ ಹಂಪೆಯ
ಹರಿಹರದೇವ ವಿರಚಿತಮಪ್ಪ

ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ವಸಂತೋದಯ ಮದನಪ್ರಯಾಣ ಪ್ರಾರಂಭ ವರ್ಣನಂ
ಸಪ್ತಮಾಶ್ವಾಸಂ

ಕುಳಿತಳು; ಹೊಳೆವ ಚಂದ್ರಮನೇ ಬೆಳ್ಗೊಡೆಯಾದನು, ಮಂದ ಮಾರುತ ಸುಗಂಧದ ನವಿಲುಗರಿ ಚಾಮರವಿಕ್ಕಿದನು, ಕಬ್ಬಿನ ಬಿಲ್ಲು ಹೂ ಬಾಣಗಳನ್ನು ರೋಹಿಣೀದೇವಿ ಹಿಡಿದಿದ್ದಳು. ಅಕ್ಕ ಪಕ್ಕಗಳಲ್ಲಿ ಗಿಳಿಗಳೆಂಬ ಅಶ್ವಸೇನೆ ಕಿಕ್ಕಿರಿದು ನಿಂತಿತು. ಚಕ್ರವಾಕ ರಥಗಳು ಬಂದು ಸೇರಿದವು, ಚೂತ (ಮಾವು) ಗಜವು ಸಾಲುಗಟ್ಟಿತು. ಮುಂದುಗಡೆ ಮಹಿಳಾಪಡೆ ಮುನ್ನಡೆಯಿತು, ಮಕರ ಧ್ವಜ ಹಾರಿತು, ಹೆಮ್ಮೆಯಿಂದ ದರ್ಪಕ ರಾಜ, ಶೂರ್ಪಕಾರಿ, ಶಂಬರಹಂತಕ, ಜಿತೇಂದ್ರಿಯರು ಶರಣಾದವ, ಮುನಿಜನರ ಮನಸ್ಸನ್ನು ಸೂರೆಗೊಂಡವ, ಯತಿಗಳೆಂಬ ಗಜಗಳಿಗೆ ಸಿಂಹಪ್ರಾಯ, ಕಾಂತೆಯ ಸಾರ್ವಭೌಮ, ಅಜೇಯ, ಕಾಮದೇವನು ಹೇಮ ಕೂಟದೆಡೆ ನಡೆದನು.

# ಅಷ್ಟಮಾಶ್ವಾಸಂ

## ಕಾಮದಹನ ವರ್ಣನಂ

ಕಂ॥ ಗತಳಧರನುರಗಭೂಷಂ
ಸರಸಿಜಭವ ಮಸ್ತಕ ಪ್ರಯುಕ್ತಕರಂ ಭೀ
ಕರಭಾಳ ಲೋಚನಂ ಭ
ಕ್ತಿರಸಮನೆಮಗೀಗೆ ಹಂಪೆಯ ವಿರೂಪಾಕ್ಷಂ ೧

ಉ॥ ಕೀರತುರಗ ಸಂಘಮಯಮಾಧರೆ ಪುಷ್ಪಚಯಾಸ್ತ್ರ ಶಸ್ತ್ರ ವಿ
ಸ್ತಾರ ಸುಗಂಧ ವೃಂದಮಯಮಾ ಕಕುಭಂ ಮಕರಂದ ಸಾಂದ್ರ ಸಂ
ಚಾರ ರಜೋನಿಕಾಯಮಯಮಾನಭಮೆಂದೆನೆ ಕೌತುಕಪ್ರದಂ
ಮಾರನೃಪಾಲಸೇನೆ ನಡೆದಿತ್ತು ಜಿತೇಂದ್ರಿಯ ಚಿತ್ತಶೋಷಣಂ ೨

ವ॥ ಇಂದು ನೆರೆದು ನಡೆವ ಕುಸುಮಕೋದಂಡನ ಕಮನೀಯ ಬಲದ ಹಿಂದೆ,

ಕಂ॥ ಘಳಿಲೆನೆ ಕಂಪನದಿಂ ಮುನಿ
ಗಳ ಕರತಳದಕ್ಷಮಾಲೆ ಬೀಳುತ್ತಿರೆ ಕೋ
ಕಿಳಕುಳ ನಿಸ್ಸಾಳಧಳಂ
ಧಳಂ ಧಳಂ ಧಳನಿನಾದ ಮುಣ್ಮಿತ್ತಾಗಳ್ ೩

ವ ॥ ಅನಂತರದಲ್ಲಿ

೧. ವಿಷಕಂಠ, ಸರ್ಪಭೂಷಣ, ಬ್ರಹ್ಮನ ಮಸ್ತಕದ ಮೇಲೆ ಹಸ್ತವನ್ನಿಟ್ಟು ಅನುಗ್ರಹಿಸಿದವನು, ಭಯಂಕರವಾದ ಹಣೆಗಣ್ಣುಳ್ಳವನು, ಅಂತಹ ಹಂಪೆಯ ವಿರೂಪಾಕ್ಷನು ನಮಗೆ ಭಕ್ತಿರಸವನ್ನು ಕರುಣಿಸಲಿ. ೨. ಜಿತೇಂದ್ರಿಯರ ಮನಸ್ಸನ್ನು ಬಲಗೆಡಿಸುವ ಆಶ್ಚರ್ಯಕರವಾದ ಮಾರನೃಪಾಲಸೇನೆ ನಡೆದಿತ್ತು. ಅದರ ಪರಿ ಹೀಗೆ–ನೆಲವೆಲ್ಲ ಗಿಳಿಗಳೆಂಬ ಅಶ್ವಸೇನೆಯಿಂದ ತುಂಬಿದೆಯೊ ಎಂಬಂತೆ, ಹತ್ತುದಿಕ್ಕುಗಳು ಕುಸುಮಾಸ್ತ್ರಗಳ ಸುಗಂಧಮಯವೊ ಎಂಬಂತೆ, ಸಾಂದ್ರಸಂಚಾರದಿಂದ ಎದ್ದ ಮಕರಂದಧೂಳಿನಿಂದ ಗಗನ ತುಂಬಿದೆಯೊ ಎಂಬಂತೆ, ಕೌತುಕಪ್ರದವಾದ ಕಾಮಸೈನ್ಯ ಮುನ್ನಡೆಯುತ್ತಿತ್ತು. ವ॥ ಕುಸುಮಾಯುಧನ ಕಮನೀಯ ಸೇನೆಯ ಹಿಂದೆ ೩. ಕೋಗಿಲೆಗಳ ಧ್ವನಿಯೆಂಬ ರಣಭೇರಿನಿನಾದ ಆ ಕೂಡಲೆ ಧಳಂಧಳಂಧಳಂ ಎಂದು ಮೊಳಗಿತು. ಅದರ ರಭಸಕ್ಕೆ ಮುನಿಗಳ ಕೈನಡುಗಿ, ಅವರ

ಮ॥ ಮುನಿಚಿತ್ತಾಕರ್ಷನೀ ಬಂದನೆ ಋಷಿವಿಮಳಾಚಾರ ಸಂಹಾರಿಯಿೊ ಬಂ
ದನೆ ಧರ್ಮಜ್ಞಾರಿಯೀ ಬಂದನೆ ಜಿತವಿಷಯವ್ರಾತ ವಿಧ್ವಂಸಿಯೀ ಬಂ
ದನೆ ಶಾಂತಾರಾತಿಯೀ ಬಂದನೆ ಯತಿಹರನೀ ಬಂದನೀ ಬಂದನೀ ಬಂ
ದಪೆಯೆಂದಲ್ಲಲ್ಲಿ ಭೃಂಗೀ ಬಹುವಿಧ ಕಹಳಾನಾದಮುಣ್ಮಿತ್ತುದೆತ್ತಂ ೪

ಕಂ॥ ತೊಲಗೆಲೆ ಸಹಸ್ರಲೋಚನ
ತೊಲಗೆಲೆ ವಾಣೀಶ ತೊಲಗೆಲೇ ಪಾವಕ ನೀಂ
ತೊಲಗು ಬೃಹಸ್ಪತಿ ಕೃಷ್ಣನೆ
ತೊಲಗೆನುತುಣ್ಮಿದುವು ಬಹಳ ಕಹಳಾನಾದಂ ೫

ವ॥ ಇಂತು ಬಿರುದೆತ್ತಿ ಕರೆವ ಬಹಳ ಕಹಳಾನಾದಂಗಳ ನಡುವೆ,

ಚಂ॥ ನಡೆಮುದು ಸೈನ್ಯಮೊಲ್ವವರನನ್ಯವಗಲ್ದರ ಜೀವಶೂನ್ಯ ವಾ
ರ್ದಡಸಿತು ಕೂಡೆ ಕಾಮಿನಿಯರಾಡೆ ಜಿತೇಂದ್ರಿಯರೋಡೆ ನೋಡೆ ಬಿ
ಲ್ವಿಡಿದ ರತೀಶನಪ್ರತಿಮವೇಷನನೂನವರ ಪ್ರಕಾಶನು
ರ್ಕುಡುಗೆ ವಿಯೋಗಿಗಳ್ ವಿಗತಭೋಗಿಗಳುದ್ಭವನಿರೋಧಯೋಗಿಗಳ್ ೬

ಮುನಿಗಳ ಧೈರ್ಯಭೂಮಿ ರಜಮಪ್ಪಿನೆಗಂ ಮುನುಚೇತನಾದ್ರಿ ಭೋಂ
ಕನೆ ಪುಡಿಯಪ್ಪಿನಂ ಯತಿಚರಿತ್ರತರಂಗಿಣಿ ಪಂಕಮಪ್ಪಿನಂ
ಘನವಿಮಳ ವ್ರತೀಂದ್ರರ ತಪೋವಿಪಿನಂ ಬಯಲಪ್ಪಿನಂ ರತೀ
ಶನ ಚತುರಂಗಸೇನೆ ನಡೆದತ್ತು ಧರಿತ್ರಿಗೆ ಚಿತ್ರಮಪ್ಪಿನಂ ೭

ಕೈಯಲ್ಲಿದ್ದ ಜಪಸರಗಳು ಕೆಳಗೆ ಬಿದ್ದವು. ೪. ಅಗೊ! ಮುನಿಗಳ ಚಿತ್ತವನ್ನು ಅಪಹರಿಸು ವವ ಬಂದ! ಋಷಿಗಳ ವಿಮಲ ಆಚಾರ ಶತ್ರುಬಂದ! ಧರ್ಮಜ್ಞರ ವೈರಿಬಂದ! ಜಿತೇಂದ್ರಿ ಯರನ್ನು ಸಂಹರಿಸುವವ ಬಂದ! ಶಾಂತಿಯ ಶತ್ರು! ಯತಿಹರ! ಇಗೋ ಬಂದ! ಬಂದ! ಎಂದು ಅಲ್ಲಲ್ಲಿ ದುಂಬಿಗಳ ಬಹುವಿಧವಾದ ಕಹಳೆನಾದ ಹೊಮ್ಮಿತು. ೫. ಎಲೆ ದೇವೇಂದ್ರ ತೊಲಗು! ಚತುರ್ಮುಖನೆ ತೊಲತೊಲಗು! ಅಗ್ನಿ, ಬೃಹಸ್ಪತಿ, ಕೃಷ್ಣರೆ ತೊಲಗಿರಿ! ಎಂದು ಅನೇಕ ಕೊಂಬುಗಳು ಮೊರೆದವು. ೬. ಅಪ್ರತಿಮವೇಷನೂ ಅನೂನವರ ಪ್ರಕಾಶನೂ ಆದ ಬಿಲ್ಲು ಹಿಡಿದ ರತೀಶನ ಸೇನೆ ಮುನ್ನಡೆಯುತ್ತಿರುವಾಗ ಅದು ಪರಸ್ಪರ ಒಲಿದವರು ಮತ್ತು ಅಗಲಿದ್ದವರ ಜೀವವನ್ನು ಶೂನ್ಯವಾಗಿಸಿತು. ಕೂಡಲೆ ಕಾಮಿನಿ ಯರು ನಲಿಯತೊಡಗಿದರು, ಜಿತೇಂದ್ರಿಯರು ಓಡಿದರು, ವಿಯೋಗಿಗಳ ಉತ್ಸಾಹ ಅಡ ಗಿತು, ಭೋಗವನ್ನು ತ್ಯಜಿಸಿದ ಯೋಗಿಗಳಲ್ಲಿಯೂ ಭೋಗೇಚ್ಛೆ ನೊಳೆಯಿತು. ಮನ್ಮಥ ಸೈನ್ಯದ ಪ್ರಭಾವದಿಂದ ಜಗತ್ತಿನಲ್ಲಿ ನವಚೈತನ್ಯ ಮೂಡಿತು. ೭. ಮುನಿಗಳ ಧೈರ್ಯ ವೆಂಬ ಧರೆ ಧೂಳೆದ್ದಿತು, ಮಾನವನ ಮನಸ್ಸೆಂಬ ಬೆಟ್ಟಗಳು ಪುಡಿಯಾದವು, ಯತಿಗಳ ನಡತೆಯೆಂಬ ನದಿಕೆಸರಾಯಿತು, ನಿರ್ಮಲಚಾರಿತ್ರ್ಯವುಳ್ಳ ವ್ರತಿಗಳ ತಪಸ್ಸೆಂಬ ವನ ಬಯ

ಕಂ॥ ಕೊರಗಿದರಾ ಯತಿಪತಿಗಳ್
ಹರಣಂಗಳೆದರ್ ವಿಯೋಗಿಗಳ್ ಮನು ಮುನಿಗಳ್
ಶರಣೆಂದರ್ ಜಿತಕಾಮರ್
ಮರುಳಾದರ್ ಪುಷ್ಪಶರನ ಪಡೆ ನಡೆವಾಗಳ್ ೮

ವ॥ ಇಂತು ಸಕಳಭುವನಮಂ ಭಂಗಿಸುವ ಚತುರಂಗ ಸೇನೆಯ ನಡುವೆ ಕಡುಪಿಂ ನಡೆತಂದು ಭೂಮಿಗೆ ಮೆಱೆವ ಸೋಮಧರನಿರ್ಪ ಹೇಮಕೂಟ ಪ್ರಾಂತದೊಳ್ ನಿಂದು ನಗಾಗ್ರಮಂ ನೋಡಿ ಕಡುಮುಳಿದು ಕಾಮಭೂಪಂ ಉನ್ನತಮಪ್ಪ ತನ್ನ ಸೇನೆಗೆ ಕೆಯ್ವೀಸಿದ ಸಮಯದೊಳ್ ಗಿಳಿಗಳ್ ಚಪ್ಪರಿಸೆ ತುಂಬಿಗಳ್ ಮೊರೆಯೆ ಕೋಗಿಲೆಗಳ್ ಕರೆಯೆ ಮಂದಾನಿಳಂ ಮೇರೆವರಿಯೆ ಚಂದ್ರಂ ಬೆಳ್ದಿಂಗಳಂ ಬೀರೆ ಚಕೋರಿಗಳ್ ನಲಿದುಲಿಯೆ ಕುಸುಮ ಕುಲಂ ಕಂಪನೊತ್ತರಿಸೆ ಸಹಕಾರಂ ಸಂದಣಿಸೆ ಕಾಮಿನಿಯರ್ ಜಡಿಯೆ ರಥಾಂಗಂ ಸಂಗಡಿಸಿರೆ ನೂಂಕೆ ಮಕರಧ್ವಜಂ ಗಗನದೊಳ್ ಕುಣಿಯೆ ಮತ್ಸ್ಯಪತಾಕೆಯಚ್ಚರಿಯೊಳಾಡೆ ಮಾಕಂದಗಜ ಪೂತ್ಕಾರಂ ರಥಾಂಗರಥ ಚೀತ್ಕಾರಂ ಶಿಲೀಮುಖಝೇಂಕಾರಂ ಹಂಸಕುಲಕ್ರೇಂಕಾರಂ ಝಷಕೇತನ ಘಟತ್ಕಾರಂ ತರುಣೀ ಚರಣ ಮುದ್ರಿಕಾ ಠಣತ್ಕಾರಂ ತತ್ಕಟಕ ಮಂಜೀರ ಝಣತ್ಕಾರಂ ಕಳಕಂಠವೀಥೀಧಿಕ್ಕಾರಂ ಬೆರಸಿ ಬಳಿದಾಗಸಮಂ ಮುಸುಂಕೆ ಸರ್ವಬಲವೊರ್ಬುಳಿಸಿ ಬೊಬ್ಬಿಟ್ಟಬ್ಬರಿಸಿ ಪರ್ಬಿಪರೆದು ಶರ್ವನ ಸಮಾಧಿ

ಲಾಯಿತು, ರತಿಪತಿ ಮನ್ಮಥನ ಚತುರಂಗಬಲ ಹೋಗುವಾಗ ಇಳೆಕೌತುಕಗೊಂಡಿತು.
೮. ಕುಸುಮಾಯುಧ ಕಾಮನ ಪಡೆ ನಡೆಯುತ್ತಿರುವಾಗ ಯತಿಶ್ರೇಷ್ಠರು ಖಿನ್ನರಾದರು, ವಿರಹಿಗಳು ಅಸುನೀಗಿದರು, ಮನುಮುನಿಗಳು ಶರಣಾದರು, ಜಿತಕಾಮರು ಹುಚ್ಚೆದ್ದರು.
ವ॥ ಹೀಗೆ ಮನ್ಮಥನು ಎಲ್ಲಭುವನಗಳನ್ನೂ ಭಂಗಗೊಳಿಸುವ ಸಾಮರ್ಥ್ಯವುಳ್ಳ ಚತುರಂಗ ಬಲದ ನಡುವೆ ದರ್ಪದಿಂದ ನಡೆತಂದು ಪರಶಿವನು ತಪಸ್ಸು ಮಾಡುತ್ತಿದ್ದ ಹೇಮಕೂಟಕ್ಕೆ ಬಂದನು, ಗಿರಿಶಿಖರವನ್ನು ಕಂಡು ಕೋಪೋಗ್ರನಾಗಿ ಕಾಮರಾಜನು ತನ್ನ ಸೈನ್ಯಕ್ಕೆ ಕೈಬೀಸಿ ಸೂಚನೆ ಕೊಟ್ಟನು ; ಆಗ ಗಿಳಿಗಳು ಚಪ್ಪರಿಸಿದವು (ಬೆದರಿಸಿದವು) ; ದುಂಬಿಗಳು ಮೊರೆದವು, ಕೋಗಿಲೆಗಳು ಕರೆನೀಡಿದವು, ತಂಗಾಳಿಬೀಸಿತು, ಇಂದು ತಿಂಗಳು ಬೀರಿದನು, ಚಕ್ರವಾಕಗಳು ನಲಿದು ಉಲಿದವು, ಕುಸುಮಗಳು ಕಂಪುಬೀರಿದವು, ಸಹಕಾರ (ಮಾವು) ಗಳು ದಟ್ಟವಾದವು, ಕಾಮಿನಿಯರು ವಿಜೃಂಭಿಸಿದರು, ರಥಾಂಗಗಳು ಸಂದಣಿಸಿನೂಕಿದವು, ಮಕರಧ್ವಜನು ಗಗನದಲ್ಲಿ ನರ್ತಿಸಿದನು, ಮೀನಧ್ವಜ ಅಚ್ಚರಗೊಳಿಸುವಂತೆ ಚಡಪಡಿಸಿತು, ಮಾವು ಎಂಬ ಗಜಗಳ ಫೂತ್ಕಾರ, ರಥಾಂಗಗಳ ಚೀತ್ಕಾರ, ದುಂಬಿಗಳ ಝೇಂಕಾರ, ಹಂಸೆಗಳ ಕ್ರೇಂಕಾರ, ಮೀನಕೇತನ ಘಟತ್ಕಾರ, ತರುಣಿಯರ ಕಾಲುಂಗುರ (ಮುದ್ರಿಕೆ) ಗಳ ಠಣತ್ಕಾರ, ಅವರ ಕೈಬಳೆಗಳ ಝಣತ್ಕಾರ, ಕೋಗಿಲೆಗಳ ಧಿಕ್ಕಾರ ಇವೆಲ್ಲ ಬೆರೆದು ಗಗನವನ್ನು ತುಂಬಿದವು ; ಕಾಮನು ಎಲ್ಲ ಬಲವನ್ನು ಒಟ್ಟುಗೂಡಿಸಿ ಬೊಬ್ಬಿಟ್ಟು ಅಬ್ಬರಿಸಿ (ಆರ್ಭಟಿಸಿ) ಮುನ್ನುಗ್ಗಲು ಶರ್ವನ ಸಮಾಧಿ ಎಂಬ ಪರ್ವತವನ್ನು ಹತ್ತಿಬಿಡದೆ

ಪರ್ವತಮನೊತ್ತರಿಸಿ ಪತ್ತಿ ಬಿಡದೆ ಸುತ್ತಿ ಮುತ್ತುತಿರೆ ಮುಂದಣ ಕಾಪಿನ ನಂದೀಶ್ವರಂ ಮೋಹನಬಲದ ಸುಧಾರಸಮಯ ಸುನಾದಮಂ ಭೋಂಕನೆ ಕೇಳ್ದಂತಂತೆ ಕಂಪಿಸಿ ಕರಣಂ ಕಲಂಕಿ ಕಿಂಚಿತ್ ಸಂಚಲ ಮನನಾಗಿ ಚೆಲ್ಲಿದ ಚಿತ್ತಮಂ ಮೆಲ್ಲ ಮೆಲ್ಲನೆ ಸಂತಯ್ಸಿಕೊಂಡು ಶಿವಜ್ಞಾನದಿಂ ದೆಚ್ಚತ್ತು ಕಣ್ದೆಱೆದು ಮುಂದಿರ್ದ ಬಲಮಂ ಕಂಡು,

ಚಂ ॥ ಹರನ ಸಮಾಧಿಗಿಂತಿದನುಕೂಲತೆಯಲ್ಲ ವಿರೋಧ ವೃತ್ತಿಯಂ
ನೆರಪುವರಾರಿದಾದ ಬಲವಾದ ಮದೋನ್ನತಿಯಾರ ಲೋಕಭೀ
ಕರರವವಾರ ಸಂಭ್ರಮಮಿದಾರ ಮರುಳ್ತನಮೆಂದು ನಂದಿಕೇ
ಶ್ವರನತಿ ಕೋಪದಿಂ ಮದನಸೇನೆಯನೀಕ್ಷಿಸಿದಾ ಕ್ಷಣಾರ್ಧದೊಳ್ ೯

ಕಂ॥ ಅಳಿ ಮಲ್ಲಳಿಗೊಂಡವು ಕೋ
ಕಿಳ ನಿಕರಂ ವ್ಯಾಕುಳಾಂಗಮಾದುವು ಚಂದ್ರಂ
ಕಳೆಗುಂದಿ ಕಂದಿದಂ ಕೋ
ಮಳೆಯರ್ ವಿಹ್ವಳ ವಿಧಾನ ಮಾನಸರಾದರ್ ೧೦

ವ ॥ ಮತ್ತಮಲ್ಲದೆ,

ಉ ॥ ಕೀರತರಂಗಮೋಡಿದುವು ಚೂತಗಜಾವಳಿ ಛೀಳಿದುತ್ತೆ ಕಾಂ
ತಾರದೊಳೆಯ್ದೆ ಬಿಳ್ದುವು ಸಮೀರನಡಂಗಿದನಾ ವಸಂತಕಂ
ಘೋರವನಂಗಳೊಳ್ ಪುಗುತೆ ಮೆಯ್ಗರೆದಂ ಕಳಹಂಸಮಾಲೆ ಕಾ
ಸಾರದೊಳಂಜಿ ಪೊಕ್ಕುವು ರಥಾಂಗರಥಂ ನಡೆಗೆಟ್ಟುವದ್ಭುತಂ ೧೧

ಮುತ್ತಿಗೆ ಹಾಕಿದನು; ಮುಂದೆ ನಿಂತಿದ್ದ ನಂದಿಕೇಶ್ವರ ಕಾಮನ ಬಲದ ಅಮೃತಮಯವಾದ ನಾದವನ್ನು ಕೇಳಿ ಕೊಂಚಕಂಪಿಸಿದ; ಕರಣಗಳು ಕಲಕಿದವು, ಮನಸ್ಸು ಕದಲಿತು, ಆತ ಚದುರಿದ ಚಿತ್ತವನ್ನು ಮೆಲ್ಲಮೆಲ್ಲನೆ ಸಂಯಮ (ತಡೆದು) ಮಾಡಿಕೊಂಡು ಶಿವಜ್ಞಾನ ದಿಂದ ಎಚ್ಚರಗೊಂಡು ಕಣ್ದೆರೆದು ಮುಂದೆ ಇದ್ದ ಸೈನ್ಯವನ್ನು ನೋಡಿ, ೯. ಪರಮೇಶ್ವರನ ಸಮಾಧಿಗೆ ಇದು ಅನುಕೂಲವಲ್ಲ, ಇದಕ್ಕೆ ವಿರೋಧವಾದುದನ್ನು ಮಾಡುವರು ಯಾವು? ಇದು ಯಾರ ಸೈನ್ಯ? ಯಾರಸೊಕ್ಕು? ಲೋಕಭೀಕರವಾದ ಈ ಗಲಾಟೆ ಯಾರದು? ಈ ಸಡಗರವಾರದು? ಇದೆಲ್ಲ ಮರುಳುತನ! ಎಂದು ನಂದಿಕೇಶ್ವರನು ಕಡುಕೋಪ ಗೊಂಡು ಮದನ ಸೈನ್ಯವನ್ನು ದೃಷ್ಟಿಸಿದ ಮಾತ್ರಕ್ಕೆ ೧೦. ದುಂಬಿಗಳು ಭ್ರಾಂತಿಹೊಂದಿ ದವು; ಕೋಗಿಲೆಗಳು ವ್ಯಾಕುಲಗೊಂಡವು, ಚಂದ್ರ ಕಳೆಗುಂದಿ ಕಂದಿದ, ಕೋಮಲೆಯರು ವಿಹ್ವಲ ಮಾನಸೆಯರಾದರು! ೧೧. ಅರಗಿಳಿಗಳು ಓಡಿದವು, ಚೂತಗಜಗಳ ಪಡೆ ಛೀಂಕರಿಸಿ ಕಾಡುಬಿತ್ತು, ಮಂದಾನಿಲ ಅಡಗಿಹೋಯಿತು, ವಸಂತನು ಕಗ್ಗಾಡು ಹೊಕ್ಕು ತಲೆಮರೆಸಿಕೊಂಡನು, ಕಲಹಂಸಗಳು ಹೆದರಿ ಸರಸ್ಸಿನಲ್ಲಿ ಬಚ್ಚಿಟ್ಟುಕೊಂಡವು, ಚಕ್ರವಾಕ

ವ॥ ಇಂತು ಕಂತುರಾಜನ ಚತುರಂಗಬಲಂ ದಿವಸೇಂದ್ರನ ಮುಂದಣ ತಮಃಪಟಲದಂತೆ ನಂದೀಶ್ವರನ ಕೋಪದ ಕಡುಗಾಯ್ಪಿಂ ನೋಡೆ ನೋಡೆ ಮಾಯವಾಗೆ,

ಕಂ॥ ನುಡಿದಂ ಮದನಂ ತನ್ನೊಳ್
ಬೆಡಂಗಿದೇನೀ ಗಣೇಶನೀ ತೆಱನಿನ್ನಾ
ಮೃಡನಂ ನಡೆದೆಸುವೊಡೆ ಸಂ
ಗಡವಾರಾರಳವದಾರ ಶಕ್ಯಮಶಕ್ಯಂ ೧೨

ವ॥ ಇಂತೆನುತುಂ ಕಂತುರಾಜಂ ಸಂತಾಪದಿಂ ಚಿಂತಿಸುತ್ತಿರ್ಪಿನಮಿತ್ತಲ್,

ಮ॥ಸ॥ ಬರುತಿರ್ದಳ್ ಮುಂದೆ ಕಾಂತಿಪ್ರದೆ ಸದಮಳೆ ಸತ್ಪುಷ್ಪಕಾರೂಢೆ ಸತ್ಯಾ
ಕರೆ ನಿತ್ಯಾನಂದೆ ಚಂದ್ರಾಭರಣನ ಸುಖಸಂಪತ್ತಿ ರುದ್ರಾರ್ಚನಾವಿ
ಸ್ತರೆ ವಿಶ್ವಾರಾಧ್ಯೆ ಕಾರುಣ್ಯದ ನೆಲೆವನೆ ಶರ್ವಾಣಿ ಗೀರ್ವಾಣವಮೌಳೀ
ವರರತ್ನ ವ್ರಾತ ಸಂಘಟ್ಟಿತಪದೆ ನಗಸಂಭೂತೆ ಸಂಪ್ರೀತಿಯಿಂದಂ ೧೩

ಬರೆ ಕಣ್ ಬಂದಂತುಸಿರ್ ಬಂದವೊಲತಿ ಮುದಮಂ ತಾಳ್ದಿ ಬಾಳ್ದಿರ್ದು ಶೋಭಾ
ಕರನಷ್ಟಾಂಗ ಪ್ರಣಾಮಂಬೆರಸು ಗಿರಿಜೆ ಗೌರೀ ಜಗನ್ಮಾತೆ ಸರ್ವೇ
ಶ್ವರಿ ದಿವ್ಯಜ್ಞಾನಿ ನಾನಾಗಮವಿದೆ ಸದಲಂಕಾರೆ ಸಾರಾಂಗಿ ವಿಶ್ವೋ
ದರೆಯೆನ್ನಂ ರಕ್ಷಿಸೆಂದೀಕ್ಷಿಸಿ ಮಿಗೆ ಪೊಗಳ್ದಂ ಬಾಷ್ಪದೃಕ್‌ಪುಷ್ಪಚಾಪಂ ೧೪

ರಥಗಳು ನಡೆಗೆಟ್ಟವು ; ಇದು ಎಂತಹ ಅದ್ಭುತ ! ವ|| ಕಾಮದೇವನ ಚತುರಂಗ ಬಲವು ರವಿಯ ಮುಂದಣ ಕತ್ತಲೆಯಂತೆ ನಂದಿಕೇಶ್ವರನ ಕೋಪದ ಧಗೆಗೆ ನೋಡು ನೋಡುತ್ತಿದ್ದಂತೆಯೇ ಮಾಯವಾಯಿತು ; ೧೨. ಮದನ ಮನಸ್ಸಿನಲ್ಲಿಯೇ ಯೋಚಿಸಿದ ; ಈ ಗಣೇಶ್ವರನ ಜಾಣ್ಮೆಯೇನಿರಬಹುದು ? ಈತನು ನೋಡಿದ ಮಾತ್ರದಿಂದಲೇ ನಮ್ಮ ಸೇನೆ ಈ ಗತಿಗೆ ಇಳಿದಮೇಲೆ ಆ ಮೃಡನಿಗೆ ನಾನು ಬಾಣಬಿಡುವುದಕ್ಕೆ ಇನ್ನು ಯಾರಿಗೆ ಸಾಧ್ಯ ? ಇದು ಅಸಾಧ್ಯ ! ವ|| ಹೀಗೆ ಕಾಮನು ದುಃಖದಿಂದ ಚಿಂತಿಸುತ್ತಿರುವಾಗ ಈ ಕಡೆ–೧೩. ಇಷ್ಟರಲ್ಲಿ ಪಾರ್ವತೀದೇವಿ ಮುಂದೆ ಬರುತ್ತಿದ್ದುದು ಕಾಣಿಸಿತು, ಆಕೆಯ ಸೌಂದರ್ಯವರ್ಣನೆಯಿದು–ಆಕೆ ಕಾಂತಿಪ್ರದಳು, ನಿರ್ಮಲಳು ಎಂದರೆ ಆಣವ–ಮಾಯಾ–ಕಾರ್ಮ ಎಂಬ ಮಲವಿಲ್ಲದವಳು ; ಪುಷ್ಪಕವಿಮಾನದಲ್ಲಿ ಕುಳಿತಿದ್ದಾಳೆ, ಸತ್ಯಾಕರಳು, ನಿತ್ಯಾನಂದವುಳ್ಳವಳು, ಚಂದ್ರಶೇಖರನ ಸುಖಸಂಪತ್ತು, ರುದ್ರಾರ್ಚನೆಯಲ್ಲಿ ಆಸಕ್ತಳು, ವಿಶ್ವಪೂಜ್ಯಳು, ಕರುಣೆಯನುಡು, ಇಂಥ ಶರ್ವಾಣಿ, ಎಲ್ಲದೇವತೆಗಳಿಂದ ವಂದಿಸಲ್ಪಡುವ ಪಾದಕಮಲವುಳ್ಳವಳು ; ೧೪. ಗಿರಿಜೆ ಬಂದದ್ದು ಕಾಮನಿಗೆ ಉಸಿರು ಬಂದಂತಾಯಿತು. ಆತ ಮುದವಾಂತು ದೇವಿಗೆ ಸಾಷ್ಟಾಂಗ ಪ್ರಣಾಮವೆಸಗಿದ. ಸರ್ವೇಶ್ವರಿ, ದಿವ್ಯಜ್ಞಾನಿ, ಆಗಮಸಿದ್ಧೆ, ಸದಲಂಕೃತೆ, ವಿಶ್ವೋದರಿ, ತಾಯೆ ನನ್ನನ್ನು ನೋಡಿ

ವ ॥ ಅಂತು ದರ್ಪಕಂ ಶೂರ್ಪಕಮರ್ದನನಾರ್ಪುಗುಂದಿ ಕಾರ್ಪಣ್ಯದಿಂ ನಗತನೂಜೆಯಂ ಪೊಗಳುತ್ತುಂ ಮತ್ತಮಿಂತೆಂದಂ

ಕಂ॥ ಗಿರಿಶನ ತಪಮಂ ಕಿಡಿಸಲ್
ಮುರರಿಪು ಕಳುಪಿದೊಡೆ ಬಂದು ಹೇಮಾಚಳಮಂ ।
ಭರದಿಂದೆ ಮುತ್ತೆ ನಂದೀ
ಶ್ವರನಿಂದಂ ಸಕಲಸೇನೆಯಳಿದಾನುಳಿದೆಂ ॥ ೧೫

ತಾಯೇ ತವರೇ ಕೇಳೆ
ನ್ನಾಯುವೆಯೆನ್ನಸುವೆ ಕಾವುದೆಂದೊಱಲುತ್ತುಂ ।
ಬಾಯಳಿವ ಮದನನಂ ಕಾ
ತ್ಯಾಯನಿ ದಯೆಯಿಂದೆ ನೋಡಿ ನಯದಿಂ ನುಡಿದಳ್ ॥ ೧೬

ಅಱಿದೆಂ ನಿನ್ನಯೆ ಬರವಂ
ಕಱಿಗೊರಲನ ತೀವ್ರ ತಪಮನೆಳ್ಚಟ್ಟುವುದೀ ।
ತೆಱದಿಂದೆನ್ನಿಷ್ಟಮದೆ
ನ್ನರಕೆಯದೆನ್ನಿಚ್ಛೆಯೆನ್ನಲಾಭಂ ಲೋಭಂ ॥ ೧೭

ನಾನಾ ವಿಧದಿಂ ರುದ್ರನ
ನೂನತಪೋಭರದ ಬೆಸುಗೆಯಂ ಬಿಡಿಸೊಲವಿಂ ।
ಶ್ರೀನಂದನ ನೀನಂಜದಿ
ರಾನಿರ್ದಪೆನಾನೆ ರಕ್ಷೆಯಾನೆ ಸಹಾಯಂ ॥ ೧೮

ಕಾಪಾಡು! ಎಂದು ಸ್ತುತಿಸಿ ಪುಷ್ಪಚಾಪನು ಕಣ್ಣಲ್ಲಿ ನೀರು ತಂದುಕೊಂಡನು! ಹೀಗೆ ಶೂರ್ಪಕಾಸುರನನ್ನು ಕೊಂದ ದರ್ಪಕನು ಕಳೆಗುಂದಿ ದೀನವದನನಾಗಿ ಅಗಜೆಯನ್ನು ಹೊಗಳಿ ಮತ್ತೆ ಹೇಳಿದನು. ೧೫. ಪರಶಿವನ ತಪಸ್ಸನ್ನು ಭಂಗಮಾಡಲು ವಿಷ್ಣುವು ಕಳುಹಿಸಿದ್ದರಿಂದ ನಾನು ಇಲ್ಲಿಗೆ ಬಂದು ಹೇಮಕೂಟಕ್ಕೆ ಮುತ್ತಿಗೆ ಹಾಕಿದೆನು. ಆದರೆ ಈ ನಂದೀಶ್ವರನ ದೃಷ್ಟಿಮಾತ್ರಕ್ಕೆ ನನ್ನ ಸಕಲ ಸೈನ್ಯ ಅಳಿದು ನಾನು ಮಾತ್ರ ಉಳಿದಿದ್ದೇನೆ. ೧೬. "ತಾಯೆ, ನೀನೆ ನನ್ನ ತವರು, ನನ್ನ ಆಯಸ್ಸು ನಿನ್ನ ಅಧೀನ, ನನ್ನ ಪ್ರಾಣವು ನಿನ್ನ ಕೃಪೆಯನ್ನು ಆಶ್ರಯಿಸಿದೆ, ನನ್ನನ್ನು ಕಾಪಾಡುವ ಭಾರ ನಿನ್ನದು." ಎಂದು ಹಲುಬುತ್ತಿರುವ ಮದನನನ್ನು ಕರುಣೆಯಿಂದ ನೋಡಿ ಕಾತ್ಯಾಯಿನಿಯು ಹೀಗೆಂದಳು. ೧೭. ನಿನ್ನ ಆಗಮನದ ಉದ್ದೇಶ ಅರ್ಥವಾಯಿತು. ಆ ನಂಜುಗೊರಳನ ತೀವ್ರ ತಪಸ್ಸನ್ನು ಈ ಬಗೆಯಿಂದ ಓಡಿಸುವುದೇ ನನ್ನ ಇಷ್ಟವೂ ಕೂಡ! ಅದೆ ನನ್ನ ಬಯಕೆ, ನನ್ನ ಆಶಯ, ಅದೇ ನನ್ನ ಆಶೆ, ಅದರಿಂದ ಜಗತ್ತಿಗೆ ಲಾಭ! ಹಾಗೂ ಲೋಭ! ೧೮. ಬಗೆ ಬಗೆಯ ಉಪಾಯಗಳಿಂದ ರುದ್ರನ ಅನುಪಮ ಉಗ್ರ ತಪಸ್ಸಿನ ಕೊಂಡಿಯನ್ನು ಬಿಡಿಸು; ಶ್ರೀ ವಿಷ್ಣು

ಕಂ॥ ಪಿಂದಣೆ ಬೆಸಸೆ ಕಾಮಂ
ಪಿಂದಣ ಪರಿಭವಮನುಡುಗಿ ತಳೆದತಿಮುದಮಂ।
ಸಂದಣಿಸುತೊಡನೊಡನೆ ನಡೆ
ತಂದಂ ಪುಷ್ಪಕದ ನೆಳಲ ಕರ್ಪಿನ ಮಱೆಯೊಳ್॥ ೧೯

ವ॥ ಆ ಸಮಯದೊಳ್,

ಕಂ॥ ಮುಗಿದ ಮನಂ ಮುಗಿದ ಕರಂ
ಮುಗಿದಕ್ಷಿಗಳಲರ್ವ ಪುಳಕಮಲರ್ವಾನಂದಾ।
ಶ್ರುಗಳಲರ್ವ ಭಕ್ತಿ ತನ್ನೊಳ್
ಸೊಗಯಿಸೆ ನಂದೀಶನಿರ್ದನುತ್ತಮಭಕ್ತಂ॥ ೨೦

ವ॥ ಅಂತಿರ್ದ ನಂದೀಶನಂ ಚಂದ್ರಾನನೆ ಕೃಪೆಯಿಂದಂ ನೋಡುತ್ತುಂ ಶಿವಾರ್ಚನಾ ತತ್ಪರೆ ಪುಷ್ಪೋಪಚಯಕ್ಕೆ ಬಿಜಯಂಗೆಯ್ದಳಿತ್ತಲ್ ಪುಷ್ಪಚಾಪಂ ನಂದೀಶನ ಕಾಪಿನ ಸೀಮೆಯುಮಂ ಕಳಿದು

ಉ॥ ಬಂದು ಮತಂಗಪರ್ವತಮನೇಱಿ ಮಹೇಶನ ವಾಮಭಾಗದೊಳ್
ನಿಂದು ವಿರಾಜಿಸಿರ್ಪ ರತಿಯಂ ಕೆಲದೊಳ್ ನಿಲವೇಳ್ದು ಶೌರ್ಯವೀ।
ರ್ಯಂ ದಳವೇಱೆ ಮೀಱೆ ನಭದೊಳ್ ಸುರಸಂತತಿ ನೋಡಿ ಭಾಪು ಭಾ
ಪೆಂದೆನೆ ಮುಂದೆ ಪುಷ್ಪಶರನೀಕ್ಷಿಸಿದಂ ನಿಟಿಲಾಕ್ಷ ಲಕ್ಷ್ಯಮಂ॥ ೨೧

ವ॥ ಅಂತು ನೋಡಿ

ಪುತ್ರನೇ, ನೀನು ಹೆದರಬೇಡ, ನಾನಿದ್ದೇನೆ. ನಾನೇ ನಿನಗೆ ಸಹಾಯ ಹಾಗೂ ರಕ್ಷಕಳು. ೧೯. ಎಂದು ಗಿರಿಜೆ ಆಜ್ಞಾಪಿಸಲು ಕಾಮನು ಹಿಂದಿನ ದೈನ್ಯವನ್ನು ಬಿಟ್ಟು ಗೆಲುವಾದನು; ಆತ ಮುದದಿಂದ ಅವಳ ಹಿಂದೆ ಹೊರಡಲು ಸಿದ್ಧನಾಗಿ ಪುಷ್ಪಕವಿಮಾನದ ನೆಳಲ ಮರೆಯಲ್ಲಿ ನಡೆದುಬಂದನು. ೨೦. ಭಕ್ತಿ ನಮ್ರವಾದ ಮನಸ್ಸು, ಮುಗಿದ ಕೈ, ಮುಚ್ಚಿದ ಕಣ್ಣು ನವಿರೇರಿದ ಮೈ, ಕೋಡಿವರಿವ ಆನಂದಬಾಷ್ಪಗಳು, ಇವುಗಳಿಂದ ಉತ್ತಮ ಭಕ್ತನಾದ ನಂದಿಕೇಶ್ವರನು ತನ್ಮಯನಾಗಿದ್ದಾನೆ. ವ॥ ಪಾರ್ವತಿ ನಂದೀಶ್ವರನನ್ನು ಕೃಪೆಯಿಂದ ಅನುಗ್ರಹಿಸಿ, ಶಿವಾರ್ಚನೆಗಾಗಿ ಹೂ ಬಿಡಿಸಿ ತರಲು ಬಿಜಯಂಗೈದಳು. ಕುಸುಮಶರನು ನಂದೀಶ್ವರ ರಕ್ಷಣೆಯ ಎಲ್ಲೆಯನ್ನು ದಾಟಿ, ೨೧. ಮತಂಗ ಪರ್ವತದ ಹತ್ತಿರ ಬಂದು ಅದನ್ನು ಏರಿದನು, ಮಹೇಶ್ವರನ ಎಡಗಡೆ ನಿಂತುಕೊಂಡು, ರತಿಯನ್ನು ಪಕ್ಕದಲ್ಲಿ ನಿಲ್ಲಲು ಹೇಳಿ ಮಹಾಶೂರನಾದ ಮನ್ಮಥ ಪುಳಕಿತನಾಗಿರುವಾಗ ಗಗನದಲ್ಲಿ ದೇವತೆಗಳು ಭಾಪು! ಎಂದು ಹೊಗಳುತ್ತಿದ್ದರು. ಆಗ ಕಾಮನು ಹಣೆಗಣ್ಣನ ಲಕ್ಷ್ಯವನ್ನು ಕಂಡನು.

ಕಂ॥ ಅತುಳಬಳನಪ್ರತಿಮನೂ
ರ್ಜಿತಶೌರ್ಯಂ ಕರ್ವುವಿಲ್ಲನೆಡಗೆಯ್ಯೊಳ್ ಮಂ।
ಡಿತಮನೆ ಪಿಡಿದಾಹಾ ಆತಿ
ಪತಿ ನಾರಿಯನೋವಿ ನೀವಿ ಜೇವೊಡೆವಾಗಳ್॥ ೨೨

ವ್ರತಿಗಳ್ ಮನುಗಳ್ ಮುನಿಗಳ್
ಯತಿಗಳ್ ಸೆಡೆದಲ್ಕಿ ಬಳ್ಕಿ ಸುಗಿದಗಿದು ಕರಂ।
ಮತಿಗೆಟ್ಟರ್ ಧೃತಿಗೆಟ್ಟರ್
ಗತಿಗೆಟ್ಟರ್ ಬುದ್ಧಿಗೆಟ್ಟರುನ್ನತಿಗೆಟ್ಟರ್॥ ೨೩

ವ॥ ಅಂತಿಕ್ಷು ಧನುಷ್ಟಂಕಾರ ರವದಿಂದಧಿಗತ ಪರಮಾರ್ಥರೆನಿಪ ಜಿತೇಂದ್ರಿಯರ್ ವಿಕಾರ ಚಿತ್ತರಾಗುತ್ತಮಿರಲಿತ್ತಲ್ ಕುಸುಮಾಯುಧಂ ವಿಷಮಾಕ್ಷನನಿಸಲೆಂದು ಸಾಹಸಚಿತ್ತನುತ್ಸಾಹಿಸುತಿರ್ಪಾಗಳ್,

ಕಂ॥ ಪಸರಿಸಿ ಪರ್ಬಿದ ನೀಡಡಿ
ಕುಸಿದಂಗಂ ನೀಳ್ದ ದಂಡ್ಕೆನೆಗೆದ ಭುಜಾಗ್ರಂ।
ಕುಸುಮಶರಾಕುಂಚಿತಕರ
ಮೆಸೆದಿರ್ದುವು ದೃಷ್ಟಿ ಮುಷ್ಟಿ ಶರಸಂಧಾನಂ॥ ೨೪

ವ॥ ಆ ಸಮಯದೊಳ್

ಕಂ॥ ಶೃಂಗಾರಂ ಕೋಡಿಟ್ಟುದೊ
ಜಂಗಮಲತೆ ವೃತ್ತಮಾಯ್ತೊ ಲಾವಣ್ಯಂ ಶಾ।

೨೨. ಅನುಪಮ ಶೂರ, ಅಪ್ರತಿಮ ಶೌರ್ಯನಾದ ಮನ್ಮಥನು ತನ್ನ ಕಬ್ಬಿನ ಬಿಲ್ಲನ್ನು ಎಡಗೈಯಲ್ಲಿ ಹಿಡಿದು ಬಿಲ್ಲಿಗೆ ಹೆದೆಯೇರಿಸಿ ಟಂಕಾರ ಮಾಡಿದನು. ೨೩. ಅದನ್ನ ಕೇಳುವುದೇ ತಡ ವ್ರತನಿಷ್ಠರು, ಮನುಗಳು, ಮುನಿಗಳು, ಯತಿಗಳು ಅಳುಕಿದರು, ನಿಟ್ಟುಸಿರುಬಿಟ್ಟರು, ಮತಿಗೆಟ್ಟರು, ಧೈರ್ಯಕಳೆದುಕೊಂಡರು, ಗತಿಗೆಟ್ಟರು, ಬುದ್ಧಿಗೆಟ್ಟು ಕಳವಳಗೊಂಡರು. ವ॥ ಹೀಗೆ ಕಬ್ಬಿನ ಬಿಲ್ಲಿನ ಟಂಕಾರಕ್ಕೆ ಮಹಾ ಮಹಾಯತಿಗಳ ಮನಸ್ಸೂ ಕೂಡ ಚಲಿಸುತ್ತಿರುವ ಸಮಯದಲ್ಲಿ ಮನ್ಮಥನು ಮುಕ್ಕಣ್ಣನನ್ನು ಗುರಿಯಿಡಲು ಉತ್ಸಾಹಗೊಂಡಿರುವಾಗ ೨೪. ಮನ್ಮಥನು ಶಿವನಿಗೆ ಗುರಿಯಿಟ್ಟು ಬಾಣಪ್ರಯೋಗ ಮಾಡುವ ಬಗೆ ಹರಡಿಸಿ ಚಾಚಿ ನೀಡಿದ ಅಡಿಗಳು, ಕುಗ್ಗಿಸಿದ ಶರೀರ, ಚಾಚಿದ ತೋಳು, ಮೇಲೇರಿದ ಭುಜಾಗ್ರ, ಹೂಬಾಣಗಳನ್ನು ಹಿಡಿದ ಪಳಗಿದ ಕೈ ಲಕ್ಷ್ಯದಲ್ಲಿ ದೃಷ್ಟಿ, ಧನುಸ್ಸಿನಲ್ಲಿ ಮುಷ್ಟಿ ಇವುಗಳಿಂದ ಶರಸಂಧಾನ ನಡೆದಿತ್ತು. ೨೫. ಶೃಂಗಾರರಸಕ್ಕೆ ಕೋಡು ಮೂಡಿತೊ,

ರ್ಯಾಂಗಂಬಡೆದುದೊ ಪೇಳೆನೆ
ಪಿಂಗದೆ ನೆಱೆ ತೆಗೆದು ಪುಷ್ಪಚಾಪಂ ನಿಂದಂ ॥ ೨೫

ಹರಿಯಜರರಿದರಿದೆನೆಯಂ
ಬರತಳದೊಳ್ ಕಲಹಲಂಪಟಂ ನಾರದನಾ।
ರ್ದಿರೆ ಕಾಮಂ ಸಾಯಲ್ ಬ
ಲ್ಲರದೇವಂ ತೊಟ್ಟನೊಂದು ಸರಲಂ ತೊಟ್ಟಂ ॥ ೨೬

ವ॥ ಅಂತು ನನೆಗೆಣೆಯಂ ತೊಟ್ಟು ವಿಕ್ರಮಮುಮಂ ಮುಂತಿಟ್ಟು ಕೇಣಮನಿಂಬಿಟ್ಟು ಕಲಹಮನೊಡಂಬಟ್ಟು ಭಾಳಾಕ್ಷನಂ ಲಕ್ಷಿಸಿನೋಡಿ,

ಕಂ॥ ಅಜ್ಞತೆಯಿಂ ಸಕಳಕಳಾ
ಭಿಜ್ಞನನಖಿಳೈಕ ತಾತನಂ ಮದನಂ ದಿ।
ವ್ಯಜ್ಞಾನಿಯನಿರದುಱೆ ಸ
ರ್ವಜ್ಞನನುನ್ಮದನ ಬಾಣದಿಂ ತೆಗೆದೆಚ್ಚಂ ॥ ೨೭

ಎಚ್ಚೊಡೆ ತಪೋಮರೀಚಿಯ
ನುಚ್ಚಳಿಸಲ್ಕಾಱದಿತ್ತ ತಿರುಗಿದ ಶರಮಂ।
ಚೆಚ್ಚರದೀಕ್ಷಿಸಿ ಛಲದಿಂ
ದೆಚ್ಚಂ ಪಂಚೇಷು ಮದನಶರದಿಂದಾಗಳ್ ॥ ೨೮

ನೀಡಾಗದೆ ಮದನ ಶರಂ
ನಾಡೆಯುಮಿರದೆಯ್ದಿ ಹರನ ಹತ್ತಿರೆ ಬೀಳು।

ಸಂಚರಿಸುವ ಬಳ್ಳಿ ಸುತ್ತಿದೆಯೊ, ಲಾವಣ್ಯವು ಶೌರ್ಯಾಂಗವನ್ನು ಪಡೆಯಿತೊ ಎಂಬಂತೆ, ಕುಸುಮಶರನು ಬಾಣಬಿಡಲು ಸಿದ್ಧತೆ ನಡೆಸಿದ್ದಾನೆ. ೨೬. ಗಗನತಳದಲ್ಲಿ ಹರಿ–ಅಜರು ಸೋಜಿಗಪಡುತ್ತಿರಲು, ಕಲಹಪ್ರಿಯನಾದ ನಾರದನು ಕುತೂಹಲಿಯಾಗಿರಲು, ಕಾಮನು ಕೂಡಲೇ ಒಂದು ಬಾಣವನ್ನು ತೊಟ್ಟನು. ವ|| ಕಾಮನು ಸುಮಬಾಣಗಳನ್ನು ಹೂಡಿ, ಪರಾಕ್ರಮವನ್ನು ಮುಂದುಮಾಡಿ, ಸಿಟ್ಟನ್ನು ಹಿಂದೆ ಸರಿಸಿ, ಜಗಳಕ್ಕೆ ಪಣತೊಟ್ಟು ಮುಕ್ಕಣ್ಣನನ್ನು ಲಕ್ಷಿಸಿಕಂಡು, ೨೭. ಅಜ್ಞನಾದ ಮದನನು ಸಕಲ ಕಲೆಗಳನ್ನು ಬಲ್ಲವನೂ ಸಕಲಕ್ಕೆ ಒಡೆಯನೂ ದಿವ್ಯಜ್ಞಾನಿಯೂ ಆದ ಸರ್ವಜ್ಞ ಶಿವನನ್ನು ಉನ್ಮದನ ಬಾಣದಿಂದ ಹೊಡೆದನು. ೨೮. ಕಾಮನು ಬಿಟ್ಟ ಉನ್ಮದ ಬಾಣವು ಶಿವನ ತಪಸ್ಸಿನ ಕಿರಣಗಳನ್ನು ಎದುರಿಸಲಾರದೆ ಹಿಂದಿರುಗಿತು. ಅದನ್ನು ಗಮನಿಸಿದ ಪಂಚಬಾಣನು ಛಲದಿಂದ ಮದನಶರವನ್ನು ಬಿಟ್ಟನು. ೨೯. ಮದನಶರವೂ ಗುರಿಮುಟ್ಟಲಿಲ್ಲ. ಅದು ಹರನ ಹತ್ತಿರ ಹೋಗಿ ಹಿಂದಕ್ಕೆ ಓಡಿಬಂತು. ಅದನ್ನು ಕಂಡ ಕಾಮ ಮೋಹ

ತ್ತೋಡಿ ಬರೆ ಕಂಡು ಕಾಮಂ
ಹೂಡಿದನುಣ್ಮುಕ್ಕೆನುತ್ತೆ ಮೋಹನಶರಮಂ ॥ ೨೯

ಇದು ಹರಿಯಜ ಸುರಪತಿಗಳ
ಮದಮುಡುಗಿಸಿತೀ ಶರಂ ಕರಂ ಮೂಱುಂ ಲೋ।
ಕದ ಚಿತ್ತಮನಲ್ಲಾಡಿಸಿ
ತಿದೆ ಕೊಳ್ಳಿದೆ ಕೊಳ್ಳೆನುತ್ತೆ ಮನ್ಮಥನೆಚ್ಚಂ ॥ ೩೦

ಅಂತೆಸೆ ಮೋಹನಶರವಾ
ರ್ಪಿಂ ತಡೆಯದೆ ಶೂಲಧರನ ಬಹಿರಂಗಮನಂ।
ತಂತೆ ನಸು ಸೋಂಕಿ ಬರುತಿರೆ
ಸಂತಾಪನ ಬಾಣದಿಂದೆ ರತಿಪತಿಯೆಚ್ಚಂ ॥ ೩೧

ತೆಗೆದೆಚ್ಚೊಡೆ ಸಂತಾಪನ
ಮಗಲದೆ ಪರಿತಂದು ಹರನ ಮನದೊಳಗಂ ಮೆ।
ಲ್ಲಗೆ ಮುಟ್ಟಿ ಮುಟ್ಟಲಣ್ಮದೆ
ಮಗುಳ್ದುಱೆ ಬರೆ ಕಂಡು ಮನ್ಮಥಂ ಮುಳಿದಾಗಳ್॥ ೩೨

ಲೋಕಕ್ಕದ್ಭುತಮೆಲೆಲೆ ಪಿ
ನಾಕಿಯ ತಪಮಿನ್ನುಮೆನ್ನಿದಿರೊಳಿರ್ದಪುದೆಂ।
ದಾಕರ್ಣಾಂಬರೆ ತೆಗೆದು ವ
ಶೀಕರಣಾಸ್ತ್ರದಿನನೂನ ವಿಕ್ರಮನೆಚ್ಚಂ ॥ ೩೩

ನಾಸ್ತ್ರವನ್ನು ಹೊರ ತೆಗೆದು ೩೦. ಈ ಮೋಹನಾಸ್ತ್ರವು ಹರಿ-ಅಜ-ಸುರಪತಿಗಳ ಮದವನ್ನು ಅಡಗಿಸಿತು. ಮೂರು ಲೋಕಗಳಲ್ಲಿರುವ ಸಂಯಮಿಗಳ ಚಿತ್ತವನ್ನು ಅಲುಗಾಡಿಸಿತು. ಇಗೊ ತೆಗೆದುಕೊ, ತೆಗೆದುಕೊ! ಎಂದು ಮನ್ಮಥನು ಮೋಹನಾಸ್ತ್ರವನ್ನು ಬಿಟ್ಟನು. ೩೧. ಮನ್ಮಥನು ಬಿಟ್ಟ ಮೋಹನಾಸ್ತ್ರವು ಅಮಿತ ಸಾಮರ್ಥ್ಯದಿಂದ ಶೂಲಪಾಣಿಯ ಬಹಿರಂಗವನ್ನು ತುಸು ಸೋಂಕಿ ಹಿಂದಿರುಗಿತು. ಅದನ್ನು ಕಂಡ ರತಿಪತಿ ಸಂತಾಪನಾಸ್ತ್ರವನ್ನು ತೆಗೆದು ಬಿಟ್ಟನು. ೩೨. ಶಿವನ ಮೇಲೆ ಪ್ರಯೋಗಿಸಿದ ಸಂತಾಪನಾಸ್ತ್ರವು ಗುರಿ ತಪ್ಪದೆ ಮುನ್ನಡೆದು ಹರನ ಒಳಮನವನ್ನು ಮುಟ್ಟಿಯೂ ಮುಟ್ಟಲಾರದೆ ಹಿಂದಿರುಗಿದುದನ್ನು ಕಂಡು ಮನ್ಮಥನಿಗೆ ತುಂಬಾ ಕೋಪ ಬಂತು! ಆಗ ೩೩. 'ಎಲೆಲೆ ಲೋಕಕ್ಕೆ ಇದು ಅದ್ಭುತ!' ಎಂದು ಮದನನು ಮನಸ್ಸಿನಲ್ಲಿ 'ಪಿನಾಕಿಯ ತಪಸ್ಸು ಇನ್ನೂ ನನ್ನ ಎದುರಿನಲ್ಲಿಯೇ ಇದೆಯಲ್ಲವೆ?' ಎಂದುಕೊಂಡು ವಶೀಕರಣಾಸ್ತ್ರದಿಂದ ಜೋರಾಗಿ ಪ್ರಯೋಗಿ

ಕಂ॥ ಇಸೆ ಬಂದು ವಶೀಕರಣಂ
ಸಸಿಯಂ ಸೂಡಿದನ ಕಮಲವಿಮಲಜ್ಞಾನಾ।
ವಸಥ ಪರಂಜ್ಯೋತಿಯ ಕಾ
ಲ್ದೆಸೆಯಂ ಕಾಣದೆ ಮರಳ್ದು ಬರೆ ಬೆಱಗಾದಂ॥ ೩೪

ಓಹೋ ! ಉನ್ಮದನ ಮದನ
ಮೋಹನ ಸಂತಾಪನಂ ವಶೀಕರಣಾಸ್ತ್ರ।
ವ್ಯೂಹಂ ವ್ಯರ್ಥಮಿದೆಂದು
ತ್ಸಾಹಂಗುಂದುತ್ತೆ ಮದನನಂದಿಂತೆಂದಂ॥ ೩೫

ಟಂಕಾರಾಲ್ಪಧ್ವನಿಯಿಂ
ಕಿಂಕುರ್ವಾಣತೆಯನೆಯ್ದುವರ್ ಮುನಿಗಳ್ ನಿಃ।
ಶಂಕನನಚಳಿತನಂ ಹರ
ನಂ ಕಂಡೆಂ ಧರೆಗೆ ಚಿತ್ರಮತುಳಚರಿತ್ರಂ॥ ೩೬

ತೆಱಹುಗುಡನಚಳನನ್ಯಮ
ನಱಿಯಂ ನಿರುಪಮ ಸಮಾಧಿಯುಕ್ತನಭೇದ್ಯಂ।
ಕುಱುಹಿಲ್ಲೆನುತುಂ ಬಿಲ್ಲಂ
ಬೆಱಗಾಗಿರ್ದಂ ರತೀಶನಸ್ತ ವಿಳಾಸಂ॥ ೩೭

ಈ ತೆಱದಿಂ ಬೆಱಗಾಗಿ ನಿ
ಶಾತ ತಪೋಗಾತ್ರಧರನನೆಸಲಾಱದ ಮಾ।

ಸಿದನು. ೩೪. ಮದನನು ಬಿಟ್ಟ ವಶೀಕರಣಾಸ್ತ್ರವು ಚಂದ್ರಚೂಡನೂ ವಿಮಲಜ್ಞಾನನಿಧಿ ಪರಂಜ್ಯೋತಿಯೂ ಆದ ಪರಶಿವನ ಕಾಲಿನ ನೆಲೆಯನ್ನೂ ಕಾಣಲಾರದೆ ಹಿಂದಿರುಗಿತು ಅದನ್ನು ಕಂಡ ಕಾಮ ಬೆರಗಾದನು! ೩೫. ಓಹೋ ! ಇದು ಅತ್ಯಾಶ್ಚರ್ಯ. ಉನ್ಮದನಾಸ್ತ್ರ, ಮದನಾಸ್ತ್ರ, ಮೋಹನಾಸ್ತ್ರ, ಸಂತಾಪನಾಸ್ತ್ರ, ವಶೀಕರಣಾಸ್ತ್ರ ಮುಂತಾದ ನನ್ನ ಮುಖ್ಯ ಶರಗಳೆಲ್ಲ ವ್ಯರ್ಥವಾದುವಲ್ಲಾ! ಎಂದು ಉತ್ಸಾಹಕುಂದಿದ ಮದನ ಮನಸ್ಸಿನಲ್ಲಿಯೇ ಹೀಗೆ ಯೋಚಿಸಿದನು. ೩೬. ಕೇವಲ ಧನುಷ್ಟಂಕಾರದ ಅಲ್ಪ ಧ್ವನಿಯಿಂದಲೇ ಮುನಿಗಳು ದಿಕ್ಕು ತೋಚದೆ ವಿಹ್ವಲರಾಗುತ್ತಾರೆ! ಆದರೆ ಪರಶಿವನು ನಿಶ್ಶಂಕನೂ, ಅಚಳಿತನೂ ಆಗಿರುವನೆಂದಮೇಲೆ ಅವನ ಅನುಪಮವಾದ ಚಾರಿತ್ರ ಲೋಕವಿಲಕ್ಷಣ! ೩೭. ನನ್ನ ಬಾಣಗಳಿಗೆ ಕೊಂಚವೂ ಅವಕಾಶವೇ ಕೊಡದಿರುವ, ಅಚಲನೂ ನಿರುಪಮ ಸಮಾಧಿಯುಕ್ತನಾದ ಶಿವನು ಅನ್ಯವನ್ನು ಅರಿಯ. ಆದ್ದರಿಂದಲೇ ಅವನು ಅಭೇದ್ಯ ಕುರುಹೇ ಇಲ್ಲದವನು ಅವನು ಎಂದು ರತೀಶನ ಕಾಂತಿಗುಂದಿ ಬೆರಗಾದ. ೩೮. ಹೀಗೆ ಬೆರಗಾಗಿ ತೀಕ್ಷ್ಣವಾದ ಉಗ್ರ ತಪೋಮಗ್ನನಾದ ಪರಶಿವನ ಮನಸ್ಸನ್ನು ಕದಲಿಸಲಾರದೆ ಖಿನ್ನ

ಜಾತನನೀಕ್ಷಿಸಿ ಗಗನದೊ
ಳಾತುರಿಸುವ ಹರಿಯಜರ್ಗೆ ನಾರದನೆಂದಂ ॥ ೩೮

ಜಲದೊಳಗಣ ಜಲಜದವೋಲ್
ತಿಲದೊಳಗಣ ತೈಲದಂತೆ ಕಾಷ್ಠದ ನಡುವು।
ಜ್ಜ್ವಲಿಸುವ ಶಿಖಿಯಂತೊಪ್ಪುವ
ಚಲಶಿವನಂ ಕಾಮನೆಸುಗೆ ಕೆಯ್ಕೊಂಡಪುದೇ ॥ ೩೯

ತ್ರಿಣಯನನಂ ಹರನಂ ನಿ
ರ್ಗುಣನಂ ಸಡಿಛಡ ರತೀಶನಿಸುವನೆ ಹೋ ಬೇ ।
ಡಣಕದ ಮಾತೆಲ್ಲಿಯದೆ
ತೃಣಂ ಕಾಮನದೆತ್ತಣಭವನೆತ್ತಣ ಬಾಣಂ ॥ ೪೦

ವ॥ ಎಂದು ಗಗನಾಂಕಣದೊಳ್ ಕುಣಿವ ಸಂಗ್ರಾಮ ಲಂಪಟನಪ್ಪ ನಾರದ ಮುನೀಂದ್ರಂ ನಾರಾಯಣ ನೀರಜಸಂಭವರ್ಗೆ ನಲಿನಲಿದು ಪೇಳುತ್ತಿರ್ಪಿನಮಿತ್ತಲ್,

ಮ॥ ನಡೆತಂದಳ್ ಶಿವಪೂಜೆಗೆಂದಗಜೆ ಪುಷ್ಪವ್ರಾತಮಂ ಕೊಂಡು ಸಂ
ಗಡದೊಳ್ ಬರ್ಪ ವಿಲಾಸಿನೀ ನಿಕರದಿಂ ಸೌರಭ್ಯ ಲೋಲುಪ್ತಿಯಿಂ।
ಗಡಣಂಗೊಂಡ ಶಿಲೀಮುಖಪ್ರಕರದಿಂ ಸುಯ್ಗಂಪಿನೊಳ್ ಸಾರ್ದು ಮುಂ
ಗುಡಿಯೊಳ್ ತೀಡುವ ದಕ್ಷಿಣಾನಿಲನಿನೊಪ್ಪಂಬೆತ್ತ ವಿಸ್ತಾರದೊಳ್ ॥ ೪೧

ಉ॥ ಬಂದು ನವೀನ ಪುಷ್ಪಕುಲ ಮಂಡನಮಂ ಜಡೆಯೊಳ್ ಭುಜಂಗಳೊಳ್
ಸಂದ ಕರಂಗಳೊಳ್ ಶಿವನ ತೋಳುರಃಸ್ಥಳದೊಳ್ ಪದಂಗಳೊಳ್

ನಾದ ಲಕ್ಷ್ಮೀಸುತ ಕಾಮನ ಸ್ಥಿತಿಯನ್ನು ಕಂಡು ಗಗನದಲ್ಲಿ ಆತುರಗೊಂಡಿದ್ದ ಹರಿಯಜರಿಗೆ ನಾರದನು ಹೀಗೆಂದನು. ೩೯. ನೀರಿನಲ್ಲಿರುವ ಕಮಲದಂತೆ, ಎಳ್ಳಿನೊಳಗಣ ಎಣ್ಣೆಯಂತೆ, ಕಾಷ್ಠದಲ್ಲಿನ ಬೆಂಕಿಯಂತೆ ಇರುವ ಶಿವನನ್ನು ಕಾಮನ ಅಸ್ತ್ರಗಳು ಸೋಂಕಬಲ್ಲವೆ ? ೪೦. ಮುಕ್ಕಣ್ಣನೂ ನಿರ್ಗುಣನೂ ಆದ ಹರನನ್ನ ರತೀಶನು ಬಾಣಗಳಿಂದ ಹೊಡೆವುದೆಂದರೇನು ? ಛೆ! ಛೆ! ಇಂತಹ ಅಣಕದ ಮಾತುಗಳಿಂದ ಏನು ಪ್ರಯೋಜನ ? ಕಾಮ ಎಂದರೇನು ? ಭವ ಎಂದರೆ ಏನು ? ವ॥ ಹೀಗೆ ಗಗನದಲ್ಲಿ ನರ್ತಿಸುತ್ತಿರುವ ಕಲಹಪ್ರಿಯ ನಾರದನು ಹರಿಯಜರಿಗೆ ಹೇಳುತ್ತಿರುವಾಗ ೪೧. ಆ ಸಮಯಕ್ಕೆ ಸರಿಯಾಗಿ ಅಗಜೆ ಬಗೆ ಬಗೆಯ ಹೂವುಗಳನ್ನು ತೆಗೆದುಕೊಂಡು ಬರುತ್ತಿದ್ದಾಳೆ. ಅವಳ ಜೊತೆ ಅನೇಕ ವಿಲಾಸಿನಿಯರಿದ್ದಾರೆ; ಹೂವುಗಳ ಸುಗಂಧಕ್ಕೆ ಎಳಸಿಬಂದ ದುಂಬಿಗಳು, ಜೊತೆಗೆ ಮಂದ ಮಾರುತ ಬೀಸತೊಡಗಿತು. ೪೨. ಆಗಮಿಸಿದ ಅಗಜೆ ಪೊಸ ಪೊಸ ಬಗೆಯ ಪುಷ್ಪಾ

ನಿಂದು ವಿಳಾಸದಿಂದಗಜೆ ಸಿಂಗರಿಸುತ್ತೆ, ಕಟಾಕ್ಷಕಾಂತಿಯೊಳ್
ಸಂದಣಿಗೊಳ್ಳ ಕಾಮಕುಲಮಂದೊಗೆಯುತ್ತಿರೆ ನಾಡೆ ನೋಡಿದಳ್॥ ೪೨

ವ॥ ಅಂತು ನೋಟದೊಳ್ ಕೋಟ್ಯನುಕೋಟಿ ಕುಸುಮಾಯುಧರ್ ಪುಟ್ಟುತ್ತಿರೆ ಪುಷ್ಪಾಂಜಲಿಯಂ ಪಿಡಿದು ಕಪರ್ದಿಯ ತಪಮೆಂಬ ಶಶಿಕಾಂತ ಶಿಳಾತಳದೊಳ್ ಬಿಳ್ದ ಚಂದ್ರ ಕರಂಗಳಂತೆಯುಂ ಶಂಭುವಿನನೆಚ್ಚಱಿಕೆಯೆಂಬ ಚಂದ್ರೋದಯಮಪ್ಪನ್ನಂ ಸೈರಿಸದೆ ಪರಿದು ಮುತ್ತುವ ಚಕೋರಿಗಳಂತೆಯುಂ ಹರನ ಕರಣಂಗಳೆಂಬ ಬಲ್ಲನೆಗಳಲರ್ವನ್ನಮಿರಲಾಱದೆ ಪರಿದೆಱಗಿ ಸುತ್ತಿ ಮುತ್ತುವ ಮಧುಕರಂಗಳಂತೆಯುಂ ಬೇಗಮಿಾಗಳೆ ನಿನ್ನ ಪಕ್ವತರಮಂ ಮಾಳ್ಪೆನೆಂಬ ಭೀಂಕೃತಿಯಂ ನುಡಿದು ಪರಿದು ಬೆರಸುವ ಕುಸುಮ ಶರಂಗಳಂತೆಯುಮಿರ್ದು ತನ್ನ ಸರಸ ದೃಷ್ಟಿಗಳಿಂ ಹರನಂ ನೋಡುತುಂ ತಪೋಭರಮಂ ಬಿಡಿಸಲಿರ್ದ ಮೃಡಾನಿಯಂ ಕುಸುಮ ಕೋದಂಡಂ ಕಂಡು,

ಕಂ॥ ಇನ್ನಂಜೆನಂಜೆನಾಹಾ
ಉನ್ನತ ಬಲವಾಯ್ತೆನುತ್ತೆ ವಿಭ್ರಮ ಬಳಸಂ।
ಪನ್ನಂ ಕಾಮಂ ತೆಗೆದಂ
ತನ್ನಗ್ಗದದುದಂಚ ಪಂಚಬಾಣಮನಾಗಳ್ ॥ ೪೩

ಲಂಕಾರಗಳನ್ನು ಶಿವನ ಜಡೆ, ಭುಜಗಳು, ಕೈಗಳು, ತೋಳು, ಉರಃಸ್ಥಳ, ಪಾದಗಳು, ಮುಂತಾದೆಡೆಗಳಲ್ಲಿ ವಿಲಾಸದಿಂದ ಅಲಂಕರಿಸಿ ತನ್ನ ಕಡೆಗಣ್ಣ ನೋಟದಲ್ಲಿಯೆ ಅನಂತ ಕಾಮರು ಉಗಮಿಸುವಂತೆ ಶಿವನನ್ನು ನೋಡಿದಳು. ವ॥ ಹಾಗೆ ನೋಡಿದ ಆ ನೋಟದಲ್ಲಿ ಕೋಟ್ಯನುಕೋಟಿ ಕುಸುಮಾಯುಧರು ಹುಟ್ಟುವಂತಿದ್ದರು, ಅವಳು ಪುಷ್ಪಾಂಜಲಿಯನ್ನು ಹಿಡಿದು ಸರಸದೃಷ್ಟಿಯಿಂದ ಶಿವನನ್ನು ನೋಡುತ್ತಿದ್ದರೆ ಆ ನೋಟಗಳು ಕಪರ್ದಿ (ಶಿವ) ಯ ತಪಸ್ಸೆಂಬ ಚಂದ್ರಕಾಂತ ಶಿಲಾತಲದಲ್ಲಿ ಬಿದ್ದ ಚಂದ್ರಕಿರಣಗಳಂತೆಯೂ, ಶಂಭುವಿನ ಎಚ್ಚರವೆಂಬ ಚಂದ್ರೋದಯವಾಗುವವರೆಗೆ ಸೈರಿಸಲಾರದೆ ಮುನ್ನಡೆದು ಮುತ್ತುವ ಚಕೋರಿಗಳಂತೆಯೂ ಹರನ ಕರಣ (ಇಂದ್ರಿಯ) ಗಳೆಂಬ ಹೂಗಳು ಅರಳುವವರೆಗೆ ತಡೆಯಲಾರದೆ ಬಂದು ಕವಿದು ಮುತ್ತುವ ದುಂಬಿಗಳಂತೆಯೂ, ಕೂಡಲೇ ನಿನ್ನ ತಪಸ್ಸನ್ನು ಹದಗೊಳಿಸುವನೆಂಬ ಭೀಕರತೆಯನ್ನು ನುಡಿದು ಬರುವ ಹೂವಿನ ಬಾಣಗಳಂತೆಯೂ ಇದ್ದವು. ಹೀಗೆ ಮೃಡಾಣಿಯು ಹರನ ದೃಢ ತಪಸ್ಸನ್ನು ಬಿಡಿಸಲಿರುವುದನ್ನು ಕಂಡ ಮನ್ಮಥನು– ೪೩. ಇಂತಹ ಸುಯೋಗವು ಬರುವುದನ್ನೇ ಕಾಯುತಿದ್ದ ಕಾಮ "ಇನ್ನು ನಾನು ಅಂಜುವುದಿಲ್ಲ; ಅಂಜುವುದಿಲ್ಲ! ಎಂಥ ಸುಸಮಯವಿದು ! ಎಂದು

ಕಂ॥ ನಳನಳಿಸುವಿಕ್ಷುಚಾಪದೊ
ಳಳವಡೆ ನಡೆನೋಡಿ ಹೂಡುತ್ತೈದಂಬಂ ಸಂ।
ಚಳಿಸದ ಶಂಕರನ ಮನಂ
ಚಳಿಯಿಪ್ಪುದಂ ಸಾರ್ದು ಪಾರ್ದು ತೆಗೆನೆಱೆದಿರ್ದಂ॥ ೪೪

ಮ॥ ಸ್ರ॥ ತೆಗೆದನಾಕರ್ಣಾಂಬರಂ ಶಂಬರರಿಪು ನೆಱೆ ಹೂಡಿರ್ದ ಪುಷ್ಪಾಸ್ತ್ರದೊಂದು
ಜ್ಜುಗಮಾಕಾಶಸ್ಥನಾಕೌಕರೊಳೊದವಿದನೂನಾರ್ತಿ ಕೂರ್ತೆಯ್ದೆ ನಿಂದ।
ರ್ಪಗಜಾಚಿತ್ತಾಭಿಲಾಷಾವಿತತಿ ನೆರೆದು ಭೂತೇಶ ಚಿತ್ತಾಂತರದೊಳ್ ಪೊ
ಕ್ಕು ಗಭೀರೋದ್ಯತ್ ತಪೋಬೀಜಮನತಿಭರದಿಂದೊತ್ತಿ ಮುತ್ತಿತ್ತು ಸುತ್ತಂ॥ ೪೫

ವ॥ ಇಂತು ಸಕಲಜಗದ್ಧಿತಾರ್ಥಮಪ್ಪ ಹರಿವಿರಿಂಚಿಗಳ ಮನದ ಬಯಕೆಯುಂ ಕಂದರ್ಪನ ಪಂಚಬಾಣಾನುಸಂಧಾನಮುಂ ಪಾರ್ವತಿಯ ಮನೋರಥಮುಂ ಮುಪ್ಪುರಿಗೊಂಡು ಶಿವನ ನಿಷ್ಕ್ರಿಯಾತ್ಮಕ ನಿರುಪಾಧಿಕ ನಿರಾವರಣ ಸ್ವಾನುಭವ ಸಂವೇದ್ಯ ಸ್ವಯಂ ಪ್ರಕಾಶಮಂ ಸುತ್ತಿ ಮುತ್ತಿ ಪತ್ತಿ ಚಿಗಿಲ್ತು ಬಿಡದಿರೆ ನಿರ್ವಿಕಾರ ಸ್ವರೂಪನಪ್ಪ ಪರಮಂಗೆ ಸ್ವಪ್ನೋಪಮಾಹಂ ಮಮತೆ ತಲೆಯೇಱೆ ಜೀವನಾಗಿ ಜೀವನಿಂ ಪ್ರಾಣಾನಿಲಂ ಪ್ರಾಣಾನಿಲನಿಂ ಚಿತ್ತಂ ಚಿತ್ತದಿಂದಹಂಕಾರಂ ಅಹಂಕಾರದಿಂ ಬುದ್ಧಿ ಬುದ್ಧಿಯಿಂ ಮನಂ ಜನಿಯಿಸಿತ್ತಂತರಂಗಬಹಿರಂಗಭಾವಮಂ ನೆನೆಯೆ ನೆನೆವಲ್ಲಿಂ ಮುನ್ನಂ ಮದನನ ಪಂಚಬಾಣಂ ಪರಿತಂದು ನೆರೆದಡಿಪಿ ಬೆರಸಿ ಕವಿದು ಮನಮನಿ

ಬಗೆದು ತನ್ನ ಶ್ರೇಷ್ಠವಾದ ಪಂಚ ಬಾಣಗಳನ್ನು ಒಮ್ಮೆಗೇ ಹೊರತೆಗೆದನು. ೪೪. ಆತ ಹೊಳೆಯುವ ತನ್ನ ಧನುಸ್ಸಿಗೆ ಪಂಚಬಾಣಗಳನ್ನು ಅಳವಡಿಸಿ, ಶಂಕರನನ್ನು ಚೆನ್ನಾಗಿ ನೋಡಿ ಅವನ ಮನಸ್ಸು ಚಲಿಸುನಂತೆ ಮಾಡಲು ೪೫. ಮನ್ಮಥನು ಕಿವಿಯವರೆಗೆ ಎಳೆದು ಹೂಡಿದ್ದ ಪುಷ್ಪಾಸ್ತ್ರ ಪ್ರಯೋಗೋದ್ಯಮವು ನಾಕಿಗರ ಕುತೂಹಲವನ್ನು ಕೆರಳಿಸಿತು. ಜೊತೆಗೆ, ಎದುರಿಗೆ ನಿಂತಿದ್ದ ಆಗಜೆಯ ಮನೋಭಿಲಾಷೆಯು ಭೂತಪತಿ ಪರಶಿವನ ಮನಸ್ಸಿನ ಒಳಹೊಕ್ಕು ಆಳದಲ್ಲಿ ಬೇರೂರಿದ್ದ ತಪೋ ಬೀಜವನ್ನು ಒತ್ತಿ, ಅದರ ಸುತ್ತಲೂ ಮುತ್ತಿತ್ತು; ವ॥ ಹೀಗೆ ಸಕಲ ಲೋಕಹಿತಕ್ಕಾಗಿರುವ ಹರಿ–ವಿರಿಂಚಿಗಳ ಮನದ ಬಯಕೆ, ಕಂದರ್ಪನ ಪಂಚಬಾಣಗಳ ಅನುಸಂಧಾನ, ಪಾರ್ವತಿಯ ಮನೋರಥ ಈ ಮೂರೂ ಮುಪ್ಪುರಿಗೊಂಡುವು; ಇದರಿಂದ ನಿಷ್ಕ್ರಿಯಾತ್ಮಕ–ನಿರುಪಾಧಿಕ–ನಿರಾವರಣ–ಸ್ವಾನುಭಾವ–ಸಂವೇದ್ಯವಾದ ಶಿವನ ಸ್ವಯಂ ಪ್ರಕಾಶವನ್ನು ಸುತ್ತಿ ಮುತ್ತಿ ಪತ್ತಿ ಚಿಗುರಿಸಿತು. ಅದರಿಂದ ನಿರ್ವಿಕಾರಸ್ವರೂಪನಾದ ಪರಶಿವನಲ್ಲಿ ಕನಸಿನಲ್ಲಿಯೊ ಎಂಬಂತೆ ಅಹಂ–ಮಮತೆಗಳು ತಲೆಯೇರಲು ಜೀವನಾಗಿ, ಜೀವನಿಂದ ಪ್ರಾಣಾನಿಲ, ಪ್ರಾಣಾನಿಲನಿಂದ ಚಿತ್ತ, ಚಿತ್ತದಿಂದ ಅಹಂಕಾರ, ಅಹಂಕಾರದಿಂದ ಬುದ್ಧಿ, ಬುದ್ಧಿಯಿಂದ ಮನಸ್ಸು ಜನಿಸಿತು, ಅಂತರಂಗವು ಬಹಿರಂಗವನ್ನು ನೆನೆಯಿತು, ಹಾಗೆ ನೆನೆವ ಮೊದಲೇ ಮದನನ

ರ್ಮೆಯ್ಗ್ಗಂಡು ಸಹಸ್ರಮುಖದಿಂ ಸಂಚಳಮನೀಯೆ ನಿಲಲ್ ಬಾರದೆ ತಪೋಭರದ ಬೆಸುಗೆ ಬಿಡು ವಂತೆ ಮೆಯ್ಯ ಸಂಪುಟಂ ಬಿರ್ಚಲೊಡಂ ನೋಡಿ ನೋಡಿ ನೋಡಲಣ್ಮದೆ ಪುಷ್ಪಶರಮಂ ನೂರ್ಮಡಿಸುವಂತೆ ಪುಷ್ಪಾಂಜಲಿಯಂ ಕೊಟ್ಟಂತೆ ಕಂಪಿಸಿ ಮುಂತೆ ಮೆಯ್ಯಿಕ್ಕಿರ್ದ ಗಿರಿಜಾತೆಯಂ ಭೂತೇಶ್ವರಂ ಕಂಡಾನೇಕೆಯೊ ಮಾನಿನಿಯೇಕೀ ತಪದೊಳೆಲ್ಲಿಯದೆತ್ತಣಿಂ ಬಂದುದಾರಿಂದಾದು ದೆಂದು ಕಾಮನಿರ್ಪ ವಾಮಭಾಗಮಂ ನಿಟಲಾಕ್ಷಂ ನಸುಗೋಪದಿಂ ನೋಡಿದಾಗಳ್,

ಕಂ॥ ನೋಡದ ಮುನ್ನಂ ಕೋಪಂ
ನಾಡೆಯುಮೊತ್ತರಿಸಿ ನೀಳ್ದು ನಿಟಲೇಕ್ಷಣದೊಳ್ ।
ಕೊಡೆ ಬಳೆಬಳೆದು ಸುಳಿಸುಳಿ
ದೀಡಿಱಿದೊಳಗೊಳಗೆ ಘುಳುಘುಳಿಸಿ ಕುದಿದಾಗಳ್ ॥ ೪೬

ಚಂ॥ ಪೊಗೆದುದು ಪೊತ್ತಿದತ್ತು ಕಿಡಿಯಿಟ್ಟುದು ನಾಲ್ದೆಸೆದೋಱಿದತ್ತು ಬಾನ್
ಗೊಗೆದುದು ನಿಂದು ಪೊಂಬೆಳಗುಮಂ ಪರಪುತ್ತದು ಧಂಧಗಿಲ್ ಧಗಿಲ್ ।
ಧಗಿಲೆನುತಟ್ಟಿ ತಟ್ಟಿದುದು ಮುಟ್ಟಿತು ಸುಟ್ಟಿತು ತಿಂದು ತೇಗಿದ
ತ್ತಗಿಯದೆ ನಿಂದ ಪೂಗಣೆಯನಂ ಪಣೆಗಣ್ಣುರಿ ಪಂಪೆಯಾಳ್ದನಾ ॥ ೪೭

ಕಂ॥ ಇಟ್ಟಣಿಸಿ ಘುಡುಘುಡಿಸಿ ಕಿಡಿ
ಗುಟ್ಟಿ ಕನಲ್ದಡಸಿ ಸಿಡಿಲ ಬಳಗದ ಮುಳಿಸಂ ।
ತೊಟ್ಟುದು ಬಿಸುಗಣ್ಣುರಿ ಪೊಱ
ಮಟ್ಟುದು ಸುಟ್ಟುದು ರತೀಶನಂ ನಿಮಿಷಾರ್ಧಂ ॥ ೪೮

ಪಂಚಬಾಣಗಳು ಹೊರಬಿದ್ದು ಬಂದು ಪರಶಿವನನ್ನು ಕವಿದವು. ಮನವು ಒಡೆಯಿತು, ಸಹಸ್ರಮುಖದಿಂದ ಅವು ಮನಸ್ಸನ್ನು ಚಂಚಲಗೊಳಿಸಿದವು ; ಇದರಿಂದ ತಪೋಭರದ ಬೆಸುಗೆ ಸಡಲಿತು, ಮೆಯ್ಯ ಸಂಪುಟ ಬಿಚ್ಚಿತು ; ಅಷ್ಟರಲ್ಲಿ ಅಗಜೆಯು ಶಿವನನ್ನು ನೋಡಿನೋಡಿ ನೋಡಲಾರದೆ ಅವಳು ಕುಸುಮಶರವನ್ನು ನೂರ್ಮಡಿಸುವಂತೆ ಪುಷ್ಪಾಂಜಳಿ ಯಿನ್ನಿತ್ತು ಕಂಪಿಸಿ ಅಡ್ಡಬಿದ್ದಳು. ಶಿವನು ಮೆಯ್ಯಿಕ್ಕಿದ ಅವಳನ್ನು ಕಂಡು ನಾನೇಕೆ ? ಈ ಮಾನಿನಿಯೇಕೆ ? ಈ ತಪಸ್ಸಿನಲ್ಲಿ ಇದೆಲ್ಲಿಯದು ? ಈ ತಪೋಭಂಗಕ್ಕೆ ಕಾರ ಣರು ಯಾರು ?" ಎಂದು ಕಾಮನಿದ್ದ ಎಡಭಾಗವನ್ನು ನಸುಕೋಪದಿಂದ ನೋಡಿ ದಾಗ, ೪೬. ಹಾಗೆ ನೋಡದ ಮೊದಲೇ ಕೋಪವು, ಶಿವನ ಹಣೆಗಣ್ಣಿನಲ್ಲಿ ಮೊಳೆತು ಬೆಳೆ ಬೆಳೆದು ಸುಳಿದು ಒಳಗೊಳಗೆ ಘುಳುಘುಳಿಸಿ ಕುದಿಯುತ್ತಿತ್ತು. ೪೭. ಪರ ಶಿವನ ಕಣ್ಣಿಂದ ಉರಿ ಒಗೆಯಿತು, ಹೊತ್ತಿಕೊಂಡಿತು, ಕಿಡಿಯಿಟ್ಟಿತು, ನಾಲ್ಕು ದಿಕ್ಕುಗಳಿಗೂ ಹಬ್ಬಿತು, ಗಗನಕ್ಕೆಒಗೆಯಿತು, ಅದು ಹೊಂಬೆಳಗನ್ನು ಹರಡುತ್ತ ಧಂಧಗಿಲ್ ಧಗಿಲ್ ಧಗಿಲೆನುತ ಅಟ್ಟಿ ತಟ್ಟಿ ಮುಟ್ಟಿತು, ಸುಟ್ಟಿತು ; ಅಗಿಯದೆಯೇ ಕಾಮನನ್ನು ತಿಂದುತೇಗಿತು, ೪೮. ಆ ಹಣೆಗಣ್ಣಿರಿ ಘುಡುಘುಡಿಸಿ ಕಿಡಿಹಾರಿಸಿ ಕನಲಿ ಆವರಿಸಿ ಸಿಡಿಲು

ಕಂ॥ ಗಗನದೆ ಪರಿಸುರಪತಿಗಳ್
ಜಗದ್ಧಿತಾರ್ಥಂ ಮಹೇಶ ಕರುಣಿಪುದೆಂಬ ।
ನ್ನೆಗಮಿತ್ತಲ್ ಘಟಿ ಘಟಿ ಭುಗಿ
ಭುಗಿಲೆನೆ ಸೆಟಿ ಕಾಮನುರಿದು ಕರಿಮುಟಿವೋದಂ ॥ ೪೯

ತೊಟ್ಟನೆ ಭಾಳಾನಲನಿರ
ದೊಟ್ಟಯಿಸಿಯೆ ಕುಸುಮಶರನನುರುಪಿದ ಪದದೊಳ್ ।
ಪುಟ್ಟಿತುಮಂ ಪೋದುದುಮಂ
ಸುಟ್ಟುದುಮಂ ಕಾಣಬಾರದಾಯ್ತಾಕ್ಷಣದೊಳ್ ॥ ೫೦

ವ॥ ಅಂತುಮಲ್ಲದೆ

ಮ॥ ಅರರೇ ಭುಘುರ್ಭುಗು ಭಾಪುರೇ ಭುಗು ಭುಗು ಪ್ರಜ್ವಾಲೆ ಮಜ್ಜಯ್ಯ ದೇ
ವುರೆಮೇಘಾನಲ ವಿಸ್ಫುಲಿಂಗಮಮಮ ಪ್ರದ್ಯೋತವಯ್ಯಯ್ಯ ಭೀ ।
ಕರವಾಹಾ ಛಿಳಿಛಿಳಿಲ್ ಛಿಟಿಲ್ ಛಲರೆ ಭಾಳಾಭೀಳಮೆಂದೆಂದು ನಿ
ರ್ಜರಲೋಕಂ ಬೆಱಗಾಗೆ ಸುಟ್ಟುದು ವಿರೂಪಾಕ್ಷಾಕ್ಷಿ ಕಂದರ್ಪನಂ ॥ ೫೧

ಕಂ॥ ಸಂದಣಿಸಿ ಪತ್ತಿದುರಿ ಘುರಿ
ಲೆಂದುರುಪಿಡೆ ಬೇಗದಿಂದೆ ಉರಿದಾಕ್ಷಣದೊಳ್ ।
ಬೆಂದ ನುಲಿಯಂತೆ ಮದನಂ
ನಿಂದಿರೆ ಕಂಡಭವನೆಯ್ದಿ ಮುಳಿದಂ ತುಳಿದಂ ॥ ೫೨

ಗಳ ಬಳಗವೇ ಘೋರ್ಗ್ಗರೆವಂತೆ ಅಬ್ಬರಿಸಿ ರತಿಪತಿಯನ್ನು ಅರೆನಿಮಿಷದಲ್ಲಿ ಸುಟ್ಟುಬಿಟ್ಟಿತು. ೪೯. ಗಗನದಲ್ಲಿ ಹರಿಸುರಪತಿಗಳು ಮಹೇಶ ! ಕರುಣಿಸು, ಇದು ಜಗತ್ತಿನ ಹಿತಕ್ಕಾಗಿ ಎಸಗಿದ್ದು !" ಎಂದು ಮೊರೆಯಿಡುತ್ತಿರುವಷ್ಟರಲ್ಲಿಯೇ ಘರಿಘರಿ ಭುಗಿಲೆಂಬ ಉರಿಯಲ್ಲಿ ಕಾಮ ಉರಿದು ಇದ್ದಿಲಾದನು ! ೫೦. ಹಣೆಗಣ್ಣಿನ ಉರಿ ಕುಸುಮ ಶರನನ್ನು ಕೂಡಲೇ ಆವರಿಸಿ ಸುಟ್ಟ ಆ ಕ್ಷಣದಲ್ಲಿ ಅದು ಹುಟ್ಟಿದ್ದು, ಹೋದದ್ದು ಹಾಗೂ ಸುಟ್ಟಿದ್ದು ಎಂಬುದು ಯಾವುದೂ ಕಾಣದಾಯ್ತು. ೫೧. ಈ ಅದ್ಭುತವನ್ನು ಕಂಡ ದೇವತಾಗಣ "ಅರರೆ ! ಭುಘುರ್ಭುಗು ! ಭಾಪುರೇ, ಭುಗು ಭುಗು ! ಪ್ರಜ್ವಾಲೆ ಮಜ್ಜಯ್ಯ, ದೇವುರೆಕೋಪಾನಲ ! ಅಮಮ ಕಿಡಿಗಳು ! ಅಯ್ಯಯ್ಯ, ಪ್ರದ್ಯೋತ ? ಭೀಕರ ! ಆಹಾಹಾ ! ಮುಂತಾಗಿ ಬೆರಗಾಗಿ ಮೊರೆಯಿಡುತ್ತಿರುವಾಗ ವಿರೂಪಾಕ್ಷಾಕ್ಷಿ ಕಾಮನನ್ನು ಸುಟ್ಟಿತು. ೫೨. ಗುಂಪು ಗೂಡಿ ಹೊತ್ತಿದ ಆ ಉರಿ ಘರಿಲ್ ಘರಿಲೆಂದು ಉರಿದೊಡನೆಯೇ ಮದನ ಬೆಂದ ನುಲಿ (ಹಗ್ಗ)ಯಂತೆ ಆದ. ಅದನ್ನು ಕಂಡ ಅಭವ ಕಡುಕುಪಿತನಾಗಿ ಅದನ್ನು ತುಳಿದ.

ಕಂ॥ ಜಯಶೀಲಂ ಪ್ರಭು ಪಾವಕ
ನಯನಂ ವಿಷಕಂಠನಹಿವಿಭೂಷಂ ಕೋಪೋ ।
ದಯನಭವಂ ಸ್ಮರಭಸ್ಮಾ
ವಯವಂ ತಾನಾದನತುಳನಪ್ರತಿಮಂ ॥ ೫೩

ವ॥ ಇಂತತಿ ಸ್ವತಂತ್ರಂ ಶತಪತ್ರನೇತ್ರಪೂಜಿತಪಾದಂ ಹೇಮಕೂಟಾಗ್ರದ ಮತಂಗಪರ್ವತದೊಳ್ ಮದನನಂ ಸುಟ್ಟುರುಪುತ್ತನಂಗ ಭಸ್ಮೋದ್ಧೂಳಿತ ಗಾತ್ರನಾಗಿ

ಕಂ॥ ಮುಂತಿರ್ದೊಪ್ಪುವ ಗಿರಿಜಾ
ಕಾಂತೆಯನೀಕ್ಷಿಸದೆ ನುಡಿಯಿಸದೆ ಸೋಂಕದೆ ನಿ ।
ಶ್ಚಿಂತಂ ಸ್ವತಂತ್ರನಹಿಧರ
ನಂತರ್ಧಾನಕ್ಕೆ ಸಂದನಲ್ಲಿಂ ಬಳಿಯಿಂ ॥ ೫೪

ಶಿವನಧಿಕಾಕ್ಷಕ್ರೋಧೋ
ದ್ಭವಶಿಖಿಯಿಂ ಮದನನುರಿಯೆ ರತಿಗತಿಶೋಕಂ ।
ಕವಿದಳ್ಕಿದಳಿಂದುಗುಪ
ಪ್ಲವಮಾಗೆ ಚಕೋರಿ ಕರಗಿ ಕೊರಗುವ ತೆಱದಿಂ ॥ ೫೫

ವ॥ ಇಂತು ಮನಮಳ್ಕಿ ತನು ಬಳ್ಕಿ ಕೋಡಿ ಕರಣಂ ಬಾಡಿ ಮತಿ ಕೆಟ್ಟು, ರತಿದೇವಿಗತಿ ದುಃಖಂ ಪುಟ್ಟಿ ನಿಲಲಾಱದೆ ಕೊರಗುತುಂ ಪರಿದು ಬಂದು

೫೩. ಜಯಶಾಲಿಯಾದ ಆ ಪ್ರಭು, ಬೆಂಕಿಗಣ್ಣ, ನಂಜುಗೊರಳ, ನಾಗಭೂಷಣ ಶಿವನು ಕೋಪಗೊಂಡು ಮದನ ಭಸ್ಮವನ್ನು ಅಂಗಾಂಗಗಳಿಗೆ ಲೇಪಿಸಿಕೊಂಡು ಅಪ್ರತಿಮನೆನಿಸಿದ. ವ॥ ಹೀಗೆ ಸರ್ವಸ್ವತಂತ್ರನೂ ಕಮಲಾಕ್ಷ (ವಿಷ್ಣು) ಪೂಜಿತಪಾದಾರವಿಂದನೂ ಆದ ಶಿವ ಮತಂಗ ಪರ್ವತದಲ್ಲಿ ಕಾಮನನ್ನು ಸುಟ್ಟು ಅನಂಗಭಸ್ಮವನ್ನು ಮೈಗೆಲ್ಲ ಬಳಿದುಕೊಂಡು ೫೪. ನಿಶ್ಚಿಂತನೂ ನಾಗಾಭರಣನೂ ಆದ ಶಿವನು ಎದುರಿಗೇ ನಿಂತಿದ್ದ ಅಗಜೆಯನ್ನು ಕಣ್ಣೆತ್ತಿ ನೋಡಲಿಲ್ಲ, ಮಾತನಾಡಿಸಲಿಲ್ಲ, ಮುಟ್ಟಲೂ ಇಲ್ಲ ; ಕೂಡಲೇ ಅಲ್ಲಿ ಮರೆಯಾದ! ಆ ಬಳಿಕ ೫೫. ಪರಮೇಶ್ವರನ ಕ್ರೋಧದಿಂದ ಅವನ ಹಣೆಗಣ್ಣಿನಿಂದ ಒಗೆದ ಉರಿಯಿಂದ ಮದನ ದಗ್ಧನಾದ. ಇದರಿಂದ ರತಿಗೆ ಶೋಕಕವಿಯಿತು ; ಅವಳು ಚಂದ್ರನಿಗೆ ಗ್ರಹಣ ಹಿಡಿದಾಗ ಚಕೋರಿಯು (ಕೇವಲ ಬೆಳದಿಂಗಳಿಂದಲೇ ಜೀವಿಸುವ) ಕರಗಿಕೊರಗುವಸ್ಥಿತಿ ರತಿಗೂ ಒದಗಿತು. ವ॥ ಹೀಗೆ ರತಿಯ ಮನ ಅಳುಕಿತು, ತನು ಬಳುಕಿತು, ಕರಣಗಳು ಬಾಡಿದವು, ಬುದ್ಧಿ ವಿಕಲವಾಯಿತು, ಅವಳು ಅತಿ ದುಃಖಿತಳಾಗಿ ನಿಲ್ಲಲಾರದೆ ಓಡಿಬಂದು,

ಕಂ॥ ಬೆಂದಿರ್ದ ಕಾಮನಂ ಕಂ
ಡಂದಳಲೊಳಗೇಱಿ ನುಡಿಯಲಱಿಯದೆ ನಿಲೆ ಶೋ ।
ಕಂ ದಳಮೇಱುತೆ ಮೀಱುತೆ
ಸಂದಣಿಸುತ್ತಳಿಸಿತಸ್ತ್ರರತಿಯಂ ರತಿಯಂ ॥ ೫೬

ವ॥ ಅದೆಂತೊಡೆ

ಕಂ॥ ಎತ್ತಣ ಹರನೆತ್ತಣ ತಪ
ಮೆತ್ತಣ ತಾರಕನ ಬಾಧೆ ಎತ್ತಣ ಬಿಸುಗಣ್ ।
ಎತ್ತಣುರಿ ಎತ್ತಣೆರವಿದು
ಎತ್ತಣ ಕೋಟಲೆಯನೆನಗೆ ಮಾಡಿದೆ ಮದನಾ ॥ ೫೭

ಎಳೆಯನೆ ಸುಕುಮಾರನೆ ಸದ
ಮಳನೆ ಸುಖಪ್ರದನೆ ಸೊಬಗೆ ಸುರತರುವೇ ತತ್ ।
ಫಳಮೆ ಸುಧಾರಸಮೇ ನಿ
ನ್ನಳವಱಿಯದೆ ನೊಸಲ ಕಣ್ಣ ಮುಸುಕಂ ತೆಱೆದಯ್ ॥ ೫೮

ಅಸ್ವಪ್ನರನತಿಘೋರ ತ
ಪಸ್ವಿಗಳನಪಾರಮಹಿಮರಂ ವಿಮಳಾಚಾ ।
ರಾಸ್ವಾದಿಗಳಂ ಗೆಲ್ದ ಮ
ನಸ್ವಿ ಲಲಾಟಾಗ್ನಿಗೆಂತು ಸವಿದುತ್ತಾದಯ್ ॥ ೫೯

ಕಂತುವೆ ನೀನಿಂತಾದೊಡ
ದೆಂತುಳಿವೆನದೆಂತು ನಿಲ್ವೆನೆಂತೊಪ್ಪುವೆನಿ ।

೫೬. ಬೆಂದಿರುವ ಕಾಮನನ್ನು ಕಂಡು, ರತಿಯು ದುಃಖಾತಿರೇಕದಿಂದ ಏನೂಮಾತ ನಾಡಲಾರದೆ ಇರಲು, ಅವಳ ಶೋಕವು ಚಿಗುರಿ, ಮಿತಿಮೀರಿ, ಒಟ್ಟುಗೂಡಿ, ಮುದನಡ ಗಿದ ರತಿಯನ್ನು ಅಳುವಂತೆ ಮಾಡಿತು! ೫೭. ಎಲೈಮದನಾ! ಯಾವ ಹರ, ಅದಾವ ತಪಸ್ಸು, ಅದೆಂತಹ ತಾರಕನಬಾಧೆ, ಎಂಥ ಹಣೆಗಣ್ಣು, ಎಲ್ಲಿಯ ಉರಿ, ಎಂಥ ಸ್ಥಿತಿ, ನೀನು ಅದೆಂತಹ ಕೋಟಲೆಯನ್ನು ನನಗೆ ತಂದೊಡ್ಡಿದೆ! ೫೮, ಎಳೆಯನೆ, ಸುಕುಮಾ ರನೆ, ಸದಮಳನೆ, ಸುಖದಾಯಕನೆ, ಸೊಬಗೇ ಕಲ್ಪವೃಕ್ಷವೆ, ಕಲ್ಪತರು ಫಲವೆ, ಅಮೃತ ರಸವೆ, ನೀನು ನನ್ನ ಶಕ್ತಿಯನ್ನು ಅರಿಯದೆ ಹಣೆಗಣ್ಣು ತೆರೆಯಲು ಅವಕಾಶ ಕೊಡ ಬಹುದೆ? ೫೯. ನೀನು, ದೇವತೆಗಳನ್ನು, ಮಹಾತಪಸ್ವಿಗಳನ್ನು, ಅಪಾರ ಮಹಿಮಾ ಶಾಲಿಗಳನ್ನು, ನಿರ್ಮಲ ಚಾರಿತ್ರರನ್ನು ಗೆದ್ದ ಮಹಾವೀರ! ಆದರೆ ಇಂಥನವರು ಈ ಹಣೆ ಗಣ್ಣಿಗೆ ಹೇಗೆ ತುತ್ತಾದೆ! ೬೦. ಎಲೈಕಂತುವೆ, ನೀನು ಹೀಗಾದ ಮೇಲೆ ನಾನು ಇನ್ನು

ನ್ನೆಂತುಸಿರ್ವೆನೆಂತು ಬಾಳ್ವೆನ
ದೆಂತೀಕ್ಷಿಪೆನೆಂತು ಪೋಪೆನೆಂತಾನಿರ್ಪೆಂ ॥ ೬೦

ಭಾವಿಸಿ ಭವನಂ ಕುಸುಮಾ
ಸ್ತ್ರಾವಳಿಯಿಂದೆಚ್ಚು ಗೆಲ್ವೆಯೆಂದಿರ್ದೆನಿದಿಂ ।
ತೋಪೋ ನಿಟಲಾಗ್ನಿಯಿಂದಂ
ಬೇವುದನಾನೆತ್ತ ಬಲ್ಲೆನಲರ್ವಿಲ್ಲರಸಾ ॥ ೬೧

ಶಾ॥ ಲಾವಣ್ಯಂ ಲಯವಾಯ್ತು ವಿಭ್ರಮವಿಲಾಸಂ ಮಾಯವಾಯ್ತಕ್ಕಟಾ
ಜೀವಂ ಬೆಂದುದು ಚೆಲ್ವು ಸತ್ತುದು ಸುಖಂ ಹಾಳಾಯ್ತು ಕಂದರ್ಪ ಸದ್ ।
ಭಾವಂ ಭಸ್ಮಮದಾಯ್ತು ಮೆಯ್ಮೆ ಮಡಿಯಿತ್ತುತ್ಸಾಹವಿಂಗಿತ್ತದಿ
ನ್ನೇವೇಳ್ವೆಂ ನಡೆದೆತ್ತ ಸಾರ್ವೆನಿಳೆಗಿನ್ನೇನಪ್ಪೆನೆಂತಿರ್ಪೆನೋ ॥ ೬೨

ಕಂ॥ ಎಲ್ಲಿತ್ತೋ ಶಶಿಯ ಬೆಳ್ಗೊಡೆ
ಎಲ್ಲಿತ್ತೋ ಪೂತನೂತ್ನ ಚೂತಗಜಂ ತಾ ।
ನೆಲ್ಲಿತ್ತೊ ಪಂಚಬಾಣಮ
ದೆಲ್ಲಿತ್ತೋ ಕುಸುಮ ಚಾಪ ವಿಭ್ರಮಮಿಾಗಳ್ ॥ ೬೩

ಎಲೆ ಸುರತಕಾಮಧೇನುವೆ
ಎಲೆ ಸುರತಾಂಬೋಧಿಚಂದ್ರ ಎಲೆ ಸುರತಮಹೋ ।
ತ್ಪಲ ಸೂರ್ಯ ಎಲೆ ಸುರತಸಂ
ಕುಲಪರಮಾರಾಧ್ಯ ಎತ್ತಡಂಗಿದೆ ಮದನಾ ॥ ೬೪

ಹೇಗೆ ಉಳಿಯಲಿ, ಹೇಗೆ ನಿಲ್ಲಲಿ, ಹೇಗೆ ಒಪ್ಪಲಿ, ಹೇಗೆ ಬಾಳಲಿ, ಏನುಹೇಳಲಿ, ಹೇಗೆ ನೋಡಲಿ, ಎಲ್ಲಿಗೆ ಹೋಗಲಿ, ಅಯ್ಯೋ! ೬೧. ನೀನು ಭವನನ್ನು ಭಾವಿಸಿ ಹೂಬಾಣವನ್ನು ಬಿಟ್ಟು ಗೆಲ್ಲುವೆ ಎಂದು ನಾನು ಭಾವಿಸಿದ್ದೆ; ಆದರೆ ಅಯ್ಯೋ! ನೀನು ಆ ಉರಿಗಣ್ಣಿಗೆ ಬೆಂದು ಹೋಗುವೆ ಎಂದು ಎಲೆ ಅರಸಾ! ನಾನೆಲ್ಲಿ ಬಲ್ಲೆ! ೬೨. ನೀನು ಭಸ್ಮವಾದ ಮೇಲೆ ಲಾವಣ್ಯವೇ ಲಯವಾಯಿತು, ವಿಭ್ರಮ ವಿಲಾಸಗಳು ಮಾಯವಾದವು, ಅಕ್ಕಟಾ! ಚೆಲುವು ಬೆಂದು ಹೋಯಿತು, ಸುಖ ಸತ್ತಿತು, ಹೇ ಕಂದರ್ಪ, ಸದ್ಭಾವವು ಹಾಳಾಯಿತು, ಮಹಿಮೆ ಭಸ್ಮವಾಯಿತು, ಉತ್ಸಾಹ ಇಂಗಿತು, ಅಯ್ಯೋ, ಇನ್ನು ಏನು ಹೇಳಲಿ, ಎಲ್ಲಿ ಹೋಗಲಿ! ಇನ್ನು ಈ ನೆಲದ ಮೇಲೆ ಹೇಗಿರಲಿ! ಈ ಜಗತ್ತಿಗೆ ನಾನು ಏನಾಗಲಿ? ೬೩. ನೀನೇ ಅಳಿದ ಮೇಲೆ ಈಗ ಆ ಶಶಿಯೆಲ್ಲಿ, ಬೆಳ್ಗೊಡೆಯೆಲ್ಲಿ, ಹೂಬಿಟ್ಟ ನೂತನ ಚೂತಗಜವೆಲ್ಲಿ, ಆ ಪಂಚಬಾಣಗಳೆಲ್ಲಿ, ಕುಸುಮಚಾಪ ಮುಂತಾದ ಆ ವಿಲಾಸಗಳು ಇನ್ನೆಲ್ಲಿ! ೬೪. ಎಲೈ ಸುರತಕಾಮಧೇನುವೆ, ಸುರತವೆಂಬ ಕಡಲಿಗೆ ಚಂದ್ರ

ಕಂ॥ ಲಕ್ಷ್ಮಿಗೆ ನೆಱೆ ಪುಟ್ಟಿರ್ದಖಿ
ಲಕ್ಷ್ಮಾಪತಿಯೆನಿಸಿ ಬಾಳ್ದು ಪುರಹರನ ಲಸತ್ ।
ಪಕ್ಷ್ಮಪುಟಾಗ್ರಂ ಬಿರ್ಚಿದ
ಸೂಕ್ಷ್ಮದ ಕಾಲದೊಳೆ ಘಳಿಲನುಳಿದಯ್ ಮದನಾ ॥ ೬೫

ಕೇಳಲೆ ಮನ್ಮಥ ಹಂಸೆಯ
ತೂಳದ ತಳ್ಪಂ ಕಠಂ ಕಠಿನಮೆಂದೀಗಳ್ ।
ಭಾಳಾಕ್ಷಿಯರಮನೆಯೊಳಾ
ಭೀಳದ ದಳ್ಳುರಿಯ ಮಂಚದೊಳ್ ಪವಡಿಸಿದಯ್ ॥ ೬೬

ವ॥ ಅಂತುಮಲ್ಲದೆ

ಕಂ॥ ಹಾ ಮದನ ಹಾ ಮನೋಹರ
ಹಾ ಮಕರಪತಾಕ ಹಾ ಮಹಾವಿಭ್ರಮ ಹಾ ।
ಹಾ ಮನ್ಮಥ ಹಾ ಸಮ್ಮದ
ಹಾ ಮತ್ಪ್ರಾಣೇಶ ಹಾ ವಿಳಾಸ ವಿನೋದಾ ॥ ೬೭

ಕುಸುಮಾಭರಣಾವಳಿಗಳ್
ಬಸಮಲ್ಲಂ ಪೊಱೆಯಿವೆಂಬ ಸುಕುಮಾರತೆಯೊಳ್ ।
ಬಿಸುಗಣ್ಣ ಮಿಸುಪಕೋಪದ
ಪೊಸತುಡಿಗೆಯನೆಂತು ಸೈರಿಸಿದೆ ಕಂದರ್ಪಾ ॥ ೬೮

ವ॥ ಮತ್ತಮಲ್ಲದೆ ಪಂಚಬಾಣನ ಸರ್ವಗುಣಂಗಳಂ ನೆನೆ ನೆನೆದು ಸೈರಿಸಲಾಱದೆ ಮತ್ತೆ ಮತ್ತೆ ಶೋಕಂಗೆಯ್ದು

ನಂತಿದ್ದವನೆ, ಸುರತಕಮಲಕ್ಕೆ ಸೂರ್ಯನಂತಿದ್ದವನೆ, ಸುರತ ರಸಿಕರಿಗೆ ಆರಾಧ್ಯಮೂರ್ತಿಯಾಗಿದ್ದವನೆ, ಮದನಾ, ಎಲ್ಲಿ ಅಡಗಿದೆ ! ೬೫. ಎಲೆ ಮದನನೆ, ನೀನು ಲಕ್ಷ್ಮೀದೇವಿಯ ನಚ್ಚಿನ ಮಗನಾಗಿ ಹುಟ್ಟಿ, ಅಖಿಲ ಲೋಕಾಧಿಪತಿಯೆನಿಸಿ ಬಾಳಿದೆ ; ಇಂಥ ನೀನು ಪುರಹರನ ಬೆಳಗುವ ಕಣ್ಣು ರೆಪ್ಪೆ ಬಿಚ್ಚಿದ ಕ್ಷಣಾರ್ಧದಲ್ಲಿ ಉರಿದು ಹೋದೆಯಲ್ಲವೆ ? ೬೬. ಎಲೆ ಮನ್ಮಥಾ, ನೀನು ಹಂಸಗಳ ತುಪ್ಪುಳಿನ ಹಾಸಿಗೆಯೇ ಬಹುಕಠಿನ ಎಂದು ಹೇಳುತ್ತಿದ್ದೆ ; ಅಂಥ ನೀನು ಇಂದು ಹಣೆಗಣ್ಣ ಅರಮನೆಯಲ್ಲಿ ಭಯಂಕರವಾದ ದಳ್ಳುರಿಯ ಮಂಚದಲ್ಲಿ ಮಲಗಿದೆಯಲ್ಲವೆ ? ೬೭–೬೮. ಹೇ ಕಂದರ್ಪ, ಹೂವಿನ ಒಡವೆಗಳೆ, ಸರಿಯಲ್ಲ, ಅವೆಲ್ಲ ಹೊರೆ, ಎನ್ನುವಷ್ಟು ಸುಕುಮಾರನೆನಿಸಿದ್ದ ನೀನು, ಬಿಸುಗಣ್ಣಿನ ಹೊಳೆವ ಕೋಪದ ಆ ಹೊಸ ತೊಡಿಗೆಯನ್ನು ಹೇಗೆ ಸಹಿಸಿದೆ ? ವ॥ ರತಿಯು ಮದನನ ಒಂದೊಂದು ಗುಣ

ಕಂ॥ ಪಸಿನಱಿಯದೆ ತೃಷೆಯಱಿಯದೆ
ದೆಸೆಯಱಿಯದೆ ಮದನ ಮದನ ಪಲವುಂ ಕಾಲಂ ।
ಕುಸುಮದೆ ಲಿಂಗಮನೊಸೆದ
ರ್ಚಸಿದ ಫಲಂ ಕಿರ್ಚಿನೊಳಗೆ ಬೇವಂತಾಯ್ತೇ ॥ ೬೯

ಸುರತ ಶ್ರಾಂತಿಯೊಳೀಷತ್
ಪರಿಸುಪ್ತಿಯನೆಯ್ದಿ ಸುಖಿದೊಳಾನಿರೆ ನೀಂ ಮೆಯ್ ।
ಗರೆನೆನ್ನನಂದು ನೋಯಿಪ
ಪರಿ ತಾಂ ದಿಟಮಾದುದಿಂದು ಮನ್ಮಥ ಭೂಪಾ ॥ ೭೦

ಬೆಳಗಾಯ್ತುತ್ಪವಡಿಸು ಬೆಳ
ಬೆಳಗುವ ಮಣಿಮುಕುರಮಂ ನಿರೀಕ್ಷಿಸು ಪಂಸಾ ॥
ವಳಿಯಂ ನಡೆಪಾಡಿಸು ಕೋ
ಕಿಳನಾದಮನಾಲಿಸುಸಿರದಿರ್ಪರೆ ಮದನಾ ॥ ೭೧

ಎಂದುಂ ಮುಳಿದೊಡೆ ತಿಳಿವಂ
ಮುಂದಿಟ್ಟಲ್ಲದೆ ಮದೀಶ ಮುಳಿಸಿಲ್ಲಿಲ್ಲೀ ।
ಯಂದಂ ಪೊಸತಿಂದಿನ ಮುಳಿ
ಸೆಂದಿನ ಮುಳಿಸಿನವೊಲಲ್ತು ಮದನನೃಪಾಲಾ ॥ ೭೨

ಪನ್ನಗಭೂಷನ ವಿಷಸಂ
ಪನ್ನನ ನಿಷ್ಠುರ ಗುಣಂಗಳುರಿಪುವುದುಚಿತಂ ।

ವನ್ನೂ ನೆನೆದು ತಾಳಲಾರದೆ ಮತ್ತೆ ಮತ್ತೆ ಶೋಕಿಸಿ, ೬೯. ಹೇ ಮದನ, ಹಸಿವೆನ್ನದೆ, ಬಾಯಾರಿಕೆಯೆನ್ನದೆ, ದಿಕ್ಕೆನ್ನದೆ, ಹಲವುಕಾಲ ಹೂಗಳಿಂದ ಲಿಂಗವನ್ನು ಭಕ್ತಿಯಿಂದ ಪೂಜಿಸಿದ ಫಲ ಕಿಚ್ಚಿನಲ್ಲಿ ಬೇಯುವಂತಾಯಿತಲ್ಲವೆ ? ೭೦. ಸುರತಾಂತ್ಯದಲ್ಲಿ ನಾನು ಒಂದಿಷ್ಟು ನಿದ್ದೆಹೋಗಿ ಸುಖಿಸುತ್ತಿರುವಾಗ ನೀನು ಮರೆಯಾಗಿ ನನ್ನನ್ನು ಹಿಂದೆ ನೋಯಿಸುತ್ತಿದ್ದುದು ಇಂದು ನಿಜವೇ ಆಯಿತಲ್ಲವೆ ? ಆಯ್ಯೋ ಮನ್ಮಥಭೂಪಾ ! ೭೧. ಬೆಳಗಾಯಿತು ಏಳು, ತೊಳಗುವ ಮಣಿ (ಕನ್ನಡಿ) ಮುಕುರವನ್ನು ನೋಡು, ಹಂಸೆಗಳನ್ನು ಆಡಿಸು, ಕೋಗಿಲೆಯ ನಾದವನ್ನು ಕೇಳು, ಹೇ ಮದನಾ, ಮಾತನಾಡದೆ ಸುಮ್ಮನಿರುವುದೇ ! ೭೨. ಹೇ ಮದೀಶ, ಹಿಂದೆ ನೀನು ಮುನಿದಾಗ ಇದ್ದ ವಿಷಯವನ್ನು ಮುಂದಿಡದೆ ನೀನು ಮುನಿಸು ಅಳಿಯುತ್ತಿರಲಿಲ್ಲ ; ಆದರೆ ಇಂದಿನ ಮುನಿಸು ಅಂತಹುದಲ್ಲ ; ಇದು ಹೊಸ ಬಗೆಯ ಮುನಿಸಲ್ಲವೆ ಮದನ ಭೂಪಾಲಾ ! ೭೩. ಸರ್ಪಭೂಷಣ, ವಿಷಕಂಠ, ಅಂತಹ ಶಿವನ ನಿಷ್ಠುರಗುಣಗಳು ನಿನ್ನನ್ನು ಉರಿಸಿದ್ದು ಸರಿ ! ಆದರೆ ಹೇ ಮದನರಾಜಾ !

ನಿನ್ನಂ ನಿನ್ನೀ ಸದ್ಗುಣ
ಮೆನ್ನಂ ನೆರೆದುರಿಪಲೇಕೆ ಮನ್ಮಥರಾಜಾ ॥ ೭೩

ವ॥ ಎಂದು ಕುಸುಮ ಕೋದಂಡನ ಸುಧಾಮಯ ಸದ್ಗುಣಂಗಳನೆಣಿಸಿಯೆಣಿಸಿ ಪಲುಂಬಿ ಪಂಬಲಿಸಿ ಮತ್ತೆ ಮತ್ತೆ ಮಾಣದೆ

ಚಂ॥ ಮದಕರಿ ಎತ್ತಪೋದೆ ವರಮೂರ್ತಿ ಆದೆತ್ತಲದೃಶ್ಯಮಾದೆ ಮದ್
ವದನಸರೋಜಭೃಂಗನೆ ಅದೆತ್ತಲಡಂಗಿದೆ ನೀನದೆತ್ತ ಮ
ಳ್ಗಿದೆ ಮಧುಮಿತ್ರ ಎತ್ತ ಲಯವಾದೆ ಮದೀಶ್ವರ ಎತ್ತಣ ಕ್ರಮ
ಕ್ಕೊದವಿದೆ ಎತ್ತ ಸಾರ್ದೆ ಕಳಿದೆತ್ತಲಣಂ ತವಿಲಾದೆ ಮನ್ಮಥಾ ೭೪

ವ॥ ಎಂದಿಂತು ಶೋಕಿಸುತ್ತಂ ವ್ಯಾಕುಲಚಿತ್ತೆ ವಲ್ಲಭರಹಿತೆ ಸಕಳಸುಖವಿರಹಿತೆಯಪ್ಪ ರತಿದೇವಿ ನಿಂದಿರ್ದು ಬಿಸುಸುಯ್ದು ಬಸಿಱಂ ಹೊಸೆದು ಕೆಯ್ಯೆತ್ತಿ ದೆಸೆ ದೆಸೆಯಂ ನೋಡಿ,

ಕಂ॥ ಮೊಱೆಯೋ ಮೊಱೆಯೋ ಶಿವಧೋ
ಕಱೆಗೊರಲನ ಕಣ್ಣ ದಾಳಿ ಕುಸುಮಾಯುಧನಂ ।
ನೆಱೆ ಮುತ್ತಿತ್ತಯ್ಯೋ ಇದ
ನಱೆವವರಿಲ್ಲಕ್ಕಟಾ ಕೃಪಾಳುಗಳಿಲ್ಲಾ ॥ ೭೫

ನೆಲನೇ ನಭವೇ ಶಿಖಿಯೇ
ಜಲವೇ ರವಿಯೇ ಶಶಾಂಕನೇ ಮಾರುತನೇ ।

ನಿನ್ನ ಸದ್ಗುಣಗಳು ನನ್ನನ್ನು ಹೀಗೇಕೆ ಉರಿಸುತ್ತಿವೆ ? ವ॥ ಹೀಗೆ ಕುಸುಮಾಯುಧನ ಅಮೃತಮಯವಾದ ಸದ್ಗುಣಗಳನ್ನು ನೆನೆ ನೆನೆದು ಹಲುಬಿ ಹಂಬಲಿಸಿ ಮತ್ತೆ ಮತ್ತೆ ದಿಕ್ಕುಗಾಣದೆ—೭೪. ಹೇ ಮದಕರಿಯಂತಿದ್ದ ನೀನು ಅದೆಲ್ಲಿಗೆ ಹೋದೆ, ವರಮೂರ್ತಿ ಎಲ್ಲಿ ಮಾಯವಾದೆ, ನನ್ನ ಮುಖಕಮಲಕ್ಕೆ ದುಂಬಿಯದ್ದಂತಿವನೆ ಎಲ್ಲಿ ಅಡಗಿದೆ ? ಮಧು ಮಿತ್ರ ಎಲ್ಲಿ ಅಡಗಿದೆ, ಎನ್ನೊಡೆಯ ಎಲ್ಲಿ ಲಯವಾದೆ, ಇದು ಅಕ್ರಮವಲ್ಲವೆ ? ಎಲ್ಲಿ ಹೋದೆ ? ಎಲ್ಲಿ ಲಯವಾದೆ ? ಮನ್ಮಥ ! ವ॥ ಹೀಗೆ ವ್ಯಾಕುಲ ಚಿತ್ತಳೂ ಪತಿಯಿಲ್ಲದ ವಳೂ ಆದ ರತೀದೇವಿ ಬಹುವಾಗಿ ಶೋಕಿಸುತ್ತಾ ನಿಟ್ಟುಸಿರು ಬಿಟ್ಟು ಹೊಟ್ಟೆಯನ್ನು ಹೊಡೆದುಕೊಳ್ಳುತ್ತ ಕೈಯೆತ್ತಿ ದಿಕ್ಕು ದಿಕ್ಕುಗಳನ್ನು ನೋಡಿ ೭೫. ಅಯ್ಯೋ ! ನಂಜು ಗೊರಲನ ಕೆಂಗಣ್ಣಧಾಳಿಯು ಕುಸುಮಶರನನ್ನು ಆವರಿಸಿತಲ್ಲಾ ! ಇದನ್ನು ವಿಚಾರಿಸುವ ದಯಾಳುಗಳೇ ಇಲ್ಲವಾಯಿತಲ್ಲಾ ! ಅಯ್ಯೊ ! ಶಿವಧೊ ! ನನಗಿನ್ನಾರು ದಿಕ್ಕು ? ೭೬. ಅಯ್ಯೋ, ನೆಲವೇ, ಗಗನವೇ, ಬೆಂಕಿಯೋ, ಜಲವೇ, ರವಿ–ಶಶಿಗಳೇ ವಾಯುವೇ ಬಲ

ಒಲವಳಿದವಳನನಾಥೆಯ
ನಲಘುತರಾಘೌಘೆಯಂ ನಿರೀಕ್ಷಿಸಿರೆನ್ನಂ ॥ ೭೬

ವನದೇವತೆಯರಿರಾ ನಂ
ದನದೇವತೆಯರಿರ ದೆಶೆಯ ದೇವತೆಯರಿರಾ ।
ಘನಪಾಪಂ ಪುದಿದಿರ್ದೀ
ವನಿತೆಯನೊಳಕೊಳ್ಳಿರೇ ಅನಾಥೆಯನೆನ್ನಂ ॥ ೭೭

ವ॥ ಎಂದಿಂತು ದೆಸೆದೆಸೆಗೆ ಕರೆಕರೆದು ಬಾಯಾಱಿ ಬಲ್ಪಳಿದು ನಿಂದಿರಲಾಱದೆ ಕಾಲ್ ಕುಪ್ಪಳಿಸಿ ಭೋಂಕನೆ ಕುಳ್ಳಿರ್ದು ತನ್ನೊಳಗೆ ತೆಕ್ಕನೆ ತೀವಿ ತೆರೆವಸುಗುವ ಶೋಕರಸಮುರ್ಕಿ ಪೊಱಪೊಣ್ಮುದೆಂಬಂತೆ ಕಣ್ಣನೀರ್ ಕಱಿದೊತ್ತರಿಸಿ ಪರಿಯೆ ಮತ್ತೆಮತ್ತಳುತ್ತಂ ಗಂಟಲುರ್ಬಿ ಸೆರೆಬಿಗಿದು ಕಣ್ ಕೆಂಪೇರಿ ಮಿಕ್ಕು ನೆಗೆವ ಬಿಕ್ಕಿನೊಳ್ ಬೆರೆಸಿ ನಾನಾವಿಧದಿಂ ನಾಲಗೆಯೊಳ್ ಪೊಱಮಡುವ ಶಿಥಿಲಾಕ್ಷರಂ ಶೋಕಾಗ್ನಿಯೊಳ್ ಬೆಂದುಗಿದು ಸೀದು ಸೀಕರಿವೋಗಿ ಪೊರಳ್ದು ಪುಳ್ದು ಬರೆ ನೆಲೆಗೊಂಡ ಗದ್ಗದದಿಂ ಪಲುಂಬಿ ಪಳಯಿಸುತುಂ ಮತ್ತಂ ಮನ್ಮಥನುರಿದ ದುಃಖಾನಳನಿಂ ಚಿತ್ತಂ ಹೊತ್ತಿಯಹಂಕಾರಂ ಹೊಗೆದು ಬುದ್ಧಿಯುರಿದು ಮನಂ ಬೆಂದುರಿಯಿಉಸುರನುಸುರಿಕ್ಕಿ ಕೆಲಬಲದ ಮುಂದಣ ಗುಲ್ಮಲತೆಗಳ್ ಘಳಿಲನೆ ಘಱಘಱಿಲನುರಿಯೆ ವಶಮಲ್ಲದ ದುಃಖದಿಂ ಬಿಸುಸುಯ್ಯುತ್ತುಂ ಮತ್ತಂ ಗ್ರಹಣಕ್ಕಂಜಿ ಗಗನತಳದ ಮೃಗಧರಬಿಂಬಂ ಪೊದವಿಯೊಳ್ ಬಿಳ್ದೊಡನೊಡನೆ ಬಿಡದೆ ಬೆಂಬತ್ತಿ ಕಡುವೇಗದಿಂ ಬಂದುರ್ವಿಯೊಳ್ ಸರ್ವಗ್ರಾಸಂಗೊಂಡು ನೆಲದೊಳಿ

ವಳಿದು ಅನಾಥೆಯಾದ ಪಾಪಿಷ್ಠಳಾದ ನನ್ನನ್ನು ನೋಡಿ, ರಕ್ಷಿಸಿರಿ! ೭೭. ಎಲೌ ವನದೇವತೆಗಳೆ, ನಂದನವನ ದೇವತೆಗಳೇ, ದಿಗ್ದೇವತೆಗಳೆ, ಮಹಾಪಾಪಿಷ್ಠೆಯೂ ಅನಾಥೆಯೂ ಆದ ನನ್ನನ್ನು ರಕ್ಷಿಸಿರಿ. ವ|| ಹೀಗೆ ರತಿದೇವಿಯು ದಿಕ್ಕು ದಿಕ್ಕಿಗೆ ಕರೆ ಕರೆದು ಬಾಯಾರಿ ಬಸವಳಿದಳು, ಒಲವಳಿದು ಅವಳು ನಿಂತಿರಲಾರದೆ ಕಾಲುಸೋತು ಕುಳಿತಳು; ತನ್ನೊಳಗೆ ಉಕ್ಕಿಬರುವ ಶೋಕರಸವು ಹೊರಹೊಮ್ಮಿತೋ ಎಂಬಂತೆ ಕಣ್ಣೀರು ಕೋಡಿವರಿಯಿತು; ಮತ್ತೆ ಮತ್ತೆ ಅಳುತ್ತ ಅವಳ ಗಂಟಲು ಬಿಗಿಯಿತು; ಅತ್ತು ಅತ್ತು ಕಣ್ಣು ಕೆಂಪೇರಿತು; ಬಿಕ್ಕಿ ಬಿಕ್ಕಿ ಅಳುವಾಗ ಹೊರಬರುವ ಶಿಥಿಲಾಕ್ಷರಗಳು ಶೋಕಾಗ್ನಿಯಲ್ಲಿ ಬೆಂದು ಸೀದು ಸೀಕರಿವೋದುವೊ ಎಂಬಂತೆ ತಡೆತಡೆದು ಬರುತ್ತಿದ್ದುದರಿಂದ ಕಂಠ ಗದ್ಗದವಾಗಿತ್ತು; ಮನ್ಮಥವಿಯೋಗದಿಂದುಂಟಾದ ದುಃಖಾಗ್ನಿಯಿಂದ ಅವಳ ಮನಸ್ಸು ಹೊತ್ತಿತ್ತು; ಅಹಂಕಾರಕ್ಕೆ ಹೊಗೆ ಹತ್ತಿತು, ಬುದ್ಧಿ ಉರಿದಿತ್ತು, ಅವಳ ಮನಸ್ಸಿನ ಧಗೆಗೆ ಅಕ್ಕಪಕ್ಕದ ಪೊದೆಬಳ್ಳಿಗಳು ಒಣಗಿ ಉರಿದು ಬಿದ್ದವು; ಮೇರೆ ಮೀರಿದ ದುಃಖದಿಂದ ಅವಳು ಬಿಸುಸುಯ್ದಳು; ಗ್ರಹಣಕ್ಕೆ ಹೆದರಿದ ಚಂದ್ರಬಿಂಬವು ಗಗನದಿಂದ ನೆಲಕ್ಕೆ ಬೀಳಲು ರಾಹುಮಂಡಲವು (ವೇಗದಿಂದ) ಅದರ ಬೆಂಬತ್ತಿ ನೆಲಕ್ಕಿಳಿದು ಅದನ್ನು ಸರ್ವಗ್ರಾಸವಾಗಿಸಿ

ಟ್ಟೊರೆಸುವ ರಾಹುಮಂಡಲದಂತೆ ಕೆದಱಿದ ಮುಡಿಕಟ್ಟು ಪೆಚ್ಚುವರೆದು ಮುಚ್ಚಿ ಮುಸುಂಕೆ ಭಾಳತಳಮಂ ಭೂತಳದೊಳಿಟ್ಟಾದ ನೋವಿಂ ತೇದುಕೊಳುತ್ತುಂ ಇಂತು ಕೇಳ್ವ ಪಶುಪಕ್ಷಿಮೃಗ ಗುಲ್ಮಲತೆವೃಕ್ಷಾವಳಿಗಳ್ಗೆ ಕರುಣಂ ಪುಟ್ಟುವಂತೆ ರತಿಯತಿಶೋಕಂಗೆಯ್ದು ದುಃಖಿಪ್ರಳಾಪಂಗೆಯ್ದು ಮೆಯ್ಯಿಕ್ಕಿ ಬಸಿಱಿಂ ಪೊಸೆದು ಚೇತನಂಗೆಟ್ಟು ಭೂತಳದೊಳ್ಪಿಳ್ದು ಕೆಚ್ಚುಗಟ್ಟಿದಳಱಿಂ ಮೂರ್ಛೆ ವೋಗಿ ಕೊರಲೊಳ್ ಹರಣಮಂ ಕಣ್ಣೊಳ್ ಕಾರ್ಪಣ್ಯಮಂ ಪಡಿಮೊಗದೊಳ್ ನಿಡುಸುಯ್ಯಂ ನಾಲಗೆಯೊಳ್ ವಿಕಳತೆಯಂ ಮನದೊಳ್ ಪರವಶತೆಯಂ ತನುವಿನೊಳ್ ಚೇತನಮಂ ಪಿಡಿದು ಗಗನದಿಂ ಬಿಳ್ದಂತೆ ದುಃಖದೊಳಳ್ದಂತೆ ದೈನ್ಯದೊಳೆಳ್ದಂತೆ ಶೋಕಂ ಹೊಸೆದು ಬಿಸುಟಂತೆ ದುಃಖಂ ರೂಪುಗೊಂಡಂತೆ ಮಱಿದೊಱಗಿರ್ದಾಗಳ್,

ಚಂ॥ ಗಿರಿಸುತೆಬಂದು ಕಂಡು ಬೆರಗಾಗಿ ಕೃಪಾಕರಚಿತ್ತೆ ಪತ್ತೆ ಸಾ
ರ್ದು ರತಿಯ ಮೆಯ್ಯುಮಂ ಪೊಗಮುಮಂ ತಡವುತ್ತಿರೆ ಸೋಂಕಿನಿಂದೆ ಚೇ
ತರಿಸುತೆ ಕಣ್ಗಳಂ ತೆಱೆದು ಪಾರ್ವತಿಯಂ ನಡೆ ನೋಡುತಂ ದಯಾ
ಪರೆ ಭುವನೈಕಮಾತೆ ಪದೆದೀಕ್ಷಿಪುದೆನ್ನಯಿ ದುಃಖದೊಪ್ಪಮಂ ॥ ೭೮

ವ॥ ಎಂದು ನುಡಿದು ನಿಲಲಾಱದೆ

ಕಂ॥ ಗಿರಿಜೆಯ ಪದಯುಗದೊಳ್ ರತಿ
ಪೊರಳ್ದು ಪುಯ್ಯಲ್ಚಿ ಪೆರ್ಚಿದಳಲಿಮ್ಮಡಿಸು ।

ಕೊಂಡಂತೆ ಅವಳ ಮುಡಿಯು ಕೆದರಿ ಮುಖಮಂಡಲವನ್ನು ಮುತ್ತಿತ್ತು. ಅವಳು ತನ್ನ ಹಣೆಯನ್ನು ನೆಲಕ್ಕೆ ಹಾಕಿ ಬಿದ್ದು ಹೊರಳಾಡುತ್ತಿದ್ದಳು ಎಂದು ಭಾವ. ಸುತ್ತಮುತ್ತಲಿನ ಪಶುಪಕ್ಷಿಮೃಗಗಳು, ಮತ್ತು ಬಳ್ಳಿಪೊದೆಗಳಿಗೂ ಕೂಡ ರತಿಯದುಃಖವನ್ನು ಕಂಡು ಕರುಣೆಉಕ್ಕುವಂತಾಗಿತ್ತು, ಅತಿ ಉದ್ವೇಗದಿಂದ ರತಿಯು ರೋದಿಸುತ್ತಾ ಮೈಯಿಕ್ಕಿ ಹೊಟ್ಟೆಹೊಡೆದುಕೊಂಡು ಎಚ್ಚರತಪ್ಪಿ ನೆಲದಲ್ಲಿ ಬಿದ್ದು ಉತ್ಕಟದುಃಖದಿಂದ ಮೂರ್ಛೆ ಹೋದಳು. ಕಡೆಗೆ ಅವಳು ಕೊರಳಲ್ಲಿ ಪ್ರಾಣವನ್ನು ಕಣ್ಣಲ್ಲಿ ಕಾರ್ಪಣ್ಯವನ್ನು ಮುಖ ದಲ್ಲಿ ನಿಟ್ಟುಸಿರನ್ನು ನಾಲಗೆಯಲ್ಲಿ ವಿಕಳತೆಯನ್ನು ಮನಸ್ಸಿನಲ್ಲಿ ಪರವಶತೆಯನ್ನು ತನುವಿನಲ್ಲಿ ಚೈತನ್ಯವನ್ನು ಹಿಡಿದು ಮುಗಿಲಿನಿಂದ ಬಿದ್ದಂತೆ, ದುಃಖದಲ್ಲಿ ಮುಳುಗಿದಂತೆ, ದೈನ್ಯದಲ್ಲಿ ತೊಯ್ದಂತೆ ಶೋಕವು ಕವಿದು ಎಸೆದಂತೆ ದುಃಖವೇ ಮೈವೆತ್ತಂತೆ ನಿಃಶ್ಚೇಷ್ಟಿತಳಾದಳು. ೭೮. ಅಷ್ಟರಲ್ಲಿ ಕೃಪಾಳುವಾದ ಅಗಜೆ ಅಲ್ಲಿಗೆ ಬಂದು ರತಿಯ ಸ್ಥಿತಿಯನ್ನು ಕಂಡು ಬೆರ ಗಾದಳು. ಆಕೆ ರತಿಯ ಬಳಿ ಬಂದು ಅವಳ ಮೈಯ್ಯನ್ನು ತಡವಿ ಮುಖ ಸವರುವಷ್ಟರಲ್ಲಿ ಆ ಅಮೃತಸ್ಪರ್ಶನಕ್ಕೆ ರತಿಗೆ ಎಚ್ಚರವಾಯಿತು. ಕಣ್ಣು ತೆರೆದು ಪಾರ್ವತಿಯನ್ನು ಕಂಬನಿ ತುಂಬಿದ ಕಣ್ಣುಗಳಿಂದ ದೀನವಾಗಿ ನೋಡಿದಳು. ಹೇ ಲೋಕಮಾತೆ ದಯಾವತಿದೇವಿ ನನ್ನ ಈ ದುಃಸ್ಥಿತಿಯನ್ನು ಅವಲೋಕಿಸು, ೭೯. ಎಂದು ರತೀದೇವಿ ಗಿರಿಜೆಯ ಪಾದ

ತ್ತಿರೆ ಪಳಯಿಸುತುಂ ದುಃಖಾ
ತುರೆ ಶೋಕಂಗೆಯ್ದು ಸುಯ್ದು ಪೊಯ್ದಳಲುತ್ತುಂ ॥ ೭೯

ಕರುಣಿಸು ತಾಯೇ ತವರೇ
ಪರಿರಕ್ಷಿಸು ದಯೆಯೊಳೀಕ್ಷಿಸುಡುಗಿಸು ನೋವಂ ।
ಪರಿಹರಿಸು ದುಃಖಿಮಂ ವರ
ಗಿರಿರಾಜತನೂಜೆ ಕಾದುಕೊಳ್ಳೆನ್ನಸುವಂ ॥ ೮೦

ವ॥ ಎಂದಳಲ್ವ ರತಿಯಂ ಕಂಡು ಮನಂಗೊಂಡು,

ಕಂ॥ ಬೇಡುಡುಗು ಶೋಕರಸಮಂ
ನೀಡಾಗದೆ ನಿನ್ನ ವಲ್ಲಭನನೀಶ್ವರನಂ ।
ಬೇಡುವೆನಾವರ್ಥದೊಳಂ
ಮಾಡುವೆನೆಲೆ ಪರಮಹರ್ಷಮಂ ನಿನಗೆ ರತೀ ॥ ೮೧

ಎಂದಗಜೆ ಬೆಸಸೆ ಶೋಕಮ
ನಂದುಡುಗುತಡಂಗಿಸುತ್ತುಮಳಲಂ ಮನದೊಳ್ ।
ಸಂದಣಿಪ ದುಃಖಿಮಂ ಮಱೆ
ದೊಂದಿದಳಾ ರತಿ ಭವಾನಿಯುಜ್ಜ್ವಳವಚನಮಂ ॥ ೮೨

ವ॥ ಆ ಸಮಯದೊಳ್,

ಕಂ॥ ಇಂತು ರತಿಗಭಯಮಂ ಕೊ
ಟ್ಟಂತಕಹರನಿರದೆ ಪೋದ ಪರಿಯಂ ಭರದಿಂ ।

ಗಳ ಮೇಲೆ ಬಿದ್ದು ಹೊರಳಾಡಿದಳು. ದುಃಖವು ಇಮ್ಮಡಿಸಿ ಉಕ್ಕಿ ಉಕ್ಕಿ ಬರುತ್ತಿತ್ತು. ದುಃಖಾತುರೆಯಾದ ಅವಳು ಆಗಜೆಯಲ್ಲಿ ಬಗೆಬಗೆಯಾಗಿ ಹುಯ್ಯಲಿಟ್ಟಳು. ೮೦. ತಾಯೆ, ಕರುಣಿಸು ; ಕಾಪಾಡು ! ದಯೆಯಿಂದ ನೊಡು ! ನನ್ನ ನೋವನ್ನು ಹೋಗಲಾಡಿಸು ! ದುಃಖವನ್ನು ಪರಿಹರಿಸು ! ನನ್ನನ್ನು ಕಾದುಕೊ ! ಎಂದು ಮೊರೆಯಿಟ್ಟಳು. ವ॥ ಹೀಗೆ ಮೊರೆಯಿಟ್ಟ ರತಿಗೆ ಪಾರ್ವತಿ—೮೧. ಎಲೌ ರತೀದೇವಿ, ದುಃಖವನ್ನು ಬಿಡು, ನಿನ್ನ ವಲ್ಲಭನು ಮತ್ತೆ ಜೀವಿಸುವಂತೆ ಶಿವನನ್ನು ಬೇಡುವೆನು. ಹೇಗಾದರೂ ನಿನಗೆ ಸಂತೋಷವಾಗುವಂತೆ ಮಾಡುವೆನು ! ೮೨. ಎಂದು ಭವಾನಿಯ ಉಜ್ವಲವಾದ ಅಭಯ ವಚನವನ್ನು ಕೇಳಿದ ರತೀದೇವಿಗೆ ದುಃಖವು ಅಡಗಿತು. ಅಳಲು ಮರೆಯಿತು. ಮನಸ್ಸಿಗೆ ನೆಮ್ಮದಿಯಾಯಿತು, ೮೩. ಹೀಗೆ ರತಿಗೆ ಅಭಯವನ್ನು ಕೊಟ್ಟು ಪಾರ್ವತಿಯು ಶಿವನು ತನ್ನ ಸೇವೆಯನ್ನು ಲೆಕ್ಕಿಸದೆ ಮದನನನ್ನು ಸುಟ್ಟು ಮರೆಯಾದ ಬಗೆಯನ್ನು ಗಾಢವಾಗಿ ಯೋಚಿಸಿದಳು ; ಅವಳು ಮುನಿಸಿನಿಂದ ಜಯೆ ವಿಜಯೆಯರೊಡನೆ ಹೀಗೆ ಹೇಳಿದಳು

ಚಿಂತಿಸಿ ಜಯವಿಜಯೆಗಳೊಡ
ನಿಂತೆಂದಳ್ ಗಿರಿಜೆ ಮನದ ಮುನಿಸಿಂದಾಗಳ್ ॥ ೮೩

ಸ್ರ॥ ಆನಿಂತಿಂತರ್ಚಿಸುತ್ತುಂ ಗತಿ ಮತಿ ಪತಿಯೆನ್ನಾಯುವೆನ್ನಾತ್ಮತತ್ತ್ವಂ
ತಾನೆಂದುತ್ಸಾಹದಿಂದಿರ್ದಚಳಪತಿಯ ಮೇನಾಖ್ಯೆಯೊಂದಳ್ಕಱಂ ಬಿ ।
ಟ್ಟಾನಂದಂಗೂಡಿ ಕಾರುಣ್ಯಮನನವರತಂ ಪಾರುತಿರ್ಪಲ್ಲಿ ಕೇಳಿಂ
ತೇನೆಂದುಗ್ರಂ ಸಮಗ್ರಂ ರಜತಗಿರಿಗೆ ಪೋದಂ ನಿಕೃಷ್ಟಾತ್ಮನಾದಂ ॥ ೮೪

ವ॥ ಅಂತುಮಲ್ಲದೆ,

ಕಂ॥ ತಾನಿರ್ದಲ್ಲಿಗೆ ನಡೆತಂ
ದಾನರ್ಚಿಸೆ ಕಾಮವೈರಿ ನುಡಿಯಿಸದಂತ ।
ರ್ಧಾನಕ್ಕೆ ಸಂದನದಱಿಂ
ದಾನಿರ್ದಲ್ಲಿಗೆ ಸಮಂತು ತನ್ನನೆ ತರ್ಪೆಂ ॥ ೮೫

ಉ॥ ಉಗ್ರತಪೋಧರಾಕೃತಿಯನಾಂತು ಜಗಂ ಬೆಱಗಾಗೆ ನಿಶ್ಚಲಾ
ವ್ಯಗ್ರಮನೋಪ್ರಬಲೆಯಾಗಿ ಬಿಸಲ್‌ಮಳೆಸೀತದೊಳ್ ನಗ ।
ಪ್ರಾಗ್ರದೊಳಂ ಕುಜಪ್ರತತಿಯೊಳ್ ಸರಸೀಕುಳತಿದೊಳ್ ವಿರಾಜಿಸು
ತ್ತುಗ್ರನನೀಶನಂ ವಿಪುಳನಿಶ್ಚಳನಂ ಚಲದಿಂದೆ ತಂದಪೆಂ ॥ ೮೬

ವ॥ ಎಂದಿಂತು ಸಖೀಜನದೊಡನೆ ತನ್ನ ಸಾಮರ್ಥ್ಯದೊಂದುನ್ನತಿಯಂ ನುಡಿಯುತ್ತುಂ ಮೃಡಾನಿ ಮಹಾಮಾಯೆ ಸಕಳಜಗಜ್ಜನನಿ ನಿಖಿಳಾರಾಧ್ಯೆ ಅಕಳಂಕ ಚರಿತ್ರೆ ದಿವ್ಯಜ್ಞಾನಿ ಸರ್ವ

೮೪. ಪರಮೇಶ್ವರನನ್ನು ನಾನು ಪ್ರತಿದಿನವೂ ಹೀಗೆ ಅರ್ಚಿಸುತ್ತಾ ಅವನೇ ನನಗೆ ಗತಿ ಮತಿ ಪತಿಯೆಂದೂ ಎನ್ನ ಆಯುಸ್ಸು, ಎನ್ನ ಆತ್ಮತತ್ತ್ವವೆಂದೂ ಉತ್ಸಾಹದಿಂದ ಇದ್ದೆನು. ತಂದೆ–ತಾಯಿಯರ ವಾತ್ಸಲ್ಯವನ್ನು ಬಿಟ್ಟು ಇಲ್ಲಿ ಬಂದು ಆನಂದದಿಂದ ಇದ್ದೆನು. ನನ್ನಲ್ಲಿ ಕಾರುಣ್ಯವನ್ನು ಮಾಡಬೇಕಾಗಿತ್ತು. ಹೀಗಿದ್ದರೂ ಇಂಥ ನನ್ನ ಭಕ್ತಿಯನ್ನು ಅಲ್ಲಗಳೆದು ಉಗ್ರನಾಗಿ ಶಿವನು ರಜತಗಿರಿಗೆ ಹೋಗಿ ನಿಕೃಷ್ಟಾತ್ಮನಾದ! ೮೫. ತಾನಿರುವಲ್ಲಿಗೆ ನಾನು ಹೋಗಿ ಪೂಜಿಸಿದೆ. ಆದರೆ ಕಾಮವೈರಿಯು ನನ್ನನ್ನು ಮಾತೂ ಆಡಿಸದೆ ಮರೆಯಾದ ; ಅದಕ್ಕಾಗಿ ಈಗ ನಾನಿರುವಲ್ಲಿಗೇ ಅವನು ಬರುವಂತೆ ಮಾಡುವೆನು, ೮೬. ಉಗ್ರ ತಪಸ್ಸನ್ನು ಕೈಗೊಂಡು ಲೋಕವೇ ಆಶ್ಚರ್ಯಪಡುವಂತೆ ನಿಶ್ಚಲ ಮನಸ್ಸಿನಿಂದ ಬಿಸಿಲು, ಮಳೆ, ಶೀತಗಳಿಗೆ ಹೆದರದೆ ಬೆಟ್ಟದ ತುದಿಯಲ್ಲಿ ಕಾಡುಗಳ ನಡುವೆ ಮಡುವುಗಳ ಮಡಿಲಲ್ಲಿ ಕುಳಿತು ನಿಶ್ಚಲ ಶಿವನನ್ನು ಚಲದಿಂದ ತರುತ್ತೇನೆ. ವ॥ ಹೀಗೆ ಪಾರ್ವತಿ ಸಖಿಯರೊಡನೆ ತನ್ನ ಮನಸ್ಸಿನ ಸ್ಥೈರ್ಯವನ್ನು ತಿಳಿಸಿ ಮೃಡಾನಿಯೂ,

ತ್ತಿರೆ ಪಳಯಿಸುತುಂ ದುಃಖಾ
ತುರೆ ಶೋಕಂಗೆಯ್ದು ಸುಯ್ದು ಪೊಯ್ದಳಲುತ್ತುಂ ॥ ೭೯

ಕರುಣಿಸು ತಾಯೇ ತವರೇ
ಪರಿರಕ್ಷಿಸು ದಯೆಯೊಳೀಕ್ಷಿಸುಡುಗಿಸು ನೋವಂ ।
ಪರಿಹರಿಸು ದುಃಖಮಂ ವರ
ಗಿರಿರಾಜತನೂಜೆ ಕಾದುಕೊಳ್ಳೆನ್ನಸುವಂ ॥ ೮೦

ವ॥ ಎಂದಳಲ್ವ ರತಿಯಂ ಕಂಡು ಮನಂಗೊಂಡು,

ಕಂ॥ ಬೇಡುಡುಗು ಶೋಕರಸಮಂ
ನೀಡಾಗದೆ ನಿನ್ನ ವಲ್ಲಭನನೀಶ್ವರನಂ ।
ಬೇಡುವೆನಾವರ್ಥದೊಳಂ
ಮಾಡುವೆನೆಲೆ ಪರಮಹರ್ಷಮಂ ನಿನಗೆ ರತೀ ॥ ೮೧

ಎಂದಗಜೆ ಬೆಸಸೆ ಶೋಕಮ
ನಂದುಡುಗುತಡಂಗಿಸುತ್ತುಮಳಲಂ ಮನದೊಳ್ ।
ಸಂದಣಿಪ ದುಃಖಮಂ ಮಱೆ
ದೊಂದಿದಳಾ ರತಿ ಭವಾನಿಯುಜ್ಜ್ವಳವಚಮಂ ॥ ೮೨

ವ॥ ಆ ಸಮಯದೊಳ್,

ಕಂ॥ ಇಂತು ರತಿಗಭಯಮಂ ಕೊ
ಟ್ಟಂತಕಹರನಿರದೆ ಪೋದ ಪರಿಯಂ ಭರದಿಂ ।

ಗಳ ಮೇಲೆ ಬಿದ್ದು ಹೊರಳಾಡಿದಳು. ದುಃಖವು ಇಮ್ಮಡಿಸಿ ಉಕ್ಕಿ ಉಕ್ಕಿ ಬರುತ್ತಿತ್ತು. ದುಃಖಾತುರೆಯಾದ ಅವಳು ಅಗಜೆಯಲ್ಲಿ ಬಗೆಬಗೆಯಾಗಿ ಹುಯ್ಯಲಿಟ್ಟಳು. ೮೦. ತಾಯೆ, ಕರುಣಿಸು ; ಕಾಪಾಡು ! ದಯೆಯಿಂದ ನೋಡು ! ನನ್ನ ನೋವನ್ನು ಹೋಗಲಾಡಿಸು ! ದುಃಖವನ್ನು ಪರಿಹರಿಸು ! ನನ್ನನ್ನು ಕಾದುಕೊ ! ಎಂದು ಮೊರೆಯಿಟ್ಟಳು. ವ॥ ಹೀಗೆ ಮೊರೆಯಿಟ್ಟ ರತಿಗೆ ಪಾರ್ವತಿ—೮೧. ಎಲೌ ರತೀದೇವಿ, ದುಃಖವನ್ನು ಬಿಡು, ನಿನ್ನ ವಲ್ಲಭನು ಮತ್ತೆ ಜೀವಿಸುವಂತೆ ಶಿವನನ್ನು ಬೇಡುವೆನು. ಹೇಗಾದರೂ ನಿನಗೆ ಸಂತೋಷವಾಗುವಂತೆ ಮಾಡುವೆನು ! ೮೨. ಎಂದು ಭವಾನಿಯ ಉಜ್ವಲವಾದ ಅಭಯ ವಚನವನ್ನು ಕೇಳಿದ ರತೀದೇವಿಗೆ ದುಃಖವು ಅಡಗಿತು. ಅಳಲು ಮರೆಯಿತು. ಮನಸ್ಸಿಗೆ ನೆಮ್ಮದಿಯಾಯಿತು, ೮೩. ಹೀಗೆ ರತಿಗೆ ಅಭಯವನ್ನು ಕೊಟ್ಟು ಪಾರ್ವತಿಯು ಶಿವನು ತನ್ನ ಸೇವೆಯನ್ನು ಲೆಕ್ಕಿಸದೆ ಮದನನನ್ನು ಸುಟ್ಟು ಮರೆಯಾದ ಬಗೆಯನ್ನು ಗಾಢವಾಗಿ ಯೋಚಿಸಿದಳು ; ಅವಳು ಮುನಿಸಿನಿಂದ ಜಯೆ ವಿಜಯೆಯರೊಡನೆ ಹೀಗೆ ಹೇಳಿದಳು

ಚಿಂತಿಸಿ ಜಯವಿಜಯೆಗಳೊಡ
ನಿಂತೆಂದಳ್ ಗಿರಿಜೆ ಮನದ ಮುನಿಸಿಂದಾಗಳ್ ॥ ೮೩

ಸ್ರ॥ ಆನಿಂತಿಂತರ್ಚಿಸುತ್ತುಂ ಗತಿ ಮತಿ ಪತಿಯೆನ್ನಾಯುವೆನ್ನಾತ್ಮತತ್ತ್ವಂ
ತಾನೆಂದುತ್ಸಾಹದಿಂದಿರ್ದೆ ಚಳಪತಿಯ ಮೇನಾಖ್ಯೆಯೊಂದಳ್ಕಱಂ ಬಿ ।
ಟ್ಟಾನಂದಂಗೂಡಿ ಕಾರುಣ್ಯಮನನವರತಂ ಪಾರುತಿರ್ದಲ್ಲಿ ಕೇಳಿಂ
ತೇನೆಂದುಗ್ರಂ ಸಮಗ್ರಂ ರಜತಗಿರಿಗೆ ಪೋದಂ ನಿಕೃಷ್ಟಾತ್ಮನಾದಂ ॥ ೮೪

ವ॥ ಅಂತುಮಲ್ಲದೆ,

ಕಂ॥ ತಾನಿರ್ದಲ್ಲಿಗೆ ನಡೆತಂ
ದಾನರ್ಚಿಸೆ ಕಾಮವೈರಿ ನುಡಿಯಿಸದಂತ ।
ರ್ಧಾನಕ್ಕೆ ಸಂದನದಱಿಂ
ದಾನಿರ್ದಲ್ಲಿಗೆ ಸಮಂತು ತನ್ನನೆ ತರ್ಪೆಂ ॥ ೮೫

ಉ॥ ಉಗ್ರತಪೋಧರಾಕೃತಿಯನಾಂತು ಜಗಂ ಬೆಱಗಾಗೆ ನಿಶ್ಚಲಾ
ವ್ಯಗ್ರಮನೋಪ್ರಬಲೆಯಾಗಿ ಬಿಸಲ್ಮಳೆಸೀತದೊಳ್ ನಗ ।
ಪ್ರಾಗ್ರದೊಳಂ ಕುಜಪ್ರತತಿಯೊಳ್ ಸರಸೀಕುಳತಿದೊಳ್ ವಿರಾಜಿಸು
ತ್ತಗ್ರನನೀಶನಂ ವಿಪುಳನಿಶ್ಚಳನಂ ಚಲದಿಂದೆ ತಂದಪೆಂ ॥ ೮೬

ವ॥ ಎಂದಿಂತು ಸಖೀಜನದೊಡನೆ ತನ್ನ ಸಾಮರ್ಥ್ಯದೊಂದುನ್ನತಿಯಂ ನುಡಿಯುತ್ತುಂ ಮೃಡಾನಿ ಮಹಾಮಾಯೆ ಸಕಳಜಗಜ್ಜನನಿ ನಿಖಿಳಾರಾಧ್ಯೆ ಅಕಳಂಕ ಚರಿತ್ರೆ ದಿವ್ಯಜ್ಞಾನಿ ಸರ್ವ

೮೪. ಪರಮೇಶ್ವರನನ್ನು ನಾನು ಪ್ರತಿದಿನವೂ ಹೀಗೆ ಅರ್ಚಿಸುತ್ತಾ ಅವನೇ ನನಗೆ ಗತಿ ಮತಿ ಸತಿಯೆಂದೂ ಎನ್ನ ಆಯುಸ್ಸು, ಎನ್ನ ಆತ್ಮತತ್ತ್ವವೆಂದೂ ಉತ್ಸಾಹದಿಂದ ಇದ್ದೆನು. ತಂದೆ–ತಾಯಿಯರ ವಾತ್ಸಲ್ಯವನ್ನು ಬಿಟ್ಟು ಇಲ್ಲಿ ಬಂದು ಆನಂದದಿಂದ ಇದ್ದೆನು. ನನ್ನಲ್ಲಿ ಕಾರುಣ್ಯವನ್ನು ಮಾಡಬೇಕಾಗಿತ್ತು. ಹೀಗಿದ್ದರೂ ಇಂಥ ನನ್ನ ಭಕ್ತಿಯನ್ನು ಅಲ್ಲ ಗಳೆದು ಉಗ್ರನಾಗಿ ಶಿವನು ರಜತಗಿರಿಗೆ ಹೋಗಿ ನಿಕೃಷ್ಟಾತ್ಮನಾದ! ೮೫. ತಾನಿರುವ ಲ್ಲಿಗೆ ನಾನು ಹೋಗಿ ಪೂಜಿಸಿದೆ. ಆದರೆ ಕಾಮವೈರಿಯು ನನ್ನನ್ನು ಮಾತೂ ಆಡಿಸದೆ ಮರೆಯಾದ ; ಅದಕ್ಕಾಗಿ ಈಗ ನಾನಿರುವಲ್ಲಿಗೇ ಅವನು ಬರುವಂತೆ ಮಾಡುವೆನು. ೮೬. ಉಗ್ರ ತಪಸ್ಸನ್ನು ಕೈಗೊಂಡು ಲೋಕವೇ ಆಶ್ಚರ್ಯಪಡುವಂತೆ ನಿಶ್ಚಲ ಮನಸ್ಸಿ ನಿಂದ ಬಿಸಿಲು, ಮಳೆ, ಶೀತಗಳಿಗೆ ಹೆದರದೆ ಬೆಟ್ಟದ ತುದಿಯಲ್ಲಿ ಕಾಡುಗಳ ನಡುವೆ ಮಡುವುಗಳ ಮಡಿಲಲ್ಲಿ ಕುಳಿತು ನಿಶ್ಚಲ ಶಿವನನ್ನು ಚಲದಿಂದ ತರುತ್ತೇನೆ. ವ॥ ಹೀಗೆ ಪಾರ್ವತಿ ಸಖಿಯರೊಡನೆ ತನ್ನ ಮನಸ್ಸಿನ ಸ್ಥೈರ್ಯವನ್ನು ತಿಳಿಸಿ ಮೃಡಾನಿಯೂ,

ಬ್ರಹ್ಮಾಂಡಾಭರಣೆ ಹರನ ಮನೋಹರೆ ಸದಾಶಿವನ ಸುಖಮುಖಂ ಮಹಾದೇವನ ಮನೋರಥಂ ಚಲದ ಲಲನೆ ಬಲ್ಪಿನ ಭಾವಕಿ ಏಕನಿಷ್ಠಾನಿಧಿ ಪಶುಪತಿಯ ಪಟ್ಟದ ಮಹಾದೇವಿಯೆನಿಪ್ಪ ಶ್ರೀ ಪಾರ್ವತೀದೇವಿಯುಗ್ರತಪೋಭರನಿವೇಶನಾಭಿಮುಖಿಯಾಗಿ

ಚಂ॥ ಸರಸಿಜನೇತ್ರೆ ಪುಣ್ಯಮಯಗಾತ್ರೆ ಸದಾಶಿವನಂಗಪಾತ್ರೆಯ
ತ್ಯುರುತರಮಾನಿ ನಿರ್ಮಳಭವಾನಿ ನಿರಂತರದಾನಿ ನವ್ಯಸುಂ।
ದರವರಮೂರ್ತಿ ಶರ್ವ ನಸುಕೀರ್ತಿ ಮಹೇಶ್ವರನಾರ್ತಿ ಬಂದಳೊ
ಪ್ಪಿರೆ ಗಿರಿಜಾತೆ ಲೋಕಜಯಮಾತೆ ಜಗಕ್ಕೆ ವಿನೂತೆಯುಳ್ಕಜಿಂ॥ ೮೭

ಮ॥ ಪರಮ ಸ್ವಾಮಿಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನ ಹರಂಪುರತ್ರಯಹರಂ ಸೌಖ್ಯಾಕರಂ ಶಂಭು ಶಂ।
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನ ವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಪಂಪೆಯ ವಿರೂಪಾಕ್ಷಂ ಶಿವಾವಲ್ಲಭಂ॥ ೮೮

ಇದು ಸಮಸ್ತ ಸುರಾಸುರಮಕುಟ ಖಚಿತ
ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪುಂಜರಂಜಿತಚರಣ
ನೆನಿಪ ಪಂಪಾವಿರೂಪಾಕ್ಷ ಶ್ರೀಪಾದಕಮಲ
ಮಕರಂದ ಮಧುಕರಾಯಮಾಣ
ಸತ್ಕವೀಶ್ವರ ಹಂಪೆಯ
ಹರಿಹರದೇವ ವಿರಚಿತಮಪ್ಪ
ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ಕಾಮದಹನವರ್ಣನಂ
ಅಷ್ಟಮಾಶ್ವಾಸಂ

ಲೋಕಮಾತೆಯೂ ನಿಖಿಳಾರಾಧ್ಯೆ ಮುಂತಾದ ಗುಣಗಳಿಂದ ಕೂಡಿದವಳೂ ಆದ ಪಾರ್ವತೀದೇವಿ ಉಗ್ರತಪೋಭಿಮುಖಿಯಾದಳು. ೮೭. ಕಮಲಾಯತ ನೇತ್ರೆಯೂ, ಪುಣ್ಯಗಾತ್ರಳೂ, ಸದಾಶಿವಸಂಗತೆಯೂ, ಮಹಾಮಾನಿ, ನಿರ್ಮಲ ಭವಾನಿಯೂ ಆದ ಪಾರ್ವತಿಯು ತಪಸ್ಸಿಗೆ ಹೊರಡಲು ಸಿದ್ಧಳಾದಳು.

# ನವಮಾಶ್ವಾಸಂ

## ಪಾರ್ವತೀ ತಪೋವರ್ಣನಂ ವಿರೂಪಾಕ್ಷ ಪ್ರತ್ಯಕ್ಷೀಕರಣ ವರ್ಣನಂ

ಕಂ॥ ಕಾರುಣ್ಯಾಕರನಭವಂ
ಘೋರತಪೋಮಯ ತಪಃ ಪ್ರಮೋದಾವೃತ ವಿ।
ಸ್ಫಾರಫಲಪ್ರದನೆಮಗೀ
ಗೋರಂತತಿ ಭಕ್ತಿಯಂ ವಿರೂಪಾಕ್ಷ ಶಿವಂ॥ ೧

ಉ॥ ಬಂದು ತಪೋನಿವೇಶನಮನೀಕ್ಷಿಸಿ ಬರ್ಪ ನಿದಾಘಕಾಲದೊಳ್
ಸಂದ ನಗಾಗ್ರದಲ್ಲಿ ನಿಲವೇಳ್ಕುಮೆನುತ್ತಮೆ ನಿಂದು ಮೇನಕಾ।
ನಂದನೆ ತದ್ವಿಳಾಸಿನಿಯರಾನನಮಂ ನಡೆನೋಡೆ ಕಾಣುತುಂ
ಸೌಂದರಿಯರ್ ಜಟಾರಚನೆಯಂ ತರದಿಂ ಭರದಿಂದೊಡರ್ಚಿದರ್॥ ೨

ಕಂ॥ ವಿರಚಿಸಿದರ್ ಜಡೆಗಳನಾ
ದರದಿಂ ದರಹಸಿತಬಿಸರುಹಾನನೆಯರ್ ಶಂ।
ಕರನರಸಿಗೆ ಗಿರಿಜಾತೆಗೆ
ವರಭಸಿತಮನಂಗತತಿಯೊಳುದ್ಧೂಳಿಸಿದರ್॥ ೩

ವರಭಸಿತೋದ್ಧೂಳನಮಂ
ಗಿರಿಜೆಗೆ ಸುರಸತಿಯರೊಲ್ದು ಮಾಳ್ಪೆಡೆಯೊಳ್ ಕ।
ಪುರದ ರಜದಿಂದೆ ಪುಷ್ಪೋ
ತ್ಕರಮಾಲೆಯನೊಸೆದು ಪೊರೆವ ತೆಱನಾಯ್ತಾಗಳ್॥ ೪

ವ॥ ಅಂತುಮಲ್ಲದೆ,

೧. ಕರುಣಾಳುವೂ ಘೋರತಪಸ್ಸಿಗೆ ಒಲಿದು ಇಷ್ಟಾರ್ಥವನ್ನು ನೀಡುವವನೂ ಆದ ವಿರೂಪಾಕ್ಷನು ನಮಗೆ ಸದ್‌ಭಕ್ತಿಯನ್ನು ನೀಡಲಿ. ೨. ಗಿರಿಜೆಯು ತಪೋವನದಲ್ಲಿ ತಪೋಯೋಗ್ಯವಾದ ಸ್ಥಳವನ್ನು ಆರಿಸಿದಳು. ಮುಂದಿನ ಬೇಸಗೆಯಲ್ಲಿ ಬೆಟ್ಟದ ತುದಿಯಲ್ಲಿ ನಿಂತು ಉಗ್ರತಪಸ್ಸನ್ನು ಆರಂಭಿಸಬೇಕೆಂದು ಅವಳು ನಿರ್ಧರಿಸಿದಳು. ಅದನ್ನು ಕೇಳಿದ ಜಯವಿಜಯೆಯರು ಅವಳಿಗೆ ತಪೋಯೋಗ್ಯವಾದ ಜಟಾರಚನೆ ಮುಂತಾದುವನ್ನು ಸಿದ್ಧಪಡಿಸಿದರು ೩. ಕಮಲಮುಖಿಯರಾದ ಸಖಿಯರು ನಗೆ ಮೊಗದಿಂದ ಶಂಕರನ ಅರಸಿ ಗಿರಿಜಾತೆಗೆ ಜಡೆಗಳನ್ನು ವಿರಚಿಸಿ, ಅವಳ ಅಂಗಗಳಲ್ಲಿ ಭಸ್ಮೋದ್ಧೂಳನವನ್ನು ಮಾಡಿದರು. ೪. ಸುರಸತಿಯರು ಪ್ರೇಮದಿಂದ ಗಿರಿಜೆಗೆ ಭಸ್ಮೋದ್ಧೂಳನವನ್ನು ಮಾಡಿದ್ದು ಆಕೆಗೆ

ಕಂ॥ ವಾರಿಜಮುಖಿಯರ್ ಸಖಿಯರ್
ತಾರಾಚಲನಾಥನರಸಿಗನುನಯದಿಂದಂ ।
ಸಾರಮೃದುತರವಿಮಳವಿ
ಸ್ತಾರಿತವಲ್ಕಲಮನೊಪ್ಪಲುಡಿಸುತ್ತಿರ್ದರ್ ॥ ೫

ವ॥ ಅಂತುಮಲ್ಲದೆ,

ಕಂ॥ ಸಾಕ್ಷಾಚ್ಛಂಕರವಕ್ತ್ರಮಿ
ವಕ್ಷಯಸುಖಮೀವ ಸುಕೃತಫಲಮಿವು ಸತ್ಯಂ ।
ರಕ್ಷೆಯಿವೆನುತಗಜೆಗೆ ರು
ದ್ರಾಕ್ಷಿಗಳಂ ಕೊಡೆ ತೊಡಿಸಿದರ್ ಮಾನಿನಿಯರ್ ॥ ೬

ವ॥ ಇಂತು ಭಕ್ತಿಜ್ಞಾನವೈರಾಗ್ಯಯುಕ್ತಮಪ್ಪ ತಪೋಮಂಡನಂಗಳಂ ಸಂಗಡಮಿರ್ದಂಗನೆಯರ್ ಶೃಂಗರಿಸೆ ಮಂಗಳಮುಖಿ ಹೊಂಗಿ ಹೊರೆಯೇಱೆ,

ಕಂ॥ ಸಂದಣಿಸುವ ಜಡೆ ಬೆನ್ನಂ
ಮಂದಯಿಸಿ ಮುಸುಂಕುತಿಳಿಯೆ ನೀಲಾಂಬುದಮಂ ।
ಪಿಂದಿಕ್ಕಿ ಮುಂದೆ ಬೆಳಗುತೆ
ನಿಂದೆಳಮಿಂಚಿನವೊಲಗಜೆ ನೆಱೆ ಮೆಱೆದಿರ್ದಳ್ ॥ ೭

ಅಳವಡೆ ಮುನ್ನಂ ಪತ್ತಿದ
ಕಳಂಕಮಂ ಪೊರ್ದದಂತೆ ನಭದಿಂದಿಳಿತಂ ।

ಕರ್ಪೂರಧೂಳಿಯಿಂದ ಕೂಡಿದ ಪುಷ್ಪಮಾಲೆಗಳನ್ನು ಸೂಡಿದಂತಿತ್ತು. ೫. ತಾವರೆ ಮುಖದ ಸಖಿಯರು ಹೇಮಕೂಟದ ಒಡೆಯ ಪರಶಿವನ ಅರಸಿಗೆ ಪ್ರೇಮದಿಂದ ತಪೋ ಯೋಗ್ಯವಾದ ನಾರುಮಡಿಯುಡಿಸಿದರು. ೬. ಅಲ್ಲಿರುವ ಮಾನಿನಿಯರು ಅಗಜೆಗೆ ರುದ್ರಾಕ್ಷಿಗಳನ್ನು ತೊಡಿಸಿದರು. ರುದ್ರಾಕ್ಷಿಗಳು ಸಾಕ್ಷಾತ್ ಶಿವನ ಮುಖವುಳ್ಳವುಗಳು, ಇವುಗಳನ್ನು ಧರಿಸಿದವರಿಗೆ ಅವು ಅಕ್ಷಯ ಸುಖವನ್ನು ಕೊಡುತ್ತವೆ. ಪುಣ್ಯಫಲವಾಗಿ ಇವು ಲಭಿಸಿವೆ. ಇವು ಧರಿಸಿದವರಿಗೆ ರಕ್ಷೆಗಳು ಎಂದು ಅವರು ರುದ್ರಾಕ್ಷಿಗಳನ್ನು ಪ್ರಶಂಸಿಸಿ ಧರಿಸುತ್ತಿದ್ದರು. ವ॥ ಹೀಗೆ ಭಕ್ತಿಜ್ಞಾನ ವೈರಾಗ್ಯಯುಕ್ತವಾದ ತಪೋಮಂಡನಗಳನ್ನು ಜೊತೆಗಿದ್ದ ಸ್ತ್ರೀಯರು ಅಗಜೆಗೆ ಸಿಂಗರಿಸಿದರು. ೭. ದಟ್ಟವಾದ ಜಡೆಗಳು ಗಿರಿಜೆಯ ಬೆನ್ನನ್ನು ಮುಸುಕಿವೆ ; ಈ ಹಿನ್ನೆಲೆಯಲ್ಲಿ ಕಾಣುವ ಮುಸುಕುತೆರೆದ ಪಾರ್ವತಿಯ ದೃಶ್ಯ ಕಾಲಮೇಘದ ಹಿನ್ನೆಲೆಯಲ್ಲಿ ಬೆಳಗುವ ಸೆಳೆಮಿಂಚಿನಂತೆ ಇತ್ತು. ೮. ಗಿರಿಜೆ ತಪೋ ಮಗ್ನೆಯಾಗಿ ನಿಂತಿದ್ದಾಳೆ ; ಅದನ್ನು ನೋಡಿದರೆ ತನಗೆ ಕಳಂಕವು ಸೋಂಕುವ ಮೊದಲೇ

ದಿಳಿಯೊಳ್ ಶಂಭುಗೆ ಮಿಗೆ ಶಶಿ
ಕಳೆ ತಪಮಿರ್ಪಂತೆ ಗಿರಿಜೆ ತಪದೊಳ್ ನಿಂದಳ್ ॥ ೮

ಭಗ್ನಮನಮಲ್ಲದಚಲಿತೆ
ಲಗ್ನವ್ರತೆಯಾಗಿ ಶಂಕರಪ್ರೇಮ ಮನೋ ।
ನ್ಮಗ್ನಾಂಗಿ ಧೈರ್ಯನಿಧಿ ಪಂ
ಚಾಗ್ನಿಯ ನಡುವಗಜೆ ವಿಪುಳತಪದೊಳ್ ನಿಂದಳ್ ॥ ೯

ವ॥ ಅದೆಂತೆಂದೊಡೆ,

ಮ॥ ಮಿಗೆ ಸುತ್ತಿರ್ದ ದವಾಗ್ನಿ ಕಾಯ್ದ ರವಿಕಾಂತೋಚ್ಚಾಗ್ನಿಯತ್ಯುಷ್ಣಮಂ
ನೆಗಪುತ್ತಿರ್ಪುದರಾಗ್ನಿ ಮೇಗೆ ಕವಿತರ್ಪಾದಿತ್ಯತೀವ್ರಾಗ್ನಿ ಬಂ ।
ದೊಗೆದಾ ಬೇಸಗೆಯಗ್ನಿಯೆಂದೆನಿಸಿ ತೋಱುತ್ತಿರ್ಪ ಪಂಚಾಗ್ನಿ ಮ
ಧ್ಯಗತಾಂಘ್ರಿಪ್ರಭೆ ನಿಂದಳುಗ್ರತಪದೊಳ್ ಶರ್ವಾಣಿಯವ್ಯಗ್ರದಿಂ ॥ ೧೦

ಚಲದಿಂದಂ ನಗರಾಜಪುತ್ರಿ ಹೃದಯಾಬ್ಜಾವಾಸದೊಳ್ ಭಾಪು ನಿ
ಶ್ಚಲನಂ ನಿರ್ಮಳನಂ ನಿರಾವರಣನಂ ನಿರ್ಮಾಯನಂ ನಿತ್ಯನಂ ।
ನಿಲಿಸುತ್ತುನ್ನತವಕ್ತ್ರೆ ಸನ್ನುತತಪೋವಿಸ್ತಾರೆ ಮಾರ್ತಂಡ ಸಂ
ಕುಲತೇಜೋನಿಧಿ ನಿಂದಳುಗ್ರತಪದೊಳ್ ಲೋಕಕ್ಕಗುರ್ವಪ್ಪಿನಂ ॥ ೧೧

ವ॥ ಅಂತುಮಲ್ಲದೆ,

ಶಶಿಕಳೆ ನಭದಿಂದ ಕೆಳಗಿಳಿದು ಶಂಭುವನ್ನು ಕುರಿತು ತನಗೆ ಕಳಂಕ ಬಾರದಿರುವಂತೆ ತಪಸ್ಸನ್ನು ಗೈಯುತ್ತಿದೆಯೊ ಎಂಬಂತಿತ್ತು. ೯. ದೃಢಮನಸ್ಸಿನ ಅಗಜೆ ಶಿವನಲ್ಲಿ ಮನಸ್ಸನ್ನು ಅಚಲವಾಗಿ ನಿಲ್ಲಿಸಿ, ಧೈರ್ಯನಿಧಿಯಾದ ಅವಳು ಪಂಚಾಗ್ನಿಯ ನಡುವೆ ತಪಸ್ಸು ಮಾಡತೊಡಗಿದ್ದಾಳೆ. ೧೦. ಅವಳನ್ನು ಸುತ್ತಿರುವ ಪಂಚಾಗ್ನಿಗಳು ಇವು– ಅವಳನ್ನು ಬಳಸಿರುವ ದಾವಾಗ್ನಿ, ಬಿಸಿಲಿಗೆ ಕಾಯ್ದ ಸೂರ್ಯಕಾಂತ ಶಿಲೆಗಳ ಬೆಂಕಿ, ಅತಿ ಉಷ್ಣವನ್ನುಂಟುಮಾಡುತ್ತಿದ್ದ ಉದರಾ(ಜಠರಾ)ಗ್ನಿ, ನೆತ್ತಿಯ ಮೇಲೆ ಏರಿಬರುತ್ತಿರುವ ಸೂರ್ಯನ ಉರಿಬಿಸಿಲು, ಸಮೀಪಿಸಿದ ಬೇಸಗೆಯ ಬಿಸಿ ಹೀಗೆ ಅವಳನ್ನು ಆವರಿಸಿರುವ ಪಂಚಾಗ್ನಿಗಳ ಮಧ್ಯದಲ್ಲಿ ನಿಂತು ಶರ್ವಾಣಿ ಉಗ್ರತಪಸ್ಸಿನಲ್ಲಿ ತೊಡಗಿದ್ದಾಳೆ. ೧೧. ಆ ನಗರಾಜಪುತ್ರಿಯು ತನ್ನ ಹೃದಯ ಕಮಲದಲ್ಲಿ ನಿಶ್ಚಲನೂ ನಿರ್ಮಲನೂ ನಿರಾವರಣನೂ ನಿರ್ಮಾಯನೂ ನಿತ್ಯನೂ ಆದ ಪರಶಿವನನ್ನು ನಿಲ್ಲಿಸಿಕೊಂಡು ಮಹಾತಪಸ್ವಿನಿಯಾದ ಅವಳು ಮುಖವನ್ನು ಮೇಲೆತ್ತಿ ಅನೇಕ ಸೂರ್ಯರ ಪ್ರಕಾಶವುಳ್ಳವಳಾಗಿ ಲೋಕವು

ಚಂ॥ ನೆನೆಯುತೆ ದೇವಿ ನಿಷ್ಪ್ರವರನಂ ವರನಂ ವರನಂ ಮಹೇಶನಂ
ಘನನಿಟಿಲಾಗ್ನಿಯಿರ್ಪ ಶಿವನಂ ಶಿವನಂ ಶಿವನಂ ನಗೇಶ ನಂ ।
ದನೆ ಸಾರದೀ ಭುವನಮಂ ವನಮಂ ವನಮಂ ಭವಾನಿ ಭೋಂ
ಕನೆ ತಪಮಿರ್ದಳುಗ್ರತಪಮಂ ತಪಮಂ ತಪಮಂ ವಿಭಂಗಿಸಲ್ ॥ ೧೨

ವರನುತಧೈರ್ಯೆ ಪುಣ್ಯಮಯವೀರ್ಯೆ ಸಮಗ್ರತಪಃಪ್ರಶೌರ್ಯೆ ಶಂ
ಕರನ ಸುಖೈಕಧಾರ್ಯೆ ಪರಮಾಗಮಕಾರ್ಯೆ ಜಗದ್ಧಿತಾರ್ಯೆ ವಿ ।
ಸ್ತರಘನತೂರ್ಯೆ ಶಂಭುಸುಖಪೂರ್ವೆ ವಧೂಜನವರ್ಯೆ ರುದ್ರಬಂ
ಧುರನಿಜಧಾರ್ಯೆ ಸೂರ್ಯಶಿಲೆಯಂ ಬಲದಿಂ ಛಲದಿಂದೆ ಮೆಟ್ಟಿದಳ್ ॥ ೧೩

ವ॥ ಇಂತು ಸೋಮಧರನರಸಿ ಹೇಮಕೂಟಾಗ್ರದ ಮೇಲವ್ಯಗ್ರದಿಂದುಗ್ರತಪದೊಳ್ ನೆಲಸಿ ನಿಲೆ ತಪಸ್ತೇಜಂ ಮೂಜಗಮಂ ಪರ್ಬಿದಾಗಳ್,

ಕಂ॥ ಮೃಗತತಿ ಸುಳಿಯವು ಮಿಗೆ ಪ
ಕ್ಷಿಗಳೆಳ್ದಿಗವು ಸಮೀರಣಂ ಸಂಚಲಿಸಂ ।
ಗಗನದ ಖೇಚರರಾ ಬ
ಟ್ಟೆಗೆ ಸಾರರ್ ನಗಜೆಯತುಳತಪದಾತಪದೊಳ್ ॥ ೧೪

ಅಚ್ಚರಿಪಡುವಂತೆ ಉಗ್ರತಪಸ್ಸಿನಲ್ಲಿ ತೊಡಗಿದ್ದಾಳೆ. ೧೨. ಆ ದೇವಿಯು, ತನಗೆ ಹಿಂದೆ ಯಾವ ವಂಶದ ಪ್ರವರವೂ ಇಲ್ಲದ, ಶ್ರೇಷ್ಠನೂ, ತನಗೆ ಅನುರೂಪವರನೂ, ಮಹೇಶನೂ, ಹಣೆಗಣ್ಣಿನ ಉಗ್ರ ಅಗ್ನಿಯುಳ್ಳವನೂ ಮಂಗಳಕರನೂ ಆದ ಪರಶಿವನನ್ನು ನಗರಾಜ ಪುತ್ರಿಯಾದ ತಾನೂ ಎಂದಿಗೂ ಸಾರವಾದ ಈ ಭುವನದ ವನಕ್ಕೆ ಆಗಮಿಸಿ ಇತರ ಮುನಿಗಳ ತಪಸ್ಸನ್ನುಮೀರಿ ಉಗ್ರತಪಸ್ಸಿನಲ್ಲಿ ತೊಡಗಿದ್ದಾಳೆ, ೧೩. ಆ ಪಾರ್ವತಿಯ ಧೈರ್ಯಅಸದೃಶ; ಆಕೆ ಪುಣ್ಯಮಯಿ, ಅನುಪಮ ತಪೋಮಗ್ನೆ, ಶಂಕರನಸುಖಕ್ಕೆ ಮುಖ್ಯ ಆಶ್ರಯಳು; ಪರಮ ಆಗಮಸ್ವರೂಪಿಣಿ, ಅವಳು ಜಗತ್ತಿನ ಹಿತಕ್ಕಾಗಿ ತಪಸ್ಸು ಮಾಡುತ್ತಿದ್ದಾಳೆ; ವಧೂಜನ ಶಿರೋಮಣಿ ಅವಳು; ರುದ್ರನ ಹೃದಯ ವನ್ನು ಬಲ್ಲವಳು; ಇಂತಹ ಮಹಿಮಾನ್ವಿತೆ ಪಾರ್ವತಿ ಜಲದಿಂದಲೂ ಛಲದಿಂದಲೂ ಸೂರ್ಯಕಾಂತಶಿಲೆಯನ್ನು ಮೆಟ್ಟಿದಳು. ವ॥ ಹೀಗೆ ಸೋಮಶೇಖರ ಪರಮಶಿವನ ಮಡದಿಯಾದ ಗಿರಿಜೆ ಹೇಮಕೂಟಪರ್ವತದ ಮೇಲೆ ಉಗ್ರತಪಸ್ಸಿನಲ್ಲಿ ನಿಂತಿರಲು ಅವಳ ತಪೋಜ್ವಾಲೆ ಮೂರು ಲೋಕಗಳನ್ನೂ ವ್ಯಾಪಿಸಿತು. ೧೪. ಅಗಜೆಯ ಅನುಪಮ ವಾದ ಉಗ್ರತಪೋಜ್ವಾಲೆ ಎಲ್ಲೆಲ್ಲಿಯೂ ಹಬ್ಬಿರುವಾಗ ಮೃಗಪಕ್ಷಿಗಳ ಸುಳಿವು ನಿಂತು ಹೋಯಿತು. ಗಾಳಿಯಚಲನೆ ನಿಂತಿತು, ಖೇಚರರು ಆ ದಾರಿಯಲ್ಲಿ ಬರುವುದನ್ನು ನಿಲ್ಲಿಸಿ

ಕಂ॥ ಆಸುರದ ಗಿರಿಜೆಯುಗ್ರವಿ
ಭಾಸುರತತಪಕಂಜಿ ನಭದ ತಪನಂ ನಡೆಯು ।
ತ್ತಾ, ಸರಿಸಮುಂ ಕರಂ ಬಿ
ಟ್ಟೋಸರಿಸಿಯೆ ನಡೆವನೆಂದೊಡೇವಣ್ಣಿಪೆನೋ ॥ ೧೫

ಅಸಮಾನಮಚಳಮದ್ಭುತ
ವಿಸರಮನೂನಪ್ರಭಂ ಶುಭಂ ಘನವಿಭವಂ ।
ಪೆಸರಿಡಬಾರದು ಮಿಗೆ ನಿ
ಟ್ಟಿಸಬಾರದು ನೋಡಬಾರದಂಬಿಕೆಯ ತಪಂ ॥ ೧೬

ವ॥ ಎಂಬ ಸಾಮರ್ಥ್ಯಮನೊಳಕೊಂಡು ಜಡೆಗಳ ಬೆಡಂಗಿ ಭಸಿತದ ಭಾಳ ಲೋಚನೆ, ರುದ್ರಾಕ್ಷಿಯ ಭದ್ರಾಂಗಿ, ನಾರ ಸೀಱೆಯ ಧೀರೆ, ಗಿರಿಶಿಖರದ ಗರುವೆ, ಉಗ್ರತಪದ ವ್ಯಗ್ರೆಯೆನಿಪ ಪಾರ್ವತೀದೇವಿ ಪ್ರಚಂಡತರಪ್ರತಾಪ ತಪೋವೇಷದಿಂದಿರೆಯಿರೆ,

ಮ॥ಸ್ರ॥ ದೆಸೆಯಂ ಕಾಹೇಱಿಸುತ್ತುಂ ತೃಣಕುಲಲತೆಯಂ ಸೀದು ಕರ್ಪೇಱಿಸುತ್ತುಂ
ರಸೆಯುಂ ಸಂತಾಪಿಸುತ್ತುಂ ಜಳಭರಿತತಟಾಕಂಗಳಂ ಶೋಷಿಸುತ್ತುಂ ।
ಸಸಿಯುಂ ವೃಕ್ಷಾಳಿಯುಂ ಸುಟ್ಟುರಿವುತೆ ಮೃಗಮುಂ ಬೇಯಿಸುತ್ತದ್ರಿಯುಂ ದ
ಳ್ಳಿಸಿ ಸೀಳುತ್ತುಂ ವಿಶಾಳಂ ದವಶಿಖಿಯವೊಲಳ್ದತ್ತವೋಘಂ ನಿದಾಘಂ ॥ ೧೭

ವ॥ ಅಂತು ತೋಱಿದ ನಿದಾಘದಲ್ಲಿ,

ದರು. ೧೫. ಭಯಂಕರವಾದ ಗಿರಿಜೆಯ ಉಗ್ರತಪಸ್ಸಿಗೆ ಹೆದರಿ ರವಿಯು ಅವಳು ತಪೋಮಗ್ನೆಯಾಗಿರುವ ಪ್ರದೇಶವನ್ನೇ ಬಿಟ್ಟು ದೂರಸರಿದು ಹೋಗತೊಡಗಿದನು ಎಂದ ಮೇಲೆ ಅದನ್ನು ಬಣ್ಣಿಸುವುದು ಹೇಗೆ? ೧೬. ಅಂಬಿಕೆಯ ತಪಸ್ಸು ಅನುಪಮ, ಅಚಲ, ಅದ್ಭುತಪ್ರಭೆಯುಳ್ಳದ್ದು; ಲೋಕಕ್ಕೆ ಶುಭಪ್ರದವಾದದ್ದು, ವೈಭವೋಪೇತವಾದದ್ದು, ಆದರೆ ಅದನ್ನು ಹೆಸರಿಸುವಂತಿಲ್ಲ, ನೋಡುವಂತಿಲ್ಲ, ನಿರೀಕ್ಷಿಸುವಂತಿಲ್ಲ ಎಂಬಷ್ಟುಮಟ್ಟಿಗೆ ಕಟೂಗ್ರವಾಗಿತ್ತು. ವ॥ ಹೀಗೆ ಮಹಾಸಾಮರ್ಥ್ಯಶಾಲಿನಿಯೂ, ಜಡೆಗಳ ಬೆಡಗನ್ನು ಹೊಂದಿದವಳೂ, ಭಸ್ಮಭೂಷಿತ ಗಾತ್ರಳೂ, ರುದ್ರಾಕ್ಷಭೂಷಿತೆಯೂ, ನಾರು ಸೀರೆ ಧರಿಸಿದವಳೂ ಆದ ಅಗಜೆಯು ಗಿರಿಶಿಖರದಲ್ಲಿ ಉಗ್ರತಪಸ್ಸಿನಲ್ಲಿರುವಾಗ ೧೭. ಪಾರ್ವತಿಯ ತಪೋಜ್ವಾಲೆಯಿಂದ ದಿಕ್ಕುಗಳಿಗೆ ಕಾವು ಏರಿದವು, ತೃಣಲತೆಗಳು ಸೀದು ಕಪ್ಪಾದವು, ಭೂಲೋಕ ಸಂತಾಪಗೊಂಡಿತು, ನೀರುತುಂಬಿದ್ದ ಕೆರೆಗಳು ಒಣಗಿದವು, ಮರಗಿಡಬಳ್ಳಿಗಳು ಸುಟ್ಟುಉರಿದವು, ಮೃಗತತಿ ಬೆಂದು ಹೋಯಿತು, ಬೆಟ್ಟಗಳು ಆ ಕಾವಿಗೆ ಸೀಳಿದವು, ಹೀಗೆ ಎಲ್ಲೆಲ್ಲಿಯೂ ಕಾಡ್ಗಿಚ್ಚಿನಂತೆ ಉಷ್ಣತೆ ಮಿತಿಮೀರಿತು.

ಕಂ॥ ಪೊಸಬೇಸಗೆಯೊಳ್ ಮೃಗತತಿ
ಯಸುವೆರಸಿರವೇಳ್ಕುಮೆಂದು ಕರುಣಿಸಿ ಮಿತ್ರಂ ।
ಬಿಸಿಲಂ ಪಿಳಿದೊಡೆ ಬೆಸ್ನೀ
ರೊಸರ್ವಂತಿರ್ದುದು ಮರೀಚಿಕಾಜಲಮೆತ್ತಂ ॥ ೧೮

ತರದಿಂದಂ ತೆರೆಮಸಗುವ
ಮರೀಚಿಕಾಜಲಮನಿಳೆಯ ಜಳಮೆಂದು ಕರಂ ।
ಹರಿಣಂಗಳ್ ಪರಿತಂದಾ
ತುರಿಸುತ್ತುಂ ಬಿಸಿಲ ಬಯಲನೀಂಟಿ ಬಳಲ್ದುಂ ॥ ೧೯

ವಹ್ನಿ ಧರೆಯೊಳಗೆ ತೀವಿದ
ಚಿಹ್ನಮಿದೆಂಬಂತೆ ಬಿಸಿಲ ಬೇಗೆ ಕರಂ ಮ ।
ಧ್ಯಾಹ್ನದೊಳಳುರ್ದೊಡೆ ಮೃಗತತಿ
ಜಾಹ್ನವಿಯೊಳ್ ಪುಗಲೆ ಬಯಸಿದುವು ಬೇಸಗೆಯೊಳ್ ॥ ೨೦

ವ॥ ಆ ಸಮಯದೊಳ್,

ಚಂ॥ ಘರಿಘರಿಲೆಂದು ಸೀದುವು ವಿಹಂಗಕುಲಂ ಕೆಟ್ಟ್ ಭಾವಿ ಬೆಂಚಿಗಳ್
ಪುರಿದರಳೆಳ್ದುವೀ ಮನುಜರಾತಪತಾಪದೊಳಳ್ಕಿ ಬಳ್ಕಿದರ್ ।
ಕರಿಮುರಿವೋಯ್ತರಣ್ಯಮುಟಿ ಬೆಂದು ಮೃಗಾವಳಿ ಪೊಂದಿದತ್ತು ನಿಂ
ದುರಿದುವು ಬೆಟ್ಟಮಿಂಗಿದುವು ವಾರಿಧಿ ಕಾಯ್ದುದು ಭೂರಿಭೂತಳಂ ॥ ೨೧

೧೮. ಕಡು ಬೇಸಗೆಯಲ್ಲಿ ಎಲ್ಲೆಲ್ಲಿಯೂ ಬಿಸಿಲ್ಗುದುರೆ (ಮರುಮರೀಚಿಕೆ) ಬಾಯಾರಿದ ಮೃಗಗಳಿಗೆ ನೀರಿನ ಭ್ರಾಂತಿಯನ್ನು ಉಂಟುಮಾಡುತ್ತಿತ್ತು. ಇದನ್ನು ಕವಿ ಹೀಗೆ ವರ್ಣಿಸಿದ್ದಾನೆ. ಈ ಹೊಸಬಗೆಯ ಬೇಸಗೆಯಲ್ಲಿ ಮೃಗಗಳು ಬಾಯಾರಿ ಪರಿತಪಿಸುತ್ತಿವೆ ಎಂದು ಸೂರ್ಯನು ಯೋಚಿಸಿ ಕರುಣೆಯಿಂದ ಬಿಸಿಲನ್ನು ಹಿಂಡಿ ಬಿಸಿನೀರನ್ನು ಒಸರಿಸಿದನೋ ಎಂಬಂತೆ ಮರೀಚಿಕಾಜಲ (ಝಳ) ಬೆಳಗುತ್ತಿತ್ತು. ೧೯. ಬಗೆಬಗೆಯ ತೆರೆಗಳೇಳುವಂತೆ ತೋರುತ್ತಿದ್ದ ಆ ಮರೀಚಿಕಾಜಲವನ್ನೇ ನಿಜವಾದ ನೀರೆಂದು ಭ್ರಮಿಸಿದ ಚಿಗರಿಗಳು ಓಡಿಬಂದು ಆತುರದಿಂದ ಆ ಬಿಸಿಲ ಬಯಲನ್ನು ಹೀರಿ ಬಳಲುತ್ತಿದ್ದವು. ೨೦. ಬೆಂಕಿಯ ನೆಲದಲ್ಲಿ ವ್ಯಾಪಿಸಿರುವ ಚಿಹ್ನೆಯೇ ಇದು ಎಂಬಂತೆ ಬಿಸಿಲಿನ ಬೇಗೆಯು ಮಧ್ಯಾಹ್ನದಲ್ಲಿ ತುಂಬಿರುವಾಗ ಆ ಬಿಸಿಲಲ್ಲಿ ಮೃಗಗಳು ಗಂಗೆಯಲ್ಲಿಯೊ ಎಂಬಂತೆ ಮುಳುಗಲು ಬಯಸಿದವು! ೨೧. ಹಕ್ಕಿಗಳು-ಘರಿಘರಿಲೆಂದು ಸೀದವು. ಕೆರೆಭಾವಿಕೊಳಗಳು ಒಣಗಿದವು, ಮಾನವರು ಆ ಉರಿ ಬಿಸಿಲಿನಲ್ಲ ಅಳುಕಿದರು, ಕಾಡುಗಳು ಕಮರಿ ಸೀದು ಹೋದವು, ಮೃಗಗಳು ಬೆಂದವು, ಬೆಟ್ಟಗಳು ಉರಿದವು, ಕಡಲು ಇಂಗಿತು, ತೊಡಗಿತು,

ಕಂ॥ ಮೃಗಶಿಶುಗಳ್ ಕರಿಮುರಿ ಕಣ್
ಗೊಗೆದ ಮರಂ ಘರಿಘರಿಲ್ ಗಜಂ ಚಿಮಿಚಿಮಿಯೆಂ ।
ದಗನಿಕರಂ ಛಿಳಿಛಿಟಲೆನೆ
ಮಿಗೆ ಸೀದುವು ಬೆಂದುವುರಿದುವೊಡೆದುವು ಬಿಸಿಲೊಳ್ ॥ ೨೨

ಮರದಡಿಯೊಳ್ ಕಾನನದೊಳ್
ಗಿರಿತಟದೊಳ್ ಬಟ್ಟಬಯಲೊಳಂಬರತಳದೊಳ್ ।
ಕರಿಯ ಬಿಸಿಲುರಿಯ ಬಿಸಿಲ
ಚ್ಚರಿಯ ಬಿಸಿಲ್ ಪಿರಿಯ ಬಿಸಿಲಖಂಡಿತದ ಬಿಸಿಲ್ ॥ ೨೩

ವ॥ ಮತ್ತಮಲ್ಲದೆ,

ಮ॥ ನಡೆಯಲ್ಕೊಂದಡಿಯಿಟ್ಟು ಕಾಯ್ದ ನೆಲನಂ ಕಾಲ್ ಮುಟ್ಟೆ ಚುಯ್ಯೆಂದು ಬೆಂ
ದೊಡೆ ಮತ್ತೊಂದಡಿಯೆತ್ತಲಾಱದಳಲಿಂ ಕಣ್ಮುಚ್ಚಿ ಹಸ್ತಾಗ್ರಮಂ ।
ಕಡೆವಾಯೊಳ್ ಸೆಱೆಯಿಟ್ಟು ನೆತ್ತಿ ಬಿರಿದೆತ್ತಲ್ ಮುತ್ತುಗಳ್ ಸುತ್ತಲುಂ
ಸಿಡಿಯುತ್ತಿರ್ಪಿನಮಿರ್ದುದೊಂದತಿ ಮದೇಭಂ ಭೀಷ್ಮದೊಳ್ ಗ್ರೀಷ್ಮದೊಳ್ ॥ ೨೪

ವ॥ ಅಂತುಮಲ್ಲದೆ ಮತ್ತೊಂದೆಡೆಯೊಳ್,

ಚಂ॥ ಎಲೆಲೆಲೆ ನೋಡನೋಡೆ ಕೆಲನುಂ ಬಲನುಂ ನೆಲನುಂ ದವಾಗ್ನಿ ಸು
ಟ್ಟೊಲೆಯವೊಲಾಗೆ ಮೆಟ್ಟಿದಡಿಯೆತ್ತಿದ ಕಾಲುಱೆ ಸೀಯೆ ನಿಂದಿರಲ್ ॥

ನೆಲ ಕಾಯ್ದಿತು. ೨೨. ಮೃಗ ಶಿಶುಗಳು ಕಮರಿದವು, ಕಂಡಮರಗಳು ಘರಿಲ್ ಘರಿಲೆಂದವು, ಆನೆಗಳು ಚಿಮಿಚಿಮಿಯೆಂದು ಕುದಿದವು, ಬೆಟ್ಟಗಳು ಛಿಳಿಛಿಟಿಯೆಂದು ಸೀಳಿ ಸೀದವು, ಬೆಂದವು ಮತ್ತು ಆ ಬಿಸಿಲಲ್ಲಿ ಒಡೆದವು. ೨೩. ಮರದ ಕೆಳಗೆ, ಕಾಡಿನಲ್ಲಿ, ಬೆಟ್ಟದ ತಪ್ಪಲಲ್ಲಿ, ಬಯಲಿನಲ್ಲಿ, ಗಗನದಲ್ಲಿ ಕ್ರಮವಾಗಿ ಕರಿಯಬಿಸಿಲು, ಉರಿಯಬಿಸಿಲು, ಅಚ್ಚರಿಬಿಸಿಲು, ಪಿರಿಯಬಿಸಿಲು, ಮತ್ತು ಅಖಂಡವಾದ ಬಿಸಿಲು ಹೀಗೆ ಎಲ್ಲೆಲ್ಲಿಯೂ ಬಿಸಿಲೇಬಿಸಿಲು! ೨೪. ಅಲ್ಲೊಂದು ಮದ್ದಾನೆ; ಅದು ನಡೆಯಲೆಂದು ಕಾಯ್ದ ನೆಲದಮೇಲೆ ಒಂದು ಅಡಿಯಿಟ್ಟಿತು; ಅದು ಚುಯ್‌ಯೆಂದು ಬೆಂದುಹೊಯಿತು! ಆಗ ಅದು ಮತ್ತೊಂದು ಅಡಿಯನ್ನು ಎತ್ತಲಾರದೆ ದುಃಖದಿಂದ ಕಣ್ಣುಮುಚ್ಚಿ, ತನ್ನ ಸೊಂಡಿಲನ್ನು ಕಡೆಬಾಯಿಯಲ್ಲಿ ಸೆರೆಯಿಟ್ಟಿತು; ಅಷ್ಟರಲ್ಲಿ ಅದರ ನೆತ್ತಿ ಬಿರಿದು ಮುತ್ತುಗಳು ಸುತ್ತಲೂ ಸಿಡಿಯುತ್ತಿರಲು ಅದು ಆ ಗ್ರೀಷ್ಮದಲ್ಲಿ ಭಯಂಕರವಾಗಿ ನಿಮಿರಿನಿಂತಿತ್ತು! ೨೫. ಮತ್ತೊಂದು ಆನೆ, ಅದರ ಸ್ಥಿತಿಯಂತೂ ಅತ್ಯಾಶ್ಚರ್ಯಕರ! ಅರರೆ, ಅದು ನೋಡುತ್ತಿದ್ದಂತೆಯೆ ಅಲ್ಲಿಯ ಸುತ್ತುಮುತ್ತಿನ ನೆಲವೆಲ್ಲ ದಾವಾಗ್ನಿಯು ಸುಟ್ಟ ಒಲೆ

ಚಲಿಯಿಸಲಾಱದಾತಪದೆ ಹಸ್ತಮನೆತ್ತುತೆ ಘೀಳಿಡುತ್ತೆ ತಾ
ನೊಲೆದುದು ಚೇಷ್ಟೆಗುಂದಿದುದು ಜೋಲ್ದುದು ಬಿಳ್ದುದು ಬೆಂದುದೊಂದಿಭಂ ॥ ೨೫

ವ॥ ಮತ್ತಮಲ್ಲದೆ,

ಕಂ॥ ಜಳಜಸಖನನಿಲಸಖನೆಂ
ದಿಳೆಯೊಳ್ ರಸವೆಸರನಾನದಿರ್ದೊಡೆ ಸೂರ್ಯಾ।
ನಳರೋವೊ ಸಂತಮಿರ್ಪರ
ಘಳಿಲನೆ ನಿಂದುರಿದು ಹೋಗರೇ ಬೇಸಗೆಯೊಳ್ ॥ ೨೬

ತಪನನ ಮೆಯ್ಯೊಳ್ ಪುಗುಳಸ
ಮಪಾವಕನ ತನುವಿನೊಳ್ ಮಹಾ ಸ್ಫೋಟಕವಾ।
ತಪದ ಕಡುಪಿಂದೆ ನೆಗೆತಂ
ದಪುವೆನೆ ಬೇಸಗೆಯ ಬಿಸಿಲ ನಾಲಗೆಯೊಳ್ಪಂ ॥ ೨೭

ವ॥ ಮತ್ತಮಾ ನಿದಾಘಂ ಕಡುಗಾಯ್ದು ತೀವ್ರ ಖರಕರಪ್ರಕರಮಂ ಚುರ್ಱಚುರ್ಱನೆ ಸುಡೆ ಕಾಯ್ದುರ್ಕಿ ಬಿಸಿಯ ತೆರೆ ತಾಪುರ್ಱಟ್ಟೆ ನೊರೆಗಟ್ಟೆ ಕುಕ್ಕುಳಂಗುದಿವ ಬಿಸುನೀರೊಳ್ ನಿಲಲಾಱದೆ ನೆಱೆ ಮಱುಗಿ ಪೊಱಪೊಣ್ಮಿ ಬೆದಬೆದನೆ ಬೆಂದು ಬೆಂಡೆಳ್ದು ಬಱಬಱಿಂಬತ್ತಿ ಹೊತ್ತಿ ಹೊಗೆದು ಜೀವನವಿಂಗೆ ಜೀವನವಿಂಗುವಂತಾಗೆ ಕಿಱುವೆಂಚೆಯೊಳ್ ಕೋಟಲೆಗೊಳುತಿರ್ಪ ಪಾಠೀನಕುಲದಿಂ ಮತ್ತಂ ಮಸಗುವ ತಪನನ ಬಿಸಿಯ ಬಿಂಬದಿಂದೊಗೆತರ್ಪ ಬಿಸಿಲ ಬೆಂಕಿಯಿಂ

ಯಂತೆ ಆಗಿತ್ತು ; ಅದು ಮೆಟ್ಟಿ ಅಡಿಎತ್ತಿತು ; ಕಾಲು ಉರಿದು ಸೀದು ಹೋಯಿತು ! ನಿಂತಿತ್ತು. ಮುಂದೆ ಚಲಿಸಲಾರದೆ ಬಿಸಿಲಿನಲ್ಲಿ ತನ್ನ ಸೊಂಡಿಲನ್ನು ಎತ್ತಿ ಘೀಂಕರಿಸಿ ಒಲೆದಾಡಿತು, ಚೇಷ್ಟೆಗುಂದಿತು, ಜೋಲುಮುಖಹಾಕಿ ಬೆಂದು ಬಿದ್ದಿತು ! ೨೬. ಜಲಜಸಖ ಸೂರ್ಯ, (ಕಮಲ) ಅನಿಲಸಖ ಅಗ್ನಿ; (ಗಾಳಿ) ಎಂದು ಬೇರೆಬೇರೆ ಹೆಸರು ಪಡೆಯದಿದ್ದ ಪಕ್ಷದಲ್ಲಿ ಓಹೋ ! ಈ ಸೂರ್ಯ ಮತ್ತು ಅನಲ (ಬೆಂಕಿ)ರು ಇಂಥ ಕಡು ಬೇಸಗೆಯಲ್ಲಿ ತಕ್ಷಣ ಉರಿದೇ ಹೋಗುತ್ತಿದ್ದರೋ ಏನೊ ? (ಅಷ್ಟು ತೀಕ್ಷ್ಣವಾದ ಬೇಸಗೆ ಎಂದು ಅರ್ಥ) ೨೭. ಆ ಬೇಸಗೆಯ ಉಗ್ರತೆ ಎಷ್ಟೆಂದು ವರ್ಣಿಸಲಳವಲ್ಲ ! ಏಕೆಂದರೆ ಆ ಕಾಲ ಅತಿಉಷ್ಣತೆಯಿಂದ ಸೂರ್ಯನ ಮೈಯಲ್ಲಿ ಬೊಕ್ಕೆಗಳಾದವು ; ಪಾವಕ (ಬೆಂಕಿ)ನ ಮೈಯಲ್ಲಿಯೂ ಮಹಾಸ್ಫೋಟಕ (ದೊಡ್ಡ ಬೊಕ್ಕೆಗಳು)ಗಳು ಎದ್ದವು ಎಂದ ಮೇಲೆ ಬೇಸಗೆಯ ತಾಪವನ್ನು ಎಷ್ಟು ವರ್ಣಿಸಲಾದೀತು ! ವ॥ ಮತ್ತು ಆ ಬೇಸಗೆಯು ಕಡು ಬೇಗೆ ರವಿಯ ಕಿರಣಗಳನ್ನೇ ಚುರ್‌ಚುರ್ ಎಂದು ಸುಡಲು, ಕಾಯ್ದು ಉಕ್ಕಿದ ಬಿಸಿಯ ತೆರೆಬಿಣಗಿ ನೊರೆಗಟ್ಟಿ ಕತಕತ ಕುದಿಯುವ ಬಿಸಿನೀರಿನಲ್ಲಿ ನಿಲ್ಲಲಾರದೆ ನೆರೆಮರುಗಿ ಬೆದಬೆದನೆ ಬೆಂದು, ಚನ್ನಾಗಿಬತ್ತಿ, ಹೊತ್ತಿ ನೀರು ಇಂಗಿ ಜೀವನವೇ ಇಂಗುವಂತಾಗಲು, ಸಣ್ಣ ಮಡುವಿನಲ್ಲಿ ಕೊರಗುತ್ತಿರುವ ಮೊಸಳೆ (ಪಾಠೀನ)ಗಳಿಂದಲೂ, ಮತ್ತು ಅಲ್ಲಿರುವ

ಹೊಗೆದೆಯ್ದೆ ತರುನಿಕರವುರಿದು ಕರಿಗೊಳ್ಳಿಯಂತೆ ಕಾಯ್ಪೇಱೆ ಕರ್ಬೊಗೆಯಂ ನೆಗಪುವ ಕೊಂಬುಗಳ ಕಡುಬಿಸುಪು ಕಾಲ್ಗಳಂ ಸುಡೆ ಬಳ್ಳಿಗೊಂಡ ಬೇಗೆಯಿಂ ಕುಳ್ಳಿರಲಾರದೆ ಏಱೆ ನೆಗೆದು ಪಾಱುವಾಗಳ್ ಬಿಸಿಲುರಿ ಪೊಡೆದು ಪಕ್ಕಂ ಸೀದು ನೆಲಕ್ಕೆ ಬಿಳ್ದು ಕಣ್ಮುಚ್ಚಿ ಹಮ್ಮಯ್ಸಿ ಹರಣಂಗಳೆದು ಮಳಲೊಳ್ ಪುರಿದಂತಾಗೆ ಪರೆದಿರ್ದ ಬಹುವಿಧದ ವಿಹಂಗಾವಳಿಯಿಂ ಮತ್ತಂ ತಪನಪ್ರದ್ಯೋತಹತಿಯಿಂ ಬೆನ್ನೊಡೆದು ಬಾಯಾರಿ ತಾಳಿಗೆ ಬತ್ತಿ ನೆತ್ತಿ ಹೊತ್ತಿ ಕಣ್ಣೊಳ್ ನೆತ್ತರೆಚ್ಚು ಪಾಯೆ ಪರಿವರಿದು ಮರೀಚಿಕಾಜಲದೊಳ್ ಮೊಗವಿಟ್ಟು ಬಗೆಗೆಟ್ಟು ಮರವಟ್ಟು ಧರೆಯೊಳ್ ಕೆಡೆದಿರ್ಪ ನಾನಾಮೃಗನಿಕಾಯದಿಂ ಮತ್ತಂ ಮಾರ್ತಾಂಡ ಮರೀಚಿ ಸುತ್ತಿ ಹುತ್ತೆ ಕುಂಭಸ್ಥಳಂ ಹೊತ್ತಿ ಹೊಗೆದು ಬಿರಿದ ನೆತ್ತಿಯಿಂ ಮುತ್ತೊಡೆದು ಸಿಡಿದು ಪಾಱೆ ಬೆನ್ನೊಣಗಿ ಚರ್ಮಂ ಹೊಪ್ಪಳಿಸಿ ಸೀಳ್ದು ಬೀಡೆ ನಾಡೆ ನೋಯಿಸಿ ನೀರಡಿಕೆ ನೆರೆದೊಳಗುದೋಱೆ ಬಾಯೊಳ್ ಭರಿಕೆಯ್ಯನಿಟ್ಟೊಡಲೊಳಗೆ ಪುದಿ ಪಾಱೆ ಬೆಂದ ಪುಷ್ಕರಮಂ ಭೋಂಕನೆ ತೆಗೆದು ಕಾಯ್ದ ಕೋಡೊಳ್ ಪೊಜಲಣ್ಮದೆ ಮೀಱಿದ ದಱಿಯ ತಟದೊಳ್ ನೀದಿ ಕೆಡಪಿ ಕಣ್ಮುಚ್ಚಿ ನೆಮ್ಮಿ ಹಮ್ಮದಂಬೋಗಿ ಕಿಡಿಸೂಸಿ ಸುಯ್ದು ಗಾಸಿಯಾಗಿ ಮೆದೆಗೆಡೆದು ಮದವಳಿದಿರ್ಪ ಮಾತಂಗವ್ರಾತದಿಂ ಮತ್ತಂ ಶತಧಾರಾಸಪ್ರದಂತೆ ಸಹಸ್ರ ಕರಮರೀಚಿಗಳುಱದೆಱಗಿ ನಟ್ಟು ಕಾಯೆ ಗಳಗಳನರಳ್ದು ಪಳಪಳನೆ ಸೀಳ್ದು ಸಿಡಿದೊಡೆದು ಹಿಗ್ಗಿ ತಗ್ಗಿ ಕುಗ್ಗಿ ಕುಪ್ಪಳಿಸಿರ್ಪ ಪರ್ವತ ಪ್ರತಾನದಿಂದತ್ಯುಗ್ರತೆಯನತಿ ಪ್ರಚಂಡತೆಯನತ್ಯುಷ್ಣತೆಯನತ್ಯಾಭೀಳತೆಯನತಿ ಪ್ರತಾಪಮನುಗುಳುತ್ತಿರ್ದುದಂತುಮಲ್ಲದೆಯುಂ,

ಹಕ್ಕಿಗಳ ಸ್ಥಿತಿ ನೋಡಿ–ಬಿಸಿಯ ಬಿಂಬದಿಂದ ಬರುವ ಬಿಸಿಲ ಬೆಂಕಿಯಿಂದ ಹೊಗೆಯೆದ್ದು ಮರಗಳು ಉರಿದು ಕರಿಯ ಕೊಳ್ಳಿಯಂತೆ ಬಿಸಿಯೇರಲು, ಕಪ್ಪುಹೊಗೆಯನ್ನು ಚಿಮ್ಮುವ ಕೊಂಬುಗಳ ಬಿಸಿಯ ಹಕ್ಕಿಗಳ ಕಾಲುಗಳನ್ನು ಸುಡಲು ಬಳ್ಳಿಗೊಂಡ ಬೇಗೆಯಿಂದ ಅಲ್ಲಿ ಕುಳಿತಿರಲಾರದೆ ಅಲ್ಲಿಂದ ನೆಗೆದು ಹಾರುವಾಗ ಬಿಸಿಲ ಉರಿಹೊಡೆಯಲು, ಪುಕ್ಕಗಳು ಸೀದು, ನೆಲಕ್ಕೆ ಬಿದ್ದು, ಕಣ್ಣುಮುಚ್ಚಿ ಅಸುನೀಗಿ, ಮರಳಿನಲ್ಲಿ ಹುರಿದಂತಾಗಲು, ಹರಡಿದ್ದ ಹಲವು ಬಗೆಯ ಹಕ್ಕಿಗಳಿಂದಲೂ, ಮತ್ತು ಸೂರ್ಯನ ಬೇಗೆಯಿಂದ ಬೆನ್ನೊಡೆದು ಬಾಯಾರಿ;ಬಾಯಿ ಅಂಗಳವು ಬತ್ತಿ, ಹೊತ್ತಿ, ಕಣ್ಣಲ್ಲಿ ರಕ್ತವು ಚಿಮ್ಮಿ ಸೋರಿ, ಮರೀಚಿಕಾ (ಬಿಸಿಲ್ಗುದುರೆ) ಜಲದಲ್ಲಿ ಮುಖವಿಟ್ಟು, ಬಗೆಗೆಟ್ಟು ಮರವಟ್ಟು (ನಿಶ್ಚೇಷ್ಟವಾಗಿ) ನೆಲದ ಮೇಲೆ ಬಿದ್ದಿರುವ ಹಲವು ಮೃಗಗಳಿಂದಲೂ ಮತ್ತು ಸೂರ್ಯಕಿರಣಗಳು ಸುತ್ತಿ ಮುತ್ತಲು, ಕುಂಭಸ್ಥಳವು ಹೊತ್ತಿಕೊಂಡು ಒಡೆದ ನೆತ್ತಿಯಿಂದ ಮುತ್ತುಗಳು ಒಡೆದು ಸಿಡಿದು ಹಾರಿ, ಬೆನ್ನು ಒಣಗಿ, ಚರ್ಮವು ಕಾಯಿಕಟ್ಟಿ, ಬಿರುಕುಬಿಟ್ಟು, ಹೆಚ್ಚು ನೋಯಿಸಿ, ನೀರಡಿಕೆಯು ಮಿತಿಮೀರಲು, ಬಾಯೊಳಗೆ ಸೊಂಡಿಲನ್ನು ಇಟ್ಟು, ಒಡಲೊಳಗೆ ಪುಡಿಹಾರಲು, ಬೆಂದ ಸೊಂಡಿಲನ್ನು ತಕ್ಷಣ ತೆಗೆದು,ಕಾಯ್ದ ಕೋಡಿನಲ್ಲಿ ಹೊರಲಾರದೆ. ಮೀರಿದ ದರಿ(ಗುಹೆ)ಯ ತಟದಲ್ಲಿ ನೀಡಿ ಕೆಡಪಿ ಕಣ್ಣುಮುಚ್ಚಲು, ಮೈಮರೆದು, ಕಿಡಿಸೂಸಿ, ಬಿಸುಸುಯ್ದು ಗಾಸಿಯಾಗಿ ಮೆದೆಯಂತೆ ಬಿದ್ದು ಮದವಳಿದಿರುವ ಆನೆಗಳಿಂದಲೂ, ಮತ್ತು ಸಾವಿರಾರು

ಮ॥ ಸ್ರ॥ ಪಸಿವಿಂ ದಾವಾನಳಂ ಸುಟ್ಟುರಿಪೆ ತರುಗಿರಿವ್ರಾತಮಿಲ್ಲಾದುದೋ ನಾ
ಲ್ದೆಸೆಯೊಳ್ ಸೂರ್ಯಂ ಕ್ಷುಧಾ ಪೀಡಿತನಱಸುತೆ ಕೆಯ್ನೀಡೆ ನಿಸ್ಸಾರಕಾಷ್ಠ।
ಪ್ರಸರಂ ಕೌಱಿಲ್ದುದೋ ನಿಂದನುಪಮತೃಷಿತಂ ವಾಡಬಂ ಪೀಱೆತಾಂಶೋ
ಷಿಸಿತೋವಾರಾಶಿಯೆಂಬುಷ್ಣ ಮನೊದವಿಸಿತತ್ಯುಗ್ರಯೋಗ ನಿರಾಘಂ ॥ ೨೮

ವ॥ ಆ ನಿದಾಘದಲ್ಲಿ,

ಮ॥ ಸ್ರ॥ ರವಿಕಾಂತೋಗ್ರಸ್ಫುಲಿಂಗಪ್ರತತಿ ನೆಗೆದು ಪಾದಂಗಳೊಳ್ ಬೀೞ್ವೊಡಂ ಪೊ
ಣ್ಮುವ ದಾವಪ್ರೋದ್ಭವ ಪ್ರಸ್ಫುರಿತವಿಲಸದುಷ್ಣಂ ತನೂ ಭಾಗಮಂ ಪ।
ತ್ತುವೊಡಂ ತದ್ದೇಹದಗ್ನಿಪ್ರಭೆಯೊದವುವೊಡಂ ಸೂರ್ಯತಿಗ್ಮಾಂಶುಗಳ್ ತಾ
ಗುವೊಡಂ ಮಾಧ್ಯಂ ನಿದಾಘಂ ಕವಿದೊಡಮನಿತಕ್ಕಳ್ಕದಂತಾರ್ಯೆ ನಿಂದಳ್ ॥ ೨೯

ವ॥ ಅಂತು ನಿಂದು,

ಕಂ॥ ದಶಭುಜನ ಮನೋವಲ್ಲಭೆ
ದಿಶಾವಳೀಭರಿತ ಕೀರ್ತಿಯುತೆ ಘೋರತಪೋ।
ವಶೆ ನೆಱೆ ಗಂಗಾಧರನಂ
ಶಶಿಧರನಂ ನೆನೆದು ಕಳೆದಳಾ ಬೇಸಗೆಯಂ ॥ ೩೦

ಮೋಡಗಳಂತೆ ಸೂರ್ಯಕಿರಣಗಳು ಎರಗಿ ಕಾಯುತ್ತಿರಲು ಗಳಗಳನೆ ನರಳಿ, ಪಳಪಳನೆ ಸೀಳ್ದು, ಸಿಡಿದೊಡೆದು ಹಿಗ್ಗಿ ತಗ್ಗಿ ಕುಗ್ಗಿ ಕುಪ್ಪಳಿಸುತ್ತಿರುವ ಪರ್ವತಗಳ ಸಮೂಹದಿಂದ ಅತಿ ಉಗ್ರತೆಯನ್ನು, ಅತ್ಯುಷ್ಣವನ್ನು, ಭಯಂಕರತೆ (ಆಭೀಳತೆ)ಯನ್ನು ಅತಿ ಪ್ರತಾಪವನ್ನು ಆ ಬೇಸಗೆ ಉಗುಳುತ್ತಿತ್ತು. ೨೮. ದಾವಾನಲಕ್ಕೆ ಹಸಿವಾಗಿ ಎಲ್ಲವನ್ನೂ ಸುಟ್ಟು ಉರಿಸಿದುದರಿಂದ ತರುಗಿರಿಗಳು ಇಲ್ಲವಾದವೊ! ನಾಲ್ಕು ದಿಕ್ಕುಗಳಲ್ಲಿಯೂ ಸೂರ್ಯನು ಕ್ಷುಧಾಪೀಡಿತನಾಗಿ ಆಹಾರಕ್ಕಾಗಿ ಕೈನೀಡಲು ಸೌದೆಗಳೆಲ್ಲ ಕಮರಿ ಹೋಯಿತೋ! ವಡಬಾಗ್ನಿಯು ಬಾಯಾರಿಕೆಯಿಂದ ನೀರಿನ ಅಂಶವನ್ನೆಲ್ಲ ಹೀರಲು ಸಮುದ್ರವೆಲ್ಲ ಒಣಗಿಹೋಯಿತೋ ಎಂಬಂತೆ ಆ ಬೇಸಗೆಯು ಅತ್ಯುಗ್ರ ಉಷ್ಣವನ್ನು ಒದಗಿಸಿತು. ೨೯. ಸೂರ್ಯಕಾಂತಶಿಲೆಗಳ ಪ್ರಜ್ವಲಿಸುವ ಕಿಡಿಗಳು ಸಿಡಿದು ನೆಗೆದು ಅವಳ ಪಾದಗಳ ಮೇಲೆ ಬೀಳುತ್ತಿವೆ, ದಾವಾಗ್ನಿಯ ಉಗ್ರವಾದ ಉಷ್ಣವು ಅವಳ ಶರೀರವನ್ನು ಸುಡುತ್ತಿದೆ; ಅವಳ ಒಳಗಿನ ಜಠರಾಗ್ನಿ ಪ್ರಭೆಗಳು ಚಿಮ್ಮುತ್ತಿವೆ; ಮೇಲಾಗಿ ಮಧ್ಯಾಹ್ನದ ಚಂಡ ಸೂರ್ಯನ ತೀಕ್ಷ್ಣವಾದ ಕಿರಣಗಳು ಅವಳಿಗೆ ತಾಗುತ್ತಿವೆ. ಇಷ್ಟಾದರೂ ಪೂಜ್ಯಳಾದ ಅಗಜೆಯು ಕೊಂಚವೂ ಅಳುಕದೆ ನಿಂತಿದ್ದಾಳೆ! ೩೦. ದಶಭುಜಪರಶಿವ ಮನೋವಲ್ಲಭೆಯೂ, ದಿಗಂತವಿಶ್ರಾಂತ ಕೀರ್ತಿಶಾಲಿನಿಯೂ, ಘೋರ ತಪೋಮಗ್ನೆಯೂ ಆದ ಪಾರ್ವತಿ ಗಂಗಾಧರನೂ ಶಶಿಧರನೂ ಆದ ಪರಶಿವನನ್ನು ನೆನೆಯುತ್ತಾ

ವ॥ ಆ ಸಮಯದೊಳ್ ಸಕಳಕಳಾ ಕೋವಿದೆಯರಪ್ಪ ಜಯೆವಿಜಯೆಗಳ್ ಮೆಯ್ಯಿಕ್ಕಿ ಕೈಯಂ ಮುಗಿದು,

ಚಂ॥ ಮದವುಡುಗಿತ್ತು ಬೇಸಗೆಕರಂ ನಸುದೋಱಿದುವಲ್ಲಿಗಲ್ಲಿಗಂ
ಬುದನಿಕರಂ ಸುರುಳ್ದುದು ಬಿಸಿಲ್ ನೆಗೆಹತ್ತು ತಟಿಲ್ಲತಾಂಕುರಂ ।
ಬೆದಱಿದುವಂಚೆಯಾಡಲಡಿಯಿಟ್ಟುವು ಸೋಗೆಗಳೆಯ್ದೆ ಪಲ್ಲವಂ
ಪುದಿದ ಕದಂಬದೊಳ್ ಮುಗಿಲನೆಳ್ಪಸಲಿರ್ದುದು ಪಶ್ಚಿಮಾನಿಳಂ ॥ ೩೧

ವ॥ ಅನಂತರಮಾಗಳ್,

ಕಂ॥ ಕಡವಿನ ಸೊವಡಿಂದೊಂದೆರ
ಡಡಿಯಿಡುತಿರ್ದಪುದು ಗಾಳಿ ನಲಿದುನವಿಲ್ಗಳ್ ।
ನಡೆನಟಣೆ ಗೊಳುತ್ತಿರ್ದಪು
ವೆಡೆಯಱಸುತ್ತಿರ್ಪುವಂಚೆ ಸುಳಿದುವು ಮುಗಿಲ್ಗಳ್ ॥ ೩೨

ವ॥ ಎಂದು ಬಿನ್ನಯ್ಸುತ್ತುಂ ಮತ್ತಮಿಂತೆಂದರ್

ಕಂ॥ ಪೋದುದು ಬೇಸಗೆ ಕಾರ್ ಮೊಗ
ವಾದುದು ತರುತಳದ ನೆಳಲ ತಣ್ಪನೊಳಿರ್ದ।
ತ್ತ್ಯಾದರದಿಂ ಮಾಳ್ಪುದು ಪು
ಣ್ಯೋದಯ ನಿಷ್ಕಪಟ ವಿಪುಳ ತಪಮಂ ಗಿರಿಜೇ ॥ ೩೩

ಎನೆ ಕೇಳ್ದು ಮನಂಗೊಂಡ
ತ್ಯನುಪಮ ಶೈವಪ್ರತಾಪ ತೇಜೋನಿಧಿ ಭೋಂ ।

ಬೇಸಗೆಯನ್ನು ಕಳೆದಳು. ವ|| ಆಗ ಸಕಲಕಲಾನಿಪುಣೆಯರಾದ ಸಖಿಯರು ಭಕ್ತಿಯಿಂದ ಕೈಮುಗಿದು ೩೧. ಬರಬರುತ್ತಾ ಬೇಸಗೆಯ ತೀವ್ರತಾಪ ಕಡಮೆಯಾಯಿತು ; ಅಲ್ಲಲ್ಲಿ ಮೇಘಗಳು ಸುರುಳಿ ಸುರುಳಿಯಾಗಿ ಸರಿದು, ಬಿಸಿಲು ಬಿಡಿಬಿಡಿಯಾಗತೊಡಗಿತು. ಮಿಂಚು ಹೊಳೆಯಿತು, ಹಂಸಗಳು ಬೆದರಿದವು, ನವಿಲುಗಳು ಕುಣಿಯತೊಡಗಿದವು, ನೀಪವೃಕ್ಷಗಳು ಚಿಗುರಿಟ್ಟವು, ಪಶ್ಚಿಮದ ಗಾಳಿಯು ಬೀಸಿ ಮುಗಿಲುಗಳನ್ನು ಚದುರಿಸತೊಡಗಿತು. ೩೨. ನೀಪ ಕಡವು (ಕದಂಬ) ವೃಕ್ಷಗಳ ಸುವಾಸನೆಯಿಂದ ಗಾಳಿ ಒಂದೆರಡಡಿಯಿಡುತ್ತಿದೆ (ಮಂದವಾಗಿ ಬೀಸುತ್ತಿದೆ), ನವಿಲುಗಳು ಮೇಘೋದಯವನ್ನು ಕಂಡು ನಲಿಯುತ್ತಿವೆ. ಹಂಸಗಳು ನಡೆ ನಟನೆಗೊಳುತ್ತಿವೆ, ಮತ್ತು ಮಳೆಗಾಲ ಬಂದುದಕ್ಕಾಗಿ ಅವು ನೆಲೆಗಳನ್ನು ಅರಸುತ್ತಿವೆ. ಮುಗಿಲುಗಳು ಸುಳಿಯತೊಡಗಿದವು, ೩೩. ಬೇಸಗೆ ಕಳೆಯಿತು, ಮುಂಗಾರು ಮುಖವಾಯಿತು, ಇನ್ನು ಮೇಲೆ ನೀನು ಮರದ ನೆರಳಿನ ತಂಪು ನೆಲದಲ್ಲಿ ಕುಳಿತು ಆದರದಿಂದ ತಪಸ್ಸನ್ನು ಮಾಡಬಹುದು. ೩೪. ಸಖಿಯರ ಮಾತನ್ನು

ಕನೆ ಗಿರಿಸುತೆ ನಡೆತಂದಳ್
ವಿನಯವಿಭೂಷಣೆ ವಿಲಾಸವಿಭ್ರಮದಿಂದಂ ॥ ೩೪

ಮ॥ ಸ್ರ॥ ಭರದಿಂದೆಯ್ತಂದು ಭರ್ಗಪ್ರಿಯೆ ಭವನ ಮನೋಮೂರ್ತಿ ಭಾಳಾಕ್ಷಭಕ್ತ್ಯಾ
ತುರೆ ಮುಕ್ತಿಪ್ರಾತೆ ಭೂತೇಶನ ಸಕಳಸುಖಾಕಾರೆ ಶರ್ವಾಣಿ ಸರ್ವೇ।
ಶ್ವರಿಯುರ್ವೀಮಾತೆ ಮೂಲೋಕದ ಸುಕೃತಫಲಂ ಸತ್ಯವಿಸ್ತಾರೆಯುದ್ಯತ್
ಗಿರಿರಾಜಾಪತ್ಯೆ ನಿಂದಳ್ ಘನವಟವಿಟಪಿಚ್ಛಾಯೆಯೊಳ್ ಪ್ರೀತಿಯಿಂದಂ ॥ ೩೫

ವ॥ ಇಂತಘಟಿತ ಘಟಿತೆ ಪಟುತರಚಿತ್ತೆ ನಿಟಿಲಲೋಚನೆ ವಟವೃಕ್ಷದ ಕೆಳಗೆ ವಾರಿಕುಲಕ್ಕೆ ಸೋಲದೆ ಧೀರೋದಾತ್ತೆ ಘೋರತಪದೊಳ್ ನಿಂದಳನ್ನೆಗಮಿತ್ತಲ್,

ಚಂ॥ ನಲಿದುದುಸೋಗೆ ಸುಣ್ಣನೆಗೊಂಡುದು ಚಾದಗೆವಕ್ಕಿ ಮಿಕ್ಕುಪೂ
ತಲಿರ್ದುದು ಸೊಂಪಿನಿಂ ಕಡವು ತಣ್ಪನೆ ಪೇಱಿದುವೆಯ್ದೆ ಬೆಟ್ಟು ಬಂ।
ದಲೆದುದು ಪಶ್ಚಿಮಾನಿಳನಮರ್ಚಿತು ಕೇತಕಿ ಪೂದೊಡಂಬೆಯುಂ
ಬಿಲದೊಳೆ ಪೊಕ್ಕುವಂಚೆ ಮುಗಿಲೊಡ್ಡಣೆಯೊಡ್ಡಿತು ಕಾರ ಕೊರ್ವಿನೊಳ್ ॥ ೩೬

ವ॥ ಅಂತುಮಲ್ಲದೆಯುಂ,

ಕಂ॥ ಹರಿಸಂಮಿಗೆ ನವಿಲಾಡು
ತ್ತಿರೆ ಚಾದಗೆಯುರ್ಬಿನಲಿಯೆ ನಾಲ್ಕುಂದೆಸೆಯುಂ।
ಕರಿಯಂತಿರೆ ಗಿರಿಯಂತಿರೆ
ಧರೆಯಂತಿರೆ ನೆಗೆದುದಭ್ರಕುಲಮುಂಬರದೊಳ್ ॥ ೩೭

ಕೇಳಿದ ಅನುಪಮ ಶೈವತೇಜೋನಿಧಿಯಾದ ಆಗಜೆ ವಿನಯದಿಂದ ನಡೆತಂದಳು, ೩೫. ಗಿರಿಜೆ ಅಲ್ಲಿಂದ ನಡೆತಂದು ದಟ್ಟವಾದ ಆಲದಮರದ ನೆರಳಿನಲ್ಲಿ ಪ್ರೀತಿಯಿಂದ ನಿಂತು ತಪೋಮಗ್ನೆ ಯಾದಳು ; ಅವಳನ್ನು ಕವಿಬಣ್ಣಿಸುವ ಕ್ರಮವಿದು. ಆಕೆ ಭರ್ಗನಿಗೆ ಪ್ರಿಯಳಾದವಳು, ಭವನ ಮನೋಮೂರ್ತಿ, ಫಾಲಾಕ್ಷನ ಭಕ್ತಿಯಲ್ಲಿ ಆತುರವುಳ್ಳವಳು, ಭೂತೇಶನ ಸುಖ ಸ್ವರೂಪಳು, ಸರ್ವೇಶ್ವರಿ, ಪ್ರಪಂಚಮಾತೆ, ಮೂರುಲೋಕದ ಪುಣ್ಯಫಲ, ಸತ್ಯಸ್ವರೂಪೆ ಇತ್ಯಾದಿ. ವ॥ ಅಘಟಿತ ಘಟಿತೆಯೂ ದೃಢಚಿತ್ತಳೂ ಆದ ಗಿರಿಜೆ ಆಲದಮರದ ಕೆಳಗೆ ನಿಂತು ಮಳೆಗೆ ಹೆದರದೆ ಘೋರತಪೋಮಗ್ನಳಾದಳು. ೩೬. ಆ ಮುಂಗಾರಿನಲ್ಲಿ ನವಿಲು ನಲಿಯಿತು, ಚಾತಕಹಕ್ಕಿ ಮೇಘದ ನೀರಿನ ಆಹಾರ ಸವಿದು ಸುಣ್ಣಗಾಯಿತು, ಕಡವು (ಕದಂಬವೃಕ್ಷ)ಗಳು ಸೊಂಪಾಗಿ ಬೆಳೆದು ಹೂಬಿಟ್ಟುವು ಪಶ್ಚಿಮಾನಿಲವು ತಣ್ಪನ್ನು ಬೀರಿತು, ಕೇತಕಿ ಹೂಬಿಟ್ಟಿತು, ಹಂಸೆಗಳು ಗೂಡುಹೊಕ್ಕವು, ಮೇಘಗಳು ಮುತ್ತಿ ಬಂದವು. ೩೭. ನವಿಲುಗಳು ಹರ್ಷದಿಂದ ಆಡುತ್ತಿವೆ, ಚಾತಕಗಳು ನಲಿಯುತ್ತಿವೆ ; ನಾಲ್ಕು ದಿಕ್ಕಿನಲ್ಲಿ ಕಾರ್ ಮೋಡಗಳು ಕರಿಯಂತೆ, ಗಿರಿಯಂತೆ, ಧರೆಯಂತೆ ಕವಿದು

ಕಂ॥ ತರದಿಂ ಶಿಖಿ ಚಾದಗೆ ಮಧು
ಕರಮಂಚೆ ಪಯೋಧರಂಗಳನನುನಯದಿಂದಂ ।
ಕರೆದುವು ನೆರೆದುವು ಮೊರೆದುವು
ಪರೆದುವು ತೋಱಿದುವು ನಿರಂತರಂ ಕಾರ್ಮೊಗದೊಳ್ ॥ ೩೮

ವ॥ ಮತ್ತಮಲ್ಲದೆಯುಂ,

ಮ॥ ಸ್ರ॥ ಹರಿಸಂ ಮಿಕ್ಕಭ್ರಮಾತಂಗಮನತಿಭರದಿಂ ನೋಡಲೆಂದೆಳ್ದುವೋ ದಿ
ಕ್ಕರಿಗಳ್ ದೇವೇಂದ್ರನೊಳ್ ಕಾದುವ ಕಡುಮುಳಿಸಿಂದೆಳ್ದುವೋ ಗೋತ್ರಶೈಳೋ ।
ತ್ಕರಮಾಶಂಗಂ ಹಿರಣ್ಯಾಕ್ಷನಿನೊಗೆದ ಮನೋದುಃಖಮಂ ದೂಱಲೆಂದಾ
ತುರದಿಂದೆಳ್ದತ್ತೊ ಧಾತ್ರೀತಳಮೆನೆ ನಭದೊಳ್ ತೀವಿತಭ್ರಪ್ರತಾನಂ ॥ ೩೯

ವ॥ ಆ ಸಮಯದೊಳ್,

ಕಂ॥ ತವೆ ಬೆಳೆದು ಪರ್ಬಿ ತಾಕಾ
ಶವನೇಱಿದ ಮುಗಿಲನೀರ ನೆಱೆಯಂ ಮಿಗೆ ದು ।
ಶ್ಚ್ಯವನಂ ಬಿಡಿಸುವ ಘನ ಶ
ಸ್ತ್ರವಣಿಂ ಪೊಳೆವಂತೆ ಮಿಂಚು ಮಿಂಚಿತ್ತಾಗಳ್ ॥ ೪೦

ಘುಳು ಘುಳು ಘಳ ಘಳ ಘುಡು ಘುಡು
ಘುಳು ಛಿಟಿ ಛಿಟಿ ಘಾಘುರ್ಘಳಂ ದಢಂ ಧಾಂಧಡ ಛಿಂ ।
ಛಿಳಿ ಛಿಳಿ ಛಿಂಛಿಂ ಘಡ ಘಡ
ಘಳ ಘಡ ಘುಡಿಲೆಂದು ಮೊಳಗು ಮೊಳಗಿತು ನಭದೊಳ್ ॥ ೪೧

ಬರುತ್ತಿವೆ. ೩೮. ಆ ಕಾರ್ಮೊಗದಲ್ಲಿ ನವಿಲು, ಚಾತಕ, ದುಂಬಿ ಮತ್ತು ಹಂಸಗಳು ಮೋಡಗಳನ್ನು ಬಗೆಬಗೆಯ ಅನುನಯದಿಂದ ಕರೆದವು, ಅವುಗಳಲ್ಲಿ ನವಿಲುಗಳು ಮುಗಿಲುಗಳನ್ನು ಕರೆದವು, ಚಾತಕಗಳು ನೆರೆದುವು, ದುಂಬಿಗಳು ಮೊರೆದವು, ಹಂಸಗಳು ಚದುರಿ ಹೋದವು ಹಾಗೂ ತೊರೆದವು. ೩೯. ಗಗನದಲ್ಲಿ ಮೋಡಗಳು ಒತ್ತರಿಸಿ ನೆರೆದುದನ್ನು ನೋಡಿದರೆ ದಿಗ್ಗಜಗಳು ಅಭ್ರಗಜವನ್ನು ನೋಡುವುದಕ್ಕಾಗಿ ಅತಿಭರದಿಂದ ಎದ್ದವೋ, ಇಲ್ಲವೆ ಗೋತ್ರಶೈಲಗಳು ತಮ್ಮ ಪಕ್ಷಗಳನ್ನು ಕತ್ತರಿಸಿದ ದೇವೇಂದ್ರನೊಡನೆ ಕಡುಗೋಪದಿಂದ ಕಾದುವುದಕ್ಕಾಗಿ ಹೊರಟವೆಯೋ, ಅಥವಾ ಭೂದೇವಿಯು ಹಿರಣ್ಯಾಕ್ಷನಿಂದ ತನಗೆ ಒದಗಿದ ದುಃಖವನ್ನು ಈಶ್ವರನಿಗೆ ದೂರು ಹೇಳಲು ಹೊರಟಿದ್ದಾಳೆಯೋ ಎಂಬಂತೆ ಮೇಘಗಳು ಒಗ್ಗೂಡಿದವು. ೪೦. ಚನ್ನಾಗಿ ಬೆಳೆದು ಹಬ್ಬಿ ಗಗನವನ್ನು ಏರಿದ ಮುಗಿಲಿನ ನೀರ ಪ್ರವಾಹವನ್ನು ಇಂದ್ರನು ಬಿಡಿಸಲು ಪ್ರಯೋಗಿಸಿದ ಘನಶಸ್ತ್ರಗಳು ಹೊಳೆಯುತ್ತಿವೆಯೋ ಎಂಬಂತೆ ಮಿಂಚು ಹೊಳೆಯಿತು, ೪೧. ಆಕಾಶದಲ್ಲಿ ಕಾರ್ಮೋಡಗಳು

ಕಂ॥ ಆ ಮಿಂಚಿನ ಮೊಳಗಿನೊಳು
ದ್ದಾಮಾಂಬುದ ನಿಕರದಿಂದೆ ರಸೆದೆಸೆ ಗಗನಂ ।
ತಾಮಱಿಯಲ್ ಬಾರದವೋ
ಲೇಮಾತೋ ಕಱಿದುದಿಳೆಯ ಹರ್ಷಂ ವರ್ಷಂ ॥ ೪೨

ವ॥ ಮತ್ತಮದಲ್ಲದೆಯುಂ,

ಕಂ॥ ಮಿಗೆ ಕಾರರಸಂ ಪಗೆವೇ
ಸಗೆಯಂ ಸುರಧನುವಿನಿಂದೆ ಮುಗಿಲಂಬುಗಳಿಂ ।
ತೆಗೆದೆಸೆ ಬಹುವಿಧ ಶರವವ
ನಿಗೆ ಬೀಳ್ವಂತಿರ್ದುವಂಬು ಧಾರಾನೀಕಂ ॥ ೪೩

ಬೆಂಗೊಟ್ಟೋಡುವ ಬೇಸಗೆ
ಯಂ ಗರ್ಜಿಸುವಬ್ದಸಮಯ ನೃಪಘನಮದವಾ ।
ತಂಗ ಕುಲದಾನಧಾರಾ
ಭಂಗಿಯನೊಡರಿಸಿತು ಕಟ್ಟಕಱಿವಾಸಾರಂ ॥ ೪೪

ಗಗನದಿನೆಱಗಿದ ಮಳೆನೀ
ನಗಲದೆ ಸಲಪೆಂದು ವರ್ಷನರಪಂಗಿಳೆಯಂ ।
ಮುಗಿಲಗಲದ ಹಸ್ತದಿನಾ
ಗಗನಾಂಗನೆ ಧಾರೆಯೆಱಿದ ತೆಱಿನಾಯ್ತಾಗಳ್ ॥ ೪೫

ಕವಿದು ಗುಡುಗು, ಮಿಂಚು, ಸಿಡಿಲುಗಳ ಬಗೆ ಬಗೆಯ ಶಬ್ದವು ಮೊಳಗಿತು. ೪೨. ಅಂತಹ ಮಿಂಚು ಮೊಳಗುಗಳಲ್ಲಿ ಉದ್ದಾಮವಾದ ಆ ಮುಗಿಲುಗಳಿಂದ ನೆಲ ದಿಕ್ಕು ಗಗನಗಳು ತಿಳಿಯದೆಂಬಂತೆ ಇಳೆಗೆ ಹರ್ಷದಾಯಕವಾದ ವರ್ಷ ಸುರಿಯಿತು! ೪೩. ಮುಂಗಾರು ಎಂಬ ಅರಸನು ತನಗೆ ಹಗೆಯಾದ ಬೇಸಗೆಯನ್ನು ಕಾಮನ ಬಿಲ್ಲಿನಲ್ಲಿ ಮುಗಿಲು ಎಂಬ ಅಂಬುಗಳನ್ನು ಹೂಡಿ ಇಸೆ (ಎಸೆ)ಯುತ್ತಿರುವನೋ ಎಂಬಂತೆ ಬಹು ವಿಧವಾದ ಶರ–(ಬಾಣ, ನೀರು)ವು ಅವನಿಗೆ (ನೆಲಕ್ಕೆ) ಬೀಳ್ವಂತೆ ಅಂಬು (ನೀರು–ಬಾಣ) ಧಾರೆಗಳು ಸುರಿದವು. ೪೪. ಸುರಿಯುತ್ತಿರುವ ಆ ಮಳೆಯ ರೀತಿಯು ಬೆನ್ನುಕೊಟ್ಟು ಓಡುತ್ತಿರುವ ಬೇಸಗೆಯನ್ನು ಅಟ್ಟಿಕೊಂಡು ಬರುತ್ತಿರುವ ಮಳೆಗಾಲವೆಂಬ ರಾಜನ ಮೇಘಗಳೆಂಬ ಮದ್ದಾನೆಗಳ ಮದೋದಕ ಧಾರಾಸಾರ (ಧಾರೆಗಳ ವರ್ಷ)ವೋ ಎಂಬಂತಿತ್ತು! ೪೫. ಗಗನದಲ್ಲಿ ಧಾರಾಕಾರವಾಗಿ ಸುರಿಯುತ್ತಿರುವ ಮಳೆಯನ್ನು ನೋಡಿದರೆ ಗಗನವೆಂಬ ಅಂಗನೆಯು ವರ್ಷಋತುವೆಂಬ ಅರಸನಿಗೆ ನೀನು ಅಗಲದೆ ಸಲಹು ಎಂದು ಹೇಳಿ ಮುಗಿಲು ಎಂಬ ಹಸ್ತದಲ್ಲಿ ಇಳೆಯನ್ನು ಧಾರೆ ಎರೆದು ಕೊಟ್ಟಂತೆ ಇತ್ತು.

ಕಂ॥ ಘನಸಮಯ ನೃಪಾಲಕನೊಳ್
ಘನಪಾಣಿಗ್ರಹಣಮಾದ ಭೂವನಿತೆಗೆ ಮು।
ತ್ತಿನ ಸೇಸೆಗಳಂ ಗಗನಾಂ
ಗನೆ ಸೂಸಿದಳೆನೆ ಬಿಳ್ದುವಾಲಿವರಲ್ಗಳ್ ॥ ೪೬

ವ॥ ಅಂತು ಬರ್ಷ ಕಾರಮಳೆಯಂ ಕಂಡು ಮನಂಗೊಂಡು,

ಚಂ॥ ಶುಕನಿಕರಂಗಳುಗ್ಗಡಿಸೆ ಕೋಕಿಳನಾದದ ತಾಳಮುಣ್ಮೆ ಸೌ
ಖ್ಯಕರ ಕದಂಬ ಪುಷ್ಪರಸದಿಂ ತಣಿದೊಯ್ಯನೆ ಪಾಡೆ ಪಟ್ಪದಂ।
ವಿಕಸಿತ ಪಕ್ಷನೂರ್ಧ್ವಗಳನುನ್ಮುಖನುಚ್ಚಳಿತಸ್ವನಂ ಬಳಾ
ಹಕನಿನದಕ್ಕೆ ಪೆಕ್ಕಣಮನಾಡಿದುದೊಂದು ಮಯೂರನಳ್ತಿಯಿಂ ॥ ೪೭

ವ॥ ಮತ್ತಮನಂತರದಲ್ಲಿ,

ಚಂ॥ ನೆಗೆದುದು ಸಾರ್ದು ಪೊರ್ದಿತಮರಿತ್ತು ತುಳುಂಕಿತು ಬೆಂಗೆ ನೀರ ಧಾ
ರೆಗಳುಜ಼್ನಾಂಟಲೀಂಟದುದು ನೇಹದೆ ನೋಡಿತುದಂಚಚಂಚುವಿಂ।
ದುಗಿದುದು ಪಕ್ಕದಿಂ ಪೊಡೆದುದಂಘ್ರಿಗಳಿಂದೊದೆದತ್ತು ನೆತ್ತಿಯಿಂ
ನೆಗೆಪಿದುದಪ್ಪಿತಳ್ಕರಿದಂದಂಬುಕಣಂಗಳನೊಂದು ಚಾತಕಂ ॥ ೪೮

ವ॥ ಇಂತು ಶಿಖಿಪ್ರಕರಮುಂ ಚಾತಕ ಕುಲಮುಂ ನಲಿಯಿತ್ತುಮಿರೆಯಿರೆ,

೪೬. ಆ ಬಿರುಮಳೆಯಲ್ಲಿ ಆಲಿಕಲ್ಲುಗಳು ಬೀಳಲಾರಂಭಿಸಿದವು; ಅದನ್ನು ನೋಡಿದರೆ ವರ್ಷಾಸಮಯವೆಂಬ ರಾಜನೊಡನೆ ಘನಪಾಣಿಗ್ರಹಣವಾದ ಭೂವನಿತೆಗೆ ಗಗನಾಂಗನೆಯು ಮುತ್ತಿನ ಸೇಸೆಯಿಟ್ಟಳೋ ಎಂಬಂತೆ ಇತ್ತು. ೪೭. ಅಲ್ಲಿ ಒಂದು ನವಿಲು 'ಪಕ್ಕಣ'ವೆಂಬ ಒಂದು ನೃತ್ಯಭಂಗಿಯಲ್ಲಿ ನರ್ತಿಸತೊಡಗಿತ್ತು. ಆ ನರ್ತನಕ್ಕೆ ಪಕ್ಕವಾದ್ಯಗಳ ಸಿದ್ಧತೆಯೂ ಇತ್ತು. ಗಿಳಿಗಳ ಘೋಷಣೆ, ಕೋಗಿಲೆನಾದದ ತಾಳ, ಸುಖಕರವಾದ ಕದಂಬ ಪುಷ್ಪರಸದಿಂದ ತಣಿದ ದುಂಬಿಗಳ ಹಾಡುಗಾರಿಕೆ, ರೆಕ್ಕೆಗಳನ್ನು ಅರಳಿಸಿ, ಕುತ್ತಿಗೆಯನ್ನು ಮೇಲೆತ್ತಿ ಉನ್ಮುಖವಾಗಿ ಕೂಗುತ್ತಾ ಮೇಘನಿನದಕ್ಕೆ ಸರಿಯಾಗಿ ಅಳ್ತಿಯಿಂದ ನರ್ತಿಸತೊಡಗಿತು. ೪೮. ಅಲ್ಲಿ ಒಂದು ಚಾತಕ ಪಕ್ಷಿ; ಅದು ಮಳೆನೀರಿಗಾಗಿಯೇ ಕಾಯ್ದಿತ್ತು. ಮಳೆ ಬಂದೊಡನೆಯೇ ನೆಗೆಯಿತು, ಸಾರ್ದುಪೊರ್ದಿತು, ಅಮರಿತು, ತುಳುಂಕಿತು, ಬೆನ್ನಿಗೆ ನೀರ ಧಾರೆಗಳು ಬೀಳುತ್ತಿರಲು ಅದನ್ನು ಹೀರಿತು, ಪ್ರೇಮದಿಂದ ನೋಡಿತು, ಸ್ವಚ್ಛವಾದ ಕೊಕ್ಕಿನಿಂದ ಜಗ್ಗಿತು, ರೆಕ್ಕೆಗಳಿಂದ ಹೊಡೆಯಿತು, ಕಾಲುಗಳಿಂದ ಒದೆಯಿತು, ನೆತ್ತಿಯಿಂ ನೆಗೆದು ಅಪ್ಪಿತು, ನೀರಕಣಗಳನ್ನು ಕುಡಿಯಿತು.

ಕಂ॥ ಧಾರೆಗಳವನಿಯ ನೊಳಪೊ
ಕ್ಕೋರಂತುಚ್ಚಳಿಸಿ ಮಾಱುತಿರೆ ನಭದಿಂ ಭೋರ್
ಭೋರೆಂದಿರುಳುಂ ಪಗಲುಂ
ಜೀರೆನುತುಂ ತೆಱಪುಗುಡದೆ ಕಱೆದುವು ಮಳೆಗಳ್ ॥ ೪೯

ಒತ್ತರಿಸುತ್ತಂಬರಮಂ
ಮುತ್ತುತ್ತುಂ ದಿಗ್ವಿತಾನಮಂ ಧರೆಯೊಳ್ ತೀ।
ವುತ್ತುಂ ಕತ್ತಲಿಸುತ್ತುಂ
ಸುತ್ತುಂ ಜಿನುಗಿದುವು ಸೋನೆ ಇರುಳುಂ ಪಗಲುಂ ॥ ೫೦

ವ॥ ಅಂತುಮಲ್ಲದೆ,

ಕಂ॥ ಸರಿಗಳ ನೆರೆದೋಂಟಂ ಬಲ್
ಸರಿಗಳ ಭರಿತಂ ಸರಿಗಳ ಕಲ್ಲೋಲ ಕುಲಂ।
ಸರಿಗಳ ಘೂರ್ಣಿತದಿಂದಂ
ಶರನಿಧಿ ಕವಿದಂತೆ ಕಱೆದುದಿಳೆಯೊಳ್ ವರ್ಷಂ ॥ ೫೧

ಮೇಘಂಗಳ್ ಪರಿಗತವಿನಿ
ದಾಘಂಗಳ್ ಕಮಲವಿಮಳ ಜೀವನಭರಿತಾ।
ಮೋಘಂಗಳ್ ಶಿಖಿನಿಕರ
ಶ್ಲಾಘಂಗಳ್ ಕಱೆದುವತುಳ ಶೀತಳಜಳಮಂ ॥ ೫೨

ನೋಡುತ್ತಿರೆ ಸಕಳ ಜನಂ
ಕೂಡುತ್ತಿರೆ ಚಾತಕಂಗಳಿಳೆ ಜಳದೊಳ್ ತೇಂ।

ವ॥ ಹೀಗೆ ನವಿಲು ಮತ್ತು ಚಾತಕಗಳು ನಲಿಯುತ್ತಿರುವಾಗ_ ೪೯. ಮಳೆಯ ಧಾರೆಗಳು ಭೂಮಿಯ ಒಳಹೊಕ್ಕು ಕ್ರಮವಾಗಿ ಚಿಮ್ಮಿ ಬರುವಂತೆ ಗಗನದಿಂದ ಹಗಲೂ ಇರುಳೂ ಭೋರೆಂದು ಬಿಡುವುಕೊಡದೆ ಮಳೆಗಳು ಸುರಿಯುತ್ತಿದ್ದವು. ೫೦. ಅಂಬರವನ್ನು ಒತ್ತರಿಸುತ್ತಾ, ದಿಕ್ಕುಗಳನ್ನು ಮುತ್ತುತ್ತಾ, ಧರೆಯಲ್ಲಿ ವ್ಯಾಪಿಸಿ ಕತ್ತಲನ್ನು ಒಡ್ಡುತ್ತಾ, ಸೋನೆಮಳೆ ಇರುಳೂ ಹಗಲೂ ಜಿನುಗಿದವು. ೫೧. ಇಳೆಯಲ್ಲಿ ಶರನಿಧಿ (ಸಮುದ್ರ)ಯೇ ಕವಿದಂತೆ ವರ್ಷಕರೆಯಿತು. ಆಗ ಸರಿಗಳ ನೆರೆಯೇ ತೋಟ, ಬಲುಸರಿ (ಪ್ರವಾಸ)ಗಳು ತುಂಬಿಹರಿದವು, ಸರಿಗಳ ತೆರೆಗಳ ಸಮೂಹ ಸರಿಗಳಲ್ಲಿನ ಸುಳಿಗಳಿಂದ ಕಡಲೇ ಕವಿಯಿತೋ ಎಂಬಂತೆ ಇತ್ತು. ೫೨. ಬೇಸಗೆಯನ್ನು ಹಿಂದಿಕ್ಕಿದ ಮೇಘಗಳು, ನವಿಲುಗಳ ಶ್ಲಾಘನೆಗೆ ಪಾತ್ರವಾದ ಮೇಘಗಳು ಅತುಲ ಶೀತಲ ಜಲವನ್ನು ಕರೆದವು. ೫೩, ಎಲ್ಲ ಜನರೂ ನೋಡುತ್ತಿರುವಂತೆ ಚಾತಕಗಳು ಕೂಡುತ್ತಿರಲು,

ಕಾಡುತ್ತಿರೆ ಶಿಖಿಕುಲಮೆ
ಳ್ದಾಡುತ್ತಿರೆ ತುಱುಗಿ ಕಱಿದು ಮೆಱೆದುವು ಮೇಘಂ ॥ ೫೩

ವೃಷ್ಟಿಗಳವು ಶಿಖಿಚಾತಕ
ತುಷ್ಟಿಗಳವು ಘನತಟಾಕ ವಿಮಳನದೀಸಂ ।
ಪುಷ್ಟಿಗಳವು ಜೀವರ್ಕಳ
ದೃಷ್ಟಿಗಳವು ಬಿಡದೆ ಕಱಿದುವವನೀತಳದೊಳ್ ॥ ೫೪

ವ॥ ಮತ್ತಮಲ್ಲಿ,

ಗಗನಂ ಕೆಟ್ಟುದು ಚಂದ್ರ ಸೂರ್ಯರಳಿದರ್ ದಿಕ್ಚಕ್ರಮಿಲ್ಲಾಯ್ತು ಬ
ಟ್ಟೆಗಳಸ್ಪಷ್ಟಮವಾದುವಾತ್ತ ಜಳದೊಳ್ ಪೂಳ್ದತ್ತು ಧಾತ್ರೀತಳಂ ।
ಖಗಸಂಚಾರತೆ ಶೂನ್ಯಮಾದುದು ನಿರುದ್ಯೋಗಕ್ಕೆ ಪಕ್ಕಾದುದೀ
ಜಗಮೆಂದೆಂಬಿನಮೆಯ್ದೆ ಕಟ್ಟಕಱೆದತ್ತಾಸಾರಮಾಲೋಕದೊಳ್ ೫೫

ಕಂ॥ ಸುರಿದುದುಮಳೆ ತಣಿಯುತ್ತಿಳೆ
ನೆರೆದುದುಬೆಳೆ ಕಾನನಂಗಳೊಳ್ ನೆಱೆವಿಸಟಂ ।
ಬರಿದುವು ಪೊಳೆನಾಂದುವು ಶಿಳೆ
ಧರಣಿಗೆ ಮೆಳೆಪಿಡಿದ ತಳೆಗಳಾದುವು ಮಳೆಗಳ್ ॥ ೫೬

ವ॥ ಇಂತಪ್ಪ ಮಳೆಗಳೊಳಗೆ;

ಕಂ॥ ಮಳೆ ಮಾಣ್ದೊಡೆ ಹನಿಮಾಣದ
ದಳಫಳಯುತ ವಿಟಪಭರಿತ ವಿಟಪಿಯ ತ ।

ನೆಲವು ಜಲದಲ್ಲಿ ತೇಂಕಾಡುತ್ತಿರಲು ನವಿಲುಗಳು ಎದ್ದು ಕುಣಿಯುತ್ತಿರಲು ಮೇಘಗಳು ದಟ್ಟವಾಗಿ ಕವಿದು ಮಳೆಗರೆದವು. ೫೪. ಆಗ ಸುರಿದ ವೃಷ್ಟಿಗಳು ಶಿಖಿ (ನವಿಲು) ಮತ್ತು ಚಾತಕಗಳಿಗೆ ತುಷ್ಟಿಕರವಾದವು, ಘನವಾದ ಕೆರೆ, ನದಿಗಳಿಗೆ ಪುಷ್ಟಿಕರಗಳು, ಜೀವರದೃಷ್ಟಿಗಳೋ ಎಂಬಂತೆ ಮೇಘಗಳು ಮಳೆಗರೆದವು. ೫೫. ಆ ಜಡಿಮಳೆ ಹಿಡಿದಿದ್ದುದನ್ನು ನೋಡಿದರೆ ಅದರಿಂದ ಗಗನವು ಕೆಟ್ಟುಹೋದಂತಾಗಿತ್ತು, ಚಂದ್ರಸೂರ್ಯರ ದರ್ಶನವೇ ಇಲ್ಲದಂತಾಗಿತ್ತು, ದಿಕ್ಕೂ ಕಾಣದಂತಾಗಿತ್ತು, ದಾರಿಗಳು ಮಸಕಾದವು, ಭೂಮಿಯು ನೀರಿನಲ್ಲಿ ಮುಳಿದಂತಾಗಿತ್ತು, ಹಕ್ಕಿಗಳ ಸಂಚಾರ ನಿಂತುಹೋಗಿತ್ತು, ಜಗತ್ತು ನಿರುದ್ಯೋಗಕ್ಕೆ ಪಕ್ಕಾಯಿತೋ ಎಂಬಂತೆ ಜಡಿಮಳೆ ಸುರಿಯುತ್ತಿತ್ತು. ೫೬. ಮಳೆ ಸುರಿಯಿತು, ಇಳೆ ತಣಿಯಿತು, ಬೆಳೆ ನೆರೆಯಿತು (ಫಲಿಸಿತು) ಕಾಡುಗಳಲ್ಲಿ ಪ್ರವಾಹ ಮುಂದುವರಿಯಿತು, ಶಿಲೆ ನೆನೆದವು, ಬಿದಿರಮಳೆಗಳು ಧರಣಿಗೆ ಹಿಡಿದಕೊಡೆಗಳಂತೆ ಆದವು. ೫೭. ಮಳೆನಿಂತರೂ ಹನಿಗಳು ನಿಲ್ಲನೆಂಬಂತೆ ಫಲಭರಿತವಾದ ಕೊಂಬೆ

ಣ್ಣೆಳಲಲ್ಲಿಂ ತಳರದೆ ಕೋ
ಮಳೆ ಮಳೆಯೊಳಗಜೆ ನಲಿದು ಸಲೆ ನಿಂದಿರ್ದಳ್ ॥ ೫೭

ವ॥ ಆ ಸಮಯದೊಳ್,

ಕಂ॥ ಅಭವಂಗಿಳೆಯೊಳ್ ತಪಮಿ
ರ್ಪ ಭವಾನಿಗೆ ಬಂದು ಕಲ್ಪತರು ಫಳರಸದಿಂ ।
ದಭಿಷೇಕಂ ಮಾಡುವ ನವ
ವಿಭವದವೋಲೆಸೆದುದಾಲ ಮರನಾ ಮಳೆಯೊಳ್ ॥ ೫೮

ವ॥ ಇಂತು ನೆಗೆದ ಮುಗಿಲ್ಗಳ ಭೀಕರಾಕಾರಕ್ಕಂ ಮಿಂಚುಗಳ ಸಂಚಳತೆಗಂ ಮೊಳಗಿನ ಮಹಾಧ್ವನಿಗಂ ಸಿಡಿಲ ಸಡಗರಕ್ಕಂ ಬಲ್ಸರಿಗಳ ಸಂಭ್ರಮಕ್ಕಂ ಬಿಱುಮಳೆಯ ಬಲ್ಸೊಯಿಲ್ಗಂ ಪೆರ್ಮಳೆಯ ಧಾರೆಗಂ ಆಲಿಕಲ್ಲ ಕರ್ಕಶಕ್ಕಂ ಇಂದ್ರಗೋಪದ ಸಂದಣಿಗಂ ಶೀಕರದ ಶೀತಕ್ಕಂ ತುಂತುಱ ತಿಂತಿಣಿಗಂ ಸೋನೆಗಳ ಜಿನುಂಗಿಗಂ ಬಿಱುಗಾಳಿಯ ಗಾಸಿಗಂ ಕಾಲ್ವೊನಲ ಕಡುಪಿಂಗಂ ಪೆರ್ವೊಳೆಡದ ಕಳ್ತಲೆಗಂ ಮರುಳ ಭಯಾನಕಕ್ಕಂ ಕ್ರೂರಮೃಗದ ರೌದ್ರಕ್ಕಂ ಉಗ್ರ ಸರ್ಪಂಗಳದ್ಭುತಕ್ಕಂ ಅರಣ್ಯದಾಭೀಳತೆಗಂ ಕೋಡದೆ ಕೊಂಕದೆ ಬಾಡದೆ ಬಳ್ಕದೆ ಸೇಡು ಗೊಳ್ಳದೆ ಬೆಚ್ಚದೆ ಬೆದಱದೆ ಬಲಂಗೆಡದೆ ಮನಂಗುಂದದೆ ಕೆಲನಂಸಾರದೆ ಸಹಾಯಮಂ ಪಾಱದೆ ಮಹಾವಟವೃಕ್ಷದ ಕೆಳಗೆ ವಿಪುಳತಪದಿಂದಪರ್ಣೆಯೊಪ್ಪುತ್ತುಮಿರೆಯಿರೆ,

ಗಳಿಂದ ಕೂಡಿದ ಕಾಡಿನ ಮಧ್ಯದ ತಣ್ಣನೆಯ ನೆಳಲಲ್ಲಿ ಕೋಮಲಾಂಗಿ ಅಗಜೆಯು ಸ್ವಲ್ಪವೂ ಅಳುಕದೆ ನಲಿದುನಿಂದು ತಪದಲ್ಲಿ ಸಾಗುತ್ತಿದಳು. ೫೮. ಆ ಮಳೆಯಲ್ಲಿಯೂ ಕೂಡ ಅಭವನನ್ನು ಕುರಿತು ತಪಸ್ಸು ಮಾಡುತ್ತಿರುವ ಭವಾನಿಗೆ ಕಲ್ಪತರುವಿನ ಫಲರಸ ದಿಂದ ಬಂದು ಅಭಿಷೇಕವನ್ನು ಮಾಡುವ ನವವೈಭವವೊ ಎಂಬಂತೆ ಆಲದಮರವು ಒಪ್ಪಿತ್ತು. ವ॥ ಹೀಗೆ ಆಕಾಶದಲ್ಲಿ ಏರಿಬರುತ್ತಿರುವ ಮೋಡಗಳ ಭೀಕರತೆಗಾಗಲಿ, ಮಿಂಚುಗಳು ಝಳಪಿಸುವುದಕ್ಕಾಗಲಿ, ಗುಡುಗು ಸಿಡಿಲುಗಳ ಮಹಾಶಬ್ದಕ್ಕಾಗಲಿ, ಬಿರುಮಳೆಯ ಸಂಭ್ರಮಕ್ಕಾಗಲಿ, ಆಲಿಕಲ್ಗಳ ಕರ್ಕಶತೆಗಾಗಲಿ, ಮಿಂಚುಹುಳುಗಳ ಸಂದಣಿಗಾಗಲಿ....ಶೀತಕ್ಕಾಗಲಿ, ತುಂತುರಿನ ಸಾಂದ್ರತೆಗಾಗಲಿ, ಸೋನೆಮಳೆಯ ಜಿನುಗು ವಿಕೆಗಾಗಲಿ, ಬಿರುಗಾಳಿಯ ಹಿಂಸೆಗಾಗಲಿ, ಕಾಲುವೆ ನೀರಿನ....ಹೆಮ್ಮೋಡಗಳ ಕತ್ತಲೆ ಗಾಗಲಿ, ಮರುಳುಬಳಗದ ಭೀಕರತೆಗಾಗಲಿ, ಕ್ರೂರಮೃಗಗಳ ರುದ್ರತೆಗಾಗಲಿ, ಉಗ್ರ ಸರ್ಪಗಳ ಅದ್ಭುತಕ್ಕಾಗಲಿ, ಅರಣ್ಯದ ಭಯಾನಕಕ್ಕಾಗಲಿ, ಸ್ವಲ್ಪವೂ ಹೆದರದೆ, ಮನ ಗುಂದದೆ, ಧೃತಿಗೆಡದೆ ಆಲದ ಮರದ ಕೆಳಗೆ ಉಗ್ರತಪದಿಂದ ಇರುವ ಸಮಯದಲ್ಲಿ

ಕಂ॥ ಜಯವಿಜಯೆಗಳಱಿದ ಶಿವ
ಪ್ರಿಯೆಯುಗ್ರತಪಃಪ್ರಭಾವ ಭಾಸುರೆ ಪುಣ್ಯೋ।
ದಯಶೀಲೆ ಶಾಂತೆ ಪಾರ್ವತಿ
ಜಯಜಯರಕ್ಷಿಸೆನುತುಮೆಂದಿಂತೆಂದರ್ ॥ ೫೯

ಮಾಣ್ದುದು ಮಳೆ ಶರದಮಳತೆ
ಪೂಣ್ದುದು ಕಳಹಂಸಮಾಲೆ ಮೆಲ್ಲನೆ ಬಿಲದೊಳ್।
ಕಣ್ದೆಱೆದುವು ತೊಳತೊಳಗು
ತ್ತಿಣ್ದೆಸೆ ನೆರೆ ತಿಳಿದುವೀಗಳವಧಾರಗಜೇ ॥ ೬೦

ಚಂ॥ ಜನವನುರಾಗವೇಱಿ ಪೊಱಮಟ್ಟು ಕೃಷಿವ್ಯವಸಾಯ ವೃಂದಮಂ
ಮನದೊಲವಿಂದೆ ಮಾಡುತಿದೆ ಕೋಟರದಿಂ ನೆಗೆತಂದು ಪಕ್ಷಿಗಳ್।
ಕೊನೆದಳಿರ್ಗೊಂಬಿನೊಳ್ ಬಿಸಿಲನಾಂತಿವೆ ಹಂಸಕುಲಂ ಬಿಲಂಗಳಿಂ
ದನುಮಿಸೆ ಕೂಡೆ ಪೊಣ್ಮುತಿವೆ ಪಾರ್ವತಿ ನೋಡ ಶರದ್ವಿಳಾಸಮಂ ॥ ೬೧

ಕಂ॥ ರವಿಕಿರಣಂ ನೀರೋಡು
ತ್ತಿವೆ ತಣ್ಪಂಬೀರುತಿದೆ ರಥಾಂಗ ಕುಲಂಗಳ್
ತವೆ ತಣ್ಪಿಸಿಲೊಳ್ ನಿಂದಿ
ರ್ದಿವೆ ಮೇಘಂ ಹಿಂಡಿ ಹರಹಿದಂತಿವೆ ನಭದೊಳ್ ॥ ೬೨

ಪರೆದುವು ಪಯೋಧರಂಗಳ್
ಬರುತಿವೆ ಕಳಹಂಸಮಾಲೆ ಬಿಸಿಲೊಳ್ ವಿಹಗಂ।

೫೯. ಈ ಸ್ಥಿತಿಯನ್ನು ಕಂಡಸಖಿಯರು ಬಂದು "ಶಿವ ಪ್ರೀತಿಗಾತ್ರೆ ಉಗ್ರತಪೋಮಗ್ನೆ ಯಾಗಿರುವ ಪುಣ್ಯೋದಯ ಶೀಲೆ, ಶಾಂತೆ, ಪಾರ್ವತಿ ಜಯ, ಜಯ! ರಕ್ಷಿಸು!" ಎಂದು ಪ್ರಾರ್ಥಿಸಿದರು. ೬೦. ತಾಯಿ, ಮಳೆಗಾಲ ಮುಗಿಯಿತು; ಶರತ್ಕಾಲದ ಪ್ರಸನ್ನತೆ ಮೊದಲಿಟ್ಟಿತು; ಕಲಹಂಸಗಳು ಮೆಲ್ಲನೆಮೆಲ್ಲನೆ ಕಣ್ಣುಬಿಟ್ಟವು, ಎಂಟೂ ದಿಕ್ಕುಗಳು ಪ್ರಸನ್ನವಾಗತೊಡಗಿವೆ, ಪ್ರವಾಹಗಳು ನಿರ್ಮಲವಾಗುತ್ತಿವೆ ಎಂದು ಬಿನ್ನೈಸಿದರು. ೬೧. ಎಲೌ ಪಾರ್ವತಿ, ಈ ಶರತ್ಕಾಲದ ವಿಲಾಸವನ್ನು ನೋಡು! ಜನರು ಅನುರಾಗ ದಿಂದ ತಮ್ಮ ಕೃಷಿವ್ಯವಸಾಯಾದಿಗಳಲ್ಲಿ ತೊಡಗಿದ್ದಾರೆ. ಹಕ್ಕಿಗಳು ತಮ್ಮ ಗೂಡು ಗಳಿಂದ ಹೊರಬಂದು ಕೊನೆಗೊಂಬೆಗಳಲ್ಲಿ ಕುಳಿತು ಬಿಸಿಲು ಕಾಯಿಸಿಕೊಳ್ಳುತ್ತಿವೆ. ಹಂಸಗಳು ತಮ್ಮ ಬಿಲಗಳಿಂದ ಹೊರಹೊಮ್ಮುತ್ತಿವೆ ಎಲ್ಲವನ್ನು ನೋಡು! ೬೨. ರವಿ ಕಿರಣಗಳು ಶಕ್ತಿಗುಂದುತ್ತಿವೆ, ಚಕ್ರವಾಕ ಪಕ್ಷಿಗಳು ತಂಪನ್ನು ಬೀರುತ್ತಿವೆ. ಗಗನದಲ್ಲಿ ರುವ ಮೇಘಗಳನ್ನು ನೋಡಿದರೆ ಅವು ನೀರನ್ನು ಹಿಂಡಿ ಹರಡಿ ತಣ್ಬಿಸಿಲಲ್ಲಿ ಒಣ ಹಾಕಿ ದಂತೆ ಕಾಣುತ್ತಿವೆ! ೬೩. ಮೋಡಗಳು ಚದುರಿಹೋದವು, ಕಲಹಂಸಗಳು ಬರುತ್ತಿವೆ.

ನೆರೆದಿವೆ ಮೃಗ ಸಂತತಿ ಗ
ಹ್ವರದಿಂ ಪೊಱಮಟ್ಟು ಮೇಯುತಿವೆ ಮೊಳೆವುಲ್ಲಂ ॥ ೬೩

ತಿಳಿದುವು ದೆಸೆಗಳ್ ಹಂಸಾ
ವಳಿಸಾರ್ದುವು ಪೂರ್ಣಸರಸಿಯಂ ಬಿಸಕಂದಂ ।
ಮೊಳೆವೋದುವು ಸಲಿಲಂ ನಿ
ರ್ಮಳಮಾದುವು ತಳೆದುದಾಗಸಂ ಧವಳತೆಯಂ ॥ ೬೪

ವ॥ ಎಂದು ಜಯೆವಿಜಯೆಗಳ್ ಬಿನ್ನಪಂಗೆಯ್ದು,

ಕಂ॥ ಇದುವೆ ಶರತ್ಸಮಯಂ ಮೇ
ಲೊದೆವುತ್ತಿರೆ ಶೀತಕಾಲಮಗಸುತೆ ಕಾಸಾ ।
ರದ ಕೆಱೆಗಳ ತೊಱೆಗಳ ಬೆ
ಟ್ಟದ ತಪ್ಪಲ ಹಿಮದೊಳೆಸೆಯೆ ಮಾಳ್ಪುದು ತಪಮಂ ॥ ೬೫

ವ॥ ಎಂದು ಜಯೆವಿಜಯೆಗಳ್ ಬಿನ್ನಪಂಗೆಯ್ದುಚಿತವಚನಾನೀಕಮನಾಕರ್ಣಿಸಿ ಲೋಕೈಕಬಂಧು ಸಾಕಾರಸುಧೆಯೆನಿಪ ಮಹಾದೇವಿ ಮಳೆಗಾಲಂ ಮಾಣ್ದುದಂ ಮನದೊಳಱಿದು ಬಡವಾದೊಡಲಂ ಬಿಡದೋಲಗಿಪ ನಾರಸೀರೆ ನಯವೇಱೆ ಪೊಱಗಣ ಮಳೆಯಿಂ ನಾಂದಮೆಯ್ಯ ನೀರಬಣ್ಣಮಂ ತಣ್ಣೆಳಲೊಳಾಱಿಸಿ ಧ್ಯಾನಾನಂದರಸದ ಸೋನೆಯಿಂದೊಳಗೆ ನಾಂದ ಕರಣಗಣಂಗಳನುಸಿರೊಳಾಱಿಸುತ್ತುಂ ತಪೋಭಾನೂದಯಕ್ಕೆ ಮುಖಕಮಳದಳಂ ಬೆರ್ಚುವಂತೆ ಮೆಯ್ಯ ಸಂಪುಟಂ ಬಿರ್ಚೆ ಕಣ್ದೆಱೆದು ಮುಂದಿರ್ದ ಸಹಚರಿಯರಂ ಕಂಡು,

ಪಕ್ಷಿಗಳು ಬಿಸಿಲಲ್ಲಿ ನೆರೆದಿವೆ. ಚಿಗರಿಗಳು ಗುಹೆಗಳಿಂದ ಹೊರಬಂದು ಮೊಳೆಹುಲ್ಲನ್ನು ಮೇಯುತ್ತಿವೆ. ೬೪. ದಿಕ್ಕುಗಳು ತಿಳಿಯಾದವು, ಹಂಸಗಳು ಪೂರ್ಣಸರಸ್ಸುಗಳನ್ನು ಸಾರ್ದವು, ತಾವರೆ ಗೆಡ್ಡೆಗಳು ಮೊಳಕೆ ಬಂದವು, ನೀರು ನಿರ್ಮಲವಾಯಿತು, ಆಕಾಶವು ಬಿಳುಪಾಯಿತು. ೬೫. ಇದು ಶರತ್ಕಾಲ, ಇನ್ನು ಮುಂದೆ ಶೀತಕಾಲ ಸಮೀಪಿಸುತ್ತಿದೆ. ಇನ್ನು ಸರೋವರ, ಕೆರೆ, ತೊರೆ ಬೆಟ್ಟದತಪ್ಪಲುಗಳಲ್ಲೆಲ್ಲಿ ಹಿಮವು ವ್ಯಾಪಿಸುತ್ತಿದೆ, ಇಂಥದರಲ್ಲಿಯೂ ನಿನ್ನ ತಪಸ್ಸನ್ನು ಎಸಗು. ವ|| ಹೀಗೆ ಸಖಿಯರು ಬಿನ್ನಪವ ಮಾಡಲು, ಅದನ್ನು ಕೇಳಿದ ಲೋಕಬಂಧುವೂ ಸಾಕಾರ ಸುಧೆಯೂ ಆದ ಮಹಾದೇವಿಯು ಮಳೆಗಾಲವು ಕಳೆದುದನ್ನು ಅರಿತಳು, ತನ್ನ ಬಡವಾದ ಒಡಲನ್ನು ಸುತ್ತಿರುವ ನಾರಸೀರೆಯನ್ನು ಸರಿಪಡಿಸಿಕೊಂಡಳು, ಹೊರಗಿನ ಮಳೆಯಿಂದ ತೊಯ್ದ ಮೈಯನ್ನು ತಣ್ಣೆಳಲಲ್ಲಿ ಆರಿಸಿಕೊಂಡಳು, ಶಿವಧ್ಯಾನದ ಆನಂದ ರಸದ ಸೋನೆಯಿಂದ ಒಳಗೆ ನೆನೆದ ಕರಣಗಳನ್ನು ತನ್ನ ಬಿಸಿಉಸಿರಿನಿಂದ ಆರಿಸಿದಳು. ತಪಸ್ಸೆಂಬ ರವಿಯ ಉದಯಕ್ಕೆ ತನ್ನ ಮುಖಕಮಲವು ಅರಳುವಂತೆ ಮೈ ಲವಲವಿಕೆ ತಳೆಯಲು, ಕಣ್ಣು ತೆರೆದು

ಕಂ॥ ಜಳಧರದೊಳಗಿಂದಂ ಶಶಿ
ಕಳೆ ಪೊಱಮಡುವಂತೆ ಪರಿದಾಲದಮರದಿಂ।
ಗಳಿಲನೆ ಪೊಱಪುಟ್ಟಳ್ ಕೋ
ಮಳೆಯರ್ ಕೆಯ್ಯುಗ್ಗಡೆ ಭವಾನಿ ಮೆಲ್ಲಡಿಯಿಡುತಂ॥ ೬೬

ನಡೆ ತಂದು ಮಂಜುನೆಱೆ ಮಾ
ಸ್ಗೊಡ್ಡಿಡೆ ಶೀತಂ ಮಾಣದಿರ್ಪ ತಣ್ಣೆಳಲೊಳ್ ಕಂ।
ಪಿಡಿದ ಲತಾಗೇಹಂಗಳ
ನಡುವಣ ಕಾಸಾರತಟದೊಳಂಬಿಕೆ ನಿಂದಳ್॥ ೬೭

ವ॥ ಅಂತು ನಿಂದಿರೆಯಿರೆ,

ಕಂ॥ ಇತ್ತಲ್ ಭೂತಳದೊಳ್ ಹಿಮ
ವೊತ್ತರಿಸಿ ಭುವನ ಜನಮನುಱೆ ನಡುಗಿಸುತುಂ।
ಸುತ್ತುತ್ತುಂ ಸುಗಿಯುತ್ತುಂ
ಮುತ್ತುತ್ತುಂ ಮುಂದುಗೆಡಿಸುತುಂ ಮುಸುಕಿಡುತುಂ॥ ೬೮

ವ॥ ಅಂತುಮಲ್ಲದೆಯುಂ,

ಕಂ॥ ಮೃಗಸಂತತಿಯಂ ಕೊಳರ್ವ
ಕ್ಕಿಗಳಂ ಪಕ್ಕಿಗಳನದ್ರಿತಟದೊಳಂ ಕೊಳನೊ।
ತ್ತುಗಳೊಳ್ ಕೋಟರದೊಳ್ಮಿಗೆ
ಪುಗಿಸುತ್ತುಂ ಬಂದನಮಮ ಶಿಶಿರನೃಪಾಲಂ॥ ೬೯

ಮುಂದೆ ಇದ್ದ ಸಖಿಯರನ್ನು ಕಂಡು, ೬೬. ಮೇಘದ ಒಳಗಿಂದ ಚಂದ್ರನಕಳೆ ಹೊರ ಬರುವಂತೆ ಆ ಭವಾನಿಯು ಆಲದಮರದ ಕೆಳಗಿನಿಂದ ಮೆಲ್ಲನೆ ಅಡಿಯಿಡುತ್ತಾ ಹೊರ ಬಂದಳು. ಸಖಿಯರು ಅವಳ ಕೈಹಿಡಿದಿದ್ದರು. ೬೭. ಹೀಗೆ ಮುನ್ನಡೆದು ಬಂದಳು. ಮಂಜು ಕಡಮೆಯಾದರೂ ಶೀತವಿನ್ನೂ ಕಡಮೆಯಾಗಿರಲಿಲ್ಲ, ಅಂಥ ತಣ್ಣೆಳಲಲ್ಲಿ ಸುವಾಸನೆಯ ಲತಾರೂಪವಾದ ಮನೆಗಳಲ್ಲಿ ನಡುವಿನ ಸರೋವರಗಳಲ್ಲಿ ಅಂಬಿಕೆ ತಪೋ ಮಗ್ನೆಯಾದಳು, ೬೮. ಇನ್ನು ಈ ಭೂಲೋಕದಲ್ಲಿ ಹಿಮವು ಒತ್ತರಿಸಿ ಬಂತು, ಅದು ಮರ್ತ್ಯಜನಗಳನ್ನು ನಡುಗಿಸುತ್ತಾ, ಸುತ್ತಿಸುಗಿಯುತ್ತಾ ಮುಂದುಗೆಡಿಸಿ ಮುಸುಕಿಡುವಂತೆ ಮಾಡಿತು. ೬೯. ಶಿಶಿರನೆಂಬ ರಾಜನು ಬಂದ ಸಡಗರಕ್ಕೆ ಮೃಗಗಳು ಮತ್ತು ಕೊಳದ ಹಕ್ಕಿಗಳು ಬೆಟ್ಟತಪ್ಪಲಲ್ಲಿಯೂ, ಕೊಳಗಳಲ್ಲಿಯೂ ಪೊಟರೆಗಳಲ್ಲಿಯೂ ಹೊಕ್ಕವು. ಇದು

ವ॥ ಅಂತುಬಂದು,

ಮ॥ ಕಿಡಿಗಳ್ ಕೆಚ್ಚನೆಯಾಲಿಕಲ್ಲುರಿಯ ಮೊತ್ತಂ ಕೆಂದಳಿರ್ ಕೆಂಡದೊಂ
ದಡಕಿಲ್ ಮಾಣಿಕದಿಂದೆ ಕಾಯ್ವ ತಪನಂ ಚಂದ್ರಂ ಪೊದಳ್ದಾತಪಂ ।
ಗಡ ಬೆಳ್ದಿಂಗಳೆನಿಪ್ಪುದೊಂದು ಪೆಸರಂ ತಾಂ ಮಾಡಿದಂತಿರ್ದುದಾ
ಕಡುಪಿಂ ತನ್ನಯ ಕಾಲದಲಿ ಹಿಮರಾಜಂ ಧಾರಿಣೀಚಕ್ರದೊಳ್ ॥ ೭೦

ವ॥ ಮತ್ತಮಲ್ಲದೆಯುಂ,

ಕಂ॥ ಮಿಗೆ ಬೆಮರಱತುದು ನೀರಡಿ
ಕೆಗಳಿಂಗಿದುವುಷ್ಣದುಸಿರಡಂಗಿತು ತಪನಂ ।
ಗೊಗೆದುದು ಪೆರ್ಚಿದ ತಣ್ಪ
ಗ್ನಿಗೆ ಶೀತಂ ಪತ್ತಿತೇನನೆಂಬೆಂ ಹಿಮದೊಳ್ ॥ ೭೧

ಸಲೆ ರವಿ ತೇಜಂಗುಂದುತೆ
ನಿಲಲಂಜುತ್ತೋಡಿ ಪುಗುವನದ್ರಿಯ ಮಱೆಯೊಳ್ ।
ಗೆಲೆಹರಿವ ಹಾವುರಿವ ಕಿ
ರ್ಚೆಲೆ ನಿಂದುವು ಶಿಶಿರನೃಪತಿಯಾಜ್ಞೆಗೆ ಜಗದೊಳ್ ॥ ೭೨

ವ॥ ಮತ್ತಮಲ್ಲಿ,

ಕಂ॥ ಉದಯಂ ಶೀತೋದಯಮಮ
ಗ್ಗದ ಮಧ್ಯಾಹ್ನಂ ತುಷಾರಮಧ್ಯಾಹ್ನಂ ಮಿ ।
ಕ್ಕುದಯೋಸ್ತಮಯಂ ತಾನು
ಷ್ಣದಸ್ತಮಯಮೆನಿಸಿತಮಮ ಹಿಮವಿಭ್ರಮದೊಳ್ ॥ ೭೩

ಶಿಶಿರನೃಪಾಲನಿಗೆ ಹೆದರಿ ಮೃಗಪಕ್ಷಿಗಳು ನೀಡಿದ ಸ್ವಾಗತ! ೭೦. ಹಿಮಂತಋತುವಿನಲ್ಲಿ ಬೆಂಕಿಯ ಕಿಡಿಗಳು ಕೆಂಪು ಆಲಿಕಲ್ಲುಗಳಾಗಿಯೂ ಉರಿಯು ಕೆಂಪುಚಿಗುರಾಗಿಯೂ ಕೆಂಡಗಳು ಮಾಣಿಕ್ಯಗಳಾಗಿಯೂ ಸೂರ್ಯನು ಚಂದ್ರನೂ, ಬಿಸಿಲು—ಬೆಳ್ದಿಂಗಳೂ ಆಗುವುವು ಎಂಬಂತೆ ಹಿಮವಂತನು ತನ್ನ ಆಳ್ವಿಕೆಯಲ್ಲಿ ಧರೆಯಲ್ಲಿ ಒಂದು ಹೊಸತನವನ್ನೇ ಉಂಟುಮಾಡಿದಂತಿತ್ತು. ೭೧. ಬೆವರು ಒಣಗಿಹೋಯಿತು, ಬಾಯಾರಿಕೆ ಇಂಗಿತು, ಉಷ್ಣವು ಉಸಿರಾಡಲಿಲ್ಲ, ಸೂರ್ಯನಿಗೆ ಶೀತ ತಟ್ಟಿತು, ಬೆಂಕಿಗೆ ಶೀತವಾಯಿತು ಎಂದರೆ ಇನ್ನು ಹೇಳುವುದೇನು? ೭೨. ಸೂರ್ಯನು ಕುಂದಿದ ತೇಜಸ್ಸುಳ್ಳವನಾಗಿ ಅಲ್ಲಿ ನಿಲ್ಲಲು ಹೆದರಿ ಓಡಿಹೋಗಿ ಬೆಟ್ಟದಸುರೆ ಹೋಗುತ್ತಾನೆ. ಶಿಶಿರ ನೃಪತಿಯ ಆಜ್ಞೆಯ ಪ್ರಕಾರ ಹರಿವಹಾವು ಮತ್ತು ಉರಿನಬೆಂಕಿಗಳು ತಮ್ಮ ಉಗ್ರತೆಯನ್ನು ತೊರೆದವು. ೭೩. ಆ ಹಿಮದ ವಿಲಾಸದ ಸಮಯದಲ್ಲಿ ಉದಯವೆಂದರೆ ಶೀತದ ಉದಯವೇ!

ಕಂ॥ ತಿಳಿವೊಡೆ ಶಶಿ ರವಿ ರವಿ ಶಶಿ
ಬೆಳಗುವ ಜೊನ್ನಂ ಬಿಸಿಲ್ ಬಿಸಿಲ್ ತಾಂ ಜೊನ್ನಂ ।
ಚಳಿ ಬಿಸುಪು ಬಿಸುಪು ಚಳಿಯೆನೆ
ಬಳೆದುದು ಹಿಮರಾಜತೇಜಮಾ ಜಗದೆಡೆಯೊಳ್ ॥ ೭೪

ವ॥ ಆ ಸಮಯದೊಳ್,

ಕಂ॥ ಪಲ್ವಱಿಯೊಳೆ ಹುಹುಹೆಂಬಾ
ಚೆಲ್ವಗ್ಗಡಣೆಯೊಳೆ ಹಸ್ತದಂಡಿಗೆಯೊಳ್ ತಾ ।
ನೊಲ್ವನ್ನಂ ಶಿಶಿರನಟಂ
ಸಲ್ವನ್ನಂ ಜನವನಾಡಿಸಿದನುರ್ವರೆಯೊಳ್ ॥ ೭೫

ನುಡಿಯೆ ಹುಹು ನಡೆಯ ಮಾತೇ
ಕೊಡಲೇ ಪ್ರಾಣಂಗೆ ಚಳಿಯ ಕುಪ್ಪಸಮಾಯ್ತೆಂ ।
ದೊಡೆ ಹಿಮದ ಮಹಿಮೆಯಂ ಪೇ
ಳ್ವೊಡೆ ಕೇಳ್ವವನಾವನೊರ್ವನುರ್ವೀತಳದೊಳ್ ॥ ೭೬

ಉಱೆ ಶೀತಂ ಪತ್ತಿದೊಡಿರ
ಲಱಿಯದೆ ಜೀವಂ ಬಿಗುರ್ತು ಜಠರಾಗ್ನಿಯನೆ ।
ಳ್ಚಱಿಸೆ ಹೊಗೆಯುಸಿರ ಪಥದಿಂ
ಪೊಱಮಡುವುದು ಜನದ ಮುಖದೊಳಲ್ಲದೊಡುಂಟೇ ॥ ೭೭

ವ॥ ಮತ್ತಮಲ್ಲದೆಯುಂ,

ಮಧ್ಯಾಹ್ನವೆಂದರೆ ಹಿಮದ ಮಧ್ಯಾಹ್ನವೆ! ಇನ್ನು ಉಳಿದ ಅಸ್ತಮಯ ಎಂದರೆ ಉಷ್ಣದ ಅಸ್ತಮಯವೇ ಆಗಿತ್ತು. ೭೪. ವಿಚಾರಮಾಡಿದರೆ ಶಶಿಯೇರವಿ, ರವಿಯು ಶಶಿ ; ಬೆಳಗುವ ಬೆಳದಿಂಗಳು ಬಿಸಿಲು, ಬಿಸಿಲೇ ಬೆಳದಿಂಗಳು, ಚಳಿಯೆಬ್ಬಿಸಿ ಬಿಸಿಯೇ ಚಳಿ ಎಂಬುವ ಮಟ್ಟಿಗೆ ಹಿಮರಾಜನ ತೇಜಸ್ಸು ಜಗತ್ತಿನಲ್ಲಿ ಬೆಳೆಯುತ್ತಿತ್ತು. ೭೫. ಶಿಶಿರನೆಂಬ ನಟನು ಚಳಿಯಿಂದ ಹಲ್ಲುಗಳನ್ನು ಬಾರಿಸುವಾಗ ಹುಟ್ಟುವ ಹು ! ಹು ! ಹು ! ಎಂಬ ಚೆಲುವಾದ ಘೋಷಣೆಯಲ್ಲಿ ಕೈಗಳೆಂಬ ದಂಡಿಗೆಯಲ್ಲಿ ತನಗೆ ಪ್ರೀತಿಯಾಗುವವರೆಗೆ ಜನವನ್ನು ಆಡಿಸುವನು ? ೭೬. ಚಳಿಗಾಲದಲ್ಲಿ ನುಡಿಯೆಲ್ಲವೂ ಹು ! ಹು ! ಎಂಬುದರಲ್ಲೆ ಅಡಗಿರುತ್ತದೆ. ಎಂದ ಮೇಲೆ ನಡೆಯ ಮಾತೇಕೆ ? ಒಡಲೇ ಪ್ರಾಣಕ್ಕೆ ಕುಪ್ಪಸ (ಹೊದಿಕೆ) ಎಂದಮೇಲೆ ಆ ಹಿಮದ ಮಹಿಮೆಯನ್ನು ಬಣ್ಣಿಸುವುದೇನು ? ೭೭. ಹೆಚ್ಚು ಶೀತಕ್ಕೆ ತಡೆಯಲಾರದೆ

ಕಂ॥ ಈಕ್ಷಿಸಿದಳೆಳಸಿ ಭಸಿತದ
ರಕ್ಷೆಯನೊಸೆದಿಟ್ಟು ಮಂಜಿನಿಂ ತೂಪಿಱಿದುಂ।
ಶಿಕ್ಷಿಸಿ ಬಲ್ಪಿಂದೂಡುತೆ
ರಕ್ಷಿಸುವಳ್ ಶೀತಮಾತೆ ಶಿಖಿಬಾಲಕನಂ॥ ೭೮

ಒದವಿ ಧರಾತಳದೊಳ್ ತೀ
ವಿದ ಶೀತಕ್ಕಂಜಿ ಕಂಪಿಸುತ್ತುಂ ನಿಲಲಾ।
ಱದೆ ಬಡವಾಗೆ ಕರಂ ಕಾ
ಷ್ಠದೊಳಗೆ ಪೊಕ್ಕಂ ಕೃಶಾನುವೇನಂ ಪೇಳ್ವಂ॥ ೭೯

ವ॥ ಮತ್ತಮಾ ಶೀತಾತಿಸಮಯದಲ್ಲಿ,

ಕಂ॥ ಮುಚ್ಚಿ ಮುಸುಂಕಿದ ಹಿಮಮಂ
ಕಿಚ್ಚಿಂದಂ ಕಳೆಯಲಾಱದಿಳೆಯ ಜನಂಗಳ್।
ಚೆಚ್ಚರಮೆಯ್ದುಂದೊಲವಿಂ
ದಚ್ಚರಿ ವಿರಹಿಯನೆ ಕಾಯ್ದು ಕಳೆವರ್ ಚಳಿಯಂ॥ ೮೦

ಪರಿಪೂರ್ಣತಟಾಕದ ಮೇ
ಲುರಿಯಿಲ್ಲದೆ ಧೂಮಮೊಗೆವುತಿರೆ ಮಾಗಿಯೊಳ।
ತ್ಯುರುತರ ಗುರುತರ ತಾಪ
ಕ್ಕಿರಲಾಱದೆ ವಿರಹಿ ಪೊಕ್ಕು ಮುಳುಗದೆ ಮಾಣಂ॥ ೮೧

ಜೀವನನ್ನು ಬಿಗಿಹಿಡಿದು ಜಠರಾಗ್ನಿಯನ್ನು ಪುಟಗೊಳಿಸಿ ಹೊಗೆಯುಸಿರನ್ನು ಹೊರಗೆಡಹುವುದು ಜನರ ಮುಖದಿಂದ ತಾನೆ ಸಾಧ್ಯ! ೭೮. ಶೀತವೆಂಬ ತಾಯಿಯು ಬೆಂಕಿ ಎಂಬ ಶಿಶುವನ್ನು ರಕ್ಷಿಸಿ, ಅವನಿಗೆ ಭಸಿತದ ರಕ್ಷೆಯಿಟ್ಟು, ಮಂಜಿನಿಂದ ನಿವಾಳಿಸಿ ತೆಗೆದು, ಬಲ್ಪಿಂದ ಶಿಕ್ಷಣವಿತ್ತು ರಕ್ಷಿಸುವಳು. ೭೯. ಬೆಂಕಿಗೆ ಕೃಶಾನು ಎಂಬ ಒಂದು ಹೆಸರಿದೆ. ಹಿಮಂತಋತುವಿನಲ್ಲಿ ಆ ಹೆಸರು ಬೆಂಕಿಗೆ ಸಾರ್ಥಕವಾಯಿತು : ಎಂದರೆ ಅಗ್ನಿದೇವನು ಈ ಶೀತಕ್ಕೆ ಹೆದರಿ ನಡುಗುತ್ತಾ ನಿಲ್ಲಲಾರದೆ ಬಡವಾಗಿ (ಕೃಶವಾಗಿ) ಕಡೆಗೆ ಸೌದೆಯನ್ನು ಹೊಕ್ಕನಂತೆ. ೮೦. ಆ ಸಮಯದಲ್ಲಿ ಇಳೆಯ ಜನಗಳು ಮುಚ್ಚಿ ಮುಸುಕಿರುವ ಹಿಮದ ಶೈತ್ಯವನ್ನು ಬೆಂಕಿಯಿಂದ ಕಳೆಯಲಾರದೆ ಬೇಗ ವಿರಹಿಗಳನ್ನು ಪ್ರೇಮದಿಂದ ಕಾಯ್ದು ಚಳಿಯನ್ನು ಕಳೆದುದು ಆಶ್ಚರ್ಯ! ೮೧. ಆ ಮಾಗಿಯ ಕಾಲದಲ್ಲಿ ತುಂಬಿದ ಕೆರೆಯಮೇಲೆ ಉರಿಯೇ ಇಲ್ಲದೆ ಹೊಗೆಯಾಡುತ್ತಿದೆ. ಅದನ್ನು ಕಂಡ ವಿರಹಿ ತನ್ನ ಗುರುತರವಾದ ವಿರಹ

ಕಂ॥ ಪುಟ್ಟಿತು ಚಳಿ ಬಳೆದುದು ಚಳಿ
ಕೊಟ್ಟುದು ಚಳಿ ಕೊಂಡುವೆಲ್ಲಮಂ ಚಳಿಚಳಿಯಿಂ ।
ದುಟ್ಟುದು ಚಳಿ ತೊಟ್ಟುದು ಚಳಿ
ಮೆಟ್ಟಿತು ಚಳಿ ಮುಟ್ಟಿತೆಲ್ಲ ಚಳಿ ಪೊಸಚಳಿಯೊಳ್ ॥ ೮೨

ವ॥ ಎಂಬ ಕೌತುಕಮನೊಳಕೊಂಡು

ಕಂ॥ ಈ ತೆಱದಿಂ ನೆಱೆ ಪರ್ಬಿದ
ಶೀತದೊಳಗಜಾತೆ ನೊತ್ತ ಸುರುಚಿರ ಸರಸೀ ।
ವ್ರಾತಮದೆಲ್ಲಿ ಘನಾಚಳ
ನೈತಂಬಮದೆಲ್ಲಿಯಲ್ಲಿ ತಪದಿಂ ನಿಂದಳ್ ॥ ೮೩

ವ॥ ಇಂತು ನಿದಾಘನಿಷ್ಠುರತೆಯೊಳಂ ಮಳೆಗಾಲದ ಜಲಪ್ರಳಯದೊಳಂ ಮಾಗಿಯ ಮಹಾಶೀತಲದೊಳಂ ಭಾಳಲೋಚನನ ಭಾಮಿನಿ ಗಂಗಾಧರನ ಗರುವೆ ಚಂದ್ರಧರನರಸಿಯೆನಿಪ ಗಿರಿರಾಜ ತನೂಜೆಯಿರ್ದ ನಿರುಪಮಾನ ತಪಪ್ರಭಾವಂ ವಿರೂಪಾಕ್ಷನ ಕರಣಂಗಳೊಳ್ ಬೆರಸಿ ಬಳೆಯೆ ಪುರಹರನೆಳ್ಚತ್ತು ಕೆಚ್ಚುಗಟ್ಟಿದ ಧೈರ್ಯಮನೊಡೆದು ಮೂಡಿ ಪಿಡಿದೆಳೆವ ಕಾರುಣ್ಯಕ್ಕೆ ಪಕ್ಕಾಗಿ ಪನ್ನಗಭೂಷಣನಿನ್ನಿರಲ್ ಬಾರದೆಂದು ತನ್ನೊಳ್ ಬಗೆದತಿಗಿರಿಜೆಯ ಮನಮನೊರೆದು ನೋಡುವ ಭರದಿಂ ಬಂದುನಿಂದು,

ಕಂ॥ ದಶಭುಜಮಂ ಪಂಚಾಸ್ಯಮ
ನಶೇಷಭೀಮಾಂಗವಿತತಿಯಂ ತನುವಿನೊಳಂ ।
ವಶಮಂ ಮಾಡುತಡಂಗಿಸಿ
ಪಶುಪತಿ ವಟುವೇಷದಿಂದಮೊಪ್ಪುತ್ತಿರ್ದಂ ॥ ೮೪

ತಾಪಕ್ಕೆ ತಡೆಯಲಾರದೆ ಅದರಲ್ಲಿ ಮುಳುಗದೆ ಬಿಡುತ್ತಾನೆಯೆ ? ೮೨. ಹಿಮಂತ ಋತುವಿನಲ್ಲಿ ಹುಟ್ಟಿದ್ದು ಬಳೆದದ್ದು, ಕೊಟ್ಟದ್ದು, ಕೊಂಡದ್ದು ಉಟ್ಟದ್ದು, ತೊಟ್ಟದ್ದು, ಮೆಟ್ಟಿದ್ದು ಹಾಗೂ ಮುಟ್ಟಿದ್ದು ಎಲ್ಲ ಚಳಿಯೇ ಆಗಿತ್ತು. ೮೩. ಹೀಗೆ ಎಲ್ಲಿಯೂ ಹಬ್ಬಿದ ಶೀತಕಾಲದಲ್ಲಿ ಅಗಜೆಯು ಸರೋವರ, ಬೆಟ್ಟದ ತಪ್ಪಲು ಮುಂತಾದ ಕಡೆ ತಪಸ್ಸು ಮಾಡಿದಳು. ವ॥ ಹೀಗೆ ನಿಷ್ಠುರವಾದ ಬೇಸಗೆಯಲ್ಲಿಯೂ ಮಳೆಗಾಲದ ಜಲಪ್ರಳಯದಲ್ಲಿಯೂ ಮಾಗಿಯ ಮಹಾಶೀತದಲ್ಲಿಯೂ ಮುಕ್ಕಣ್ಣನ ಭಾಮಿನಿಯಾದ ಪಾರ್ವತಿಯು ಮಾಡುತ್ತಿದ್ದ ಅನುಪಮವಾದ ತಪಃಪ್ರಭಾವವು ವಿರೂಪಾಕ್ಷನ ಕರಣಗಳಲ್ಲಿ ಬೆರೆದು ಬೆಳೆಯಿತು. ಇದರಿಂದ ಪುರಹರನಿಗೆ ಎಚ್ಚರವಾಯಿತು. ಆಗ ಆತನ ಕೆಚ್ಚುಗಟ್ಟಿದ ಧೈರ್ಯವು ಒಡೆಯಿತು. ಕಾರುಣ್ಯಮೂಡಿತು. ಕೂಡಲೆ ಪನ್ನಗಭೂಷಣನು ಇನ್ನಿರಬಾರದೆಂದು ತನ್ನಲ್ಲಿ ಯೋಚಿಸಿ ಗಿರಿಜೆಯ ಮನಸ್ಸನ್ನು ಪರೀಕ್ಷಿಸಬೇಕೆಂದು ಬಯಸಿ ಬಂದು ನಿಂತನು. ೮೪. ಪರಶಿವನು ತನ್ನ ದಶಭುಜ, ಪಂಚಮುಖ, ಎಲ್ಲ ಭೀಮಾಂಗಗಳನ್ನು ತನ್ನಲ್ಲಿ ಅಡಗಿಸಿ ನಟ ವೇಷ

ಕಂ॥ ಗಿರಿಸುತೆಯಂ ಕಾಣ್ಬನ್ನಂ
ವರಪರಮಬ್ರಹ್ಮಚರ್ಯದಿಂದಂ ತಾನಿ ।
ರ್ದಿರವಂ ತೋಱುವ ತೆಱದಿಂ
ಗಿರಿಶಂ ವಟುವೇಷಮಂ ವಿರಾಜಿಸೆ ತಳೆದಂ ॥ ೮೫

ವ॥ ಅಂತು ತಳೆದು,

ಮ॥ ಮಿಗೆ ಶೀತಾಂಶು ಚಕೋರಿಯಲ್ಲಿಗೆ ವಸಂತಂ ರಾಜಿಪುದ್ಯಾನದ
ಲ್ಲಿಗೆ ಸೂರ್ಯಂ ಸರಸೀಜದಲ್ಲಿಗೆ ವರಪ್ರಾಣಾನಿಲಂ ದೇಹದ ।
ಲ್ಲಿಗೆ ಮೇಘಂ ಶಿಖಿಯಲ್ಲಿಗೊಪ್ಪುವ ಮರಾಳಂ ಪೂರ್ಣಕಾಸಾರದ
ಲ್ಲಿಗೆ ಬರ್ಪಂತೆ ಭವಾನಿಯಲ್ಲಿಗಭವಂ ಬಂದಂ ಜಗದ್ವಲ್ಲಭಂ ॥ ೮೬

ವ॥ ಇಂತು ಭೂಲೋಕಕ್ಕಿಳಿತಂದು ಹೇಮಕೂಟದೊಳ್ ಹೈಮವತಿಯಿರ್ಪ ತಪೋವನಮಂ ಪುಗುತರ್ಪಾಗಳ್,

ಚಂ॥ ಬರೆ ಗಿರಿಶಂ ವಸಂತಋತುವಲ್ಲದೊಡಂ ಮುದದಿಂದೆ ಭೋಂಕನಂ
ಕುರಿಸಿತು ಮಾವು ಪಲ್ಲವಿಸಿತಲ್ಲಿಯಶೋಕೆ ವಸಂತದೂತಿಯೊ ।
ಪ್ಪಿರೆ ನೆಱೆ ಪೂತುದನ್ಯಭೃತನುನ್ನತಿಯಿಂ ಕರೆದತ್ತು ಮಲ್ಲಿಕಾ
ಪರಿಮಳಭಾರದಿಂ ಕುಸಿದು ಮೆಲ್ಲನೆ ತೀಡಿತು ದಕ್ಷಿಣಾನಿಲಂ ॥ ೮೭

ವ॥ ಅಂತು ತೀಡೆ

ಕಂ॥ ಜಯೆ ವಿಜಯೆಗಳಿಗಿದು ಪೊಸತತಿ
ಶಯವೀ ಶಿಶಿರದೊಳದೇಂ ಭವಾನಿ ವಸಂತೋ ।

ಧರಿಸಿ ಬೆಳಗುತ್ತಿದ್ದಾನೆ. ೮೫. ಗಿರಿಸುತೆಯನ್ನು ಕಾಣುವವರೆಗೂ ಕಡು ಬ್ರಹ್ಮಚರ್ಯೆಯಿಂದ ತಾನು ಇದ್ದೆನು ಎಂಬುದನ್ನು ತೋರುವುದಕ್ಕೋ ಎಂಬಂತೆ ಗಿರಿಶನು ವಟುವೇಷವನ್ನೇ ಧರಿಸಿದನು. ೮೬. ಚಂದ್ರ ಚಕೋರಿಯ ಹತ್ತಿರಕ್ಕೆ ವಸಂತನು ಉದ್ಯಾನವಿದ್ದಲ್ಲಿಗೆ, ರವಿ ತಾವರೆಯ ಸಮೀಪಕ್ಕೆ ಪ್ರಾಣವಾಯುವು ದೇಹದೊಳಕ್ಕೆ ಮೇಘವು ನವಿಲಿನೆಡೆಗೆ ಬರುವಂತೆ ಜಗದೊಡೆಯನಾದ ಅಭವನು ಭವಾನಿಯ ಹತ್ತಿರಕ್ಕೆ ಬಂದನು. ವ॥ ಹೀಗೆ ಪರಶಿವನು ಭುವಿಗಿಳಿದು ಹೇಮಕೂಟದಲ್ಲಿ ಗಿರಿಜೆ ತಪವಿರ್ದ ವನಕ್ಕೆ ಬಂದಾಗ ೮೭. ಆಗ ವಸಂತ ಋತುವಲ್ಲ; ಆದರೂ ಶಿವನೇ ಬಂದ ನಿಮಿತ್ತದಿಂದ ಪ್ರಕೃತಿಗೆ ಆನಂದವಾಯಿತು. ಅದರ ಫಲವಾಗಿ ಮಾವು ಚಿಗುರಿತು, ಅಶೋಕೆ ಪಲ್ಲವಿಸಿತು. ವಸಂತಿದೂತಿ ಪೂತು (ಹೂಬಿಟ್ಟು) ಒಪ್ಪಿತ್ತು, ಕೋಗಿಲೆ ಉನ್ನತಿಗೆ ಬಂತು, ದಕ್ಷಿಣಾನಿಲವು ಮಲ್ಲಿಕಾ ಪರಿಮಳ ಭಾರದಿಂದ ಮೆಲ್ಲನೆ ತೀಡಿತು. ೮೮. ಜಯೆವಿಜಯೆಗಳಿಗೆ ಇದು

ದಯಸೂಚಿಸೆಯಾದುದು ನಿ
ಮ್ಮಯೆ ಪುಣ್ಯತಪಃಪ್ರಭಾವ ಕಾರಣಮಲ್ತೆ ॥ ೮೮

ಚಂ॥ ಎನುತಿರೆ ಬಂದು ಭಾವಿಸಿ ತಪೋವನಮಂ ಶಶಿಮೌಳಿ ಪೊಕ್ಕು ಮೆ
ಲ್ಲನೆ ಬರುತುಂ ಪಥಶ್ರಮವನಾಂತು ಬಳಲ್ದವೊಲಾಗಿ ತೇಂಕುತುಂ ।
ಮನದೊಳನೂನಸಂಪದಮನೆಯ್ದುತುಮಿಾಕ್ಷಿಸುತಿರ್ಕೆಲಂಗಳಂ
ಘನಮಹಿಮಂ ಸ್ವತಂತ್ರವಿಭು ಪೊರ್ದಿದನೊಂದು ವಿನೂತ್ನಚೂತಮಂ ॥ ೮೯

ವ॥ ಇಂತು ಪೊರ್ದಿ ಕಪಟವಟುವೇಷಮಂ ತಳೆದ ಕಪರ್ದಿ ಪಾರ್ವತೀದೇವಿಯರ್ ತಪದೊಳಿರ್ಪ ಸೀಮಾಸಮಿಾಪದ ವಿಶಾಲ ಬಾಲಚೂತ ಶೀತಳಚ್ಛಾಯೆಯೊಳ್ ಕುಳ್ಳಿರೆ ಸಹಚರಿಯರಪ್ಪ ಜಯೆವಿಜಯೆಗಳ್ ಕಂಡು,

ಕಂ॥ ತರಳನಪೂರ್ವಿಗನತಿಥಿ
ಸ್ವರೂಪನೀಪದ್ ವಿಭೂತಿಲಸಿತಲಲಾಟಂ ।
ವರವಿಪ್ರನೆನುತೆ ಬಂದಾ
ದರಿಸಿದರೊಲವಿಂದೆ ಚರಣತಳಮಂ ತೊಳೆದರ್ ॥ ೯೦

ವ॥ ಅಂತು ತೊಳೆದು,

ಕಂ॥ ಎಳವಾಳೆಯ ಸುಳಿಯೆಲೆಯೊಳ್
ನಳನಳಿಸುವ ಕಂದಮೂಲಮಂ ನವಜಂಬೂ ।
ಫಳವಾಮ್ರಫಳಂ ಕದಳೀ
ಫಳಂಗಳಂ ತೀವಿ ತಂದು ಮುಂದಿಳಿಪುತ್ತುಂ ॥ ೯೧

ಹೊಸದೆನಿಸಿತು. ಶಿಶಿರದಲ್ಲಿ ವಸಂತೋದಯವಾದ ವಿಚಿತ್ರವನ್ನು ಅವರು ಭವಾನಿಗೆ ಅರುಹಿದರು. ಅದಕ್ಕೆ ನಿಮ್ಮ ತಪಃಪ್ರಭಾವವೇ ಕಾರಣ ! ಎಂದು ತಿಳಿಸಿದರು. ೮೯. ಹೀಗೆನ್ನುತ್ತಿರುವಾಗ ವಟುರೂಪಿನ ಶಶಿಮೌಳಿ ತಪೋವನವನ್ನು ಹೊಕ್ಕನು. ಆತ ಮೆಲ್ಲನೆ ಬರುತ್ತಾ ದಾರಿ ನಡೆದು ಆಯಾಸಗೊಂಡವನಂತೆ ನಟಿಸಿ ಏದುತ್ತಿದ್ದನು ; ಮನಸ್ಸಿನಲ್ಲಿ ಪಾರ್ವತಿಯ ಕಠಿನ ತಪಸ್ಸಿನ ನಿಷ್ಠೆಗಾಗಿ ಆನಂದ ! ಘನಮಹಿಮನಾದ ಆತ ಆಕಡೆ ಈಕಡೆ ನೋಡುತ್ತಾ ಬಂದು ಮಾವಿನಮರದ ತಳಗೆ ನಿಂತನು. ವ॥ ಕಪಟವಟು ಗಿರಿಜೆ ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಸಮಿಾಪದಲ್ಲಿ ಒಂದು ಎಳೆಮಾವಿನ ಮರದ ಕೆಳಗೆ ಕುಳಿತುಕೊಳ್ಳಲು ಸಖಿಯರು ಅವನನ್ನು ಕಂಡರು. ೯೦. "ಈ ವಟು ಅಪೂರ್ವಿಗನು, ಅತಿಥಿಸ್ವರೂಪನು, ಭಸ್ಮಧರಿಸಿದ ಹಣೆ ! ಒಳ್ಳೆಯ ವಿಪ್ರವರ" ಎಂದು, ಭಾವಿಸಿದ ಅವರು ಆತನ ಕುಶಲ ಪ್ರಶ್ನೆಮಾಡಿ, ಆತನ ಪಾದಗಳನ್ನು ತೊಳೆದರು ; ೯೧. ಅವರು ಎಳೆಬಾಳೆಯ ಸುಳಿಎಲೆಯಲ್ಲಿ ಶುಭ್ರವಾದ ಕಂದ ಮೂಲಗಳನ್ನೂ ಹೊಸ ಜಂಬುನೇರಳೆ, ಮಾವು, ಬಾಳೆ

ಕಂ॥ ಎಲೆಯತಿಥಿ ಬಳಲ್ದಿರೆಮ್ಮೀ
ಫಲದಿಂದಂ ನಿಮ್ಮ ಪಸಿವನುಡುಗಿಸಿಯೆನೆ ಸೈ ।
ಫಲಮಂ ಕೆಯ್ಕೊಂಡಪೆವೀ
ಲಲನೆಯದಾರ್ ತಪವಗಣ್ಯವಾವನ ಪುಣ್ಯಂ ॥ ೯೨

ವ॥ ಎಂದು ನುಡಿಯೆ ಜಯೆವಿಜಯೆಗಳ್ ಕೇಳ್ದು,

ಕಂ॥ ಇವರಿರವಿನ ಚಿಂತಾರತಿ
ನಿನಗೇಕೀ ಕ್ಷುಧೆಯನೀ ಪಥಶ್ರಮಮಂ ತೀ ।
ರ್ಚುವ ಬಗೆಯಂ ಬೇಗಂ ಮಾ
ಡುವುದೆನೆ ನಸುನಗುತೆ ವಿಪ್ರನಂದಿಂತೆಂದಂ । ೯೩

ಬೆಸಗೊಂಡೊಡೆ ದೋಷಮೆ ಈ
ಪೊಸಕನ್ನೆ ತಪೋನಿರೋಧದಿಂದಿರ್ದೊಡೆ ಸೈ ।
ರಿಸಬರ್ಪುದೆ ತಪಮಂ ಮಾ
ಣಿಸುವವರಿಲ್ಲಾ ಸಹಾಯಸಂಪದಮಿಲ್ಲಾ ॥ ೯೪

ಎನೆ ಕೇಳ್ದು ಗಿರಿಜೆ ಮನದೊಳ್
ಮುನಿಯುತ್ತುಂ ಜಪವನುಡುಗಿ ಜಪಮಾಲೆಯನೊ ।
ಯ್ಯನೆ ಕೆಯ್ಯೊಳೋಸರಿಸಿ ಮೆ
ಲ್ಲನೆ ಕಣ್ದೆಱೆಯುತ್ತೆ ಕಂಡಳಾ ವರ ವಟುವಂ ॥ ೯೫

ಹಣ್ಣುಗಳನ್ನು ತಂದು ಮುಂದಿಟ್ಟು ೯೨. "ಎಲೆ ಅತಿಥಿಗಳೆ! ನೀವು ತುಂಬಾ ಬಳಲಿದ್ದೀರಿ! ನಾವು ಸಮರ್ಪಿಸಿದ ಈ ಹಣ್ಣುಗಳನ್ನು ಸೇವಿಸಿ ಹಸಿವು ಅಡಗಿಸಿಕೊಳ್ಳಿರಿ," ಎಂದರು. ಅದಕ್ಕೆ ಆ ವಟು "ಸೈ! (ಆಗಲಿ), ನೀವು ನೀಡಿದ ಹಣ್ಣುಗಳನ್ನು ಸ್ವೀಕರಿಸುವೆನು, ಆದರೆ ಈ ಲಲನೆ ಯಾರು? ಈ ಬಗೆಯ ತಪಸ್ಸು ಯಾವನ ಪುಣ್ಯ!" ೯೩. ಈಕೆಯ ಇರವಿನ ಚಿಂತೆ ನಿಮಗೇತಕ್ಕೆ? ನೀವು ಹಸಿವನ್ನು ಮತ್ತು ದಾರಿಯ ಆಯಾಸವನ್ನು ಬೇಗ ಹೋಗಲಾಡಿಸಿಕೊಳ್ಳಿರಿ" ಎನ್ನಲು ಆ ವಟು ನಸುನಕ್ಕು ಹೀಗೆಂದನು. ೯೪. "ಕೇಳಿದ ಮಾತ್ರಕ್ಕೆ ತಪ್ಪೇನು? ಎಳೆ ಪ್ರಾಯದ ಈ ಕನ್ನೆ ತಪಸ್ಸು ಮಾಡದಿದ್ದರೆ ಒಳ್ಳೆಯದು. ಈ ತಪಸ್ಸನ್ನು ತಡೆಯುವವರಿಲ್ಲವೆ? ಇಷ್ಟಾರ್ಥ ಪಡೆಯುವುದಕ್ಕೆ ಬೇರೆ ಸಹಾಯಾದಿಗಳಿಲ್ಲವೆ?" ೯೫. ವಟು ಹೇಳಿದ ಮಾತನ್ನು ಕೇಳಿ ಗಿರಿಜೆಗೆ ನಸುಕೋಪವುದಿಸಿತು. ಅವಳು ಮನಸ್ಸಿನಲ್ಲಿ ಮುನಿದು ಜಪವನ್ನು ನಿಲ್ಲಿಸಿ, ಜಪಮಾಲೆಯನ್ನು ಮೆಲ್ಲಗೆ ಪಕ್ಕಕ್ಕೆ

ವ|| ಆ ಸಮಯದೊಳ್,

ಕಂ|| ಇಂದುಗೆ ಮೋಘಂ ಕವಿದೊಡ
ಮಂದೀ ಲೋಕಕ್ಕೆ ತಣ್ಪು ತಪ್ಪದ ತೆಱದಿಂ।
ದಿಂದುಧರಂ ವರವಟುವೇ
ಷಂದಳೆದೊಡಮಗಜೆಗಾದುದತಿಹರ್ಷಮಖಿಂ॥ ೯೬

ವ|| ಅಂತು ಹರ್ಷಮನಿಮಿತ್ತಮೇಕಾದಪ್ಪುದೆಂದು ನಿಮಿತ್ತಮನಱಿಯದೆ ಬೆಱಗಾಗಿ ನೋಡುತಿರ್ಪಲ್ಲಿ,

ಕಂ|| ಗಿರಿಸುತೆಯ ಮಧುರದೃಷ್ಟಿಗ
ಳುರವಣೆಯಿಂ ತಾಗೆ ತನ್ನನಾಗಳ್ ವಿಪ್ರಂ।
ಕರಗಿ ನಿಲಲಾಱದೆಲ್ಲಾ
ತುರಪುಳಕಮನಂತುಮಿಂತು ಸಂತಮಿಡುತ್ತಂ॥ ೯೭

ನೆಗೆವ ಜಡೆಮುಡಿಯನೊತ್ತು
ತ್ತೊಗೆವ ಭುಜಾವಳಿಯನಡಂಗಿಸುತ್ತೂರುಗಳಿಂ।
ಮಿಗುವ ವೃಷೇಂದ್ರನನೌಂಕು
ತ್ತಗಲದೆ ನಿಜಮೂರ್ತಿಯೊಳಗೆ ಗಜಬಜಿಸುತ್ತುಂ॥ ೯೮

ಎಂತಾನುಂ ನಿಜರೂಪಂ
ಸಂತವಿಡುತ್ತಲ್ಲಿ ವಿಪ್ರನತಿಧೈರ್ಯತೆಯಂ।
ಮುಂತಿಟ್ಟು ಗಿರಿಜೆಯೊಡನುಸಿ
ರ್ದಂ ತಡಬಡಿಸುತ್ತೆ ಮಿಸುಪ ಪೊಸಪುಸಿವಾತಂ॥ ೯೯

ಸರಿಸಿ, ಮೆಲ್ಲನೆ ಕಣ್ದೆರೆದು, ಆ ಶ್ರೇಷ್ಠ ವಟುವನ್ನು ಕಂಡಳು. ೯೬. ಚಂದ್ರನಿಗೆ ಮೋಡವು ಕವಿದರೂ ತಂಪು ತಪ್ಪೀತೆ? ಅದರಂತೆ ಶಿವನು ವಟುವೇಷವನ್ನು ಧರಿಸಿದ್ದರೂ ಕೂಡ ಅಗಜೆಗೆ ಹರ್ಷವೇಳಿಯಿತು. ವ|| ತನಗಾದ ಅಕಾರಣ ಹರ್ಷದ ಕಾರಣ ಅವಳಿಗೆ ತಿಳಿಯಲಿಲ್ಲ; ಅವಳು ಬೆರಗಾಗಿ ಅವನನ್ನು ನೋಡುತ್ತಿದ್ದಂತೆ. ೯೭. ಗಿರಿಸುತೆಯ ಮಧುರ ದೃಷ್ಟಿಗಳು ತನಗೆ ತಾಗಲು ವಿಪ್ರ ಕರಗಿದನು; ಆತ ಅಲ್ಲಿ ನಿಲ್ಲಲಾರದೆ ಹೋದನು. ಆತನ ಮೈಪುಳಕವೆದ್ದಿತು; ಅದನ್ನು ಹೇಗೋ ತಡೆದುಕೊಂಡು, ೯೮. ಜಿಗಿಯುತ್ತಿದ್ದ ಜಡೆಮುಡಿಯನ್ನು ಒತ್ತಿ ಹಿಡಿದು, ಭುಜಗಳ ಚಲನೆಯನ್ನು ಅಡಗಿಸಿಕೊಂಡು ತೊಡೆಗಳಲ್ಲಿ ಪ್ರಕಟವಾಗಲಿರುವ ಬಸವನನ್ನು ಅಮುಕಿ, ಮರೆ ಮಾಡಿದ್ದು ನಿಜಸ್ವರೂಪವು ಗಜಬಜಿಸುತ್ತಿತ್ತು. ೯೯. ತನ್ನ ನಿಜಸ್ವರೂಪವನ್ನು ಕಷ್ಟದಿಂದ ಸಂತೈಸುತ್ತಾ, ವಿಪ್ರವಟು ತುಂಬಾ ಧೈರ್ಯ

ಕಂ॥ ಈ ಸುಕುಮಾರತೆಯಿಾ ನಿಲ
ವೀ ಸುಕರತೆಯಿಾ ನವೀನಯೌವನಮದವೀ ।
ಭಾಸುರತೆಯಿಾ ಸುಧಾಮಯ
ವೀ ಸುಖದೊಳ್ ತಪಮಿದೆಂತು ಬಂದುದು ಮುಗ್ಧೇ ॥ ೧೦೦

ನಿನಗೇಕೀ ತರುಣತೆಯೊಳ್
ಘನತಪವೆಡೆಗೊಂಡುದಕಟ ನವಲತೆಯಂ ಸೂ ।
ರ್ಯನ ಬಿಸಿಲಿಂ ಕೊರಗಿಪ ದು
ಷ್ಟನನೆನಗಱಿಪಬಲೆ ಸೌಕುಮಾರ್ಯಾವರಣೇ ॥ ೧೦೧

ವ॥ ಅಂತುಮಲ್ಲದೆಯುಂ,

ಕಂ॥ ಎಳೆಗೆಂಪನುಗುಳ್ವ ಮೃದುಕೋ
ಮಳಪದಕಮಳಂಗಳೀಗಳತಿಕಠಿನಮೆನಿ ।
ಪ್ಪಿಳೆಯೊಳ್ ಪರಹರ ಕಲ್ನೆಲ
ಕಳವಟ್ಟುವಿವೆಂತು ಬಾಲಹಂಸೀಯಾನೇ ॥ ೧೦೨

ಎಳೆವೆಳ್ದಿಂಗಳ ಸೋಂಕಿಂ
ಗಳವಡದಳ್ಕುವ ಶಿರೀಷಸುಕುಮಾರಾಂಗಂ ।
ಬಳವತ್‌ಕರ್ಕಶತರದಿಂ
ಬಳಸಿರ್ದೀ ನಾರಸೀಱೆಗಾಂತುದು ಚಿತ್ರಂ ॥ ೧೦೩

ಎಳಲತೆಯಂ ಱೋಡಾಡುವ
ನಳಿತೋಳ್ ಕೋಕಂಗಳ ವಿಭಂಗಿಪ ಕುಚಮಂ ।

ತಳೆದು, ತಡಬಡಿಸುತ್ತಾ ಗಿರಿಜೆಯೊಡನೆ ಕಪಟದ ಮಾತುಗಳನ್ನು ಆಡತೊಡಗಿದನು. ೧೦೦. "ಎಲೌ ಸುಂದರಿ, ಈ ಕೋಮಲತೆ ಸೌಕರ್ಯ, ಈ ಹೊಸಯುವ್ವನಮದ, ಈ ಭಾಸುರತೆ, ಸುಧಾಮಯವಾದ ಸುಖಪಡುವ ಸಮಯದಲ್ಲಿ ತಪಸ್ಸು ಮಾಡುವ ಸನ್ನಿವೇಶವೇನು ಬಂತು?" ೧೦೧. "ಈ ತಾರುಣ್ಯದಲ್ಲಿ ಅಯ್ಯೋ! ಈ ಉಗ್ರ ತಪಸ್ಸನ್ನು ಮಾಡುವ ಸನ್ನಿವೇಶ ಒದಗಬಹುದೇ? ಈ ನವಲತೆಯನ್ನು ಬಿಸಿಲಿನಲ್ಲಿ ಕೊರಗಿಸುವ ಆ ದುಷ್ಟನು ಯಾರು ಎಂಬುದನ್ನು ಎಲೌ ಕೋಮಲಾಂಗಿ ನನಗೆ ತಿಳಿಸು". ೧೦೨. ಎಲೌ ಎಳೆಯ ಹಂಸಗಳಂತೆ ನಡೆಯುಳ್ಳವಳೆ, ಎಳೆಯ ಕೆಂಪನ್ನು ಒಸರುವ ಕೋಮಲವಾದ ನಿನ್ನ ಪಾದಕಮಲಗಳು ಇಂತಹ ಕಠಿನವಾದ ಕಲ್ನೆಲದಲ್ಲಿ ನಡೆಯಲು ಹೇಗೆ ಒಗ್ಗಿದವು? ೧೦೩. ಎಳೆಯ ಬೆಳ್ದಿಂಗಳ ಸೋಂಕಿಗೂ ಅಳವಡದೆ ಅಳುಕುವ ಹಾಗೆ ಹೂವಿನಂತೆ ಸುಕುಮಾರವಾದ ನಿನ್ನ ಅಂಗವು ಅತಿ ಕರ್ಕಶವಾದ ಈ ನಾರ ಸೀರೆಗೆ ಹೇಗೆ ಒಗ್ಗಿ ಕೊಂಡಿತು ಎಂಬುದೆ ಸೋಜಿಗ. ೧೦೪. ಎಳೆಲತೆ

ಡಳ ಮುಸಿರಲುಪವನಪಥದ
ತುಳಮಧ್ಯಂ ತಪದ ಕೋಟಲೆಗೆ ಸಂಗಡವೇ ॥ ೧೦೪

ಮಿಸುಗುವ ಶಶಿವದನಂ ಕಡು
ಬಿಸಿಲಿಂ ಕೊರಗಿತ್ತು ಕುಸುಮಮಾಳಿಕೆಯಿಂ ರಾ।
ಜಿಸುವ ಕುಚಭಾರಮಯ್ಯೋ
ಪೊಸಜಡೆಯಂ ಪಡೆದುದಕಟ ಘನಯೌವನದೊಳ್ ॥ ೧೦೫

ವ॥ ಮತ್ತಮಲ್ಲದೆಯುಂ,

ಕಂ॥ ಬಿಸಿಲೆನ್ನದೆ ಮಳೆಯನ್ನದೆ
ಶಿಶಿರಮಿದೆನ್ನದೆ ತೃಷೋನ್ನತಿ ಕ್ಷುಧೆ ನಿದ್ರಾ।
ವಿಸರಮುಮಂ ನೆಱೆ ಗೆಲ್ದೀ
ವಸುಮತಿ ಬೆಱಗಾಗೆ ತಪದೊಳಿರ್ದವರುಂಟೇ ॥ ೧೦೬

ವನಜಾನನೆ ಏಱುಂಜ
ವ್ವನದೊಳ್ ವನದೊಳ್ ನಿರೋಧದೊಳ್ ಪೇಳಿಂತಾ।
ವನನುದ್ದೇಶಿಸಿ ತಪಮಿದ
ನೆನಗಱಿಪಿದೊಡೇನೊ ದೋಷಮೇ ಮೃಗನಯನೇ ॥ ೧೦೭

ವ॥ ಎಂದು ಪ್ರೇಮಜನಪ್ರಣಯಕಲಹಲೀಲಾಲೋಲಚಿತ್ತನಪ್ಪ ವಿರೂಪಾಕ್ಷಂ ವಟುವೇಷದಿಂ ನುಡಿದ ಮೃದುಕಠಿನಾಕ್ಷೇಪಗರ್ಭಿತವಚೋವಿಳಾಸಮಂ ಶೈಳಜೆ ಕೇಳ್ದು ಚಿಂತೆಯಂ ತಾಳ್ದು,

ಕಂ॥ ಬೆಸಗೊಂಡಪನಮಳದ್ವಿಜ
ನುಸಿರಲ್ ತಾಂ ಬಾರದುಸಿರದಿರಬಾರದೆನು।

ಯನ್ನು ಹೀಯಾಳಿಸುವ ನಳಿತೋಳು ಮತ್ತು ಚಕ್ರವಾಕಗಳನ್ನು ಹೀಗಳೆವ ಕುಚಮಂಡಳಗಳು ಈ ಕಾಡಿನ ನಡುವೆ ಉಗ್ರ ತಪಸ್ಸು ಮಾಡಲು ತಕ್ಕವುಗಳೆ? ೧೦೫. ಪ್ರಕಾಶಿಸುವ ಚಂದ್ರವದನವು ಉರಿಬಿಸಿಲಿಗೆ ಕೊರಗಿತು. ಹೂಮಾಲೆಗಳಿಂದ ಬೆಳಗುವ ಕೇಶಪಾಶಗಳು ಶಿವಶಿವ! ಈ ಹೊಸಯೌವನದಲ್ಲಿಯೂ ಜಡೆಗಟ್ಟಿವೆ! ೧೦೬. ಮಳೆ ಬಿಸಿಲೆನ್ನದೆ, ಚಳಿಗಾಳಿಗಳೆನ್ನದೆ ಹಸಿವು ನೀರಡಿಕೆಗಳೆನ್ನದೆ, ನಿದ್ರಾಹಾರಗಳಿಲ್ಲದೆ ಲೋಕವು ಬೆರಗಾಗುವಂತೆ ತಪಸ್ಸು ಮಾಡಬಹುದೆ? ೧೦೭. ಎಲೌ ಮೃಗಾಕ್ಷಿ, ಏರುತ್ತಿರುವ ಈ ಯೌವನದಲ್ಲಿ ಈ ಕಾಡಿನಲ್ಲಿ ಯಾರನ್ನು ಉದ್ದೇಶಿಸಿ ತಪಸ್ಸು ಮಾಡುತ್ತಿರುವೆ, ನನಗೆ ಹೇಳಿದರೆ ತಪ್ಪಿಲ್ಲವಷ್ಟೆ! ವ॥ ಹೀಗೆ ಪ್ರಣಯ ಕಲಹಲೋಲನಾದ ಕಪಟ ವಟು ನುಡಿದ ಆಕ್ಷೇಪಗರ್ಭಿತ ಮಾತುಗಳನ್ನು ಕೇಳಿದ ಗಿರಿಜೆ ಚಿಂತಿಸಿ, ೧೦೮. "ಪವಿತ್ರಾತ್ಮನಾದ ದ್ವಿಜವಟು ಬೆಸಗೊಳ್ಳುತ್ತಿ

ತ್ರಿಸದೃಶತಪಮಂ ಮನದು
ಬ್ಬಸದಿಂದೆ ಭವಾನಿ ಮಾನಿ ಮೆಲ್ಲನೆ ನುಡಿದಳ್ ॥ ೧೦೮

ಬಗೆವೆರ್ಚಿ ಕೇಳುತಿರ್ದಪೆ
ಮಿಗೆ ಪೇಳ್ದಪೆನೆಲೆಲೆ ಧೂರ್ತವಿಪ್ರನೆ ಕೇಳ್ ಶಂ।
ಭುಗೆ ಕಾರುಣ್ಯಾಬ್ಧಿಗೆ ಶೂ
ಲಿಗೆ ಕರುಣಂ ಪುಟ್ಟುವಂತೆ ತಪದಿಂದಿರ್ಪೆಂ ॥ ೧೦೯

ಎನುತಂ ಗದ್ಗದಿಸುತೆ ಪುಳ
ಕನಿಕಾಯಮನಾನುತಶ್ರುವಂ ಕಳೆಯುತ್ತುಂ ।
ಘನಹರ್ಷಚಿತ್ತೆಯಾಗು
ತ್ತೆ ನಗೇಶ್ವರಪುತ್ರಿ ಶಂಕರನ ಪೆಸರ್ಗೊಂಡಳ್ ೧೧೦

ವ॥ ಎಂದು ವಿರೂಪಾಕ್ಷಂಗೆ ತಪಮಿರ್ದಪೆನೆಂಬ ನುಡಿಯಂ ಕೇಳ್ದು ದುಷ್ಟ ಧರಾಮರ ನಟ್ಟಹಾಸದಿಂದಿಂತೆಂದಂ

ಕಂ॥ ಅಕ್ಕಕ್ಕ ಕಾಮಹರನೊಳ್
ಮುಕ್ಕಣ್ಣನೊಳಖಿಳವೇದ ಶಾಸ್ತ್ರಕ್ರಮಮಂ ।
ಮಿಕ್ಕವನೊಳ್ ಪಿತೃವನದೊಳ್
ಪೊಕ್ಕವನೊಳದೆಂತು ಚಿತ್ತವಿಟ್ಟೆ ಲತಾಂಗೀ ॥ ೧೧೧

ಉ॥ ಭೀಕರವಪ್ಪ ಶೂಲಿಯಭಿಲಾಷೆಯೊಳೀ ತಪವಾತನೇಕೆ ನೀ
ನೇಕೆ ಕೃಪಾಣವೇಕೆ ಲತೆಯೇಕೆ ಲಸತ್ಕರಿಯೇಕೆ ರಂಭೆ ತಾ ।

ದ್ದಾನೆ, ಉತ್ತರಿಸುವನೆಂದರೆ ಉಸಿರೇ ಇಲ್ಲ!" ಎಂದು ಭವಾನಿ ಯೋಚಿಸಿ ಮನದ ದುಗುಡವನ್ನು ಮೆಲ್ಲನೆ ನುಡಿದಳು. ೧೦೯. "ಎಲೈ ಧೂರ್ತವಿಪ್ರ! ನನ್ನ ವಿಷಯವಾಗಿ ನೀನು ಆಸಕ್ತಿ ವಹಿಸಿ ಕೇಳುತ್ತಿದ್ದೀಯೆ, ಹೇಳುವೆನು ಕೇಳು–ಕಾರುಣ್ಯಾಬ್ಧಿಯೂ ಶೂಲಪಾಣಿಯೂ ಆದ ಶಂಭುವಿಗೆ ದಯೆ ಹುಟ್ಟುವುದಕ್ಕಾಗಿ ತಪಸ್ಸು ಮಾಡುತ್ತಿದ್ದೇನೆ". ೧೧೦. ಎಂದು ಹೇಳುವಾಗ ಅಗಜೆಯ ಮಾತು ಗದ್ಗದಿತವಾಯಿತು. ಮೈ ಜುಮ್ಮೆನ್ನಿತು ರೋಮಾಂಚಿತವಾಯಿತು, ಮೂಡಿ ಬಂದ ಆನಂದಾಶ್ರುಗಳನ್ನು ಒರೆಸಿಕೊಳ್ಳುತ್ತಾ ಆ ಪಾರ್ವತಿಯು ತನ್ನ ಆರಾಧ್ಯ ಮೂರ್ತಿ ಶಂಕರ ಎಂದು ಹೆಸರನ್ನು ಹೊರಗೆಡಹಿದಳು. ವ॥ ವಿರೂಪಾಕ್ಷನನ್ನು ಕುರಿತು ತಪಸ್ಸು ಮಾಡುವಳೆಂಬುದನ್ನು ಕೇಳಿ ಆ ಕಪಟ ವಟುವು ನಕ್ಕು ಹೇಳಿದನು. ೧೧೧. ಓಹೊ! ಸರಿಸರಿ! ಆ ಕಾಮಹರನಲ್ಲಿ, ಮುಕ್ಕಣ್ಣನಲ್ಲಿ, ವೇದಶಾಸ್ತ್ರ ಕ್ರಮಕ್ಕೆ ಮೀರಿದವನಲ್ಲಿ, ತತ್ರಾಪಿ (ಅದರಲ್ಲಿಯೂ) ಶ್ಮಶಾನ

ನೇಕೆ ಕೃಶಾನುವೇಕೆ ಪೊಸಪೂವಿನ ಮಾಲೆಯದೇಕೆ ಭಾನುವೇ
ಕಾ ಕುಮುದಂದಲೇಕೆ ಸಿಡಿಲೇಕೆ ಮರಾಳನದೇಕೆ ಲೋಕದೊಳ್ ॥ ೧೧೩

ಕಂ॥ ನೀನನಿಯಳ್ ವಿಷಮಾತಂ
ನೀನತಿಮೃದು ಕಠಿನಗುಣಗಣಾಶ್ರಯನಾತಂ ।
ನೀನಬಲೆಯುಗ್ರನಾತಂ
ನೀನುರುತರಭೀರು ಸರ್ಪಭೂಷಣನಾತಂ ॥ ೧೧೪

ಪುಲಿದೊವಲುಡಿಗೆಯು ಪಾವಿನ
ನೆಲೆದೊಡಿಗೆಯು ನೊಸಲ ಕಣ್ಣು ಖಟ್ವಾಂಗದ ಪಂ ।
ದಲೆಗಳ ಮಾಲೆಯು ಶೂಲದ
ಕಲಿಗಂಜದೆ ಮನವನೆಂತು ಮಾಡಿದೆ ಮುಗ್ಧೇ ॥ ೧೧೫

ವ॥ ಎಂದು ವಿಪ್ರಂ ನುಡಿದ ಶಿವನಿಂದೆಗೆ ಭವಾನಿ ಮುನಿದು ಕನಲ್ದು ಕಿನಿಸಿ ಕಿಡಿಕಿಡಿವೋಗಿ,

ಕಂ॥ ತಪವಂತದಿರ್ಕೆ ಮಾಡುವ
ಜಪವಿರ್ಕೆ ಮೃಗಾಂಕಮೌಳಿಯಂ ಭರದಿಂ ಧ್ಯಾ ।
ನಿಪುದಿರ್ಕೆ ಶಂಭುವಂ ನಿಂ
ದಿಪುದಂ ಕೇಳ್ವೊಂದು ಪಾಪವಿಂದೆನಗಾಯ್ತೇ ॥ ೧೧೬

ವಾಸಿಯಲ್ಲಿ ಹೇ ಲತಾಂಗಿ ! ಅದು ಹೇಗೆ ನಿನ್ನ ಮನಸ್ಸು ಇಟ್ಟೆ ! . ೧೧೩. ಭಯಂಕರನಾದ ಆ ಶೂಲಿಯಲ್ಲಿ ನಿನ್ನ ಮನಸ್ಸು ಇಟ್ಟಮೇಲೆ ಇನ್ನು ತಪಸ್ಸೇತಕ್ಕೆ ? ನೀನೇಕೆ? ಖಡ್ಗವೇತಕ್ಕೆ ಲತೆಯೇತಕ್ಕೆ? ಕರಿಯೇಕೆ? ಕದಲಿಯೇಕೆ? ಅಗ್ನಿ ಏಕೆ–ಹೂಮಾಲೆಯೇಕೆ? ರವಿಯೇಕೆ ನೈದಿಲೆಯೇಕೆ? ಸಿಡಿಲು ಏತಕ್ಕೆ? ಕಲಹಂಸವೇತಕ್ಕೆ ? ೧೧೪. ವಿಚಾರ ಮಾಡಿದರೆ ನೀನು ಮಧುರೆ, ಆತ ವಿಷ; ನೀನು ಕೋಮಲೆ, ಆತ ಅತಿ ಕಠಿಣಗುಣಗಳಿಗೆ ಆಶ್ರಯ; ನೀನು ಅಬಲೆ ಆತ ಉಗ್ರ ; ನೀನು ಭಯಸ್ಥೆ–ಆತ ಉರಗ ಭೂಷಣ ! ೧೧೫. ಆತನ ಸ್ವರೂಪವನ್ನಾದರೂ ನೋಡು : ಹುಲಿತೊಗಲಿನ ಉಡಿಗೆ, ಹಾವುಗಳೇ ಆಭರಣಗಳು, ಹಣೆಗಣ್ಣು, ಹೊರಸಿನ ಕಾಲು(ಖಟ್ವಾಂಗ)ಹಸಿತಲೆಗಳ ರುಂಡಮಾಲೆ,ಶೂಲಧಾರಿ ! ಎಲೆ ಮುಗ್ಧೆ ; ಇದಿಷ್ಟಕ್ಕೂ ಸಹ ನೀನು ಅಂಜದೆ ಹೇಗೆ ಮನಸ್ಸು ಮಾಡಿದೆ ? ವ॥ ಎಂದ ಶಿವನಿಂದಾರೂಪವಾದ ವಿಪ್ರನ ಮಾತಿಗೆ ಗಿರಿಜೆ ಕುಪಿತಳಾದಳು ೧೧೬, ನಾನು ಮಾಡುವ ತಪಸ್ಸು ಮತ್ತು ಜಪಗಳ ಮಾತು ಹಾಗಿರಲಿ, ಈಗ ಚಂದ್ರಶೇಖರನನ್ನು ಧ್ಯಾನಿಸುವುದೂ ಹಾಗಿರಲಿ ಆದರೆ ಶಿವನಿಂದೆಯನ್ನು ಕೇಳುವ ಪಾಪವು ನನಗೆ ಲಭಿಸುವಂತಾಯಿತಲ್ಲಾ !

ಕಂ॥ ಘೋರತಪದಲ್ಲಿ ಕೋಪಿಸ
ಬಾರದು ತಾಂ ತಪದ ಕೇಡು ಪತಿನಿಂದೆಯುಮಂ।
ಸೈರಿಸಬಾರದೆನುತ್ತೆ ವಿ
ಚಾರಮನುಳಿದಗಜೆ ಮನದ ಮುಳಿಸಿಂದಾಗಳ್ ॥ ೧೧೬

ಆದ ನಿರೋಧದ ನಿಂದೆಯ
ನಾದರಿಸದೆ ಭಸಿತದಿಂದೆ ವಿಪ್ರನನಿಡೆ ಪೋ।
ಪೋದುದು ವಟುವೇಷಂ ಶಿವ
ನಾದೊಡದೇಂ ಪುಸಿ ದಿಟಕ್ಕೆ ನಿಲ್ಬುದೆ ಜಗದೊಳ್ ॥ ೧೧೭

ವ॥ ಆಗಳ್,

ಕಂ॥ ಮುಗಿಲ ತೆಱೆ ಸರಿದ ಶಶಿಯುಂ
ತೊಗೆದ ತಮಂ ತೆಗೆದ ತರುಣತರಣಿಯ ತೆಜದಿಂ।
ಪೊಗೆ ತಗ್ಗಿದಗ್ನಿಯಂತಿರೆ
ಮಿಗೆ ವೇಷಂ ತೊಲಗಿ ಶಂಭು ತೊಳಗುತ್ತಿರ್ದಂ ॥ ೧೧೮

ಜಡೆಮುಡಿ ಪಂಚಮುಖಂ ನೆಗೆ
ದುಡುಪತಿಕಳೆ ದಶಭುಜಂ ತ್ರಿನೇತ್ರಂ ಗಾತ್ರಂ।
ಬಿಡಿದ ನವಭೂತಿ ಪುಲಿದೊವ
ಲುಡಿಗೆಗಳಿಂ ಶಂಕರಂ ಕರಂ ಮೆಱೆದಿರ್ದಂ ॥ ೧೧೯

ವ॥ ಆ ಸಮಯದೊಳ್,

ಕಂ॥ ಸರಿದುದು ಪುಸಿವೇಷದ ತೆಱೆ
ಸುರಿದುದು ಕೆಯ್ಸೋರ ತೆಱದೆ ಪೂವಳೆ ಸರಿಸಂ।

೧೧೬. ಘೋರ ತಪಸ್ಸಿನಲ್ಲಿ ಕೋಪ ಕೆಟ್ಟದ್ದು, ಅದು ತಪಸ್ಸಿನ ಕೇಡು; ಇನ್ನು ಪತಿನಿಂದೆಯನ್ನು ಸಹ ಸೈರಿಸಬಾರದು ಎಂದು ಅಗಜೆ ಕೋಪಗೊಂಡು. ೧೧೭. ವಟುಮಾಡಿದ ನಿಂದೆಯನ್ನು ಕೇಳಿ ಸಹಿಸಲಾರದೆ ಪಾರ್ವತಿ ಪಕ್ಕದಲ್ಲಿದ್ದ ಭಸ್ಮದ ಗಟ್ಟಿಯನ್ನು ವಟುವಿನ ಮೇಲೆ ಎಸೆದಳು, ಹುಸಿಯು ದಿಟದ ಮುಂದೆ ನಿಲ್ಲಬಲ್ಲುದೆ? ಆ ಕೂಡಲೆ ವಟುವೇಷ ಕಳಚಿತು. ೧೧೮. ಮೋಡದ ತೆರೆ ತೆರೆದ ಚಂದ್ರನಂತೆ, ಕತ್ತಲು ಅಳಿದ ತರುಣ ರವಿಯಂತೆ, ಹೊಗೆ ತಗ್ಗಿದ ಬೆಂಕಿಯಂತೆ, ವಟುವೇಷ ತೊಲಗಿ ಶಂಭು ಬೆಳಗುತ್ತಿದ್ದನು. ೧೧೯. ಜಡೆಮುಡಿ ಪಂಚಮುಖ, ಸೂಡಿದ ಚಂದ್ರಕಳೆ, ದಶಭುಜ, ತ್ರಿನೇತ್ರ, ಭಸ್ಮಲೇಪಿಸಿದ ಒಡಲು, ಹುಲಿ ತೊಗಲಿನ ಉಡಿಗೆಗಳಿಂದ ಶಂಕರನು ಬೆಳಗುತ್ತಿದ್ದನು. ೧೨೦. ಹುಸಿವೇಷದ ತೆರೆ ಸರಿಯಿತು, ಧಾರೆಯೆರೆದಂತೆ ಸುರಿದ ಹೂವಿನಮಳೆ ಕೋಪದಿಂದ ಎಸೆದ ಭಸ್ಮವೆ ಮದುವೆಯಲ್ಲಿ ಎರಚುವ ಜೀರಿಗೆ ಬೆಲ್ಲವೆಂಬಂತೆ ಆ ಸನ್ನಿವೇಶ ಶಿವಶಿವೆಯರ ಮದುವೆಯ ಸಂಕೇತವಾಗಿತ್ತು.

ಬರಿದುದು ಜೀರಿಗೆಬೆಲ್ಲದ
ಪರಿಯಿಂ ಮುಳಿದಿಟ್ಟ ಭಸಿತಮದೆ ಮದುವೆಯವೋಲ್ ॥ ೧೨೦

ಮ॥ ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ ।
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಹಂಪೆಯ ವಿರೂಪಾಕ್ಷಂ ಶಿವಾವಲ್ಲಭಂ ॥ ೧೨೧

ಇದು ಸಮಸ್ತ ಸುರಾಸುರಮಕುಟ ಖಚಿತ
ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪುಂಜರಂಜಿತಚರಣ
ನೆನಿಪ ಪಂಪಾವಿರೂಪಾಕ್ಷ ಶ್ರೀಪಾದಕಮಲ
ಮಕರಂದ ಮಧುಕರಾಯಮಾಣ
ಸತ್ಕವೀಶ್ವರ ಹಂಪೆಯ
ಹರಿಹರದೇವ ವಿರಚಿತಮಪ್ಪ
ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ಪಾರ್ವತೀ ತಪೋವರ್ಣನಂ ವಿರೂಪಾಕ್ಷ ಪ್ರತ್ಯಕ್ಷೀಕರಣ ವರ್ಣನಂ
ನವಮಾಶ್ವಾಸಂ

# ದಶಮಾಶ್ವಾಸಂ

## ಪಾರ್ವತೀಪರಮೇಶ್ವರ ವಿವಾಹವರ್ಣನಂ

ಕಂ॥ ಶ್ರೀ ಗಿರಿಜಾವಲ್ಲಭನಖಿ
ಳಾಗಮದುರ್ಲಭನಪಾರಸುಲಭಂ ಕಾರು।
ಣ್ಯಾಗಾರಂ ಭಕ್ತಿಯನೆಮ
ಗೀಗೆ ಸದಾವರದ ಹಂಪೆಯ ವಿರೂಪಾಕ್ಷಂ॥ ೧

ಆಗಳ್ ಕಂಡಗಸುತೆ ಬೆಱ
ಗಾಗುತೆ ಸರಿವರಿಸಿಕೊಳುತೆ ವಲ್ಕಲವಸನಾ।
ಭೋಗಮನತಿಲಜ್ಜಿತೆ ತಲೆ
ವಾಗಿದಳನುರಾಗವೇೞೆ ಪುಳಕಿಸುತಿರ್ದಳ್॥ ೨

ಅವಲೋಕನದಿಂ ಸೆಳೆದಳ್
ಶಿವನಂ ಮನದಿಂದ ತೆಗೆದಳಪ್ಪಿದಳತ್ಯು।
ತ್ಸವದಿಂ ಚಿತ್ತದೊಳೆಳಸುತೆ
ತವಕಂ ಮಿಗೆ ಚುಂಬಿಸಿದಳಹಂಕಾರದೊಳಂ॥ ೩

ವ॥ ಆ ಸಮಯದೊಳ್,

ಚಂ॥ ಉಡುಪತಿಬಿಂಬಮಂ ನಗುವ ನಿರ್ಮಳವಕ್ತ್ರಮನಾಸೆ ಮಿಕ್ಕು ಧೀಂ
ಕಿಡುವ ಕಟಾಕ್ಷಮಾಲೆಗಳನುನ್ನತಪೀನಪಯೋಧರಂಗಳಂ।
ಮೃಡನೊಸೆದೀಕ್ಷಿಸುತ್ತೆ ನಿಲಲಾಱದಪರ್ಣೆಯ ಪುಣ್ಯಹಸ್ತಮಂ
ಪಿಡಿದನಶೇಷ ದೇವಕುಲಮೌಳಿವಿರಾಜಿತ ಪಾದಪಂಕಜಂ॥ ೪

೧. ಗಿರಿಜೆಯ ವಲ್ಲಭನೂ ಸಕಲ ಶಾಸ್ತ್ರದುರ್ಲಭನೂ, ಭಕ್ತರಿಗೆ ಸುಲಭನೂ ಕರುಣೆಗೆ ನೆಲೆಯೂ, ವರಪ್ರದನೂ ಆದ ಹಂಪೆಯ ವಿರೂಪಾಕ್ಷನು ನಮಗೆ ಸದ್ಭಕ್ತಿಯನ್ನು ಕೊಡಲಿ. ೨. ಶಿವನ ನಿಜ ಸ್ವರೂಪನ್ನೂ ಕಂಡ ಅಗಸುತೆಯು ಬೆರಗಾದಳು, ಮೈಮೇಲಿನ ನಾರುಮಡಿಯನ್ನು ಸರಿಪಡಿಸಿಕೊಂಡಳು, ನಾಚಿಕೆಯಿಂದ ತಲೆವಾಗಿ ಅನುರಾಗಾತಿಶಯದಿಂದ ಪುಳಕಿಸತೊಡಗಿದಳು. ೩. ಕೇವಲ ನೋಟದಿಂದಲೇ ಶಿವನ ಮನಸ್ಸನ್ನು ಆಕರ್ಷಿಸಿದಳು, ಮನಸ್ಸಿನಿಂದಲೇ ಅವನನ್ನು ಆಲಿಂಗಿಸಿದಳು, ಅತ್ಯುತ್ಸಾಹದಿಂದ ಚಿತ್ತದಲ್ಲಿ ಆವನನ್ನು ಬಯಸಿ ಅಭಿಮಾನದಿಂದ ಮುತ್ತಿಟ್ಟಳು. ೪. ಸಮಸ್ತ ದೇವತೆಗಳಿಂದ ವಂದಿಸಲ್ಪಡುವ ಪಾದ ಪಂಕಜವುಳ್ಳ ಪರಮೇಶ್ವರನು ಚಂದ್ರನನ್ನೂ ಹೀಗಳೆವ ಅವಳ ನಿರ್ಮಲ ಮುಖಕಮಲವನ್ನೂ ಅತ್ಯಾಸೆಯಿಂದ ತವಕಿಸುತ್ತಿರುವ ಆಕೆಯ ಕಡೆಗಣ್ಣ

ವ॥ ಅಂತು ಕಯ್ಯಂ ಪಿಡಿದು,

ಚಂ॥ ಗಿರಿಸುತೆಯಳ್ಕಱಿಂ ನಡೆಯ ತಾರಗಿರೀಂದ್ರನಿವಾಸದಲ್ಲಿಗ
ತ್ಯುರುತರಲೀಲೆಯಿಂದಮೆನೆ ದೇವ ಗಿರೀಶ್ವರನಲ್ಲಿಯೆನ್ನ ನಾ।
ದರದೊಳಗೆ ಬೇಡಿಯೂರ್ಜಿತವಿವಾಹಮದಚ್ಚರಿಯಪ್ಪ ಮಾಳ್ಕೆಯಂ
ಕರುಣಿಪುದೆಂಬುದಂ ಸಲಿಸವೇಳ್ಪುದು ಬೇಳ್ಪಿನಿದಂ ಸದಾಶಿವಾ॥ ೫

ಕಂ॥ ಎಂದಗಜೆ ನುಡಿಯೆ ಮಹಿಮಾ
ವೃಂದನೊಡಂಬಡುತೆ ಸುಖದೊಳಿರ್ಪವಸರದೊಳ್।
ಬಂದು ರತಿ ಮುಕುಳಿತಾನನೆ
ನಿಂದುಮ್ಮಳದಿಂದೆ ಮುಂದೆ ಮೆಯ್ಯಿಕ್ಕಿರ್ದಳ್॥ ೬

ರತಿ ಮೆಯ್ಯಿಕ್ಕಿರ್ದೊಡೆ ಪಾ
ರ್ವತಿ ಬಿನ್ನಯ್ಸಿದಳಧೀಶ ಕೇಳೀಲಲನಾ।
ಪತಿಯಪ್ಪ ಕಾಮನಂ ಪಶು
ಪತಿ ನಿಮ್ಮಿಂ ಪಡೆದು ಕೊಡುವೆನೆಂದಾಂ ನುಡಿದೆಂ॥ ೭

ಎನೆ ಕೇಳ್ದು ಶಂಕರಂ ಗಿರಿ
ತನಯಾಮಧುರಾಸ್ಯಮಂ ನಿರೀಕ್ಷಿಸಿ ನಗುತುಂ।

ನೋಟಗಳನ್ನೂ ಉನ್ನತ ಪೀನಸ್ತನ ಮಂಡಳವನ್ನೂ ಆಸಕ್ತಿಯಿಂದ ನೋಡುತ್ತಾ ತಡೆದಿರಲಾರದೆ ಆಕೆಯ ಪುಣ್ಯಹಸ್ತವನ್ನು ಹಿಡಿದನು. ೫. ಪರಮೇಶ್ವರನು ಗಿರಿಜೆಯ ಕೈ ಹಿಡಿದು 'ಹೇ ಅಗಜೆ, ಮೇರುಪರ್ವತದ ನನ್ನ ನಿವಾಸಕ್ಕೆ ಆನಂದದಿಂದ ಹೋಗುವ ನಡೆ!' ಎಂದನು. ಅದಕ್ಕೆ ಪಾರ್ವತಿ 'ಸ್ವಾಮಿ ದಯಮಾಡಿ ನನ್ನ ತಂದೆ ಹಿಮವಂತನಲ್ಲಿ ನನ್ನನ್ನು ಆದರದಿಂದ ಯಾಚಿಸಿ, ವಿಧ್ಯುಕ್ತವಾಗಿ ವಿವಾಹವಾಗಬೇಕೆಂದು ಬೇಡುವೆನು. ಅದನ್ನು ಕೃಪೆಯಿಂದ ನೆರವೇರಿಸಿಕೊಡಬೇಕು.' ೬. ಅಗಜೆಯ ಪ್ರಾರ್ಥನೆಯನ್ನು ಮಹಿಮಾಶಾಲಿಯಾದ ಪರಶಿವನು ಮನ್ನಿಸಿದನು. ಹೀಗೆ ಅವರು ಆನಂದದಿಂದ ಇರುವಾಗ ರತೀದೇವಿಯು ದುಃಖದಿಂದ ದೀನವಾದ ಮುಖವುಳ್ಳವಳಾಗಿ ಮುಂದೆ ಬಂದು ವಂದಿಸಿದಳು. ೭. ಹಾಗೆ ರತಿದೇವಿ ವಂದಿಸುತ್ತಿರುವಾಗ ಪಾರ್ವತಿಯು ಬೇಡಿಕೊಂಡಳು: 'ಸ್ವಾಮಿ, ಈ ಕಾಂತೆಯ ಪತಿ ಮನ್ಮಥನು ನಿಮ್ಮಿಂದ ಸುಟ್ಟು ಹೋದಾಗ ಈಕೆಯ ದುಃಖವನ್ನು ಕಂಡು, ಅಮ್ಮ, ನಿನ್ನ ಪತಿಯನ್ನು ಪರಶಿವನಲ್ಲಿ ಬೇಡಿ ಪಡೆದುಕೊಡುತ್ತೇನೆ' ಎಂದು ಅಭಯವಿತ್ತಿದ್ದೇನೆ. ೮. ಹೀಗೆ ಗಿರಿಜೆ ಪ್ರಾರ್ಥಿಸಿದುದನ್ನು ಕೇಳಿದ ಶಂಕರನು, ಪಾರ್ವತಿಯ ಮಧುರವಾದ ಮುಖ ಕಮಲವನ್ನು ನೋಡಿ ನಕ್ಕು "ಅಸ್ತು! ಆಕೆ ನೆನೆದಾಗ

ನೆನೆದಾಗಳ್ ಕಾಮನನಂ
ಗನಾಗಿ ಕುಡುತಿರ್ಕೆ ರತಿಗೆ ಸುಖಸಂಪದಮಂ ॥ ೮

ವ॥ ಎಂದು ಪಾರ್ವತಿಯೊಡನೆ ನುಡಿಯುತ್ತುಂ ರತಿಗೆ ಕಾಮನಂ ಸಂಕಲ್ಪಜನ್ಮಂ ಮಾಡಿ ಕೊಟ್ಟು ಗಿರಿಜೆಯಂ ಗಿರಿರಾಜನಲ್ಲಿಗೆ ಪೋಗವೇಳ್ದು ದರ್ಪಕವಿಪಿನ ದಾವಾನಳಂ ಗಜಾಸುರ ಕುಂಭ ನಿರ್ಭಿನ್ನಸಿಂಹಂ ಜಳಂಧರಕುಮುದನಿಲಯಾರ್ಕ ರೂಪಂ ಲಾಲಾಸುರಾಭ್ರವಿಲಯಾನಿಲಂ ಕೀನಾಶ ವಿನಾಶಕರಂ ತ್ರಿಪುರಭಂಜನಂ ಚತುರ್ದಶಭುವನಚಕ್ರವರ್ತಿ ಸರ್ವಬ್ರಹ್ಮಾಂಡಸಾರ್ವಭೌಮನಾ ಭೀಳಭಾಳಾಂಬಕಂ ಶೂಲಧರಂ ಕೈಲಾಸಕ್ಕೆ ಬಿಜಯಂಗೈದನಿತ್ತಲ್,

ಕಂ॥ ಗಿರಿಸುತೆ ಜಯೆವಿಜಯೆಗಳೊಡ
ನುರುತರಪುಷ್ಪಕಮನೇಱಿ ಬರುತಿರ್ದಳ್ ಶಂ ।
ಕರನ ವರಮೂರ್ತಿಯಂತಃ
ಕರಣಪ್ರಭೆಯೊಳಗೆ ತೊಡಗಿ ಬೆಳಗೆ ನಿರಂತಂ ॥ ೯

ವ॥ ಇಂತು ಶಿವನಂ ನೆನೆಯುತಂ ಹಿಮಾಚಳಮಂ ಕಳೆದು ನಿಜರಾಜಧಾನಿಯೆನಿಸಿದೋಷ ಧಿಪ್ರಸ್ಥಪುರವರಮಂ ಪುಗುತರ್ಪಾಗಳ್ ಪಾರ್ವತೀದೇವಿ ಲಬ್ಧವರಪ್ರಸನ್ನಮುಖಿಯಾಗಿ ತಪಮಂ ಬಿಟ್ಟು ಬರುತಿರ್ದಪಳೆಂಬ ಸಂತೋಷವಾರ್ತೆಯಂ ಕರ್ಣಪರಂಪರೆಯಿಂ ಗಿರಿರಾಜಂ ಕೇಳ್ದು ಸಂತ ಸಮಂ ತಾಳ್ದು,

ಕಾಮನು ಅನಂಗನಾಗಿ ಕಾಣಿಸಿಕೊಂಡು ಅವಳಿಗೆ ಸುಖವನ್ನುಂಟುಮಾಡಲಿ" ಎಂದನು. ವ॥ ಎಂದು ರತಿಯನ್ನು ಸಂತೈಸಿ, ರತಿಗೆ ಕಾಮನು ಮನಸಿಜನಾಗಿರುವಂತೆ ಅನುಗ್ರಹಿಸಿ, ಪಾರ್ವತಿಯನ್ನು ಹಿಮವಂತನಲ್ಲಿಗೆ ಕಳುಹಿಸಿ ಮನ್ಮಥನೆಂಬ ಕಾಡಿಗೆ ಕಾಡ್ಕಿಚ್ಚಿನಂತಿ ರುವವನೂ ಗಜಾಸುರನ ಕುಂಭವನ್ನೊಡೆವ ಸಿಂಹನಂತಿರುವವನೂ ಜಲಂಧರನೆಂಬ ನೈದಿ ಲೆಗೆ ಸೂರ್ಯನೂ ಲೀಲಾಸುರನೆಂಬ ಮೇಘಕ್ಕೆ ಬಿರುಗಾಳಿಯೂ ರಾಕ್ಷಸಾಂತಕನೂ ತ್ರಿಪುರ ಹರನೂ ಹದಿನಾಲ್ಕು ಲೋಕಗಳ ಚಕ್ರವರ್ತಿಯೂ ಸರ್ವಬ್ರಹ್ಮಾಂಡ ಸಾರ್ವಭೌಮನೂ ಭಯಂಕರವಾದ ನಿಟಲಾಕ್ಷ (ಹಣೆಗಣ್ಣು)ವುಳ್ಳವನೂ ತ್ರಿಶೂಲಧಾರಿಯೂ ಆದ ಪರ ಶಿವನು ಕೈಲಾಸಕ್ಕೆ ದಯಮಾಡಿಸಿದನು; ಇನ್ನು ಈ ಕಡೆ– ೯. ಗಿರಿಜೆ ಸಖಿಯರೊಡನೆ ಪುಷ್ಪಕವಿಮಾನವನ್ನೇರಿ ತಂದೆಯ ಮನೆಗೆ ಬರುತ್ತಿದ್ದಾಳೆ. ಅವಳ ಚಿತ್ತಪಟಲದಲ್ಲಿ ಪರ ಶಿವನ ದಿವ್ಯಮೂರ್ತಿ ನಿರಂತರವೂ ಬೆಳಗುತ್ತಿದೆ. ವ॥ ಹೀಗೆ ಗಿರಿಜೆ ಶಿವನನ್ನು ನೆನೆ ಯುತ್ತಾ ಹಿಮಾಚಲವನ್ನು ಸೇರಿ ಅಲ್ಲಿ ತನ್ನ ರಾಜಧಾನಿಯಾದ ಓಷಧಿ ಪ್ರಸ್ಥಾಪುರವನ್ನು ಪ್ರವೇಶಿಸುವಾಗ ಪಾರ್ವತಿಯು ತನ್ನ ತಪಸ್ಸು ಸಿದ್ಧಿಸಿ ಪ್ರಸನ್ನಮುಖಳಾಗಿ ಬರುತ್ತಿರುವ ಳೆಂಬ ಸುದ್ದಿ ಕರ್ಣಾಕರ್ಣಿಕೆಯಾಗಿ ಹಿಮವಂತನಿಗೆ ಮುಟ್ಟಿತು. ಆತನು ಅತ್ಯಾನಂದದಿಂದ

ಕಂ॥ ಪುಳಕಂ ಮುನ್ನೆಳೆಲುತ್ತಿರೆ
ಬಳಿಕಂ ತಾನೆಳ್ದು ಸಕಳಪರಿಜನಸಹಿತಂ ।
ಕಳಗೀತವಾದ್ಯನೃತ್ಯಂ
ಗಳ ಮಂಗಳರವದ ನಡುವೆ ಗಿರಿಪತಿ ಬರುತುಂ ॥ ೧೦

ಫಳತತಿಗಳ್ ತುಱುಗಿದ ಗುಡಿ
ಗಳ ಸೀಗುರಿಚಾಮರಂಗಳೊಟ್ಟಜೆಗಳ ಮಂ ।
ಗಳಕಳಶಂಗಳ ಕನ್ನಡಿ
ಗಳ ಲಲನೆಯರೊಳಗೆ ನಡೆದನಗಕುಲರಾಜಂ ॥ ೧೧

ತರತರದೆ ನಡೆವ ಹಸ್ತ್ಯ
ಶ್ವರಥಪದಾತಿಗಳ ಸಂದಣಿಗಳಂ ನೋಡು ।
ತ್ತುರುಳುತ್ತುರ್ಬುತೆ ಕೊರ್ಬು
ತ್ತುರವಣಿಸುತೆ ನಡೆದು ಬಂದನಗಕುಲರಾಜಂ ॥ ೧೨

ವ॥ ಅಂತು ನಡೆದು ಬಂದು,

ಮ॥ ಇದಿರ್ಗೊಂಡಂ ಗಿರಿರಾಜನೂರ್ಜಿತತಪೋವಿಸ್ತಾರೆಯಂ ಧೀರೆಯಂ
ಸದಲಂಕಾರಮನಾಂತ ಪಿಂಗಳಜಟಾಸಂಪನ್ನೆಯಂ ಚೆನ್ನೆಯಂ ।
ಮುದದಿಂ ವಲ್ಕಲವಸ್ತ್ರವಿಸ್ಫುರಿತಶೋಭಾಗಾತ್ರೆಯಂ ಸ್ತೋತ್ರೆಯಂ
ಪದೆದಾಹಾ ಗಿರಿಜಾತೆಯಂ ಸಕಳಕಾಂತಿಸ್ತೋಮೆಯಂ ರಾಮೆಯಂ ॥ ೧೩

ವ॥ ಅಂತಿದಿರ್ಗೊಂಡು,

೧೦. ಹಿಮವಂತನಿಗೆ ಈ ಶುಭವಾರ್ತೆ ಕೇಳಿದೊಡನೆಯೇ ಸಂತೋಷಾತಿಶಯದಿಂದ ಮೈ ಪುಳಕಿತವಾಯಿತು. ಆತ ಕೂಡಲೆ ಎದ್ದು ಸಕಲ ಪರಿವಾರದೊಡನೆ ಮಂಗಳವಾದ್ಯಗಳನ್ನೊಡಗೊಂಡು ಪಾರ್ವತಿಯನ್ನು ಎದುರ್ಗೊಳ್ಳಲು ಹೊರಟನು. ೧೧. ಫಲಪುಷ್ಪಹಸ್ತರಾದ ನೀರೆಯರು, ಗುಡಿತೋರಣಗಳ ಚಪ್ಪರಗಳು, ಛತ್ರಚಾಮರಗಳು, ಮಂಗಳಕಲಶಕನ್ನಡಿ ಹಿಡಿದ ಲಲನೆಯರ ಸಡಗರದೊಡನೆ ಗಿರಿರಾಜ ನಡೆದನು. ೧೨. ಆನೆ ಕುದುರೆ ರಥ ಕಾಲ್ದಳಗಳ ಸಂದಣಿಗಳನ್ನು ಸಂಭ್ರಮದಿಂದ ನೋಡುತ್ತಾ ಸಡಗರದಿಂದ ನಗರಾಜ ನಡೆತಂದನು. ೧೩. ಗಿರಿರಾಜನು ಗಿರಿಜೆಯನ್ನು ಗೌರವದಿಂದ ಇದಿರ್ಗೊಂಡನು. ಆಕೆ ಊರ್ಜಿತ ತಪೋವಿಸ್ತಾರೆ ಎಂದರೆ ಮಹಾತಪಸ್ವಿನಿ, ಧೈರ್ಯಶಾಲಿನಿ, ತಪೋಯೋಗ್ಯವಾದ ಅಲಂಕಾರ ತಳೆದ ಕೆಂಜಡೆಗಳಿಂದ ಕೂಡಿದವಳು. ನಾರುಮಡಿಧರಿಸಿದ

ಮ॥ ಭರದಿಂ ನಡೆತಂದು ರಾಜಗೃಹಮಂ ಸಂತೋಷದಿಂ ಪೊಕ್ಕು ಭಾ
ಸ್ಕರ ಕೋಟಿಪ್ರಭೆಯಿಂ ಸಭಾಸದನದೊಳ್ ಬೀಱುತ್ತುಮಿರ್ಪುದ್ಭವಿ ।
ಷ್ಪರಂ ತುಷ್ಟಿಯನೇಱಿ ಶೈಳಪತಿಯುಂ ಶರ್ವಾಣಿಯುಂ ಸ್ನೇಹದಿಂ
ದಿರೆ ಮೇನಾವಧು ಬಂದಳೀಕ್ಷಿಸಿದಳೀಷತ್‌ಗಾತ್ರೆಯಂ ಪುತ್ರಿಯಂ ॥ ೧೪

ವ॥ ಅಂತು ಬಂದು ಕಟ್ಟಳ್ಕಱಿಂ ಮುಟ್ಟಿನೋಡಿ,

ಉ॥ ತಾಯೆ ತಪೋನಿರೋಧದೊಳೆ ಮೆಯ್ ಬಡವಾದುದು ಲೋಚನತ್ರಯ
ಚ್ಛಾಯೆ ಬಳಲ್ದುದಾನನಸರೋಜಮಣಂ ಕಳೆಗುಂದಿತುಜ್ಜ್ವಳ ।
ಪ್ರಾಯಕುಚದ್ವಯಂ ಕೊರಗಿದತ್ತು, ಕಚಂ ಜಡೆಗಟ್ಟಿತಿಂತಿದ
ನ್ಯಾಯಮಿದೇಕೆ ಪೋದೆ ಸುತೆ ಎಂತಳವಟ್ಟುದರಣ್ಯವಿಭ್ರಮಂ ॥ ೧೫

ವ॥ ಎಂದು ಮೇನಾದೇವಿ ಪಾರ್ವತಿಯಂ ನೋಡಿ ಕೂಡಿ ಬಾಡಿ ಬಳಲ್ದು ಕನಲ್ದು ನುಡಿಯುತ್ತಿರ್ಪಾಗಳ್,

ಕಂ॥ ಗಿರಿಪತಿಯನುಮತಿಯಿಂ ಸೌಂ
ದರಿಯರ್ ನಡೆತಂದು ಪಾರ್ವತಿಯ ಜಡೆಗಳನೊ ।
ಪ್ಪಿರೆ ಬಿಡಿಸಿ ಕಚಭರಮನತಿ
ಭರದಿಂ ತಿರ್ದುತ್ತುಮಿರ್ದರನ್ನಗಮಿತ್ರಲ್ ೧೬

ಶ್ರೀಕೈಲಾಸದೊಳಿರ್ದು ಪಿ
ನಾಕಿ ವಿವಾಹಾರ್ಥದಿಂದೆ ವರಮೂರ್ತಿಗಳಂ ।

ಮಂಗಳಗಾತ್ರೆ, ಸ್ತುತ್ಯಳು, ಕಾಂತಿಸಂಪನ್ನೆ ಅಭಿರಾಮೆ, ೧೪. ಅಗಜೆಯು ತಂದೆಯೊಡನೆ ನಡೆತಂದು ಅರಮನೆಯನ್ನು ಸಂತೋಷದಿಂದ ಪ್ರವೇಶಿಸಿದಳು. ಕೋಟಿ ಸೂರ್ಯಪ್ರಕಾಶಕ್ಕೆ ಸಮಾನವಾದ ತನ್ನ ಮುಖಪ್ರಭೆಯಿಂದ ಸಭಾಸದನವನ್ನು ಬೆಳಗಿಸುತ್ತಾ ಅವಳು ತೃಪ್ತಿಯಿಂದ ತಂದೆಯೊಡನೆ ಉನ್ನತಾಸನದಲ್ಲಿ ಕುಳಿತಳು. ಆಗ ತಾಯಿ ಮೇನಾದೇವಿ ಬಂದು ತಪಃಕೃಶೆಯಾದ ಮಗಳನ್ನು ಕಂಡಳು. ೧೫. ಅಮ್ಮಾ, ಉಗ್ರತಪಸ್ಸು ಮಾಡಿದುದರಿಂದ ಮೈ ಬಡವಾಯಿತು. ಕಣ್ಣು ಬಳಲಿದವು, ಮುಖಕಮಲ ಕಳೆಗುಂದಿದೆ, ಪ್ರಾಯಸಹಜವಾದ ಕುಚದ್ವಯ ಕೊರಗಿತು. ಕೇಶಪಾಶ ಜಡೆಗಟ್ಟಿತು, ಇಷ್ಟೆಲ್ಲ ಅನ್ಯಾಯಕ್ಕೆ ಏಕೆ ತೊಡಗಿದೆ ಆ ಕಾಡು ನಿನಗೆ ಹೇಗೆ ಒಗ್ಗಿತು? ವ|| ಹೀಗೆ ಮೇನಾದೇವಿ ಮಗಳನ್ನು ನೋಡಿ ಅವಳ ಸ್ಥಿತಿಗೆ ಬಾಡಿ ಬಳಲಿ ಕನಲಿ ಕುದಿದು ನುಡಿಯುತ್ತಿರುವಾಗ ೧೬. ಹಿಮವಂತನ ಸೂಚನೆಯಂತೆ ಕೆಲವರು ಹೆಂಗೆಳೆಯರು ಅಲ್ಲಿಗೆ ಬಂದು ಪಾರ್ವತಿಯ ತಲೆಯ ಜಡೆಗಳನ್ನು ಬಿಡಿಸಿ ಅವಳ ಉಪಚಾರವನ್ನು ಕೈಗೊಂಡರು ; ಇನ್ನು ಈ ಕಡೆ, ೧೭. ಪರಮೇಶ್ವರನು

ಲೋಕೋತ್ತಮರಂ ಪುಣ್ಯ
ಶ್ಲೋಕರನಾ ಸಪ್ತಋಷಿಯರಂ ನೆನೆಯಲೊಡಂ ॥ ೧೭

ನೆನೆಯದ ಮುನ್ನಂ ಬಂದರ್
ವಿನುತಾಶೇಷರ್ ಜಟಾಧರರ್ ಭಸಿತಾಂಗರ್ ।
ಘನಮಹಿಮಾರುಂಧತಿ ಬೆ
ನ್ನನೆ ಬರವರೆ ಸಪ್ತಋಷಿಯರತಿಮುದದಿಂದಂ ॥ ೧೮

ಬಂದಭವಂಗತಿಸುಖಿಮುಖಿ
ದಿಂದಂ ಮೆಯ್ಯಿಕ್ಕಿ ಹರ ಬರ್ದುಂಕಿದೆವೆನುತುಂ ।
ಸಂದಣಿಸಿ ಪುಳಕಮೆಳ್ತರೆ
ನಿಂದಿರ್ದು ಶಶಾಂಕಮೌಳಿ ಬೆಸನೇನೆನುತುಂ ॥ ೧೯

ಇರೆ ಕಂಡು ಕರುಣದಿಂ ಶಂ
ಕರನಾ ಋಷಿಗಳ್ಗೆ ಬೆಸಸಿದಂ ಪೋಪುದು ಭೂ ।
ಧರನಾಥನಲ್ಲಿಗತ್ಯಾ
ದರಮಂ ಮಾಡುವುದು ಬೇಡುವುದು ಗಿರಿಸುತೆಯಂ ॥ ೨೦

ಎಂದೊಡೆ ಹಸಾದಮೆಂದಾ
ನಂದಂ ಮಿಗೆ ಸಪ್ತಋಷಿಗಳನುನಯದಿಂದೆ ।
ಯ್ತಂತರ್ ಮಂಡಿತಪುಷ್ಪಕ
ವೃಂದಾರೂಢರ್ ನಗೇಶಪುರಮಂ ಪೊಕ್ಕರ್ ॥ ೨೧

ಕೈಲಾಸನನ್ನು ಸೇರಿದಮೇಲೆ ತನಗೆ ವಧುವನ್ನು ಯಾಚಿಸಲು ಗೌರವಾರ್ಹರೂ ಸುಪ್ರಸಿದ್ಧರೂ ಪುಣ್ಯಶ್ಲೋಕರೂ ಆದ ಸಪ್ತರ್ಷಿಗಳನ್ನು ಸ್ಮರಿಸಿದನು. ೧೮. ಪರಶಿವನು ನೆನೆಯುದ ಮೊದಲೇ ತ್ರಿಕಾಲ ಜ್ಞಾನಿಗಳಾದ ಸಪ್ತರ್ಷಿಗಳು ಅಲ್ಲಿಗೆ ಸಂತೋಷದಿಂದ ಬಂದರು; ಪವಿತ್ರಾತ್ಮರು, ಜಟಾಧಾರಿಗಳು, ಭಸ್ಮಭೂಷಿತರು; ಅವರಹಿಂದೆ ಪತಿವ್ರತಾಶಿರೋಮಣಿ ಅರುಂಧತಿಯೂ ಹೊರಟಿದ್ದಾಳೆ. ೧೯. ಬಂದು ಮಹರ್ಷಿಗಳು ಹರ್ಷಚಿತ್ತರಾಗಿ ಪರಶಿವನಿಗೆ ಪ್ರಣಾಮ ಮಾಡಿ "ಶಿವನೆ, ನಿನ್ನ ನೆನವಿಗೆ ಬಂದ ನಾವು ಕೃತಾರ್ಥರು," ಎಂದು ಅವರು ಮೈಪುಳಕವೇರುತ್ತಿರಲು "ಏನಪ್ಪಣೆ ?" ಎಂದು ಬಿನ್ನೈಸಿದರು. ೨೦. ಅವರ ಬಿನ್ನಪವನ್ನು ಲಾಲಿಸಿ ಪರಶಿವನು ಋಷಿಗಳಿಗೆ ಬೆಸಸಿದನು: "ನೀವು ಹಿಮವಂತನನ್ನು ಸಂಧಿಸಿ ಗೌರವಿಸಿ ನನಗಾಗಿ ಅಗಜೆಯನ್ನು ಬೇಡುವುದು" ಎಂದನು. ೨೧. ಸಪ್ತಋಷಿಗಳು ಶಿವಾಜ್ಞೆಯನ್ನು ತಲೆಯಲ್ಲಿ ಹೊತ್ತು ಆನಂದದಿಂದ ಪುಷ್ಪಕದಲ್ಲಿ ಕುಳಿತು ಓಷಧಿಪ್ರಸ್ಥವೆಂಬ

ವ॥ ಆ ಸಮಯದೊಳ್,

ಕಂ॥ ಮನದೊಳ್ ಪರಮೋತ್ಸಾಹಂ
ಜನಿಯಿಸಿ ಗಿರಿರಾಜನೆಸೆವ ಋಷಿಗಳನಿದಿರ್ಗೊಂ ।
ಡನುನಯದಿಂ ತಂದುಚ್ಚಾ
ಸನದೊಳ್ ಕುಳ್ಳಿರಿಸಿ ವಿನಯವಿನಮಿತನಾದಂ ॥ ೨೨

ವ॥ ಅಂತು ವಿನಯದಿಂದೆಱಗಿ,

ಕಂ॥ ಸುರಲೋಕದಲ್ಲಿ ಸುಖದಿಂ
ದಿರುತುಂ ಬರವಿಂತು ನಿಮಗೆ ದೊರೆಕೊಂಡುದಿದೆ ।
ಮ್ಮುರುತರಭಾಗ್ಯಮೆನುತ್ತುಂ
ಗಿರಿರಾಜಂ ಸಪ್ತಋಷಿಗಳಂ ಕೇಳಲೊಡಂ ॥ ೨೩

ವರಮುನಿಗಳ್ ಮನದೊಂದಾ
ದರದಿಂ ನುಡಿದರ್ ಶಿವಂ ಶಶಾಂಕಧರಂ ಶಂ ।
ಕರನಭವಂ ನಿರ್ಮಾಯಂ
ಗಿರಿಜೆಯ ಬೇಡುವೊಡೆ ತಿಳುಪಿ ಕಳುಪಿದನೆಮ್ಮಂ ॥ ೨೪

ಆತಂಗೆ ಚಂದ್ರಮೌಳಿಗ
ಜಾತಂಗೆ ನಿರಾಮಯಂಗೆ ನಿತ್ಯಂಗೆ ನತ ।
ವ್ರಾತಂಗೆ ಬೇಡೆ ಬಂದೆವು
ನೂತನಭುವನೈಕ ಭಾಗ್ಯವತಿ ಪಾರ್ವತಿಯಂ ॥ ೨೫

ಹಿಮವಂತನ ರಾಜಧಾನಿಗೆ ಆಗಮಿಸಿದರು. ೨೨. ಗಿರಿರಾಜನಿಗೆ ಮನಸ್ಸಿನಲ್ಲಿ ಅಮಿತ ಉತ್ಸಾಹ. ಆತ ಭಯ ಭಕ್ತಿಯಿಂದ ಮಹರ್ಷಿಗಳನ್ನು ಎದುರ್ಗೊಂಡು ಕರೆತಂದು ಉಚ್ಚ ಆಸನಗಳಲ್ಲಿ ಕುಳ್ಳಿರಿಸಿ ವಿನಮ್ರನಾಗಿ ವಂದಿಸಿದನು. ೨೩. "ಸ್ವಾಮಿ, ಸ್ವರ್ಗದಲ್ಲಿ ಎಲ್ಲ ಸುಖಗಳೂ ಇರುವಾಗ ತಾವು ಏತಕ್ಕಾಗಿ ಇಲ್ಲಿಗೆ ಆಗಮಿಸಿದಿರಿ ? ತಾಗೆ ತಾವು ಬಂದದ್ದು ನಮ್ಮ ಭಾಗ್ಯ" ಎಂದು ಗಿರಿರಾಜನು ಋಷಿಗಳನ್ನು ಪ್ರಾರ್ಥಿಸಿದನು, ೨೪. ಅದಕ್ಕೆ ಋಷಿಗಳು "ಅಯ್ಯಾ, ಗಿರಿರಾಜ ! ಪರಮೇಶ್ವರ ಅಭವ, ಶಂಕರ, ಮೇಲಾಗಿ ನಿರ್ಮಾಯ ! ಆದರೂ ಲೋಕ ಕಲ್ಯಾಣಕ್ಕಾಗಿ ತಾನು ಗೃಹಸ್ಥನಾಗಬಯಸಿ ಗಿರಿಜೆಯನ್ನು ಬೇಡುವ ವಿಷಯವನ್ನು ನಮಗೆ ತಿಳಿಸಿ, ನಿನ್ನೆಡೆಗೆ ಕಳುಹಿಸಿದ್ದಾನೆ" ಎಂದು ಆದರದಿಂದ ನುಡಿದರು. ೨೫. ಚಂದ್ರಮೌಳಿಯೂ ನಿರಾಮಯನೂ ಲೋಕವಂದ್ಯನೂ ನಿತ್ಯ-ನಿರಾಮಯನೂ ಆದ ಆತನಿಗೆ ಪ್ರಪಂಚಕ್ಕೇ ಭಾಗ್ಯವತಿಯೆನಿಸಿರುವ ಪಾರ್ವತಿಯನ್ನು ಬೇಡಲು ಬಂದಿದ್ದೇವೆ.

ಚಂದ್ರಧರಂಗೆ ನತೋತ್ಪಲ
ಚಂದ್ರಂಗಂ ಗಣಸಮೂಹನಯನ ಚಕೋರ ।
ಚಂದ್ರಂಗಂ ಮುದದಿಂದಂ
ಚಂದ್ರಾನನೆ ಶಿವೆಯನೊಲ್ದು ಕೊಡು ಗಿರಿರಾಜಾ ॥ ೨೬

ವ॥ ಎಂದು ಸಪ್ತಋಷಿಗಳ್ ನುಡಿದಾಪ್ತವಚನಂ ಕರ್ಣರಸಾಯನಮಾಗೆ ಗಿರಿರಾಜಂ ಕೇಳ್ದು ಬಾಳ್ದು ಸಂದಣಿಸಿದ ಪುಳಕದಿಂ ದಳವೇಱಿ ಮನಮಲರ್ದು ಬುದ್ಧಿಪೆರ್ಚಿಯಹಂಕಾರವಿರ್ಮಡಿಸಿ ಚಿತ್ತಂ ಚಿಗುರ್ತು ಆಳವಿಗಳೆದ ಸಂತಸಮಂ ಸಂತಯ್ಸಲಾಱದೆ ಹೆಚ್ಚಿ ಹಿಗ್ಗಿ ನಚ್ಚಿ ನುಡಿದಂ ಮೇಘಾಗಮನಮಂ ಮಯೂರಂಗಸಹ್ಯಮೆ ವಸಂತನ ಬರವು ಹೊಸಬನಕ್ಕೆ ಪೊಲ್ಲದೆ ಚಂದ್ರೋದಯಂ ಚಕೋರಿಗುಪದ್ರಮೆ ಅರ್ಕನೇಳ್ಗೆ ಚಕ್ರವಾಕಮಿಥುನಕ್ಕೆ ವಕ್ರಮೆ ಕಾರ ತೋರಪನಿ ಚಾದಗೆಗೆ ಭಾರಮೆ ಶಿವನ ಕರುಣಮೆನಗಿದಿರ್ವರೆ ವಿಚಾರಮೆ ಬರ್ದುಂಕಿದೆಂ ಬರ್ದುಂಕಿದೆನೆನ್ನ ಭಾಗ್ಯದ ಬೆಳೆ ತಳಿರ್ತುದು ಎನ್ನ ಪುಣ್ಯಲತೆ ಪೂತುದೆನ್ನ ಕುಲಕಲ್ಪವೃಕ್ಷಂ ಫಲಿತಮಾದುದಲ್ಲದೆಯುಂ ರತ್ನಕ್ಕೆ ಕಾಂತಿಯೆರವೆ ಚಂದ್ರಂಗೆ ಬೆಳ್ದಿಂಗಳುಪಚಾರಮೆ ತರಣಿಗೆ ಕಿರಣಂಗಳ್ ಸಾಧಾರಣಮೆ ಕುಸುಮಕ್ಕೆ ಪರಿಮಳಂ ಪಡಿಸಣಮೆ ಅಮೃತಕ್ಕೆ ಸ್ವಾದು ಸಂಕಲ್ಪಮೆ ಶರ್ವಂಗೆ ಪಾರ್ವತಿಯೆರವೆ ಪನ್ನಗಾಧರಣನೆನ್ನಂ ಬೇಡಲ್ವೇಳ್ಪುದೆ ಸುರುಚಿಯಿಂ ಸಾಂಗೀಕಾರದಿಂ ಕಾಮದಿಂ ಪ್ರೇಮದಿಂ ನಿಷ್ಠೆಯಿಂ ನೆಟ್ಟನೆ ಕೊಟ್ಟೆಂ ಕೊಟ್ಟೆನೆರಡಿಲ್ಲೆಂದು ಸತ್ಯವಚನಮಂ ಸಂತೋಷದಿಂ ನುಡಿದು ಸಪ್ತಋಷಿಗಳ ಚರಣಕ್ಕೆ ಮತ್ತೆ ಮತ್ತೆಱಗುತ್ತೆ ಅವರಂ ಹರಿಸದಿಂ ಕಳುಹಿ ಗಿರಿರಾಜಂ ಮಹೋತ್ಸಾಹದಿಂ ಮಹಾವಿವಾಹಮಂಟಪಾದಿ ಸಮಸ್ತವಸ್ತುಗಳಂ ವಿಸ್ತರಿಸುತ್ತಿರ್ದನದೆಂತೆಂದೊಡೆ,

೨೬. ಆದ್ದರಿಂದ ಎಲೈ ಗಿರಿರಾಜ, ನೀನು ನಮಿಸುವರ ನೇತ್ರವೆಂಬ ನೈದಿಲೆಗಳಿಗೆ ಚಂದ್ರನಂತಿರುವ, ಪ್ರಮಥಗಣವರರ ನೇತ್ರ ಚಕೋರಗಳಿಗೆ ಚಂದ್ರನಂತಿರುವ ಚಂದ್ರಶೇಖರನಿಗೆ ಚಂದ್ರಮುಖಿ ಶಿವೆಯನ್ನು ಭಕ್ತಿಯಿಂದ ದಾನಮಾಡು. ವ॥ ಎಂದು ನುಡಿದ ಸಪ್ತಋಷಿಗಳ ಮಾತು ಗಿರಿರಾಜನಿಗೆ ಕರ್ಣರಸಾಯನದಂತಿತ್ತು. ಅದನ್ನು ಕೇಳಿದ ಹಿಮವಂತನಿಗೆ ಮೈರೋಮಾಂಚಿತವಾಯಿತು. ಮನಸ್ಸು ಅರಳಿತು, ತನಗೇ ಒಂದು ಬಗೆ ಅಭಿಮಾನವೆನಿಸಿತು, ಸಂತೋಷಾತಿರೇಕದಿಂದ ಆತ ಹಿಗ್ಗಿದನು., ನಲ್ಲೆಯಿಂದ ಹೀಗೆಂದನು–" ಸ್ವಾಮಿ, ಮೇಘೋದಯವಾಗುವುದು ನವಿಲಿಗೆ ಸಹಿಸದಾದೀತೆ! ವಸಂತನು ಬರುವುದು ನವ ಉದ್ಯಾನಕ್ಕೆ ಆಗದೆ ? ಚಂದ್ರನುದಿಸುವುದು ಚಕೋರಿಗೆ ತೊಂದರೆಯಾದೀತೆ ? ಸೂರ್ಯನು ಮೇಲೇರುವುದು ಚಕ್ರವಾಕ ದಂಪತಿಗಳಿಗೆ ವಿರೋಧವಾದೀತೆ ! ಮುಂಗಾರು ಬರುವುದು ಚಾತಕಪಕ್ಷಿಗೆ ಹೊರೆಯಾದೀತೆ ! ಶಿವನ ಕೃಪೆಯೇ ನನಗೆ ಅಭಿಮುಖವಾಗಿರುವಾಗ ವಿಚಾರಮಾಡುವುದು ತಾನೆ ಏನಿದೆ ? ನನ್ನ ಜನ್ಮ ಕೃತಕೃತ್ಯವಾಯಿತು. ನನ್ನ ಭಾಗ್ಯ ಫಲಿಸಿತು, ನನ್ನ ಪುಣ್ಯಲತೆ ಕುಸುಮಿಸಿತು, ಕುಲಕಲ್ಪ ವೃಕ್ಷವು ಫಲಿಸಿತು, ಮೇಲಾಗಿ ರತ್ನಕ್ಕೆ ಅದರ ಕಾಂತಿಯು ಎರವೆ? ಚಂದ್ರನಿಗೆ ಬೆಳದಿಂಗಳು ಉಪಚಾರವಾದೀತೆ! ರವಿಗೆ ಕಿರಣಗಳು ಸಾಧಾರಣವೇ ಅಲ್ಲವೇ ಹೂವಿಗೆ ಸುವಾಸನೆಯು ಅಮೃತಕ್ಕೆ ಮಾಧುರ್ಯವು ಸಂಕಲ್ಪವೆ ?

ಚಂ॥ ಗಿರಿಪತಿ ಚಾರರಂ ಕಳುಪಿ ನಿರ್ಜರಲೋಕದ ವಿಶ್ವಕರ್ಮನಂ
ಬರಿಸಿ ನಯೋಕ್ತಿಯಿಂ ನುಡಿದು ಮನ್ನಿಸಿ ಬೇಳ್ಪುದನಿತ್ತು ಚಂದ್ರಶೇ ।
ಖರನ ಮದೀಯಪುತ್ರಿಯ ವಿವಾಹಶುಭೋಚಿತಮಂಟಪಾದಿ ಭಾ
ಸುರವರಚಿತ್ರಪತ್ರಕುಳಮಂ ನೆಱೆ ನಿರ್ಮಿಪುದೆಂದೆ ಬೇಗದಿಂ ॥ ೨೭

ಕಂ॥ ಎನೆ ನಲಿದು ವಿಶ್ವಕರ್ಮಂ
ನೆನೆಯದ ಮುನ್ನಂ ಸಮುದ್ರ ಮುದ್ರಿತವಿಶ್ವಾ ।
ವನಿಪರಿಗತವಿಭವಾಸ್ಪದ
ಘನಮಂಟಪಮೆಸೆದು ಮುಂದೆ ತೋಱಿತ್ತಾಗಳ್ ॥ ೨೮

ವ॥ ಅದೆಂತೆಂದೊಡೆ_ಮಹಾಮಂಟಪಂ ನಿರ್ಮಳ ಚಂದ್ರಕಾಂತ ಶಿಲಾತಳದೊಳ್ ಮಾರ್ಪೊಳೆದು ಶಿವನ ವಿವಾಹಕ್ಕೆ ನಾಗಲೋಕದಿಂ ನಾಗರ್ಕಳ್ ಕಳುಪಿದ ಅಭಿನವ ಮಂಟಪಮಂ ಪಡೆದಂತಿರ್ದುದು ಮತ್ತಮದಲ್ಲದೆಯುಂ ಉದಯಿಸುವ ತರುಣ ತರಣಿಯ ಕಿರಣಸಹಸ್ರಂ ಗಗನಮಂ ಪೊತ್ತೆತ್ತುವಂತೆ ಜಗದಗಲಕ್ಕೆ ಸಾಲ್ದೆಗೆದು ನೀಳ್ದು ನಿಱಿಸಿದ ಮಾಣಿಕ್ಯಸ್ತಂಭಕೋಟಿ ಗಳೆಳಗೆಂಪುಗಳೊಪ್ಪುವ ಚಪ್ಪರದ ಮೇಲ್ಕಟ್ಟಂ ಪೊತ್ತೆತ್ತುತಿರ್ದುವು ಮತ್ತಲ್ಲಲ್ಲಿ ಕಟ್ಟಿದ

ಶರ್ವನಿಗೆ ಪಾರ್ವತಿಯು ಎರವೆ? ನಾಗಾಭರಣನು ನನ್ನನ್ನು ಬೇಡುವುದೆಂದರೇನು ? ಆತನಿಗೆ ಸಾಕಾರದಿಂದ, ಕಾಮದಿಂದ, ಪ್ರೇಮದಿಂದ ನಿಷ್ಠೆಯಿಂದ ಇಗೋ ದಾನಮಾಡಿದ್ದೇನೆ, ಈ ಮಾತಿಗೆ ಎರಡಿಲ್ಲ! ಇದು ನಿಜ! ಎಂದು ಸಂತೋಷದಿಂದ ನುಡಿದು ಹಿಮವಂತ ಸಪ್ತ ಋಷಿಗಳ ಪಾದಗಳಿಗೆ ಮತ್ತೆ ಮತ್ತೆ ವಂದಿಸಿದನು. ಅವರನ್ನು ಹರ್ಷದಿಂದ ಕಳುಹಿಸಿ ದನು. ಅನಂತರ ಮಹೋತ್ಸಾಹದಿಂದ ಮದುವೆಯ ಮಂಟಪ ಮುಂತಾದ ಪೂರ್ವ ಸಿದ್ಧತೆಗಳನ್ನು ಕೈಗೊಂಡನು. ೨೭. ಗಿರಿರಾಜ ತನ್ನ ಚಾರರನ್ನು ಕಳುಹಿಸಿ ದೇವ ಲೋಕದ ವಿಶ್ವಕರ್ಮನನ್ನು ಬರಮಾಡಿಕೊಂಡನು ; ಅವನನ್ನು ಮೃದುನುಡಿಗಳಿಂದ ಮನ್ನಿ ಸಿದನು. ಅವನಿಗೆ ಕೇಳಿದುದನ್ನು ಕೊಟ್ಟು “ ಪರಮೇಶ್ವರ ಮತ್ತು ನನ್ನ ಪುತ್ರಿಯ ಮದು ವೆಗೆ ಅರ್ಹವಾದ ವಿವಾಹ ಮಂಟಪ ಮುಂತಾದ ಎಲ್ಲ ಶೃಂಗಾರವನ್ನು ರಚಿಸಬೇಕು ಎಂದು ಸೂಚಿಸಿದನು. ೨೮. ಅದನ್ನು ಕೇಳಿ ವಿಶ್ವಕರ್ಮನಿಗೆ ಆದ ಸಂತೋಷಕ್ಕೆ ಪಾರವಿಲ್ಲ; ಆತ ನೆನೆಯದ ಮೊದಲೇ ಆತನ ಸಂಕಲ್ಪ ಮಾತ್ರದಿಂದ ಲೋಕ ವೈಭವಕ್ಕೆ ಆಸ್ಪದವಾದ ಶ್ರೇಷ್ಠ ಮಂಟಪವು ಸಿದ್ಧವಾಗಿ ಮುಂದೆ ಕಂಡಿತು. ವ॥ ವಿವಾಹ ಮಂಟಪವು ನಿರ್ಮಲ ಚಂದ್ರಕಾಂತ ಶಿಲೆಯ ಮೇಲೆ ಪ್ರತಿಬಿಂಬಿಸಿತ್ತು. ಶಿವನ ವಿವಾಹಕ್ಕಾಗಿ ನಾಗಲೋಕದಿಂದ ನಾಗರು ಕಳುಹಿಸಿದ ಅಭಿನವ ಮಂಟಪದಂತೆ ಇತ್ತು. ಅಲ್ಲದೆ ಉದಯಿಸುವ ತರುಣ ರವಿಯ ಸಾವಿರ ಕಿರಣಗಳೂ ಗಗನವನ್ನು ಹೊತ್ತು ಎತ್ತುವಂತೆ ಜಗದ ಅಗಲಕ್ಕೆ ಸಾಲು ತೆಗೆದು ನೀಳ್ದು ನಿರಿಸಿದ ಮಾಣಿಕ್ಯ ಸ್ತಂಭಗಳ ತುದಿಗಳ ಎಳಗೆಂಪಿನಿಂದ ಒಪ್ಪುವ ಚಪ್ಪರದ ಮೇಲ್ಕಟ್ಟನ್ನು ಹೊತ್ತು ಎತ್ತುತ್ತಿದ್ದವು. ಮತ್ತು ಅಲ್ಲಲ್ಲಿ ಕಟ್ಟಿದ ಪುಲ್ಲಿಯ ಪಟ್ಟಿಗಳ

ಪುಲ್ಲಿಯ ಪಟ್ಟಿಗಳ ಮೇಲೆ ಬಳಸಿದ ಮೇಘವರ್ಣ್ಣಗೆಯ ಚೌಕದ ವಿಳಾಸದ ಕಥಾಯಿಯ ಸುಚ್ಛ ವಿಯನೀವ ಪಚ್ಚೆಯ ಪಟ್ಟಿಗಳ ಚೂಳಿಕೆಯ ಕಾಳಿಕೆಯ ನಣ್ಪೆಳಗನೀವ ಪೊಂಬಟ್ಟೆಯ ಬಳ್ಳಿವೆಳಗಂ ಕಱೆವ ಬೆಳ್ಳುಂಬಟ್ಟೆಯ ನೀಲದ ನಿರ್ಮಲೋದಕದ ಪಚ್ಚೆಯ ಪಾವಸೆಯ ಪುಷ್ಯರಾಗದ ಕರ್ಣಿಕೆಯ ಪದ್ಮರಾಗದೆಸಳ್ಗಳ ಪಱಮೆಗಳೆಱಗಲವ್ವಳಿಸುವ ಜಳಜವೀಥಿಯ ಕೀಲಿಸಿದ ಮುತ್ತಿನ ಸೂಸಕದ ಕೆಯ್ಗೊಳಿಸಿದ ಗೋಮೇಧಿಕಸ್ತೋಮದ ಪವಳದ ಪಙ್ತಿಯ ಪಜ್ಜಳಿಪ ವಜ್ರದ ಕೂಡಿದ ವೈಢೂರ್ಯದ ರಂಜಿಸುವ ಲತಾವಳಿಯ ಪಸರಿಸಿದ ಪತ್ರಾವಳಿಯ ಪೊಣ್ಮಿದ ಪುಷ್ಪಾವಳಿಯ ಹವಣಿಸಿದ ಹಂಸಾವಳಿಯ ಸಕಲಸೌಂದರ್ಯಮನೊಳಕೊಂಡ ಮೇಲ್ಕಟ್ಟಿನ ಬೆರಕೆವೆಳಗು ಮಂಟಪದೊಳಗಂ ಪೊಱಗಂ ತೆಕ್ಕನೆ ತೀವೆ ಬಿಡದೆ ಸುಳಿವ ಉತ್ಸಾಹ ಪುರುಷರಿಂ ನಡೆಪಾಡುವ ಲಲನಾ ವಿಭ್ರಮದಿಂ ಪ್ರಭಾಜಳಧಿ ತೆರೆಮಸಗಿದಂತಿರ್ದುದು ಮತ್ತಂ ಮುಗಿಲಸಳ್ಳಿಱಿವ ತೋರಣಸ್ತಂಭಂಗಳೊಳ್ ತೆತ್ತಿಸಿದ ಜಂತ್ರದ ಹಂಸಕೀರಮಯೂರಪಾರಾವತವಾರಣಂಗಳಿಂ ನವರತ್ನರಂಜಿತಮಾಗಿ ರವಿಮಂಡಲಮಂ ಮುಂಡಾಡುವ ಸುವರ್ಣಕಳಶದರ್ಪಣಾಳಿಗಳಿಂ ರಯ್ಯಂಬಡೆದು ಸಕಳಜಗಕ್ಕೆ ತನ್ನಕಾಂತಿಯೆ ಕಣ್ದೆಱವಿಯೆಂಬಂತಿರ್ದ ಮಹಾತೋರಣದೊಳಮೆಯ್ಯೊಳ್ ನೆರೆದು ಕುಳ್ಳಿರ್ದ ಸೂರ್ಯವಂಶದ ಸುಕುಮಾರರಿಂ ಸೋಮವಂಶದ ಭೂಮಿಪರಿಂ ರಾಜಿಸುವ ರಾಜಪುತ್ರರಿಂ ಮಂಡಳಿಕರ ತಂಡದಿಂ ಸಾಮಂತರ ಸ್ತೋಮದಿಂ ಶಿಷ್ಯರ ಮಂತಣದಿಂ ಸೇವ್ಯರ ತಿಂತಿಣಿಯಿಂ

ಮೇಲೆ ಬಳಸಿದ ಮೇಘವರ್ಣ್ಣಗೆಯ ವಿಳಾಸದ ಕಣಾಯಿಯ, ಒಳ್ಳೆಕಾಂತಿಗುಡುವ ಪಚ್ಚೆಯ ಪಟ್ಟಿಗಳ, ದೀಪದ ಕುಡಿ (ಚೂಳಿಕೆ)ಯ ಕಾಳಿಕೆಯ ನುಣ್ಣನೆಯ ಬೆಳಕನ್ನು ಕೊಡುವ ಹೊಂಬಟ್ಟೆಯ ಬೆಳಕನ್ನು ಕೊಡುವ ಬಿಳಿಬಟ್ಟೆಯ ನೀಲಿ ನಿರ್ಮಲೋದಕವುಳ್ಳ ಪಚ್ಚೆಯ ಹಾವಸೆಯುಳ್ಳ ಪುಷ್ಯರಾಗದ ಕರ್ಣಿಕೆ, ಪದ್ಮರಾಗದ ಎಸಳುಗಳ, ದುಂಬಿಗಳು ಎರಗಲು ಅವ್ವಳಿಸುವ ಜಲಜವೀಥಿಗಳು, ಅಲ್ಲಿ ಕೀಲಿಸಿದ ಮುತ್ತಿನ ಸೂಸಕ, ಕೆಯ್ಗೊಳಿಸಿದ ಗೋಮೇಧಿಕಸ್ತೋಮ, ಹವಳದಪಂಕ್ತಿ, ಪ್ರಜ್ವಲಿಸುವ ವಜ್ರಗಳು, ವೈಢೂರ್ಯಗಳು, ರಂಜಿಸುವ ಲತೆಗಳು, ಹರಡಿದ ಎಲೆಗಳು, ಪೂತಹೂವುಗಳು, ಹವಣಿಸಿದ ಹಂಸಗಳು, ಸಕಲ ಸೌಂದರ್ಯವನ್ನು ಒಳಕೊಂಡ ಮೇಲ್ಕಟ್ಟಿನ ಬೆರಕೆಯ ಬೆಳಗು, ಅಂಥ ಮಂಟಪದಲ್ಲಿ ಒಳಗೂ ಹೊರಗೂ ಹರಡಿ ಸುಳಿವ ಉತ್ಸಾಹಿಗಳಾದ ಪುರುಷರಿಂದಲೂ, ಚನ್ನಾಗಿ ಹಾಡುವ ಲಲನೆಯರ ವಿಲಾಸಗಳಿಂದಲೂ, ಪ್ರಭೆಯ ಕಡಲಿನ ತೆರೆಮುಸಗುವಂತೆ ಇತ್ತು ಆ ಮಂಟಪ. ಮತ್ತು ಮುಗಿಲನ್ನು ಇರಿಯುತ್ತಿದ್ದ ತೋರಣಸ್ತಂಭಗಳು, ಅಲ್ಲಿ ಕೆತ್ತಿಸಿದ ಹಂಸ ಕೀರ, ಮಯೂರ, ಪಾರಿವಾಳ ಮತ್ತು ಆನೆಗಳಿಂದಲೂ, ನವರತ್ನಖಚಿತವಾಗಿ ರವಿಮಂಡಲವನ್ನು ಮುಂಡಾಡುವ ಸುವರ್ಣ ಕಳಶದರ್ಪಣಗಳಿಂದಲೂ, ವೈಭವದಿಂದ ಕೂಡಿದ ನಿಖಿಲ ಜಗತ್ತಿಗೆ ತನ್ನಕಾಂತಿಯೆ ಕಣ್ತೆರವು ಎಂಬಂತೆ ಇದ್ದ ಮಹಾತೋರಣಗಳ ಒಳ ಭಾಗದಲ್ಲಿ ನೆರೆದು ಕುಳಿತಿದ್ದ ಸೂರ್ಯವಂಶದ ರಾಜಕುಮಾರರಿಂದಲೂ, ಚಂದ್ರವಂಶದ ರಾಜರಿಂದಲೂ, ರಾಜಿಸುವ ರಾಜಪುತ್ರರಿಂದಲೂ ಸಾಮಂತರಾಜರ ತಂಡಗಳಿಂದಲೂ, ಮಾಂಡಲಿಕರಿಂದಲೂ, ಶಿಷ್ಯರ ಆಲೋಚನೆಗಳಿಂದಲೂ, ಸೇವ್ಯರ ಸಮೂಹದಿಂದಲೂ,

ಮುತ್ತೈದೆಯರೊತ್ತೊತ್ತೆಯಿಂ ಸುವಾಸಿನಿಯರ ಸಂದಣಿಯಿಂ ಸಕಳಾಗಮಕೋವಿದರಿಂ ಸರ್ವಶಾಸ್ತ್ರಪ್ರವೀಣರಿಂ ಸಹಸ್ರವೇದಿಗಳಿಂ ಗಳಿಗೆವಟ್ಟಲಂ ಪರಿವೇಷ್ಟಿಸಿರ್ದ ನಕ್ಷತ್ರಪಾಠಕರಿಂ ಏಕಾದಶಕ್ಕೆ ಬಂದ ನವಗ್ರಹಂಗಳಿಂ ತೆಕ್ಕನೆ ತೀವಿರ್ದ ಮಹಾಮಂಟಪಮತಿವಿಸ್ತಾರಮನತಿಗಂಭೀರತೆಯನತಿಸೌಖ್ಯಮನತ್ಯಾಶ್ಚರ್ಯಮನುರುತರಸಂಪದಮನತಿ ಸೌಂದರ್ಯಮನತಿ ಪ್ರಸನ್ನತೆಯನೊಳಕೊಂಡು ವರನ ಬರವಂ ಬಯಸುತಿರ್ದುದಾ ಪ್ರಸ್ತಾವದೊಳ್,

ಕಂ॥ ಒಳಗೆ ಸುವಾಸಿನಿಯರ್ ಗಿರಿ-
ಕುಳರಾಜತನೂಜೆಗೊಪ್ಪೆ ಸಿಂಗರಮಂ ಕೆಯ್ಗ ।
ಕೊಳಿಸುತ್ತಿರ್ದರ್ ವರಶಶಿ
ಕಳೆಗೆ ಸುಧಾಕಿರಣಜಾಲಮಂ ತುಡಿಸುವವೋಲ್ ॥ ೨೯

ವ॥ ಅದೆಂತೆಂದೊಡೆ,

ಕಂ॥ ಭದ್ರಾನನೆಯರ್ ನವಕುಸು
ಮದ್ರವಯುತಜಲದೆ ಮಜ್ಜನಕ್ಕೈದಿಯುತೆ ಕ ।
ಲ್ಪದ್ರುಮಶಾಖಾನ್ವಿತೆಗೆ ಹ
ರಿದ್ರಾಪರಿಮಳಮನಂಗದೊಳ್ ಸಮನಿಸಿದರ್ ॥ ೩೦

ನವಲತೆಯಂ ಕೌಮುದಿಯಿಂ
ದವೆ ಬಾಸಣಿಪಂತೆ ಕೂಡೆ ಧವಳದ್ಯುತಿಯಂ ।
ತವೆ ಪಸರಿಪ ದಿವ್ಯದುಕೂ
ಲವನುಡಿಸಿದರಗತನೂಜೆಗಂಗನೆಯರ್ಕಳ್ ॥ ೩೧

ಮುತ್ತೈದೆಯರ ಗುಂಪುಗಳಿಂದಲೂ, ಸುವಾಸಿನಿಯರ ಸಂದಣಿಯಿಂದಲೂ, ಸಕಲ ಆಗಮ ಪ್ರವೀಣರಿಂದಲೂ, ಸಮಸ್ತ ಶಾಸ್ತ್ರಪರಿಣಿತರಿಂದಲೂ, ಸಹಸ್ರವೇದಿಗಳಿಂದಲೂ, (ಕಾಲವನ್ನು ಸೂಚಿಸುವ ಬಟ್ಟಲು) ಗಳಿಗೆವಟ್ಟಲನ್ನು ಸುತ್ತುವರಿದಿರುವ ಜ್ಯೋತಿಷ್ಯರಿಂದಲೂ ಏಕಾದಶಕ್ಕೆ (೧೧ನೆಯ) ಬಂದ ನವಗ್ರಹಗಳಿಂದಲೂ, ತುಂಬಿದ್ದ ಮಹಾಮಂಟಪವು ಅತಿ ವಿಸ್ತಾರವಾಗಿಯೂ, ಅತಿಗಂಭೀರವಾಗಿಯೂ, ಅತಿಸೌಖ್ಯವನ್ನು, ಅತ್ಯಾಶ್ಚರ್ಯವನ್ನು, ಅಧಿಕ ಸಂಪತ್ತನ್ನು, ಅತಿ ಸೌಂದರ್ಯವನ್ನು ಅತಿಪ್ರಸನ್ನತೆಯನ್ನು, ಒಳಕೊಂಡು ವರನ ಬರವನ್ನು ಬಯಸುತ್ತಿದ್ದ ಸಮಯದಲ್ಲಿ, ೨೯. ಮನೆಯ ಒಳಗೆ ಮುತ್ತೈದೆಯರು ಅಗಜೆಗೆ ಅಲಂಕರಿಸುತ್ತಿದ್ದರು. ಅದು ಶ್ರೇಷ್ಠವಾದ ಶಶಿಕಳೆಗೆ ಅಮೃತ ಕಿರಣಜಾಲವನ್ನು ತೊಡಿಸುವಂತೆ ಇತ್ತು. ೩೦. ಮಂಗಳಮುಖಿಯರು ಅಗಜೆಗೆ ನವ ಕುಸುಮದ್ರವಯುತಜಲದಿಂದ ಮಜ್ಜನ ಮಾಡಿಸಿದರು. ಕಲ್ಪದ್ರುಮಶಾಖಾನ್ವಿತೆಯಾದ ಆವಳ ಅಂಗಗಳಿಗೆ ಹರಿದ್ರಾಪರಿಮಳವನ್ನು ಸಮನಿಸಿದರು. ೩೧ ಬೆಳದಿಂಗಳಿನಿಂದ ನವಲತೆ

ಕಂ॥ ಸರಸಿಜದೆಸಳೊಳ್ ತರುಣಿಯ
ತರುಣಾರುಣಕಿರಣವಲಯಮಮಂ ಕೆಯ್ಕೊಳಿಪಂ।
ತಿರೆ ಚಕ್ರವಾಕಕುಚೆಯರ್
ಗಿರಿಜೆಗೆ ನವರತ್ನಪಾದಮುದ್ರಿಕೆಯಿತ್ತರ್॥ ೩೨

ವಾರಿರುಹನಾಳಮಂ ಕ್ರೇಂ
ಕಾರರವಂ ಸಹಿತವಂಚಿ ಮುತ್ತಿದುವೆನೆ ಮಂ।
ಜೀರವನಳವಡಿಸಿದರಂ
ಭೋರುಹನೇತ್ರೆಗೆ ಭವಾನಿಗಾ ಭಾಮಿನಿಯರ್॥ ೩೩

ಬಾಹುಲತಾಪಲ್ಲವಸಂ
ದೋಹದೊಳಗೆ ಕುಸುಮಮಂ ತೊಡರ್ಚುವ ತೆಱದಿಂ।
ದಾಹಾನಿಜಕರಶಾಖಾ
ವ್ಯೂಹಕ್ಕತಿಭದ್ರಮುದ್ರಿಕೆಗಳಂ ತೊಟ್ಟರ್॥ ೩೪

ಪುರಹರನ ರಾಜಕಟಕಂ
ಗಿರಿಜೆಯ ಕೆಯ್ವತ್ತಿತೆಂಬುದಂ ಸೂಚಿಪವೋಲ್।
ವರಹಸ್ತದಲ್ಲಿ ರತ್ನೋ
ತ್ಕರವಿಳಸಿತಕಟಕಯುಗಳಮಂ ರಂಜಿಸಿದರ್॥ ೩೫

ಒದವಿದ ನವ್ಯಲತಾಮ
ಧ್ಯದ ಕುಸುಮಾಳಿಯೊಳೆ ಮೊರೆವ ಮರಿದುಂಬಿಗಳಂ।
ಮುದದಿಂ ಕೀಲಿಪವೋಲ್ ನೀ
ಲದ ರವೆಯುದ ಬಾಹುಪೂರಕಂಗಳನಿತ್ತರ್॥ ೩೬

ಯನ್ನು ಹೊದಿಸುವಂತೆ ಶುಭ್ರವಾದ ದಿವ್ಯದುಕೂಲವನ್ನು ಅಗತನೂಜೆಗೆ ಅಂಗನೆಯರು ಉಡಿಸಿದರು. ೩೨. ಕಮಲದ ಎಸಳಿನಿಂದ ತರುಣಿಯ ಅರುಣಕಿರಣವಲಯವನ್ನು ಅಲಂಕಾರಮಾಡುವಂತೆ ಚಕ್ರವಾಕ ಕುಚೆಯರು ಗಿರಿಜೆಗೆ ನವರತ್ನ ಖಚಿತಪಾದಮುದ್ರಿಕೆತೊಡಿಸಿದರು. ೩೩. ಕಮಲನಾಳವನ್ನು ಕ್ರೇಂಕಾರಮಾಡುತ್ತಿರುವ ಹಂಸೆಗಳು ಮುತ್ತಿದಂತೆ ಭಾಮಿನಿಯರು ಕಮಲನೇತ್ರೆಯಾದ ಪಾರ್ವತಿಗೆ (ನೂಪುರ) ಮಂಜೀರವನ್ನು ಅಳವಡಿಸಿದರು. ೩೪. ಬಾಹುಲತೆ ಪಲ್ಲವ ಸಂದೋಹದಲ್ಲಿ ಕುಸುಮಗಳನ್ನು ಅಲಂಕರಿಸುವಂತೆ ಅಗಜೆಯ ಕರಶಾಖಾವ್ಯೂಹಕ್ಕೆ ಉಚಿತವಾದ ಭದ್ರಮುದ್ರಿಕೆಗಳನ್ನು ತೊಡಿಸಿದರು. ೩೫. ಪರಶಿವನ ರಾಜಕಟಕವು ಗಿರಿಜೆಯ ಕೈಸೇರಿತು ಎಂಬುದನ್ನು ಸೂಚಿಸುವಂತೆ ಅವಳ ಶ್ರೇಷ್ಠವಾದ ಹಸ್ತದಲ್ಲಿ ರತ್ನಖಚಿತವಾದ ಬಳೆಗಳನ್ನು ತೊಡಿಸಿದರು. ೩೬. ನೂತನಲತೆಗಳು, ಅವುಗಳ ಮಧ್ಯೆ ಕುಸುಮಾಳಿಗಳು, ಅವುಗಳಲ್ಲಿ ಮೊರೆವ ದುಂಬಿ

ಕಂ॥ ಸುತ್ತದೆ ನೆಲೆಗೊಂಡಂ ಪರಿ
ವೃತ್ತೋನ್ನತಚಂದ್ರನಗಜೆಯಾಸ್ಯದೊಳೆಂದು ।
ನ್ಮತ್ತತೆಯೊಳ್ ತಾರಗೆಗಳ್
ಸುತ್ತಿದುವೆನೆ ತೋರಹಾರಮಂ ರಂಜಿಸಿದರ್ ॥ ೩೭

ಭಾಳಸ್ಥಳದೊಳ್ ಕಣ್ ಗಡ
ಶೂಳಿಗೆ ಪಾರ್ವತಿಗೆ ಕೊರಲೊಳೊಗೆದುದು ನಯನಂ ।
ಕೇಳೆಂಬಾಳಾಪಂ ಮಿಗೆ
ಮೇಳೈಸಿದರೈರದಾಳಿಯಂ ಬಾಳಕಿಯರ್ ॥ ೩೮

ಜಳಜಾನನೆಯರ್ ವಿನಯೋ
ಜ್ವಳಮುಖಿಯರ್ ಸಖಿಯರೊಲ್ದು ಗಿರಿಜಾನನದೊಳ್ ।
ನಳನಳಿಪಚ್ಚ ಮುಗುಳ್ ನಗೆ
ವೊಳೆತುದೆನಲ್ ಮೆಱೆವ ಮೂಗುತಿಯನೊಸೆದಿತ್ತರ್ ॥ ೩೯

ಮೃಗಧರಬಿಂಬಂಗಳವೆರ
ಡಗಲದೆ ಕೊಂಡೆಸೆಯುತಿರ್ದಪುವು ಸರಸಿಜದೊಂ ।
ದಗಣಿತ ಕರ್ಕಶಮನೆನಲ್
ನಗಪುತ್ರಿಗೆ ನೀಮುತ್ತಿನೋಲೆಯನಿತ್ತರ್ ॥ ೪೦

ಬಿಂಬಾಧರೆಯರ್ ಬಂದಲ
ರಂಬಂ ಕತ್ತುರಿಯ ಸಾಣೆಯಿಕ್ಕುವ ತೆಱದಿಂ ।

ಗಳನ್ನು ಅವುಗಳಲ್ಲಿಯೇ ಕೀಲಿಸಿಡಂತೆ ನೀಲದ ಬೆಳ್ಳಿಯ ಭುಜಕೀರ್ತಿಗಳನ್ನು ತೊಡಿಸಿದರು. ೩೭. ಸಖಿಯರು ಅಗಜೆಗೆ ದಪ್ಪ ಮುತ್ತುಗಳ ಹಾರವನ್ನು ಅಲಂಕರಿಸಿದರು. ಅದನ್ನು ನೋಡಿದರೆ ಪೂರ್ಣಚಂದ್ರನು ಸುತ್ತುವುದನ್ನು ಬಿಟ್ಟು ಅಗಜೆಯ ಮುಖದಲ್ಲಿ ಬಂದು ನೆಲೆಸಿದನೆಂಬ ಉನ್ಮತ್ತತೆಯಲ್ಲಿ ತಾರೆಗಳು ಅವಳ ಮುಖವನ್ನು ಸುತ್ತುವರಿದವು ಎಂಬಂತಿತ್ತು. ೩೮. ಗಿರಿಜೆಯ ಸಖಿಯರು ಐದಾಳಿಯನ್ನು ಅವಳ ಕೊರಳಿಗೆ ಸಿಂಗರಿಸಿದರು. ಶೂಲಿಗೆ ಫಾಲ(ಹಣೆ)ದಲ್ಲಿ ಕಣ್ಣು, ಪಾರ್ವತಿಗೆ ಕೊರಳಲ್ಲಿ ಕಣ್ಣು ಮೂಡಿದೆ ಎಂಬಂತಿತ್ತು ! ೩೯ ಕಮಲ ಮುಖಿಯರಾದ ಸಖಿಯರು ಗಿರಿಜೆಗೆ ಮೂಗುತಿಯನ್ನು ತೊಡಿಸಿದರು. ಅದು ಗಿರಿಜೆಯ ಮುಖದಲ್ಲಿ ನಳನಳಿಸುವ ಅಚ್ಚಮೊಗ್ಗು ಮೂಡಿದೆಯೊ ಎಂಬಂತಿತ್ತು. ೪೦. ಗಿರಿಜೆಗೆ ಎರಡು ಮುತ್ತಿನ ಓಲೆಗಳನ್ನು ತೊಡಿಸಿದರು, ಅವು ಎರಡು ಚಂದ್ರಬಿಂಬಗಳು ಅಗಲದೆ ಕಮಲದ (ಮುಖ) ಕರ್ಕಶತೆಯನ್ನು ಹೊಂದಿ ಬೆಳಗುತ್ತಿವೆಯೊ ಎಂಬಂತೆ ಇತ್ತು. ೪೧. ಬಿಂಬಾಧರೆಯರು ಕಮಲಕ್ಕೆ ಸಮವಾದ ಅಂಬಿಕೆಯ ಕಣ್ಣಿಗೆ ಅಂಜನವಿಟ್ಟರು.

ದಂಬುಜದಳ ಸದೃಶಾಂಬಕ
ದಂಬಿಕೆಗಂಜನಮನೆಚ್ಚಿದರ್ ಸಂತಸದಿಂ ॥ ೪೧

ಸಸಿಯಂ ತಳೆವೊಡೆ ಮಕುಟದೊ
ಳಸಮಾಕ್ಷಂ ಗಿರಿಜೆ ಪುರುಡಿಸುತ್ತುಂ ತಳೆದಳ್ ।
ನೊಸಲೊಳ್ ಸಸಿಯಂ ತಾನೆನೆ
ಭಸಿತದ ತಿಲಕಮನಲಂಕರಿಸಿದರ್ ಸತಿಯರ್ ॥ ೪೨

ನೀಳಾಭ್ರಮನಂಭಃಕಣ
ಜಾಳದೆ ಬಾಸಣಿಸುವಂತೆ ಶಶಿಮುಖಿಯರ್ ಸ ।
ಲ್ಲೀಲೆಯೊಳಚಳತನೂಜೆಗೆ
ಬಾಳಿಗೆ ಸೂಸಕಮನಿಕ್ಕಿದರ್ ಮುದದಿಂದಂ ॥ ೪೩

ಸುರಚಿರನೀಲಾಂಬುದದೊಳ್
ಸುರಧನುವಂ ನಿರ್ಮಿಪಂದದಿಂ ಪೀನಪಯೋ ।
ಧರೆಯರ್ ಶೈಳತನೂಜೆಗೆ
ವರರತ್ನದ ದಂಡೆದೊಂಡಿಲಂ ಸಯ್ತಿಟ್ಟರ್ ॥ ೪೪

ವ॥ ಅಂತುಮಲ್ಲದೆಯುಂ,

ಕಂ॥ ಅಂಬಿಕೆಯ ಸುಧಾವಯವ ಕ
ದಂಬದ ಚೆಲ್ವಿಂಗೆ ದೃಷ್ಟಿಯಾಗದ ತೆಱದಿಂ ।
ಬಿಂಬಾಧರೆಯರ್ ತೊಡಸಿದ
ರೆಂಬಂತಿರೆ ಮೆಱೆದುವರರೆ ಭೂಷಣತತಿಗಳ್ ॥ ೪೫

ಇದು ಅಲರಂಬನಾದ ಮನ್ಮಥನೇ ಬಂದು ಕಸ್ತೂರಿಯ ಸಾಣೆಯಿಟ್ಟಂತೆ ಇತ್ತು. ೪೨. ಅಸಮಾಕ್ಷ ಶಿವನು ಮಕುಟದಲ್ಲಿ ಶಶಿಯನ್ನು ತಳೆದಿರುವುದನ್ನು ನೋಡಿ ಗಿರಿಜೆ ಸ್ಪರ್ಧಿಸಿ ತಾನೂ ನೊಸಲಲ್ಲಿ ಶಶಿಯನ್ನು ತಳೆದಿರುವಳೊ ಎಂಬಂತೆ ಸಖಿಯರು ಅವಳ ಹಣೆಯಲ್ಲಿ ಭಸಿತದ ತಿಲಕವಿಟ್ಟರು. ೪೩. ಗಿರಿಜೆಯನ್ನು ಶಶಿಮುಖಿಯರಾದ ಸಖಿಯರು ಅಗಜೆಗೆ ತಲೆಬಾಚಿ ಹೆಳಲು ಹಾಕಿ ಅವರ ತುದಿಗೆ ಗೊಂಡೆ ಹಾಕಿದರು. ಅದನ್ನು ನೋಡಿದರೆ ನೀಲಮೇಘವನ್ನು ಅಂಭಃಕಣಜಾಲ (ನೀರಿನ ತುಂತುರುಗಳು) ದಿಂದ ಹೊದಿಸಿದಂತೆ ಇತ್ತು. ೪೪. ಮನೋಹರವಾದ ನೀಲ ಮೇಘದಲ್ಲಿ ಕಾಮನಬಿಲ್ಲು ನಿರ್ಮಿಸುವಂತೆ ಪೀನಪಯೋಧರೆಯರಾದ ಸಖಿಯರು ಶೈಲಜೆಗೆ ರತ್ನಮಯವಾದ ದುಂಡುಹಾರವನ್ನು ಅಲಂಕರಿಸಿದರು. ೪೫. ತೊಂಡೆಹಣ್ಣುತುಟಿಯ ಸಖಿಯರು ಅಂಬಿಕೆಯ ಅಮೃತಮಯ ಅವಯವಗಳಿಗೆ

ವ॥ ಇಂತು ನನೆಗಣೆಯನರ್ಚಿಪಂತೆ ಚಂದ್ರಕಳೆಯಂ ದಳವೇೞ್ದಂತೆ ಪುಣ್ಯಮಂ ಪುಟವಿಡುವಂತೆ ಶಂಕರನ ಪ್ರೇಮಮಂ ಸೀಮೆಗೊಳಿಸುವಂತೆ ಹರನ ಮನೋರಥಮಂ ಮದವೇೞಿಪಂತೆ ಪಾರ್ವತಿಗೆ ಸುವಾಸಿನಿಯರ್ ಸಿಂಗರಮಂ ಮಾಡಿ ತರುಣ-ತರಣಿಯ ಕಿರಣಂಗಳ್ಗೀರನ್ನಮಪ್ಪಾರತಿಗಳನೆತ್ತಿಯೆತ್ತಿ ಪಿಂಗದೆ ಮಂಗಳೋನ್ನತಿಯಂ ಕೊಂಡಾಡುತ್ತಮಿರೆಯಿರೆ ಅತ್ತಲ್ ಸಪ್ತಋಷಿಗಳಿಂ ಸಂತೋಷವಾರ್ತೆಯಂ ಶಂಕರಂ ಕೇಳ್ದು ಹರ್ಷಮಂ ತಾಳ್ದು,

ಕಂ॥ ಇತ್ತಲ್ ಕೈಲಾಸಾದ್ರಿಯೊ
ಳುತ್ತಮಗಣನಾಥರೊಳಗೆ ಮೆೞ್ದಿರ್ದಂ ದೇ ।
ವೋತ್ತುಂಗಂ ಪುಳಕಿತನಾ
ಗುತ್ತುಂ ಮದುವಣಿಗತನಮನುೞ್ ನಟಿಯಿಸುತುಂ ॥ ೪೭

ವ॥ ಆ ಪೊಸಮದವಣಿಗನಪ್ಪ ಪಶುಪತಿಯ ಸರ್ವಾವಯವಂಗಳಂ ಬಣ್ಣಿಸಲಳವಲ್ಲದೊಡಂ ಭಕ್ತಿಯಿಂ ಬಲ್ಲಂತೆ ಬಣ್ಣಿಪೆನದೆಂತೆಂದೊಡೆ,

ಕಂ॥ ಜಡೆಗಳೊ ಹೊಸಹೊಸಹವಳದ
ಕುಡಿಗಳೊ ನವಕಾಂತಿಜಳದ ಮಡುಗಳೊ ಚೆಲ್ವಿ ।
ರ್ಪಡೆಗಳೊ ಶಿವಶಿವ ಸುಕೃತದ
ಗುಡಿಗಳೊ ಮಹಿಮೆಗಳ ನಟ್ಟನಡುಗಳೊ ಶಿವನಾ ॥ ೪೭

ಭಾಳಂ ಸುರುಚಿರಸುಕೃತವಿ
ಶಾಳಂ ವಿಷಮಾಕ್ಷವಿರಥಕಾಳಂ ವಿಮಳ ।

ದೃಷ್ಟಿಯಾಗದಂತೆಯೋ ಎಂಬಂತೆ ಒಡವೆಗಳನ್ನು ತೊಡಿಸಿದ್ದರು. ವ॥ಹೀಗೆ ಮನ್ಮಥನನ್ನು ಪೂಜಿಸುವಂತೆ, ಚಂದ್ರಕಳೆಯನ್ನು ಚಿಗುರಿಸುವಂತೆ, ಪುಣ್ಯಕ್ಕೆ ಪುಟವಿಡುವಂತೆ, ಶಂಕರನ ಪ್ರೇಮವನ್ನು ಸೀಮೆಗೊಳಿಸುವಂತೆ,ಹರನ ಮನೋರಥವನ್ನು ಮದವೇಱಿಸುವಂತೆ ಪಾರ್ವತಿಗೆ ಮುತ್ತೈದೆಯರು ಅಲಂಕರಿಸಿದರು. ತರುವಾಯ ತರುಣ ರವಿಯ ಕಿರಣಗಳಿಗೆ ಸಮಾನವಾದ ಆರತಿಯನ್ನು ಎತ್ತಿ ಅವಳ ಮಂಗಳೋನ್ನತಿಯನ್ನು ಕೊಂಡಾಡುತ್ತಿರುವಾಗ ಅತ್ತ ಸಪ್ತ ಋಷಿಗಳಿಂದ ಸಂತೋಷವಾರ್ತೆಯನ್ನು ಶಂಕರನು ಕೇಳಿ ಸಂತೋಷಗೊಂಡು, ೪೭. ಈ ಕಡೆ ಕೈಲಾಸಾದ್ರಿಯಲ್ಲಿ ಶ್ರೇಷ್ಠ ಗಣನಾಥರಲ್ಲಿ ದೇವೋತ್ತಮನಾದ ಪರಶಿವನನು ಪುಳಕಿತನಾಗಿ ಮದುವಣಿಗತನವನ್ನು ನಟಿಸುತ್ತಿದ್ದನು. ವ॥ ಹೊಸ ಮದುವುಗನಾದ ಪಶುಪತಿಯ ಎಲ್ಲ ಅವಯವಗಳನ್ನು ವರ್ಣಿಸಲು ಸಾಧ್ಯವಿಲ್ಲವಾದರೂ ಭಕ್ತಿಯಿಂದ ತಿಳಿದಷ್ಟು ವರ್ಣಿಸುವೆನು. ೪೭. ಅವನ ಜಡೆಗಳು ಹೊಸ ಹವಳದ ಕುಡಿಗಳೊ, ನವಕಾಂತಿಯುಳ್ಳ ಜಲದ ಮಡುಗಳೊ, ಚೆಲುವು ಇರುವ ನೆಲೆಗಳೊ, ಅಥವಾ ಸುಕೃತದ ಗುಡಿಗಳೋ ಇಲ್ಲವೆ ಮಹಿಮೆಗಳ ಆಕರಗಳೊ ಎಂಬಂತಿದ್ದವು. ೪೮. ಶಿವನ ಹಣೆ, ಸುರುಚಿರ ಸುಕೃತದಂತೆ

ಸ್ಫೋಳಂ ಶೃಂಗಾರರಸೋ
ದ್ವೇಳಂ ಕಂದರ್ಪಕುಸುಮಬಾಣಾಭೀಳಂ ॥ ೪೮

ಕಂ॥ ಪುರ್ಬುಗಳೊ ಗಣನಿಕರದ
ಗುರ್ಬುಗಳೊ ಹರಿವಿರಿಂಚಿಸುರಪದವಿಗಳೊಂ ।
ದುರ್ಬುಗಳೋ ಪುಣ್ಯಲತಾ
ಪರ್ಬುಗಳೋ ಮದನವಿಭ್ರಮದ ಕೊರ್ಬುಗಳೋ ॥ ೪೯

ಈ ಕಣ್ಗಾಗ ಕಣ್ಣಾಕ
ಣ್ಗೀ ಕಣ್ಣೆರಡಕ್ಕವೆರಡೆ ಪಡಿ ಮತ್ತಿಲ್ಲೀ ।
ಲೋಕವ್ಯವಹಾರದ ನುಡಿ
ಯಿ ಕಣ್ಗುಪಮಾನಮಿಲ್ಲಮಿನ್ನುಂ ಮುನ್ನುಂ ॥ ೫೦

ಘ್ರಾಣಂ ಮಂಜುಳಮುಖಕ
ಲ್ಯಾಣಂ ಜಗದೇಕಜೀವನೆನಿಸುವ ಪವನ ।
ಪ್ರಾಣಂ ಸರ್ವಾವಯವ
ತ್ರಾಣಂ ಪರಿಮಳಪರೀಕ್ಷೆಗಂತದು ತಾಣಂ ॥ ೫೧

ಕರ್ಣಂಗಳ್ ನವಕಿರಣ ವಿ
ಕೀರ್ಣಂಗಳ್ ಶರಣಜನಸುಗೀತಾಮೃತ ಸಂ ।
ಪೂರ್ಣಂಗಳ್ ಪಂಚಾಕ್ಷರ
ವರ್ಣಂಗಳ್ ಫಣಿವಿತಾನವಿಸ್ತೀರ್ಣಂಗಳ್ ॥ ೫೨

ವಿಶಾಲ, ವಿಷಮಾಕ್ಷ ಶಿವನಿಂದ ನಿರಾಶನಾದ ಕಾಲ, ಶೃಂಗಾರ ರಸೋಜ್ವಲ, ಕಂದರ್ಪನ ಕುಸುಮಬಾಣಗಳ ಭೀಕರತೆಯೊ ಎಂಬಂತಿತ್ತು. ೪೯. ಶಿವನ ಕಣ್ಣು ಹುಬ್ಬುಗಳು; ಪ್ರಮಥನ ಗಣ ಗುರ್ಬುಗಳೊ ಹರಿ–ವಿರಿಂಚ–ಸುರಪದವಿಗಳ ಉಬ್ಬುಗಳೊ ಪುಣ್ಯಲತೆಯ ಹಬ್ಬುವಿಕೆಯೋ, ಮದನವಿಲಾಸ ಕೊಬ್ಬುಗಳೊ ಎಂಬಂತಿದ್ದವು. ೫೦. ಈ ಕಣ್ಣಿಗೆ ಆ ಕಣ್ಣು ಆ ಕಣ್ಣಿಗೆ ಈ ಕಣ್ಣು ಸಮ ; ಇವೆರಡಕ್ಕೆ ಇವರಡೇ ಸಮವಲ್ಲದೆ ಮತ್ತೆ ಇನ್ನಿಲ್ಲ; ಇವಕ್ಕೆ ಲೋಕದಲ್ಲಿ ಹಿಂದೆ–ಮುಂದೆ ಇನ್ನು ಉಪಮಾನವೇ ಇಲ್ಲ! ೫೧. ಶಿವನ ಮೂಗು, ಅದು ಮಂಜುಳಮುಖಕ್ಕೆ ಕಲ್ಯಾಣ, ಜಗತ್ತಿಗೆ ಮುಖ್ಯ ಜೀವನವೆನಿಸಿರುವ ಗವನನ ಪ್ರಾಣ, ಸರ್ವ ಅವಯುವಗಳ ತ್ರಾಣ, ಅಂತೆಯೇ ಅದು ಪರಿಮಳ ಪರೀಕ್ಷೆಯ ತಾಣ! ೫೨.ಇನ್ನು ಕರ್ಣಗಳು, ಹರಡಿದ ಹೊಸಕಿರಣಗಳು, ಶರಣರ ಸುಗೀತೆಗಳ ಅಮೃತಪೂರ್ಣಗಳು ಪಂಚಾ

ಕಂ॥ ವದನಂ ಕಾರುಣ್ಯಾಮೃತ
ಸದನಂ ಪ್ರಣತಪ್ರತಾನಜನನಾ ವಿದ್ಯಾ ।
ಕದನಂ ಮಝುಭಾಪುರೆ ಜಿತ
ಮದನಂ ಧವಳಪ್ರಕಾಶಮಂಡಿತರದನಂ ॥ ೫೩

ಗ್ರೀವಂ ಘನಗರಳೋನ್ನತ
ಭಾವಂ ವಿಮಳಸ್ವಭಾವಮಾನತ ಜನಸದ್ ।
ಭಾವಂ ಮಧುರರವಪ್ರ
ಸ್ತಾವಂ ಶಿವಶಿವ ಸಮಸ್ತಜನತಾಜೀವಂ ॥ ೫೪

ತೋಳ್ಗಳ್ ನೆನೆವರ ಚಿತ್ತದ
ಬಾಳ್ಗಳ್ ವರವೀಯಲೆಂದು ಮಿಗೆ ಮತ್ಸರಿಪಾ ।
ಸೂಳ್ಗಳ್ ರುದ್ರನ ನಚ್ಚಿನ
ಬಾಳ್ಗಳ್ ಗಿರಿರಾಜಪುತ್ರಿಯಪ್ಪಿಂಗಾಳ್ಗಳ್ ॥ ೫೫

ಪ್ರಾಣಗಳತ್ಯಧಿಕ ವರ
ಶ್ರೇಣಿಗಳುಚಿತಕ್ರಿಯಾವಚೋಗುಣವಿಳಸದ್ ।
ವಾಣಿಗಳಖಿಳಾಧಾರ
ಕ್ಷೋಣೀಗಳಾಹಾ ಸುಪಾಣಿಗಳ್ ಶಂಕರನಾ ॥ ೫೬

ಉರವದು ಗಿರಿಜಾಕಾಂತೆಯ
ತೆಱವದು ತಕ್ಕುಚಯುಗಂಗಳಿರವದು ಪುಣ್ಯೋ ।
ತ್ಕರವದು ವರವದು ಸುಖಸಾ
ಗರವದು ಭುವನೈಕಚಾರುತರವದು ಹರನಾ ॥ ೫೭

ಕ್ಷರವರ್ಣಗಳು ಅನ್ವಫಣಿವಿತಾನ ವಿಸ್ತೀರ್ಣಗಳು. ೫೩. ಶಿವನ ಮುಖ ; ಅದು ಕರುಣಾ ರಸದ ಸದನ, ಶರಣಾದವರ ಅವಿದ್ಯೆಯನ್ನು ಹೋಗಲಾಡಿಸುವ ಕದನ, ಮೇಲಾಗಿ ಮದನ ನನ್ನು ಗೆದ್ದುದು ಶುಭ್ರದಂತ ಪಂಕ್ತಿಯಿಂದ ಮನೋಹರವಾಗಿದೆ. ೫೪. ಶಿವನ ಕೊರಳು ಅದು ಘನಗರಳ (ವಿಷ)ದಿಂದ ಉನ್ನತ ಭಾವವುಳ್ಳದ್ದು, ವಿಮಳ ಸ್ವಭಾವವುಳ್ಳದ್ದು, ವಂದಿ ಸುವವರಸದ್ ಭಾವವುಳ್ಳದ್ದು, ಮಧುರ ಧ್ವನಿಯಮೂಲ, ಶಿವಶಿವಾ! ಅದೇ ಜನತಾ ಜೀವ! ೫೫. ಅಭವನ ತೋಳುಗಳು, ಅವು ನೆನೆವರ ಚಿತ್ತದ ಬದುಕು, ವರವನ್ನು ನೀಡ ಬೇಕೆಂಬಹುವಾಗಿ ಬಯಸುವ ಸರತಿಗಳು, ರುದ್ರನಿಗೆ ಪ್ರಿಯವಾದ ಬದುಕುಗಳು, ಗಿರಿರಾಜ ಪುತ್ರಿಯ ಆಲಿಂಗನದ ಆಳುಗಳು. ೫೬. ಶಿವನ ಕೈಗಳು, ಅವು ಅನೇಕವರ ನೀಡಿದವುಗಳು, ಉಚಿತಕ್ರಿಯೆ ಮತ್ತು ಮಾತುಗಳು ಅಖಿಲಾಧಾರಕ್ಷೋಣಿಗಳು ಓಹೋ ಶಂಕರನ ಸುಪ್ರಾಣಿಗಳು. ೫೭. ಶಿವನ ಎದೆ, ಅದು ಗಿರಿಜಾಕಾಂತೆಗಾಗಿ ಮುಡುಪಾಗಿದೆ. ಅವಳ

ಕಂ॥ ಮಧ್ಯಂ ಗಿರಿಜಾಲೋಕನ
ಸಾಧ್ಯಂ ನಂಬಿರ್ದ ಸಕಳಗುಣಸಂಕುಳಸಂ।
ಚೋದ್ಯಂ ಪೊರ್ದಿದಜಾಂಡಾ
ಬಾಧ್ಯಂ ಹರಹರ ಸಮಸ್ತಭುವನಾರಾಧ್ಯಂ॥ ೫೮

ತೊಡೆಗಳೊ ಹೈಮವತಿಯ ಕೌ
ಳುಡೆಗಳೊ ನವಕಾಂತಿಲಕ್ಷ್ಮಿ ಸಂತಸದಿಂದಿ।
ರ್ಪೆಡೆಗಳೊ ರಂಭಾವಿಭವದ
ತಡೆಗಳೊ ಸಿಂಗರದ ಕಡೆಗಳೋ ಶಶಿಧರನಾ॥ ೫೯

ಮೇಲ್ಗಲೊ ನವಸೌಂದರ್ಯದ
ಸಾಲ್ಗಳೊ ಪಾರ್ವತಿಯ ಚಿತ್ತಮಂ ಸೋಲಿಸುವಾ।
ಕೀಲ್ಗಳೊ ಸಲ್ಲೀಲೆಯ ಪೊಂ
ಗೋಲ್ಗಳೊ ಕಣಕಾಲ್ಗಳೊ ಲಲಾಟೇಕ್ಷಣನಾ॥ ೬೦

ಚರಣಂ ಭಕ್ತಜನಾಂತಃ
ಕರಣಂ ನಂಬಿದರ ಹರಣವಿನಕುಲತೇಜಃ।
ಕಿರಣಂ ತ್ರಿಲೋಕಶರಣಂ
ಶರಣಾಭರಣಂ ಸಮಸ್ತಮುಕ್ತಾಭರಣಂ॥ ೬೧

ವ॥ ಎಂಬ ಪೊಗಳ್ತೆಗೆ ಮಿಗಿಲೆನಿಸಿ ನೆಱೆಮೆಱೆವ ಶಿವನ ಪುಣ್ಯಾಗಣ್ಯ ಲಾವಣ್ಯಮಯ

ಕುಚಯುಗಳವು ವಿಶ್ರಮಿಸುವ ಸ್ಥಾನ, ಪುಣ್ಯೋತ್ಕರವದು, ವರ, ಸುಖಕ್ಕೆ ಸಾಗರ ಅದು ಹರನ ಲೋಕೋತ್ತರ ಸ್ಥಾನ ! ೫೮. ಶಿವನ ನಡು, ಅವಲೋಕನಕ್ಕೆ ಮಾತ್ರ ಸಾಧ್ಯ, ಅವನನ್ನು ನಂಬಿರುವ ಸಕಲ ಗಣಗಳಿಗೆ ಪ್ರೇರಕ, ಬ್ರಹ್ಮಾಂಡಕ್ಕೆ ಅಬಾಧ್ಯ, ಶಿವಶಿವ! ಅದು ಸಮಸ್ತಲೋಕಕ್ಕೆ ಪೂಜ್ಯ ! ೫೯. ಪರಶಿವನ ತೊಡೆಗಳು, ಅವು ಹೈಮವತಿಯ ರೇಷ್ಮೆಯ ಬಟ್ಟೆಗಳು, ನವಕಾಂತಿ ಲಕ್ಷ್ಮಿಯು ಸಂತೋಷದಿಂದ ಇರುವ ಎಡೆಗಳು, ಬಾಳೆಯ ಕಂಭಗಳ ವೈಭವಕ್ಕೆ ತಡೆಗಳೂ, ಶೃಂಗಾರದ ಕಡೆಗಳೊ ಎಂಬಂತೆ ಇದ್ದವು. ೬೦. ಶಿವನ ಮೊಲ್ಗಾಲುಗಳು, ಜಂಘೆಗಳು, ಅವು ನವಸೌಂದರ್ಯದ ಸಾಲುಗಳೂ, ಪಾರ್ವತಿಯ ಮನಸ್ಸನ್ನು ಸೋಲಿಸುವ ಕೀಲುಗಳೂ, ಸಲ್ಲೀಲೆಯ ಹೊನ್ನಕೋಲುಗಳೂ ಮುಕ್ಕಣ್ಣನ ಕಣಕಾಲುಗಳೂ ಎಂಬಂತಿದ್ದವು! ೬೧. ಶಿವನ ಪಾದಗಳು ಅವು ಭಕ್ತಜನರ ಅಂತಃಕರಣ, ನಂಬಿದವರ ಪ್ರಾಣ, ರವಿಕುಲತೇಜಸ್ಸಿನ ಕಿರಣ, ಮೂರು ಲೋಕಕ್ಕೆ ರಕ್ಷಕ, ಶರಣರ ಆಭರಣ ಸಮಸ್ತ ಮುಕ್ತಾವರಣ. ವ॥ ಎಂಬ ಹೊಗಳಿಕೆಗೆ ಮೀರಿ ಬೆಳಗುವ ಶಿವನ

ಸುಕುಮಾರಾವಯವಂಗಳಂ ಕಂಡು ಕೌತುಕಂಗೊಂಡು ನಂದೀಶ್ವರಂ ಬಂದು ಸರಶಿರೋಮಾಲೆಯಂ ಪರಿಹರಿಸಿ ಮಣಿಕಿರೀಟಮಂ ಸಾರ್ಚಿ ಬಿಸುಗಣ್ಣಂ ಭಸಿತದಿಂ ಬಾಸಣಿಸಿ ಬಾಸಿಗಮನಿಕ್ಕಿ ನಾಗ ಕುಂಡಲಮಂ ಕಳಲ್ಚಿ ಮಾಣಿಕ್ಯಾವತಂಸಮಂ ಕಿಯ್ಕೊಳಿಸಿ ಕೂರ್ಮಶಿರಮಂ ತೆಗೆದು ತೋರಹಾರ ದೊಳ್ ಕೀಲಿಸಿದ ಪದಕಮನಳವಡಿಸೆ ಸರ್ಪೋಪವೀತಮಂ ಸಡಿಲ್ಚಿ ಯಜ್ಞೋಪವೀತಮನಮರ್ಚಿ ಕೀರ್ತಿಮುಖಮಂ ಕಳಲ್ಚಿ ಬಾಹುಪೂರಯಮನೆಡೆಗೊಳಿಸಿ ಉರಗಕಂಕಣಮಂ ಕಳೆದು ರತ್ನಕಂಕಣ ಮಂ ತಿರುಂಪಿ ನೂಂಕಿ ಬ್ರಹ್ಮಕಪಾಲಮಂ ನಿಲಲೀಯದೆ ಪುಣ್ಯಪವಿತ್ರಮನಿಟ್ಟು ಖಟ್ವಾಂಗಮಂ ಬಿಡಿಸಿ ಮಾದುಫಲಮನಿಂಬುಗೊಳಿಸಿ ಗಜಚರ್ಮಮನೋಸರಿಸಿ ನಿರ್ಮಳೋತ್ತರೀಯಮಂ ಪೊದೆ ಯಿಸಿ ಪುಲಿದೊವಲಂನಿವಾರಿಸಿ ದಿವ್ಯದುಕೂಲಮನುಡಿಸಿ ದೇವಕುಲಮೆಳಲ್ವಬಾವುಲಿಯ ತೊಡರಂ ಸಡಿಲ್ಚಿ ಸಹಜಸೌಂದರ್ಯಮನಿರಿಸಿ ಇಂತು ಶಿವಯೋಗಕ್ಕೆ ಮುಕ್ತಿಯಂ ಮುಕ್ತಿಗೆ ವೈರಾಗ್ಯಮಂ ವೈರಾಗ್ಯಕ್ಕೆ ಶಿವಜ್ಞಾನಮಂ ಶಿವಜ್ಞಾನಕ್ಕೆ ಭಕ್ತಿಯಂ ಭಕ್ತಿಗೆ ಪುಣ್ಯಮಂ ಪುಣ್ಯಕ್ಕೆ ಸತ್ಕ್ರಿಯೆಯಂ ಸತ್ಕ್ರಿಯೆಗೆ ಪಾವನಜನ್ಮಮನಲಂಕರಿಸುವಂತೆ ಪರಬ್ರಹ್ಮಚರ್ಯಾಲಂಕೃತಿ ಬ್ರಾಹ್ಮಣೋತ್ತ ಮೋತ್ತಮನಪ್ಪ ವಿರೂಪಾಕ್ಷಂಗೆ ಪರಮೈಶ್ವರ್ಯಪೂಜಿತಂಗೆ ನಾದಮೂರ್ತಿಗೆ ಶಿವಜ್ಞಾನಿಗೆ ವೇದ ಶಿಖಾಮಣಿಗೆ ಸತ್ಯಜ್ಞಾನಾಭರಣಂಗೆ ನಿತ್ಯಕಾಯಂಗೆ ವಿಶ್ವಾರಾಧ್ಯಂಗೆ ಶಾಶ್ವತಪ್ರತಾಪನಿಧಿಯೆನಿಪ ಶಂಕರಂಗೆ ನಂದೀಶಾದಿಗಣ ನಾಯಕರ್ ಸಿಂಗರಮಂ ಮಾಡಿ ಹೆಱಸಾರ್ದು ನಿಂದು ನೋಡಲಂಜಿ

ಪುಣ್ಯಲಾವಣ್ಯಮಯವಾದ ಸುಕುಮಾರ ಅವಯವಗಳನ್ನು ಕಂಡು ಆಶ್ಚರ್ಯದಿಂದ ನಂದೀಶ್ವರನು ಬಂದು ರುಂಡಮಾಲೆಯನ್ನು ತೆಗೆದು ಮಣಿಕೀಟವನ್ನು ತೊಡಿಸಿ, ಬಿಸು ಗಣ್ಣನ್ನು ಭಸ್ಮದಿಂದ ಮರೆಮಾಡಿ, ಬಾಸಿಂಗ ಧರಿಸಿ, ನಾಗಕುಂಡಲಗಳನ್ನು ತೆಗೆದು, ಮಾಣಿಕ್ಯಮಯವಾದ ಕರ್ಣಾವತಂಸವನ್ನು ತೊಡಿಸಿ, ಕೂರ್ಮಶಿರವನ್ನು ತೆಗೆದು ದಪ್ಪದ ಹಾರದಲ್ಲಿ ಪದಕವನ್ನು ಅಳವಡಿಸಿ, ನಾಗಯಜ್ಞೋಪವೀತವನ್ನು ತೆಗೆದು ಜನಿವಾರವನ್ನು ಧರಿಸಿ, ಕೀರ್ತಿಮುಖವನ್ನು ಕಳಚಿ ಬಾಹುಪೂರವನ್ನು ಧರಿಸಿ, ಉರಗಕಂಕಣವನ್ನು ತೆಗೆದು ರತ್ನಕಂಕಣವನ್ನು ತಿರುಗಿಸಿ, ಬ್ರಹ್ಮಕಪಾಲವನ್ನು ನೂಕಿ ಪುಣ್ಯಕರವಾದ ಪವಿತ್ರವನ್ನು ಧರಿಸಿ, ಹೊರಸನ ಕಾಲು (ಖಟ್ವಾಂಗ) ಬಿಡಿಸಿ ಮಾದುಫಲವನ್ನು ಧರಿಸಿ, ಗಜಚರ್ಮ ವನ್ನು ತೆಗೆದು ನಿರ್ಮಲ ಉತ್ತರೀಯವನ್ನು ಹೊದಿಸಿ, ಹುಲಿಯ ಚರ್ಮವನ್ನು ತೆಗೆದು ದಿವ್ಯದುಕೂಲವನ್ನು ಉಡಿಸಿ, ದೇವಕುಲವು ಎಳಲ್ವ ಬಾವುಲಿಯ ತೊಡರನ್ನು ಸಡಿಲಿಸಿ ಸಹಜ ಸೌಂದರ್ಯವನ್ನು ಮೂಡಿಸಿ, ಹೀಗೆ ಶಿವಯೋಗಕ್ಕೆ ಮುಕ್ತಿಯನ್ನು, ಮುಕ್ತಿಗೆ ವೈರಾಗ್ಯವನ್ನು, ವೈರಾಗ್ಯಕ್ಕೆ ಶಿವಜ್ಞಾನವನ್ನು, ಶಿವಜ್ಞಾನಕ್ಕೆ ಭಕ್ತಿಯನ್ನು, ಭಕ್ತಿಗೆ ಪುಣ್ಯವನ್ನು, ಪುಣ್ಯಕ್ಕೆ ಸತ್ಕ್ರಿಯೆಯನ್ನು, ಸತ್ಕ್ರಿಯೆಗೆ ಪಾವನಜನ್ಮವನ್ನು ಅಲಂಕರಿಸು ವಂತೆ ಪರಬ್ರಹ್ಮಚರ್ಯೆಯ ಅಲಂಕಾರನೂ ಬ್ರಾಹ್ಮಣೋತ್ತಮೋತ್ತಮನೂ ಆದ ವಿರೂಪಾಕ್ಷನಿಗೆ, ಪರಮೈಶ್ವರ್ಯಪೂಜಿತನಿಗೆ, ನಾದಮೂರ್ತಿಗೆ ಶಿವಜ್ಞಾನಿಗೆ ವೇದ ಶಿಖಾಮಣಿಗೆ, ಸತ್ಯಜ್ಞಾನಾಭರಣನಿಗೆ ನಿತ್ಯಕಾಯನಿಗೆ ವಿಶ್ವಾರಾಧ್ಯನಿಗೆ ಶಾಶ್ವತಪ್ರತಾಪ ನಿಧಿಯಾದ ಶಂಕರನಿಗೆ ನಂದೀಶನೇ ಮೊದಲಾದ ಗಣನಾಯಕರು ಸಿಂಗಾರ ಮಾಡಿ ಪಕ್ಕ

ಕಣ್ಮುಚ್ಚಿ ಭಯದಿಂ ಶಿವಶಿವ ಜಯಜಯಯೆನುತ್ತುಮಿರೆ ದಧೀಚಿ ದೂರ್ವಾಸ ವಶಿಷ್ಠ ವಾಮದೇವ ಭೃಗುಕಶ್ಯಪಾದಿ ಮುನಿಜನಂಗಳ್ ಶಿವನ ಕಾಂತಿಯಂ ಕಂಡು ನಿರೀಕ್ಷಿಸಲಣ್ಮದೆ ಚೇತೋದೃಷ್ಟಿಯಿಂ ನೋಡಿ,

ಮ॥ ಮಿಗಿಲೆತ್ತಂ ಜ್ಯೋತಿಗಂ ಪಾವಕರುಚಿ ಎಸೆವಾ ಜ್ಯೋತಿಗಂ ಪಾವಕಂಗಂ
ಮೃಗಲಕ್ಷ್ಮಜ್ಯೋತ್ಸ್ನೆಯೆಂತುಂ ಕರಮುಸದಳಮಾ ಜ್ಯೋತಿಗಂ ಪಾವಕಂಗಂ ।
ಮೃಗಲಕ್ಷ್ಮಜ್ಯೋತ್ಸ್ನೆಗಂ ಭಾಸ್ಕರರುಚಿ ಪಿರಿದಾ ಜ್ಯೋತಿಗಂ ಪಾವಕಂಗಂ
ಮೃಗಲಕ್ಷ್ಮಜ್ಯೋತ್ಸ್ನೆಗಂ ಭಾಸ್ಕರರುಚಿಗಮತರ್ಕ್ಯಂ ವಿರೂಪಾಕ್ಷತೇಜಂ ॥ ೬೨

ವ॥ ಎಂದು ಪೊಗಳುತ್ತಿರ್ಪ ಸಮಯದೊಳ್ ಶಿವನ ವಿವಾಹಕ್ಕೆ ಸಕಲದೇವ ಕುಲಂ ಹರ್ಷದಿಂ ಬರುತಿರ್ಪಲ್ಲಿ,

ಚಂ॥ ಸುರಪತಿಯಾನೆಯಂ ಹುತವಹಂ ತಗರಂ ಸಮವರ್ತಿ ಕೋಣನಂ
ನಿರೃತಿ ಮನುಷ್ಯನಂ ಜಳಧಿಪಂ ನೆಗಳಂ ಪವಮಾನನೇಣನಂ ।
ಹರಸಖನಶ್ವಮಂ ಶಶಿಧರಂ ವೃಷನಂ ನಲಿದೇಱಿ ಬಂದರ
ತ್ಯುರುತರ ನಂದಿವಾಹನವಿವಾಹಮಹೋತ್ಸವದೇಳ್ಗೆಗಳ್ಕಱಿಂ ॥ ೬೩

ಕಂ॥ ಲೋಕೈಕಬಂಧುವೆನಿಪ ಪಿ
ನಾಕಿಯ ಪರಿಣಯನದುತ್ಸವಕ್ಕತಿಮುದಮಂ ।
ಕೈಕೊಂಡು ಕೊಂಡು ಕೊನೆಯು
ತ್ತೇಕಾದಶರುದ್ರರಲ್ಕ್ರಿಯಿಂ ನಡೆತಂದರ್ ॥ ೬೪

ದಲ್ಲಿ ನಿಂತು ನೋಡಲು ಹೆದರಿ ಕಣ್ಣು ಮುಚ್ಚಿ ಭಯದಿಂದ ಶಿವಶಿವ ಜಯಜಯ ಎನ್ನುತ್ತಿರಲು, ದಧೀಚಿ, ದುರ್ವಾಸ, ವಶಿಷ್ಠ ವಾಮದೇವ ಭೃಗು ಕಶ್ಯಪಾದಿ ಮುನಿಗಳು ಶಿವನ ಕಾಂತಿಯುನ್ನು ಕಂಡು ನಿರೀಕ್ಷಿಸಲಾರದೆ ಚೇತೋದೃಷ್ಟಿಯಿಂದ ವೀಕ್ಷಿಸಿದರು. ೬೨. ಜ್ಯೋತಿಗಿಂತ ಅಗ್ನಿಯ ಕಾಂತಿ ಮಿಗಿಲು, ಆ ಜ್ಯೋತಿ ಮತ್ತು ಬೆಂಕಿ ಇವೆರಡಕ್ಕಿಂತ ಚಂದ್ರನ ಬೆಳದಿಂಗಳು ಮಿಗಿಲು, ಆ ಜ್ಯೋತಿ, ಪಾವಕ ಮತ್ತು ಬೆಳದಿಂಗಳು ಈ ಮೂರಕ್ಕಿಂತ ಸೂರ್ಯನ ಕಾಂತಿ ಮಿಗಿಲು, ಆ ಜ್ಯೋತಿ, ಪಾವಕ, ಬೆಳದಿಂಗಳು ಮತ್ತು ಸೂರ್ಯನ ಕಾಂತಿಗಳು ಇವೆಲ್ಲಕ್ಕಿಂತ ವಿರೂಪಾಕ್ಷನ ತೇಜಸ್ಸು ಊಹಿಸಲಸದಳವಾದದ್ದು. ವ|| ಹೀಗೆ ಪ್ರಶಂಸಿಸುತ್ತಿರುವ ಶಿವನ ಮದುವೆಯ ಮಂಟಪಕ್ಕೆ ಎಲ್ಲ ದೇವತೆಗಳೂ ಹರ್ಷದಿಂದ ಬರುತ್ತಿರುವಾಗ–೬೩. ದೇವೇಂದ್ರನು ಐರಾವತವನ್ನೂ, ಅಗ್ನಿಯು ಟಗರನ್ನೂ ಯಮನು ಕೋಣನನ್ನೂ ನಿರ್ಋತಿಯು ಮನುಷ್ಯನನ್ನೂ ವರುಣನು ಮೊಸಳೆಯನ್ನೂ ವಾಯು ಜಿಂಕೆಯನ್ನೂ ಕುಬೇರನು ಅಶ್ವವನ್ನೂ ಈಶಾನನು ಬಸವನನ್ನೂ ಏರಿ ಸಂತೋಷದಿಂದ ನಂದೀಶ್ವರನಾದ ಪರಶಿವನ ವಿವಾಹಮಹೋತ್ಸವಕ್ಕೆ ಆಗಮಿಸಿದರು. ೬೪. ಲೋಕಕ್ಕೆ ಒಬ್ಬನೇ ಬಂಧು ಎನಿಸಿರುವ ಪಿನಾಕಿಯ ಪರಿಣಯದ ಉತ್ಸವಕ್ಕೆ ಏಕಾದಶರುದ್ರರು

ಕಂ॥ ಮೇದಿನಿಯುಮನಂಬರಮುಮ
ನಾದಿಕ್ಚಕ್ರಮುಮನಂಶುಕುಳದಿಂ ಬೆಳಗು।
ತ್ತಾದಂಸಂತಸದಿಂದಂ
ದ್ವಾದಶರವಿಗಳ್ ಮಹೋಜ್ವಳರ್ ನಡೆನಂದರ್ ॥ ೬೫

ದೇವರ ದೇವನ ಗರಳ
ಗ್ರೀವನ ಭಕ್ತೈಕಬಾಂಧವನ ಸಕಳಜಗ।
ಜ್ಜೀವನ ಮದುವೆಗೆ ನೆರೆದ
ಪ್ಟಾವಸುಗಳ್ ನಡೆದು ಬಂದರತ್ಯುನ್ನತಿಯಿಂ ॥ ೬೬

ವರತೇಜದಿಂ ಪವಿತ್ರಾ
ಚರಣೆಯಿನತಿಕಮನ ವಿಮಳಸಾಮರ್ಥ್ಯತೆಯಿಂ।
ಕರಮೆಸೆದನುನಯದಿಂ ರಾ
ಜಋುಷಿ ಬ್ರಹ್ಮಋುಷಿ ದೇವಋುಷಿಗಳ್ ಬಂದರ್ ॥ ೬೭

ವ॥ ಅವರಾರೆಂದೊಡೆ,

ಮ॥ ವರದೂರ್ವಾಸನಗಸ್ತ್ಯ ಜಹ್ನು ಕಪಿಲಂ ಕೌಂಡಿನ್ಯ ಮಾಂಢವ್ಯ ಭಾ
ಸುರ ಶಾತಾತಪ ವಾಮದೇವ ಮುನಿವಿಶ್ವಾಮಿತ್ರ ಮೈತ್ರೇಯ ಬಂ।
ಧುರ ಮಾರ್ಕಂಡೇಯ ದೇವಲಾಖ್ಯನನಿಳಾದಂ ಸೂತನಾ ವ್ಯಾಸನಾ
ತ್ವರಿತಂ ಚಿತ್ರಶಿಖಂಡಿ ಗಾಲವವೃಷಂ ಜಾಬಾಲಿ ವಾಲ್ಮೀಕಿಗಳ್ ॥ ೬೮

ಚಂ॥ ಪರಮ ದಧೀಚಿ ರೋಮಜ ಪುಲಸ್ತ್ಯ ಪರಾಶರ ಯಾಜ್ಞವಲ್ಕ್ಯಯಂ
ಗಿರ ಭೃಗು ಪುಂಡರೀಕ ಋುಷಿಕಶ್ಯಪ ಕೌಶಿಕ ಗಾರ್ಗ್ಯ ಗೌತಮಂ।
ವರಸನಕಂ ಸನಂದನ ಸನತ್ಸು ಭಗೀರಥ ಕುತ್ಸವತ್ಸ ಭಾ
ಸುರ ಜಮದಗ್ನಿ ಜೈಮಿನಿ ವಶಿಷ್ಠ ಮತಂಗ ಮರೀಚಿಯತ್ರಿಗಳ್ ॥ ೬೯

ನಡೆತಂದರು. ೬೫. ತಮ್ಮ ಪ್ರಕಾಶದಿಂದ ನೆಲ–ಮುಗಿಲು ಮತ್ತು ಆಕಾಶಗಳನ್ನು ಬೆಳಗುತ್ತಾ ಮಹೋಜ್ವಳರಾದ ದ್ವಾದಶಾದಿತ್ಯರು ಆಗಮಿಸಿದರು. ೬೬. ದೇವರ ದೇವನೂ ನೀಲಗ್ರೀವನೂ ಭಕ್ತರಿಗೆ ಮುಖ್ಯ ಬಂಧುವೂ ಸಕಲ ಜಗತ್ತಿಗೆ ಜೀವನೂ ಎನಿಸಿರುವ ಶಿವನ ಮದುವೆಗೆ ಅಷ್ಟವಸುಗಳು ಬಂದರು. ೬೭. ದಿವ್ಯತೇಜಸ್ಸಿನಿಂದಲೂ ಪವಿತ್ರ ಆಚರಣೆಯಿಂದಲೂ ವಿಮಲ ಸಾಮರ್ಥ್ಯದಿಂದಲೂ, ಭಕ್ತಿ ಶ್ರದ್ಧೆಗಳಿಂದಲೂ ಕೂಡ ಆ ಮದುವೆಗೆ ಲೋಕದ ರಾಜರ್ಷಿಗಳು, ಬ್ರಹ್ಮರ್ಷಿಗಳು, ದೇವರ್ಷಿಗಳು ಸಹ ಬಂದರು. ೬೮–೬೯. ಇಲ್ಲಿ ಋುಷಿಗಳ ಹೆಸರುಗಳು ಸ್ಪಷ್ಟ! ೭೦. ಶ್ರೀಮನ್ನಾರಾ–

ವ॥ ಮತ್ತಮನಂತರದಲ್ಲಿ,

ಕಂ॥ ಸಂಗಡಿಸಿದ ಶಂಖಿಂ ಚ
ಕ್ರಿಂ ಗದೆ ಶಾರ್ಙ್ಗಂಗಳೆಸೆಯೆ ಗರುಡಾಸನದೊಳ್ ।
ಪಿಂಗದೆ ಬಂದಂ ಯುತಚತು
ರಂಗಂ ಮಾಧವನುಮಾಧವಂ ಮೆಚ್ಚುವಿನಂ ॥ ೭೦

ಭರದಿಂದಂ ತನ್ನ ಬಲಂ
ಬೆರಸೊಲವಿಂ ಹಂಸೆಯೇಱಿ ತೊಳತೊಳಗುತ್ತುಂ ।
ಸರಭಸದಿಂ ನಡೆತಂದಂ
ಸರಸಿಜಭವನಭವನಭಯಮಿಾಯೆ ಸರಾಗಂ ॥ ೭೧

ವ॥ ಅಂತುಮಲ್ಲದೆಯುಂ,

ಕಂ॥ ಸುರರ ಬಲಂ ಹರಹರ ಖೇ
ಚರರ ಬಲಂ ಭಾಪು ಕಿನ್ನರರ ಬಲವಾಹಾ ।
ಗರುಡರ ಬಲವರರೇ ಸಿ
ದ್ಧರ ಬಲವಮ್ಮಮ್ಮ ಭಲರೆ ಗಂಧರ್ವಬಲಂ ॥ ೭೨

ವ॥ ಅಂತು ಬಂದ ಬಲಮಂ ಕಂಡು ಮದನಮರ್ದನಂ ನೋಡುತಿರ್ಪಾಗಳ್ ಬಿರುದಿನ ಗ್ಗದ ಗಣಂಗಳ್ ಬರುತಿರ್ದಾರದೆಂತೆಂದೊಡೆ,

ಕಂ॥ ತಮತಮಗುಗ್ರರುದಗ್ರರ್
ತಮತಮಗೆ ವಿಚಾರಸಾರರಭವರ್ ವಿಭವರ್ ।
ತಮತಮಗಾಪ್ತರ್ ಗುಪ್ತರ್
ತಮತಮಗೆ ಸಮಸ್ತ ಲೋಕವಂದ್ಯರನಿಂದ್ಯರ್ ॥ ೭೩

ಯಣನು ಉಮಾಧವನಾದ ಶಿವನು ಮೆಚ್ಚುವ ಬಗೆಯಲ್ಲಿ ಶಂಖ, ಚಕ್ರ, ಗದೆ ಮತ್ತು ಶಾರ್ಙ್ಗಧನುಸ್ಸು ಹಿಡಿದು ಗರುಡನನ್ನು ಹತ್ತಿ ಅಲ್ಲಿಗೆ ಬಂದನು. ೭೧. ಚತುರ್ಮುಖ ಬ್ರಹ್ಮದೇವನು ತನ್ನ ಪರಿವಾರಜೊಡನೆ ಹಂಸೆಯನ್ನು ಏರಿ ಅಭವನು ಅಭಯವೀಯಲು ಸರಾಗದಿಂದ ಆಗಮಿಸಿದನು. ೭೨. ಸುರಸೈನ್ಯ, ಖೇಚರಸೈನ್ಯ, ಕಿನ್ನರಸೈನ್ಯ ಗರುಡ ಸಿದ್ಧ ಗಂಧರ್ವರ ಬಲಗಳೆಲ್ಲ ಬಂದು ನೆರೆದವು. ವ॥ ಹಾಗೆ ಬರುತ್ತಿದ್ದ ಬಲಗಳನ್ನು ಶಿವನು ನೋಡುತ್ತಿರುವಾಗ ಪ್ರಮಥಗಣಂಗಳು ಬರುತ್ತಿದ್ದಾರೆ. ೭೩. ಆ ಪ್ರಮಥರು ತಮತಮಗೆ ಉಗ್ರರು, ಉದಗ್ರರು, ವಿಚಾರಸಾರರು, ಅಭವರು, ವಿಭವರು, ಅವರು ತಮತಮಗೆ

ಮ॥ ಸಿಡಿಲಂ ನುರ್ಗುವ ಶೇಷನಂ ಪೊಸೆವ ದಿಙ್ನಾಗಂಗಳಂ ಪೊಯ್ದು ಘೀ
ಳಿಡಿಪೇಳುಂ ಕಡಲಂ ತುಳುಂಕುವ ಕುಲಾದಿಸ್ತೋಮಮಂ ಕಿಳ್ತಣಂ ।
ಪೊಡೆಸೆಂಡಾಡುವ ಭೂಮಿಯಂ ಹಿಳಿವ ಚಂದ್ರಾದಿತ್ಯರಂ ಮೀಂಟುತಿ
ರ್ಪುಡುಸಂತಾನಮನಾರ್ದುದಿರ್ಚುವ ಗಣಗಳ್ ಬಂದರಾನಂದದಿಂ ॥ ೭೪

ವ॥ ಮತ್ತಮಲ್ಲಿ,

ಸ್ರ॥ ನಂದೀಶಂ ವೀರಭದ್ರಂ ಘನರವನಚಲಂ ಪುಷ್ಪದಂತಂ ಶುಭಂ ಸಾ
ನಂದಂ ಭೃಂಗೀಶನುಗ್ರಂ ಪಿಕ ಮುಖನಶಿತಗ್ರೀವನತ್ಯಾ।
ನಂದಂ ದಿವ್ಯಾಂಗನಂಧಾಸುರಮಥನನನೇಕಾಸ್ಯನೋಂಕಾರಿ ಶರ್ವಾಂ
ಗಂ ದಕ್ಷಧ್ವಂಸಿ ಲಂಬೋದರನತುಳಬಳಂ ಹಸ್ತಿಕರ್ಣಂ ವಿಕರ್ಣಂ ॥ ೭೫

ಮ॥ ಗರಳಂ ಭದ್ರಮುಖಂ ಶುಭೋದಯನಭಂಗಂ ಶಂಕುಕರ್ಣಂ ಷಡ
ಕ್ಷರನುತ್ತುಂಗತಿರಂ ವೃಕೋದರನಟವ್ಯಂ ದಾರುಕಂ ಸಿಂಹಕೇ ।
ಸರಿ ಸಿದ್ಧಾಂತಿಯುದಾರನೇಕಜಟ ವಿದ್ಯುನ್ಮಾಲಿ ತಾರಾಕ್ಷನಂ
ಬರಕಾಯಂ ಘನಕಾಯನಪ್ರತಿಪಕಾಯಂ ವಿಸ್ತರಂ ಕುಂಭಜಂ ॥ ೭೬

ಮ॥ ಸ್ರ॥ ಹಳನುತ್ತುಂಗಂ ವಿಚಿತ್ರಂ ತ್ರಿಶಿರನಸುರಕೋಳಾಹಳಂ ಯಜ್ಞಕೋಳಾ
ಹಳನುದ್ಯತ್ ಕಾಳಕೋಳಾಹಳನತನುಹರಂ ಮಂಗಳಂ ಮೃತ್ಯುಕೋಳಾ ।
ಹಳನೀಶಾನಂ ಪ್ರಘೋಷಂ ವಿಜಯನನಲಕಾಯಂ ಗಂಭೀರಸುಗಂಡ
ಸ್ಥಳನೂರ್ಧ್ವಾಂಗಂ ಪ್ರಜಿಹ್ವಂ ವಿಷಸರಣಿ ಪುರಧ್ವಂಸಿ ಸರ್ವಾಂಗಜಿಹ್ವಂ ॥ ೭೭

ವ॥ ಇಂತಿವರ್ ಮೊದಲಾದ ಗಣೇಶ್ವರಬಲಸಹಿತಂ ಇಳಾತಳಮಂ ದಿಕ್ಚಕ್ರಮಂ ನಭೋಭಾಗಮಂ ತೆಕ್ಕನೆ ತೀವಿ ಬ್ರಹ್ಮಾಂಡಮಿಂಬಿಲ್ಲೆಂಬ ಸಂಭ್ರಮಮಿಂಬುವಡೆಯೆ ಬಂದು ನಿಂದ

ಆಪ್ತರು, ಗುಪ್ತರು, ಸಮಸ್ತಲೋಕವಂದ್ಯರು ಅನಿಂದ್ಯರು. ೭೪. ಈ ಪ್ರಮಥರೆಲ್ಲ ಅಸಹಾಯ ಶೂರರು. ಸಿಡಿಲನ್ನೆ ನುಗ್ಗುಮಾಡುವ, ಶೇಷನನ್ನು ಹೊಸೆಯುವ, ದಿಗ್ಗಜಗಳನ್ನು ಹೊಯ್ದು ಘೀಳಿಡುವಂತೆ ಮಾಡುವ, ಕಡಲನ್ನು ತುಳುಕಿಸುವ, ಕುಲಪರ್ವತಗಳನ್ನು ಕಿತ್ತು ಚೆಂಡಾಟವಾಡುವ ಭೂಮಿಯನ್ನೆ ಹಿಂಡುವ ರವಿಶಶಿಗಳನ್ನು ಮೀಂಟುವ ನಕ್ಷತ್ರಗಳನ್ನೆಲ್ಲ ಉದುರಿಸುವ ಶೂರರು ಅವರು. ಅವರೆಲ್ಲ ಆನಂದದಿಂದ ಬಂದರು. ೭೫. ಇವರೆಲ್ಲ ಪ್ರಮಥರಲ್ಲಿ ಕೆಲವರು. ೭೬–೭೭. ಇವರೆಲ್ಲ ಪ್ರಮಥಗಣವರರು. ವ॥ ಇವರೇ ಮೊದಲಾದ ಗಣೇಶ್ವರರು ಇವರು ತಮ್ಮ ತಮ್ಮ ಬಲಸಹಿತ ಬಂದು ಭೂತಳ, ದಿಙ್ಮಂಡಳ ಹಾಗೂ ನಭೋಭಾಗವೆಲ್ಲವನ್ನೂ ವ್ಯಾಪಿಸಿ ಇನ್ನೂ ಬ್ರಹ್ಮಾಂಡವೇ ಇಲ್ಲವೇನೋ ಎಂಬುವಮಟ್ಟಿಗೆ ಸಂಭ್ರಮದಿಂದ ಬಂದುನಿಂತರು. ಇವರೆಲ್ಲರನ್ನು ವಿರೂಪಾಕ್ಷನು

ಸಕಲಸುರಸಮೂಹಮಮಂ ವಿರೂಪಾಕ್ಷಂ ಕಂಡು ಮನಂಗೊಂಡು ಮುಂದಿರ್ದ ನಂದೀಶ್ವರನ ಮುಖಮಂ ನೋಡಿದಾಗಳ್,

ಮ॥ ನಯದಿಂದೆಳ್ದು ನತಾಸ್ಯನಾಗಿ ವಿಪುಳಶ್ವಾಸಂಗಳೊಳ್ ದೇವಕೋ
ಟಿಯನಾಂದೋಳಮನಾಡಿಸುತ್ತೆ ನಡೆತಂದುಚ್ಚಪ್ರಭಂ ಧರ್ಮಸಂ।
ಚಯನಾನಂದಮಯಂ ಮಹೇಶನ ಸುಖಾವಾಸಾನ್ವಿತಂ ದಿಟ್ಟವಾ
ರಿಯ ಧೀರಂ ವೃಷಭೇಂದ್ರನಪ್ರತಿಮಕಾಯಂ ಮುಂದೆ ನಿಂದಿರ್ಪುದುಂ॥ ೭೮

ಚಂ॥ ಹರಿ ಜಯಜೀಯ ಜೀಯೆನೆಯಜಂ ಮಝುಭಾಪೆನೆ ದೇವವೀಧಿ ದೇ
ವುರೆ ಸುರರಾಜರಾಜಧಿರುರೇ ಎನೆ ಸನ್ಮುನಿಗಳ್ ಸರಾಗದಿಂ।
ಹರಿಹರ ರುದ್ರ ಭದ್ರಯೆನೆ ನಿಂದ ಗಣಾವಳಿಯುಳ್ಕಱಿಂ ಮದೀ
ಶ್ವರ ಭಲರೇ ಕಪರ್ದಿಯೆನೆ ನಂದಿಯನೇಱಿದನೆಮ್ಮ ಶಂಕರಂ॥ ೭೯

ವ॥ ಇಂತು ವೃಷಭಾರೂಢನಾಗಿ ಕೂಡೆ ನೆರೆದ ಗರುಡರ ಗಡಣದ ಗಂಧರ್ವರಸಂದಣಿಯ ಸಿದ್ಧರ ಪದ್ಧತಿಯ ವಿದ್ಯಾಧರರ ವೀಧಿಯ ಕಿನ್ನರರ ವ್ರಜದ ಪನ್ನಗ ಪ್ರಕರದ ಕಿಂಪುರುಷಸ್ತೋಮದ ಯಕ್ಷರ ಪಂಙ್ತಿಯ ರಾಕ್ಷಸರ ತಿಂತಿಣಿಯ ಮಯೂರರ ಮಂತಣದ ಗುಹ್ಯಕರ ಯೂಥದ ಖೇಚರರ ತೆಕ್ಕೆಯ ಮನುಗಳ ಪಂಗಡದ ಮುನಿಗಳ ಗೊಂದಣದ ಸುರರ ನೆರವಿಯ ದೇವಕಾಮಿನೀ ನಿಕರದ ದಿಕ್ಪಾಲನಿಕಾಯದ ಹರಿವಿರಿಂಚಿಗಳ ಪರಿವಿಡಿಯ ಬಿರುದುಗಣಂಗಳ ತೆರಳ್ಕೆಯ ರವಿಮಂಡ

ಕಂಡು ಮನ್ನಿಸಿ ಮುಂದಿದ್ದ ನಂದಿಯನ್ನು ನೋಡಿದಾಗ ೭೮. ಪರಶಿವನು ನೋಡಿದ ಕೂಡಲೆ ನಂದೀಶ್ವರನು ನಯದಿಂದ ಎದ್ದು ತಲೆಬಾಗಿ ತನ್ನ ಶ್ವಾಸಮಾತ್ರದಿಂದಲೇ ದೇವ ಕೋಟಿಯನ್ನು ಆಂದೋಳನವಾಡಿಸುತ್ತಾ ಮುಂದೆಬಂದು ಧರ್ಮಸಂಚಯನೂ ಆನಂದ ಮಯನೂ ಆದ ವೃಷಭೇಶ್ವರನು ಮುಂದೆ ಬಂದು ನಿಂತನು. ೭೯. ಹರಿಯು ಜಯ! ಎನ್ನಲು ಅಜನು ಜೀಯ–ಜೀಯ! ಎನ್ನಲು, ದೇವತಾ ಸಮೂಹವು ಮಝು! ಭಾಪು! ಎಂದಿತು, ಸುರರಾಜ ಹುರೆ! ಎಂದ, ಮುನಿಗಳು ಹರಹರ! ಎಂದರು, ಪ್ರಮಥಗಣರು, ರುದ್ರ ಭದ್ರ! ಎಂದರು ಉಳಿದ ಗಣರು ಭಕ್ತಿಯಿಂದ ಮದೀಶ್ವರ! ಭಲರೆ! ಎನ್ನುತ್ತಿರಲು ಕಪರ್ದಿ ಶಂಕರನು ನಂದಿಯನ್ನು ಏರಿದನು. ವ॥ ಹೀಗೆ ವೃಷಭಾರೂಢನಾಗಿ ಪರಮೇಶ್ವರನು ವಿವಾಹಮಂಟಪಾಭಿಮುಖನಾಗಿ ಹೊರಟನು. ಶಿವನ ಸುತ್ತಲೂ ದೇವತಾಸಮೂಹವೆಲ್ಲ ಶ್ರದ್ಧಾ ಭಕ್ತಿಗಳಿಂದ ಮುನ್ನಡೆಯಿತು. ಅವರಲ್ಲಿ ಗರುಡ-ಗಂಧರ್ವ ಸಿದ್ಧ–ವಿದ್ಯಾಧರ – ಕಿನ್ನರ–ಪನ್ನಗ–ಕಿಂಪುರುಷ–ಯಕ್ಷ–ರಾಕ್ಷಸ–ಮಯೂರ–ಗುಹ್ಯಕ–ಖೇಚರ–ಮನು–ಮುನಿಸುರ–ದೇವಕಾಮಿನಿಯರು, ದಿಕ್ಪಾಲಕರು, ಹರಿವಿರಿಂಚಿಗಳು, ಬಿರುದು ಉಗ್ಗಾಡಿಪ ಗಣಂಗಳು, ರವಿಗಳು, ಶಶಿಗಳು, ಗಜ–ಅಶ್ವ–ರಥ ಪದಾತಿಬಲಗಳ

ಲದ ಹಿಂಡುಗಳ ಶಶಿಮಂಡಲದ ಸಾಲ್ಗಳ ಕುಂಜರನಿಕರದ ತುರಂಗಸಂಘದ ರಥಪ್ರತಾನದ ಪದಾತಿಬಲದಿರ್ಕೆಲದೊಳ್ ದಿಕ್ಕರಿಗಳ ಮೇಲೆ ಮಿಕ್ಕು ಬರ್ಪ ದೇವಾಂಗವಸ್ತ್ರವಿತಾನದ ಪಟ್ಟಿಗಳೊಟ್ಟಜೆಯ ಸಾದಿನ ಪೆಟ್ಟಿಗೆಗಳ ಮೃಗಮದದ ಕೊಂಬುಗಳ ಕರ್ಪೂರಕರಂಡಕಾನಿಕರದ ಪನಿನೀರ ಭಾಜನಂಗಳ ಕತ್ತುರಿಯ ಭಾಂಡಂಗಳ ಬಾವನ್ನದೊಟ್ಟಿಲ್ಗಳ ರತ್ನಾಭರಣರಾಶಿಗಳ ಚಿಂತಾಮಣಿಯ ಮುಡಿಪುಗಳ ಪರುಷದ ಕಣೆಯ ತನತನಗೆ ಪಿಡಿದು ಬರ್ಪ ಬಿಳಿಯ ಕರ್ಬಿನ ನಡೆವನದ ಪುಣ್ಯಫಲವ್ರಾತದ ಸುರತರುವಿನಾರವೆಗಳ ಸುರಭಿಗಳೊಪ್ಪುಾರದ ಮುಂದಣ ವೃಷಭಧ್ವಜದ ದರ್ಪಣದ ತಳಿರ್ಗಳ ಕಳಶಂಗಳಂ ಪಿಡಿದು ಮೆಲ್ಲಮೆಲ್ಲನಡಿಯಿಡುವರುಂಧತಿಯನಸೂಯಾದೇವಿಯ ಗಾಯತ್ರಿಸಾವಿತ್ರಿ ಸರಸ್ವತಿ ಶಚಿದೇವಿ ಲಕ್ಷ್ಮಿ ರೋಹಿಣಿಯರಾದಿಯಾದ ಪರಮಪತಿವ್ರತಾವಿತಾನದ ಪೊಡೆವ ಭೇರಿಯ ಸೂಳಯ್ಪನಿಸ್ಸಾಳದ ಪೂರಯಿಪ ಶಂಖದ ಬಿರುದೆತ್ತಿ ಕರೆವ ಕಹಳೆಗಳ ಮೊಳಗುವ ಮದ್ದಳೆಯ ಸುಗತಿಯನುಗುಳ್ವ ಕರಡೆಗಳ ಮೇಳಯ್ಪ ಕಂಸಾಳದ ಗರ್ಗರಿಪ ಗಿರ್ಗಟಂಗಳ ಪೊಣ್ಮುವ ತಾಳದ ಉಣ್ಮುವ ಗಾನದ ಭೃಂಗಿಯ ನರ್ತನದ ಭೋರೆಂಬ ರವದ ಸಮಸ್ತವಸ್ತುವಿಸ್ತರದ ನಡುವೆ ಧವಳಾತಪತ್ರದ ಭುವನಾಶ್ರಯಂ ಜಡೆಮುಡಿಯ ಬೆಡಂಗಂ ಮಕುಟದ ಮನೋಹರಂ ಶಶಿಕಳೆಯ ಸೊಬಗಂ ಬಾಸಿಗದ ಭಾಗ್ಯನಿಧಿ ಕರ್ಣಾವತಂಸದ ಕಮನೀಯಂ ಕಪೋಳದ ವಿಪುಳಂ ಭ್ರೂಲತೆಯ ಭಾವಕಂ ಅಲರ್ಗಣ್ಣಳ ಸುಲಲಿತಂ ಶ್ರೀವದನದ ಪಾವನಂ ಭೂರಿಭುಜದ ಮಾರಾರಿ ನಳಿತೋಳ್ಗಳ ನಾಯಕಂ ಕರತಳದ ಕಾಮಧೇನು ಕಂಕಣದ ಕಳಾವಿದಂ ಹಸ್ತಪವಿತ್ರದ ಸುಲಭಂ ಮಾದುಫಲದ ಮಹಾನಿಧಿ ಹಾರದ ಹರ್ಷಮಯಂ ಪದಕದ ಸದಮಳಂ ಜಾಹ್ನವಿಸನ್ಮಕುಟಂ ಜನ್ನದಾರದ ಪನ್ನಗಭೂಷಣಂ ಪವಿತ್ರದ ಪರಮಾತ್ಮಂ ಧವಳೊತ್ತರೀಯದ ವಿರಳಂ ಪರಿವಸನದ ಪುಣ್ಯಾಧಿಕಂ ನಂದಿವಾಹನದ ನವೀನಂ ಭಸಿತದ ಹೊಸಮದುವಣಿಗನೆ

ಕೆಲಬಲದಲ್ಲಿ ನಡೆದುವು, ದಿಕ್ಕರಿಗಳ ಮೇಲೆ ದೇವಾಂಗ ವಸ್ತ್ರಗಳು ; ಪಟ್ಟೆವಸ್ತ್ರಗಳು ಸಾದಿನ ಪೆಟ್ಟಿಗೆಗಳು, ಮೃಗಮದ ತುಂಬಿದ ಕೊಂಬುಗಳು, ಕರ್ಪೂರದ ಭರಣಿಗಳು, ಪನ್ನೀರ ಭಾಜನಗಳು, ಕಸ್ತೂರಿಯ ಭಾಂಡಗಳು, ಶ್ರೀಗಂಧದ ಬಟ್ಟಲುಗಳು, ರತ್ನಾಭರಣರಾಶಿಗಳು, ಚಿಂತಾಮಣಿ ಮುಡಿಪುಗಳು, ಪರುಷದ ಗಣಿಗಳನ್ನು ಹಿಡಿದು ಬರುತ್ತಿರುವವರು, ಬಿಳಿಯ ಕಬ್ಬು, ನಡೆವನದ ಫಲಸಮೂಹ, ಸುರತರು, ಸುರಭಿ (ದೇವಧೇನು) ಸಮೂಹದ ಮುಂದೆ ವೃಷಭಧ್ವಜ ದರ್ಪಣ ತಳಿರು ಕಲಶಗಳ ಹಿಡಿದು ಮೆಲ್ಲಮೆಲ್ಲನೆ ಅಡಿಯಿಡುತ್ತಿರುವ ಅರುಂಧತಿ, ಅನಸೂಯೆ, ಗಾಯತ್ರಿ, ಸಾವಿತ್ರಿ, ಸರಸ್ವತಿ, ಲಕ್ಷ್ಮಿ, ಶಚಿ, ರೋಹಿಣಿಯರೇ ಮುಂತಾದ ಪರಮ ಪತಿವ್ರತೆಯರು. ಮುಂದೆ ಭೇರಿ, ನಿಸ್ಸಾಳ, ಶಂಖ, ಕಹಳೆ, ಮದ್ದಳೆ ಕರಡೆ, ಕಂಸಾಳ, ಗಿರ್ಗಿಟ, ತಾಳ, ಗಾನ, ಭೃಂಗಿ ನರ್ತನ, ಮುಂತಾದ ವಾದ್ಯಗಳ ಮೊಳಗು ; ಅದರ ನಡುವೆ ಶ್ವೇತಚ್ಛತ್ರ ಹಿಡಿದಿರುವ, ಜಡೆಮುಡಿಯ ಬೆಡಗಿನ ಮಕುಟದ ಮನೋಹರ, ಶಶಿಕಳೆಯ ಸೊಬಗನಾದ ಪರಶಿವನು ಬಾಸಿಂಗ ಧರಿಸಿ ಕರ್ಣಾವತಂಸಸೂಡಿ, ಮಂಗಳಕರವಾದ ಅಂಗಾಂಗಗಳಿಂದ ರಾರಾಜಿಸುವವನಾಗಿ, ಹೊಸ ಮದವಣಿಗನಾಗಿ

ನಿಪ ಆ ಪಂಪಾವಿರೂಪಾಕ್ಷಂ ತನ್ನ ಕಾರುಣ್ಯಕಟಾಕ್ಷಕ್ಕೆ ಕೆಯ್ಮುಗಿವ ನಾಲ್ಕುಂ ದೆಸೆಯ ದೇವಕುಲಕ್ಕೆ ಕರುಣಿಸುತ್ತುಂ ಪ್ರಸನ್ನಮುಖಿಂ ಸುಖಾವರಣಂ ಶರ್ವಂ ಸರ್ವಸಂಭ್ರಮದಿಂ ಬರೆ ನಡೆತಂದಿದಿರ್ಗೊಳ್ವ ಸುವಾಸಿನಿಯರೊಯ್ಯಾರದಿಂ ನಿವಾಳಿಗಳಂ ಪಿಡಿದು ನಿವಾಳಿಸಲ್ ಮತ್ತಮಲ್ಲಿಂ ಮುಂದೆ ಕುಲಾಂಗನೆಯರ್ ಸೂಸುವ ಮುತ್ತಿನ ಸೇಸೆಗಳನಾದರದೊಳಾನುತ್ತುಂ ನಂದೀಶ್ವರನ ಬೆನ್ನಿಂದವನಿತಳಕ್ಕವತರಿಸುತ್ತುಂ ಪ್ರಮಥಗಣಂಗಳ್ ಕೆಯ್ಮೆಯಿಂ ಕೆಯ್ಗುಡೆ ಮಹಾವಿವಾಹಮಂಟಪಮಂ ಪುಗುತರ್ಪಾಗಳ್ ಕಂಡು ಹರ್ಷಮನೆಲೆಗೊಂಡು ಮೆಯ್ಯಿಕ್ಕಿನಿಂದ ಮೇನಾದೇವಿಗಂ ಮಾವನಪ್ಪ ಗಿರಿರಾಜಂಗಂ ಕಾರುಣ್ಯಮಸೀಯುತ್ತುಂ ಸಿಂಹವಿಷ್ಟರವನವಷ್ಟಂಭಿಸಿ ಸಮಯೋಚಿತಾನ್ನಮನುಂಡು ಮಹಾವಿಭವಮಂ ಕಂಡು ಮಧುಪರ್ಕಮಂ ಕೆಯ್ಕೊಂಡು,

ಕಂ॥ ಇರೆ ಹರಿಯಜರನುಮಿಸುತುಂ
ಪರಮಶುಭಾಕರ ಮುಹೂರ್ತಮೆಲೆಲೆ ಸಮೀಪಂ ।
ಕರುಣಿಪುದೆನೆ ಮಂಗಳವಾ
ಗ್ವಿರಚನೆಯಂ ಕೇಳ್ದು ಛೋಂಕನೆಳ್ದಂ ರುದ್ರಂ ॥ ೮೦

ಅಮಮ ವರಮೂರ್ತಿ ನವವಿ
ಭ್ರಮ ವಿಸ್ತರನಮೃತ ಶೀಲನಾನಂದಮಯಂ ।
ಮಮಕರ್ತಂ ಮಮಭರ್ತಂ
ಸುಮುಹೂರ್ತಂ ಪತ್ತೆಸಾರ್ವವೋಲ್ ನಡೆತಂದಂ ॥ ೮೦

ವ॥ ಅಂತು ನಡೆತಂದು ವಿವಾಹಗೇಹದೊಳಪೊಕ್ಕು,

ಕಂ॥ ಮುತ್ತೈದೆಯರೊತ್ತೊತ್ತೆಯ
ನೊತ್ತರಿಸುತೆ ಬೆಳಗಿನೊಳಗೆ ಹೊಸಬೆಳಗಂ ।

ಪಂಪಾವಿರೂಪಾಕ್ಷನು ತನ್ನ ಕಾರುಣ್ಯಕಟಾಕ್ಷಕ್ಕೆ ಕೈಮುಗಿವ ನಾಲ್ಕು ಕಡೆಯ ದೇವಕುಲವನ್ನು ಕರುಣಿಸುತ್ತಾ ಪ್ರಸನ್ನವದನನಾಗಿ ಸಂಭ್ರಮದಿಂದ ಆಗಮಿಸಿದನು; ಅಲ್ಲಿಗೆ ಮುತ್ತೈದೆಯರು ಎದುರ್ಗೊಂಡು ನಿವಾಳಿ (ದೃಷ್ಟಿ) ತೆಗೆದರು, ಮುಂದೆ ಕುಲಾಂಗನೆಯರು ಮುತ್ತಿನ ಸೇಸೆಗಳನ್ನು ಸೂಸಿದರು, ಪರಶಿವನು ನಂದಿಯಿಂದ ಕೆಳಗಿಳಿದನು. ಪ್ರಮಥಗಣಂಗಳು ಕೈನೀಡಿದರು, ಶಿವ ವಿವಾಹಮಂಟಪವನ್ನು ಪ್ರವೇಶಿಸುವಾಗ ಮೇನಾದೇವಿ ಮತ್ತು ಮಾವ ಹಿಮವಂತರು ಅಡ್ಡಬಿದ್ದರು, ಅವರನ್ನು ಕರುಣಿಸಿ, ಸಿಂಹವಿಷ್ಟವನ್ನು ಅಲಂಕರಿಸಿದ ಸ್ವಾಮಿಯು ಸಮಯೋಚಿತಾನ್ನವನ್ನುಂಡು, ಮಧುಪರ್ಕವನ್ನು ಸ್ವೀಕರಿಸಿದನು. ೮೦. ಮುಹೂರ್ತವು ಸಮೀಪಿಸಿತೆಂದು ಹರಿಯಜರು ಸೂಚಿಸಿದರು. ಇದು ಪರಮ ಶುಭಕರ ಮಂಗಳ ಮುಹೂರ್ತ ಎಂಬ ಮಾತು ಕೇಳಿದ ಪಂಪಾವಿರೂಪಾಕ್ಷನು ಆಸನದಿಂದ ಎದ್ದನು. ೮೧. ವರಮೂರ್ತಿಯೂ ಅಮೃತಶೀಲನೂ ಆನಂದಮಯನೂ

ಸುತ್ತುಂ ಸವಿನೋಟಮ ನೀ
ಯುತ್ತುಂ ಜವನಿಕೆಯ ನೆಲೆಗೆ ಶಿವನೈತಂದಂ ॥ ೮೨

ವ॥ ಆ ಸಮಯದೊಳ್ ಪಾರ್ವತೀದೇವಿ ನಿಟ್ಟೆಯ್ದಿ ಮೆಟ್ಟಕ್ಕಿಯಂ ಮೆಟ್ಟಿ ತೆಱೆಯ ಮಱೆಯಂ ಮಱೆಗೊಂಡು ನಿಂದಿರ್ಪಲ್ಲಿ,

ಕಂ॥ ನಲ್ಲರ ನಡುವುಪಚಾರಂ
ಸಲ್ಲಲಿತೇಕ್ಷಣದ ನಡುವೆ ಪಕ್ಷ್ಮಪುಟಂ ಸಂ
ಫುಲ್ಲರದಮಧ್ಯದೊಳ್ ಮಿಗೆ
ಸೊಲ್ಲಿರ್ಪಂತಿರ್ದುದಲ್ಲಿ ತೆಱೆ ಪರನಿದಿರೊಳ್ ॥ ೮೩

ವ॥ ಅಂತಿರ್ಪ ಜವನಿಕೆಯನತಿಸ್ನೇಹದಿಂ ನೋಡಿ,

ಕಂ॥ ಅವಿಭೇದಪ್ರಕೃತಿಗಳೆನಿ
ಪವಯವದಿಂದೊಪ್ಪುವರ್ಧನಾರೀಶ್ವರರೊಳ್ ।
ಜವನಿಕೆ ನಡುವೊಡ್ಡಿತು ಕಾ
ಲವಶದಿನಾವಂಗಮಾವುದಾಗದು ಧರೆಯೊಳ್ ॥ ೮೪

ಬೆಳಗಿನ ಬೀಜಾವಳಿಯೊ
ಬ್ಬುಳಿಯೋ ನಕ್ಷತ್ರರಾಶಿಯೋ ನವಪುಣ್ಯಂ ।
ಗಳ ಪುದುವೋ ಚಂದ್ರಿಕಾತಂ
ಡುಳವೋ ಎನೆ ತೊಳಗಿ ತೋರ್ಪ ಮೆಟ್ಟಕ್ಕಿಗಳಂ ॥ ೮೫

ಆದ ಪರಮೇಶ್ವರನು ಸುಮುಹೂರ್ತದಲ್ಲಿ ನಡೆತಂದನು. ೮೨. ಮಂಟಪದಲ್ಲಿ ಮುತ್ತೈದೆಯರು ಕಿಕ್ಕಿರಿದು ನೆರೆದಿದ್ದಾರೆ. ಅವರನ್ನು ಒತ್ತರಿಸಿಕೊಂಡು, ಎಲ್ಲರ ಕಣ್ಣಿನ ಬೆಳಗು ಸುತ್ತಲೂ ಆವರಿಸಿದೆ, ಆ ಬೆಳಗಿನಲ್ಲಿ ಶಿವಪ್ರಕಾಶವು ಸವಿನೋಟವನ್ನು ಒದಗಿಸಿರುವಾಗ ಶಿವನು ಜವನಿಕೆ (ತೆರೆ)ಯ ಹತ್ತಿರ ಬಂದನು. ವ॥ ಅಷ್ಟು ಹೊತ್ತಿಗೆ ಸರಿಯಾಗಿ ಗಿರಿಜೆ ಮೆಟ್ಟಕ್ಕಿಯನ್ನು ಮೆಟ್ಟಿ ತೆರೆಯ ಮರೆಯಲ್ಲಿ ನಿಂತಿದ್ದಾಳೆ. ೮೩. ಈ ನೂತನ ವಧೂವರರ ಮಧ್ಯದಲ್ಲಿ ಇದ್ದ ತೆರೆಯು ನಲ್ಲರ ನಡುವೆ ಉಪಚಾರವೂ, ಲಲಿತನೋಟಗಳ ನಡುವೆ ರೆಪ್ಪೆಗಳೂ, ಪಕ್ಕವಾದ್ಯಗಳ ಮಧ್ಯದಲ್ಲಿ ಹಾಡುವ ಸೊಲ್ಲೂ ಇರುವಂತೆ ಇತ್ತು. ೮೪. ಶಿವಶಿವೆಯರು ಅವಿಭೇದಪ್ರಕೃತಿಗಳು, ಅವರಿಗೆ ಎಂದಿಗೂ ವಿಭಾಗವೇ ಇಲ್ಲ! ಅಂಥ ಅರ್ಧನಾರೀಶ್ವರರಿಗೂ ಜವನಿಕೆ ಅಡ್ಡಬಂತು ಎಂದಮೇಲೆ ಕಾಲವಶದಿಂದ ಲೋಕದಲ್ಲಿ ಏನು ತಾನೆ ಆಗಬಾರದು! ಎಂಬ ಮಾತು ನಿಜವಾಗುತ್ತದೆ. ೮೫. ಮಂಟಪದಲ್ಲಿ ವಧೂವರರು ಕಾಲಿಟ್ಟು ನಿಲ್ಲುವ ಮೆಟ್ಟಕ್ಕಿಗಳು; ಅವು ಬೆಳಗಿನ ಬೀಜಾವಳಿ ಒಟ್ಟಿಗೆ ಸೇರಿದೆಯೊ, ನಕ್ಷತ್ರರಾಶಿಯೊ, ನವಪುಣ್ಯದ ಪುದುವೊ, ಚಂದ್ರಿಕೆಯ ತಂಡುಲವೋ

ಕಂ॥ ಕಾಂತಿಮಯಂ ಶಶಿಚೂಡಂ
ಶಾಂತಂ ನವಭೋಗಿಯೆನಿಪ ಲೀಲಾವಾಸಂ।
ಸಂತಂ ಸುರುಚಿರಹರ್ಷಮ
ಯಂ ತಡೆಯದೆ ಮೆಟ್ಟಿ ನಿಂದ ಸಮಸಂತರದೊಳ್ ॥ ೮೬

ಹರಿಯುಂ ಸರಸಿಜಭವನುಂ
ಪುರುಹೂತನುಮೆಸೆವ ಋಷಿಗಳುಂ ಗಣಕುಲಮುಂ।
ಗಿರಿಜೇಶನ ಗಿರಿಜೆಯ ಭಾ
ಸುರಪರಿಧಾನದ ಸಮಿಪದೊಳ್ ನಿಂದಾಗಳ್ ॥ ೮೭

ಚಂ॥ ಕಳಕಳಮಂ ನಿವಾರಿಸುತುಮಾಯತಮೇ ಎನಲಾಯತಂ ಲಸದ್
ಗಳಬಳಮಂ ವಿವರ್ಜಿಸುತುಮಾಯತಮೇ ಎನಲಾಯತಂ ನಿರಾ।
ಕುಳಿತಮನಂ ಬೃಹಸ್ಪತಿ ಸಮಾಯತಮೇ ಎನಲಾಯತಂ ಮನಂ
ಗೊಳಿಪ ಮಹಾಮುಹೂರ್ತದೊಳಗಾಯತಮೇ ಎನೆ ತಪ್ಪದಾಯತಂ ॥ ೮೮

ಕಂ॥ ಅಮರಗುರು ಸಕಳವೇದಾ
ಗಮಕೋವಿದನೊಲ್ದು ಭಕ್ತಿಯಿಂದಂ ಪುಣ್ಯಾ।
ಹಮೆನುತ್ತುಮಿತ್ತ ರಾಜತ್
ಸುಮುಹೂರ್ತಂ ಬಂದು ತೆಱೆಯನೋಸರಿಸಲೊಡಂ ॥ ೮೯

ಕರಡೆಗಳ ರವಂ ನಿಸ್ಸಾ
ಳರವಂ ಭೇರೀರವಂ ಮೃದಂಗರವಂ ದೇ।

ಎಂಬಂತಿದ್ದವು. ೮೬. ಕಾಂತಿಮಯನೂ ಶಶಿಚೂಡನೂ ಶಾಂತನೂ ನವಭೋಗಿಯೂ ಲೀಲಾವಿಲಾಸನೂ ನಿತ್ಯಾನಂದಸ್ವರೂಪನೂ ಆದ ಪರಶಿವನು ಮೆಟ್ಟಕ್ಕಿಯನ್ನು ಮೆಟ್ಟಿ ನಿಂತುಕೊಂಡನು. ಅನಂತರ—೮೭. ಹರಿ, ಅಜ, ದೇವೇಂದ್ರ, ಋಷಿಗಳು, ಗಣಕುಲ ಇವರೆಲ್ಲ ವಧೂವರರ ಸುತ್ತಲೂ ತನ್ಮಯರಾಗಿ ಇರುವಾಗ—೮೮. ಮದುವೆ ಮಂಟಪದಲ್ಲಿ ವೈದಿಕ ಸ್ವಸ್ತಿವಾಚನ ಕೇಳತೊಡಗಿತು. ಹಿಮವಂತನು ಸಭೆಯ ಅನುಮತಿ ಪಡೆಯಲು—ಕಲಕಲವನ್ನು ನಿವಾರಿಸಿ 'ಆಯತವೇ' ಎನ್ನಲು, ಸಭೆ 'ಆಯತ' ಎಂದಿತು; ಗಲಭೆಯನ್ನು ತಡೆದು, 'ಆಯತ' ಎನ್ನಲು ಸಭೆ 'ಆಯತ' ಎಂದಿತು; ದೇವಗುರು ಬೃಹಸ್ಪತಿಯು 'ಸಾವಧಾನಂ' 'ಆಯತ' ಎನ್ನಲು, 'ಸಾವಧಾನಂ' 'ಸಮಾಯತಂ' ಎಂದು ಸಭೆ ಹಾರೈಸುತ್ತಿತ್ತು. ೮೯. ದೇವಗುರುವು ಸಕಲ ವೇದಾಗಮಕೋವಿದನು; ಆತ ಭಕ್ತಿಯಿಂದ ಪುಣ್ಯಾಹ ಎಂದೊಡನೆಯೇ ಸುಮುಹೂರ್ತವು ಬಂದು ತೆರೆ ಸರಿಯಿತು. ೯೦. ಅದೇ ಸಮಯಕ್ಕೆ ಕರಡೆ, ನಿಸ್ಸಾಳ, ಭೇರಿ, ಮೃದಂಗಗಳು ಮೊಳಗಿದವು, ಪುಷ್ಪವೃಷ್ಟಿ

ವರ ಹೂಮಳೆಗಳ ಭೋರೆಂ
ಬ ರವಂ ಮಂಗಳರವಂಗಳುಣ್ಮೆದುವಾಗಳ್ ॥ ೯೦

ಕಂ॥ ಆನಿರೆ ಮತ್ತೋರ್ವಳ್ ಗಡ
ತಾನಿರ್ಪಳ್ ಜಡೆಯೊಳೆನುತೆ ಮುಳಿದಿಡುವಂತಾ ।
ಮಾನಿನಿ ಜೀರಿಗೆ ಬೆಲ್ಲದೊ
ಳಾನುತೆ ಶಿವನುತ್ತಮಾಂಗಮಂ ಪದೆದಿಟ್ಟಳ್ ॥ ೯೧

ಮೃಡನಾಗಳ್ ಗಿರಿಜೆಯ ಚೆ
ಲ್ವಿಡಿದ ಮೊಗಂಗಂಡು ಸಾತ್ತ್ವಿಕಂ ಕೆಯ್ಕೊಂಡೊ ।
ಲ್ದಿಡುವಾ ಜೀರಿಗೆ ಬೆಲ್ಲಂ
ಸಡಿಲ್ದು ಕಂಪನದೆ ಬಿಳ್ದುವಗಜೆಯ ಪದದೊಳ್ ॥ ೯೨

ವ॥ ಅನಂತರದಲ್ಲಿ,

ಕಂ॥ ಅಱಸುತ್ತಿರೆ ಪಲಕಾಲದೊ
ಳುಱೆ ನಿನ್ನನೆನುತ್ತೆ ಶಿವನ ಮಕುಟೇಂದುಗೆ ತಾಂ ।
ತುಱುಗಿದ ತಾರಗೆಯೆಂಬಾ
ತೆಱದಿಂ ತಂಡುಲವನಗಜೆ ಸುರಿದಳ್ ಶಿರದೊಳ್ ॥ ೯೩

ವ॥ ಆಗಳ್,

ಯಾಯಿತು, ಮಂಗಳಗೀತೆಗಳು ಉಣ್ಮಿದವು. ೯೧. ಜೀರಿಗೆ ಬೆಲ್ಲವನ್ನು ಅಗಜೆ ಶಿವನ ಮಂಡೆಯ ಮೇಲೆ ಎರಚಬೇಕು. ಆಗ ಅವಳಿಗೆ ಶಿವನ ಜಡೆಯಲ್ಲಿದ್ದ ಗಂಗೆ ಕಂಡಳು. ಆಗ ಪಾರ್ವತಿ ನಾನಿರುವಾಗ ಜಡೆಯಲ್ಲಿ ಮತ್ತೊಬ್ಬೀರ್ವಳಿನಳಾರು ಎಂದು ಮುನಿದು ಇಟ್ಟಳೋ ಎಂಬಂತೆ ನವವಧು ಜೀರಿಗೆ–ಬೆಲ್ಲವನ್ನು ತಲೆಯ ಮೇಲಿಟ್ಟಳು. ೯೨. ಶಿವನೂ ಜೀರಿಗೆ ಬೆಲ್ಲವನ್ನು ಅಗಜೆಯ ಮಂಡೆಯ ಮೇಲೆ ಇಡಬೇಕು. ಆತ ಅವಳ ಮುಖವನ್ನು ಕಂಡೊಡನೆಯೇ ಆತನಿಗೆ ಸಾತ್ತ್ವಿಕಭಾವ ಮೂಡಿತು. ಕೈ ನಡುಗಿತು, ಒಲಿದು ಮಂಡೆಯ ಮೇಲೆ ಆತ ಇಟ್ಟ ಜೀರಿಗೆ ಬೆಲ್ಲ ಅಗಜೆಯ ಪಾದಗಳ ಮೇಲೆ ಬಿತ್ತು. ೯೩. ಜೀರಿಗೆ ಬೆಲ್ಲ ವಿಧಿಯಾದ ಮೇಲೆ ವಧೂವರರು ಅಂಜಲಿಯಿಂದ ತಂಡುಲವನ್ನೆತ್ತಿ ಪರಸ್ಪರ ಮಂಡೆಯ ಮೇಲೆ ಎರಚಬೇಕು. ಪಾರ್ವತಿ ಶಿವನ ಮಂಡೆಯ ಮೇಲೆ ಎರಚಿದ ತಂಡುಲಾಂಜಲಿ 'ನಿನ್ನನ್ನು ಪಲಕಾಲ ಅರಸಿದೆ' ಎಂದು ಆಕೆ ಶಿವನ ಮಕುಟವೆಂಬ

ಕಂ॥ ಪರಮತಪೋನಿಧಿಯೆನಿಸಿದ
ಗಿರಿಜೆಗೆ ಪುಣ್ಯಾಂಬುವಿಂದಲಭಿಷೇಕಮನೊ।
ಪ್ಪಿರೆ ಮಾಡುವ ತೆಱದಿಂದಂ
ಗಿರಿಶಂ ನವತಂಡುಲಂಗಳಂ ತವೆ ಸುರಿದಂ ॥ ೯೪

ವ॥ ಆ ಸಮಯದೊಳ್,

ನಲಿನಲಿದು ಬಂದು ಗಿರಿಪತಿ
ಯೊಲವಿಂದಂ ಗಿರಿಜೆಸಹಿತವುಂ ನಾವೆಲ್ಲಮ್ಮಂ।
ನೆಲೆದೊಳ್ತಿರ್ ಬಳಿದೊಳ್ತಿರ್
ಸಲೆದೊಳ್ತಿರ್ ನಿಮಗೆನುತ್ತೆ ಧಾರೆಯನೆರೆದಂ ॥ ೯೫

ಗಿರಿಜಾತೆಯ ಸಕಲಗುಣಂ
ಹರ ನಿಮ್ಮಂ ಸುತ್ತುಗೀ ತೆಱದೊಳೆಂಬಂತೊ।
ಪ್ಪಿರೆ ಸುತ್ತಿದರತಿಮೃದುತರ
ಸುರುಚಿರ ನವಕಾಂತಿಯೆಸೆವ ಗುಣಮಂ ಗುಣಮಂ ॥ ೯೬

ಅಯ್ದುಂ ವದನನ ಕಾಂತೆಯ
ನೆಯ್ದಿ ಪತಿವ್ರತೆಯರಧಿಕತರಮುದದಿಂ ಮು।
ತ್ತಯ್ದೆಯೆ ನಿಟ್ಟಯ್ದೆಯೆ ನೆಱೆ
ಯಯ್ದೆಯೆ ಸಲೆಯಯ್ದೆಯೆಂದು ಪರಸುತ್ತಿರ್ದರ್ ॥ ೯೭

ವ॥ ಇಂತು,ವಿವಾಹವಿಭ್ರಮಮಂ ಕೆಯ್ಕೊಂಡು ಗಿರಿಜೆಯ ಕರತಳಮಂ ಪಿಡಿದು ಸೋಮಂ ಸೋಮಧರಂ ವ್ಯೋಮಕೇಶಿ ಹೋಮಸ್ಥಳಕ್ಕೆ ನಡೆತಂದಿಕ್ಕಿದ ಹಸೆಯಮೇಲೆ ಪಶುಪತಿ ಕುಳ್ಳಿರೆ

ಇಂದುಗೆ ತಾರೆಗಳನ್ನು ಮುಡಿಸಿದಳೊ ಎಂಬಂತೆ ಇತ್ತು. ೯೪. ಪರಮ ತಪೋನಿಧಿಯೆನಿಸಿದ ಗಿರಿಜೆಗೆ ಪುಣ್ಯತೀರ್ಥದಿಂದ ಅಭಿಷೇಕಮಾಡುವನೋ ಎಂಬಂತೆ ಗಿರೀಶನು ವಧುವಿನ ಮಂಡೆಯ ಮೇಲೆ ಸುರಿದ ತಂಡುಲಗಳು ಕಂಡುವು. ೯೫. ಆಗ ಹಿಮವಂತ ಮೇನೆಯರು ಒಲವಿಂದ ಬಂದು ಗಿರಿಜೆ ಸಹಿತವಾಗಿ ನಾವೆಲ್ಲರೂ ನಿಮಗೆ ನೆಲೆದೊಳ್ತಿರ್ ಬಳಿದೊಳ್ತಿರ್ ಸಲೆದೊಳ್ತಿರ್ ಎಂದರೆ ಎಂದೆಂದಿಗೂ ನಿಮ್ಮ ಸೇವಾತತ್ಪರರು ಎಂದು ಧಾರೆಯೆರೆದರು. ೯೬. ಮದುವೆಯ ಸಮಯದಲ್ಲಿ ಸುತ್ತಿದ ನೂಲು (ಗುಣ) ಗಿರಿಜೆಯ ಸಕಲ ಗುಣಗಳೂ ಹೇ ಹರ! ನಿನ್ನನ್ನು ಹೀಗೆ ಸುತ್ತುವರಿದಿರುವವು ಎಂಬಂತೆ ಇತ್ತು! ೯೭. ಪಂಚಮುಖಗಳ ಪರಶಿವನ ಕಾಂತೆಯನ್ನು ಹೊಂದಿ ಪತಿವ್ರತೆಯರು ಅಧಿಕತರದಿಂದ ಮುತ್ತೈದೆಯರಾಗುತ್ತಾರೆ ಎಂದು ಮುತ್ತೈದೆಯರು ಹರಸಿದರು. ವ॥ ಹೀಗೆ ವಿವಾಹ ಸಂಭ್ರಮವನ್ನು ಕೈಕೊಂಡು ಸೋಮಧರನು ಗಿರಿಜೆಯ ಪಾಣಿಗ್ರಹಣ ಮಾಡಿ ಹೋಮಸ್ಥಳಕ್ಕೆ ಬಂದು ಹಸೆಯ ಮೇಲೆ ಕುಳಿತನು. ಪುರೋಹಿತ ಪರಮೇಷ್ಠಿ

ಮಂತ್ರತಂತ್ರಯಂತ್ರಸಿದ್ಧನಪ್ಪ ಪರಮೇಷ್ಠಿ ಹರನನುಜ್ಞೆಯಿಂ ಸ್ಥಂಡಿಲಮನಲಂಕರಿಸಿ ಮೆಲ್ಲ ನುಲ್ಲೇಖನಂಗೆಯ್ದಗ್ನಿಯಂ ಪ್ರತಿಷ್ಠೆಯಂ ಮಾಡಿ ಬ್ರಹ್ಮರ್ಷಿ ದೇವರ್ಷಿ ವಿಪ್ರೋತ್ತಮರ ನನುಮತದಿಂ ಪ್ರಾಣಾಯಾಮಂ ಮಂತ್ರಿಸಿ ಸಮಿತ್‌ಪರಿಸ್ತರಣಂ ಪಾತ್ರಾಸಾಧನಂ ಆಜ್ಯಸಂಸ್ಕಾರಂ ಸ್ರುಕ್‌ಸ್ರುವಸಮ್ಮಾರ್ಜನಂ ದೂರ್ವಾಯವಪಸ್ತ್ರಬಂಧನಾಗಿ ಸತ್ಕ್ರಿಯೆಗಳಂ ಹೋಮಮಂ ಮಾಡುತ್ತಿರ್ದು,

ಕಂ॥ ಭಾವಿಸಿ ಮಂತ್ರಾವಳಿಯಿಂ
ದೋವುತೆ ಹುತವಹನೊಳೆಸೆವ ಲಾಜಾಹುತಿಯಂ ।
ತೀವಿದನಂತರಮಗಸುತೆ
ದೇವನ ಬಲದಿಂದೆಡಕ್ಕೆ ಬಂದಳನೂನಂ ॥ ೯೮

ವ॥ ಅಂತು ಬರೆ ಪೂರ್ಣಾಹುತಿಯಂ ಕೊಟ್ಟು ಹೋಮಸಮಾಪ್ತಿಯೊಳಾಪ್ತನಪ್ಪ ಕಮಳಜಂ ಸಪ್ತಪದಿಯಂ ಕಟ್ಟಳ್ಕಱಿಂ ಮೆಟ್ಟಿಸಿ ತದನಂತರಂ ದೇವದಂಪತಿಗಳಂ ಸಿಂಹಾಸನದೊಳ ಲಂಕರಿಸೆ ಸಖಿನಿಪ ನಿಮಿತ್ತಂ ಕುಬೇರಂಗೆ ನಿರೂಪಮಂ ಕೊಟ್ಟು ನಾರದಾದಿ ಋಷಿಗಳಂ ಕಳಿಪೆ ದಿಟ್ಟಮೂಱಿರಸಂ ನಾರಾಯಣಪ್ರಿಯಂ ಕಾಮಾರಿಯಾರೋಗಣೆಗೆ ನಡೆತಂದೆಡೆಮಾಡಿದೆಡೆಯೊಳಿಕ್ಕಿ ದುರ್ಚಿತಾಸನಮನವಷ್ಟಂಭಿಸೆ ನಂದೀಶ್ವರವೀರಭದ್ರಾದಿಯಾದ ಗಣಂಗಳ್ ಹರಿವಿರಿಂಚಿ ಪುರಂದ ರಾದಿ ಸಮಸ್ತಸುರ ಸಮೂಹಂ ಪಂಕ್ತಿಯೊಳ್ ಕುಳ್ಳಿರೆ ಪಾರ್ವತಿಯೊಡನಮೃತಾನ್ನಮನಾ ರೋಗಿಸಿ ಕೆಯ್ಪುಟ್ಟಿಗೊಂಡು ತಾಂಬೂಲಮನಾದರಿಸುತ್ತುಮಂತಿಂತು ಕಂತುಮದಮರ್ದನಂ ನತಾತೇಪಂ ಚತುರ್ಥಿಯಂ ಕಳೆದು ಸಾಕಾರನಿಧಿಯೋಕುಳಿಯಾಡಿ ಗಿರಿರಾಜಂಗೆ ಕರುಣಿಸುತ್ತುಂ

(ಬ್ರಹ್ಮ)ಯು ಹರನ ಅನುಜ್ಞೆಯಂತೆ ಸ್ಥಂಡಿಲನನ್ನು ಅಲಂಕರಿಸಿ ಅಗ್ನಿಪ್ರತಿಷ್ಠೆ ಮಾಡಿ ಬ್ರಹ್ಮರ್ಷಿ ದೇವರ್ಷಿಗಳ ಅನುಮತದಿಂದ ಪ್ರಾಣಾಯಾಮ ಸಮಿತ್ ಪರಿಸ್ತರಣ ಪಾತ್ರಾ ಸಾಧನ ಆಜ್ಯಸಂಸ್ಕಾರಾದಿಗಳನ್ನು ಹೋಮಮಾಡಿ, ೯೮. ಶಿವನ ಬಲಭಾಗದಲ್ಲಿ ಕುಳಿತ ಪಾರ್ವತಿ ಮಂತ್ರೋಕ್ತವಾಗಿ ಅಗ್ನಿಯಲ್ಲಿ ಲಾಜಾಹುತಿಗಳಿಂದ ಹೋಮ ಮಾಡಿದಮೇಲೆ ಅಗಸುತೆಯು ಶಿವನ ಬಲದಿಂದ ಎಡಕ್ಕೆ ಬಂದಳು. ವ॥ ಅಗಜೆಯು ಬಲದಿಂದ ಎಡಕ್ಕೆ ಬಂದಮೇಲೆ ಶಿವನು ಪೂರ್ಣಾಹುತಿಯನ್ನು ಕೊಟ್ಟು ಹೋಮವನ್ನು ಸಮಾಪ್ತಿಗೊಳಿಸಿ, ಸಪ್ತಪದಿ ಮುಗಿಸಲಾಯಿತು; ತರುವಾಯ ದೇವದಂಪತಿಗಳನ್ನು ಸಿಂಹಾಸನದಲ್ಲಿ ಅಲಂ ಕರಿಸಿದ ಮೇಲೆ ಕುಬೇರನ ಮೂಲಕ ನಾರದಾದಿ ಋಷಿಗಳನ್ನು ಬರಮಾಡಿಕೊಂಡು ಆರೋಗಣೆಗೆ ಏರ್ಪಡಿಸಲಾಯಿತು. ನಾರಾಯಣಪ್ರಿಯನಾದ ಮುಕ್ಕಣ್ಣನು ಉಚಿತಾಸನ ದಲ್ಲಿ ಮಂಡಿಸಿದನು. ನಂದೀಶ್ವರ ವೀರಭದ್ರಾದಿಗಳು, ಹರಿವಿರಿಂಚಿ ಪುರಂದರಾದಿ ಸಮಸ್ತ ಸುರಸಮೂಹವು ಪಂಕ್ತಿಯಲ್ಲಿ ಕ್ರಮವಾಗಿ ಕುಳಿತರು. ಪಾರ್ವತಿಯೊಡನೆ ಶಿವನು ಅಮೃತಾನ್ನವನ್ನು ಆರೋಗಿಸಿದನು. ತರುವಾಯ ತಾಂಬೂಲ ವಿತರಣ, ನಾಲ್ಕನೆಯ ದಿನ ಕಳೆದೊಡನೆಯೇ ವಸಂತೋತ್ಸವವಾಯಿತು. ಪರಶಿವನು ಗಿರಿರಾಜ-ಮೇನೆಯರನ್ನು

ಮೇನಾದೇವಿಯರ ಮನ್ನಿಸುತ್ತುಂ ಗಿರಿಜೆಯನಾಲಿಂಗಿಸುತ್ತುಂ ವೃಷಭಸಮಾರೂಢಂ ದಶಭುಜ ಪ್ರಖ್ಯಾತಂ ಮಹಿಮಾನಿಧಿ ಮಹಾದೇವನುರಗಾಭರಣಂ ಗಜಾಜಿನಾವರಣಂ ಶರಣಕುಲಕಲ್ಪವೃಕ್ಷಂ ಸಕಲದೇವಗಣಪರಿವೃತ್ತಂ ಶೈಳಜಾವರಂ ಶೂಳಧರಂ ಭಾಳೇಂದುಮೌಳಿ ಕೈಲಾಸಾಭಿಮುಖಿನಾಗಿ,

ಚಂ॥ ಬಳುವಳಿಯಾನೆಯಂ ಬಳಿಯ ರತ್ನಮುಮಂ ಬಳಿಯಶ್ವವೀಥಿಯಂ
ಬಳುವಳಿಯಾರ್ಥಮಂ ಬಳಿಯ ನಾಣೆಯುಮಂ ಬಳಿಯಾಪ್ತವರ್ಗಮಂ ।
ಬಳುವಳಿಯಂಗನಾನಿಕರಮಂ ಪದಪಿಂದವಲೋಕಿಸುತ್ತೆ ಕೋ
ಮಳಪುಳಕಂಗಳೇಳ್ಗೆಯನೊಡಂಬಡುತುಂ ನಡೆತಂದನೀಶ್ವರಂ ॥ ೯೯

ವ॥ ಆ ಸಮಯದೊಳ್,

ಕಂ॥ ಹರನೀ ಬಂದನೆ ಗಿರಿಜಾ
ವರನೀ ಬಂದನೆ ಮಹೇಶನೀ ಬಂದನೆ ಶಂ ।
ಕರನೀ ಬಂದನೆನುತ್ತುಂ
ಪರೆದುವು ದೆಸೆದೆಸೆಗೆ ಬಹಳಕಹಳಾನಾದಂ ॥ ೧೦೦

ವ॥ ಅಂತು ಕರೆವ ಕಹಳಾನಾದಮಂ ಕೇಳುತ್ತುಂ ನಡೆತಂದು ಕೈಲಾಸಪುರದ್ವಾರವಲಯದೊಳ್ ಪುಗುತರ್ಪಾಗಳ್,

ಕಂ॥ ಕಟ್ಟಿದ ಗುಡಿಗಳ ಮುಗಿಲಂ
ಮುಟ್ಟಿದ ತೋರಣದ ನೆರೆದು ನೋಳ್ಪಬಲೆಯರೊಂ ।
ದೊಟ್ಟಜೆಗಳ ಲಾವಣ್ಯಮು
ದಿಟ್ಟಣಮೆನಿಸಿತ್ತು ಶಿವನ ಕಣ್ಗಂ ಮನಕಂ ॥ ೧೦೧

ವ॥ ಅಂತುಮಲ್ಲದೆಯುಂ,

ಮ॥ ತರದಿಂ ವೇದಿಕೆಯೇಱಿ ಭದ್ರಚಯಮಂ ಬಂದೇಱಿಯುತ್ಸಾಹದಿಂ
ಕರುವಾಡಂಗಳನೇಱಿ ವೃಕ್ಷಕುಲಮಂ ಸಾರ್ದೇಱಿಯೊಪ್ಪಿರ್ಪ ಗೋ ।

ಕರುಣಿಸಿ ಗಿರಿಜೆಯೊಡನೆ ವೃಷಭಾರೂಢನಾಗಿ ಕೈಲಾಸಾಭಿಮುಖನಾಗಿ—೯೯. ಬಳುವಳಿಯಾಗಿ ಕೊಟ್ಟ ಆನೆ, ರತ್ನ, ಅಶ್ವಗಳು ಮುಂತಾದುವನ್ನೆಲ್ಲ ಅವಲೋಕಿಸುತ್ತ ಈಶ್ವರನು ನಡೆತಂದನು. ೧೦೦. ಇಗೋ ಹರ ಬಂದ! ಗಿರಿಜಾವರ ಬಂದ, ಮಹೇಶ ಬಂದ, ಶಂಕರ ಬಂದ, ಎಂದು ಬಹಳ ಕಹಳೆಗಳು ದಿಕ್ಕುದಿಕ್ಕಿಗೆ ಧ್ವನಿಗೈದವು. ವ॥ ಕಹಳಾನಾದವನ್ನು ಕೇಳಿ ಕೈಲಾಸಪುರದ್ವಾರವನ್ನು ಪ್ರವೇಶಿಸುವಾಗ, ೧೦೧. ಏರಿಸಿದ ಬಾವುಟಗಳು, ಮುಗಿಲ ಮುಟ್ಟಿದ ತೋರಣಗಳು, ನೆರೆದು ನೋಡುವ ಅಬಲೆಯರ ಗುಂಪುಗಳು, ಇವೆಲ್ಲವೂ ಲಾವಣ್ಯವೆಲ್ಲವೂ ಒಟ್ಟುಗೂಡಿದಂತಿತ್ತು. ೧೦೨. ಕ್ರಮವಾಗಿ ಜಗುಲಿಗಳ

ಪುರವೃಂದಗಳನೇಱಿ ಶೀತಕರಬಿಂಬವ್ರಾತವೆಳ್ತಂದವೋ
ಲರವಿಂದಾಕರವೆಳ್ದವೋಲ್ ತುಱುಗಿ ನೋಡಿತ್ತಲ್ಲಿ ಕಾಂತಾಜನಂ ॥ ೧೧೨

ವ॥ ಅಂತು ನೋಡುವ ಕಾಂತೆಯರೊಳೊರ್ವಳ್,

ಚಂ॥ ನಡುವೆ ವಿಳಾಸದಿಂ ವೃಷಭರಾಜನನೇಱಿದವಂ ಶಿವಂ ಸಮಂ–
ತೊಡನೆ ಮಹೇಶನಂ ಪ್ರಿಯದೊಳಪ್ಪಿದಳ್ ಗಿರಿಜಾತೆಯಾಹ ಚೆ ।
ಲ್ವೊಡರಿಸಿತಾಹ ದಂಪತಿಗಳಾಹ ಜಗತ್ಪ್ರಭುಗಳ್ ಸುಭಾಗ್ಯರೆ
ನ್ನೊಡೆಯರೆನುತ್ತೆ ಕೆಯ್ಮುಗಿದು ಬಣ್ಣಿಸುತಿರ್ದಳತಿಪ್ರಮೋದದಿಂ ॥ ೧೧೩

ವ॥ ಮತ್ತವೊರ್ವಳುಮಾಮಹೇಶ್ವರರಂ ಕಂಡು ಕೊಂಡುಕೊನೆಯುತ್ತಿರ್ದಳದೆಂತೆಂದೊಡೆ

ಕಂ॥ ಸ್ಥಿರದಂಪತಿಗಳ್ ಮಂಗಳ
ಕರದಂಪತಿಗಳ್ ವಿಶೇಷದಂಪತಿಗಳ್ ಭಾ ।
ಸುರದಂಪತಿಗಳ್ ವಸುಧಾ
ವರದಂಪತಿಗಳ್ ಮನೋಜಹರದಂಪತಿಗಳ್ ॥ ೧೧೪

ವ॥ ಎಂದು ಪೊಗಳುತ್ತುಮಿರೆಯಿರೆ,

ಕಂ॥ ಇಂತಿಂತೊಪ್ಪುವ ಸಂಭ್ರಮ
ಮಂ ತವೆ ನೋಡುತ್ತೆ ಪಡೆದು ಕೊಂಡಾಡುತ್ತುಂ ।
ಕಂತುಹರಂ ಸಂತಸದಿಂ
ಮುಂತಣ ಕೈಲಾಸದರಮನೆಗೆ ನಡೆತಂದಂ ॥ ೧೧೫

ಮೇಲೆ, ಮಹಡಿಗಳ ಮೇಲೆ, ಮರಗಳ ಮೇಲೆ, ಗೋಪುರಗಳ ಮೇಲೆ ಏರಿನಿಂತ ಕಾಂತೆಯರು ನಿಂತಿದ್ದರು. ಅವರ ಮುಖಗಳನ್ನು ನೋಡಿದರೆ ಅದೇನು ಚಂದ್ರಬಿಂಬಗಳೊ ! ಕಮಲ ಸಮೂಹವೊ ! ಎಂಬಂತೆ ಇತ್ತು. ವ॥ ಹಾಗೆ ನೋಡಿದ್ದ ಕಾಂತೆಯರಲ್ಲಿ ಒಬ್ಬಳು ೧೧೩. "ಅಗೋ ! ಉತ್ಸವದ ಮಧ್ಯದಲ್ಲಿ ಬಸವನ ಮೇಲೆ ಕುಳಿತಿರುವವನೇ ಪರಮೇಶ್ವರ, ಅವನನ್ನು ಅಪ್ಪಿಕೊಂಡು ಒಪ್ಪಿರುವವಳೇ ಅಗಜಾತೆ ! ಓಹೊ ! ಎಂಥ ಚೆಲುವು ! ಎಂಥ ದಾಂಪತ್ಯ! ಜಗತ್ಪ್ರಭುಗಳು ಸುಭಾಗ್ಯರು ! ಇವರೆ ನಮ್ಮ ಪ್ರಭುಗಳು" ಎಂದು ಆಕೆ ಕೆಯ್ಮುಗಿದು ಸಂತೋಷದಿಂದ ವರ್ಣಿಸುತ್ತಿದ್ದಳು. ವ॥ ಮತ್ತೊಬ್ಬಳು ಉಮಾಮಹೇಶ್ವರರನ್ನು ಕಂಡು ಹಿಗ್ಗುತ್ತಿದ್ದಳು. ೧೧೪. "ಇವರು ಸ್ಥಿರದಂಪತಿಗಳು, ಮಂಗಳಕರರಾದ ದಂಪತಿಗಳು, ವಿಶೇಷ ತಂಪತಿಗಳು,ಭಾಸುರ ದಂಪತಿಗಳು, ವಸುಧೆಗೆ ಶ್ರೇಷ್ಠ ದಂಪತಿಗಳು" ೧೧೫. ಇಂತಹ ಸಂಭ್ರಮವನ್ನು ನೋಡಿ ಕೊಂಡಾಡುತ್ತಾ ಪರಶಿವನು ಸಂತೋಷದಿಂದ

ವ॥ ಅಂತೊಳಪೊಕ್ಕು ಬಂದಾಗಳ್,

ಉ॥ ಆರತಿಯೆತ್ತೆ ರುದ್ರಗಣಿಕಾನಿಕರಂ ಸರಸೀಜನಾಭನುಂ
ನೀರಜಪುತ್ರನುಂ ಪೊಗಳೆ ದೇವಗಣಾಳಿಯಳ್ಕಱಿಂದೆ ಕೆಯ್ ।
ವಾರಿಸೆ ನಂದಿಯಿಂದವಿಳಿದುನ್ನತಸನ್ನುತಸಿಂಹಪೀಠಮಂ
ತಾರಗಿರೀಂದ್ರನಾಥನೊಸೆದೇಱಿದನದ್ರಿಸುತಾಸಮನ್ವಿತಂ ॥ ೧೦೬

ವ॥ ಅಂತು ಸಿಂಹವಿಷ್ಟರಮನೇಱಿ,

ಕಂ॥ ಗಿರಿಪತಿಯಂ ಮೇನೆಯನಾ
ದರದಿಂ ಬೀಳ್ಕೊಟ್ಟು ಮಕುಟರತ್ನಪ್ರಕರ ॥
ಸ್ಫುರಿತಪ್ರದ್ಯೋತ ಪ್ರೋ
ತ್ಕರವಿಳಸಿತ ವಳಯದೊಳಗೆ ಶಿವನೆಸೆದಿರ್ದಂ ॥ ೧೦೭

ವ॥ ಆಗಳ್ ಗಿರಿರಾಜನುಂ ಮೇನೆಯುಂ ಬೀಳ್ಕೊಳುತುಂ ಪಾರ್ವತಿಯಂ ನೋಡಿ,

ಉ॥ ಮಾತೆ ಶಿವಂ ಪಿತಂ ಶಿವನನಂತಬಲಂ ಶಿವನೂರ್ಜಿತಂ ಶಿವಂ
ನೀತಿ ಶಿವಂ ಸ್ಥಿರಾಯು ಶಿವನೊಳ್ಪು ಶಿವಂ ಸುಕೃತಂ ಘನ ।
ಖ್ಯಾತಿ ಶಿವಂ ಧನಂ ಶಿವನಪಾರಸುಖಂ ಶಿವನದ್ರಿಜಾತೆ ಸಂ
ಪ್ರೀತಿ ಶಿವಂ ಶಿವಂ ನಿನಗೆ ಚಿಂತಿಸದಿರ್ ಮಱೆದೆಮ್ಮನೊರ್ಮೆಯುಂ ೧೦೮

ವ॥ ಎಂದುಳ್ಳುದನುಪಚಾರಮಿಲ್ಲದೆ ನುಡಿದು ಸಾದರಂ ಪೋದರಿತ್ತಲ್ ಚಂಡಕೀರ್ತಿಗಳ್ ಮೆಯ್ಯಿಕ್ಕಿ ನಿಂದು ಕೆಯ್ಯಂ ಮುಗಿದು,

ಚಂ॥ ಅತುಳಕಪಾಲಿ ಪಾಲಿಪುದುಮಾಪತಿ ಮಾಪತಿರಾಜ ರಾಜ ಭೂ
ಷಿತ ಸಿತಭಸ್ಮಭಸ್ಮಮಯಮನ್ಮಥ ವಿಗ್ರಹವಿಗ್ರಹ ಪ್ರಜಾ ।

ಕೈಲಾಸದ ಅರಮನೆಗೆ ನಡೆತಂದನು. ೧೦೬. ರುದ್ರಗಣಿಕೆಯರು ಆರತಿಯೆತ್ತಿದರು. ಹರಿ ಬ್ರಹ್ಮರು ಹೊಗಳಿದರು. ದೇವಗಣ ಕೈವಾರಿಸಿತು (ಸೇವಿಸಿತು) ನಂದಿಯಿಂದ ಇಳಿದ ಪರ ಶಿವನು ಉನ್ನತ ಸಿಂಹಪೀಠವನ್ನು ಏರಿದನು. ೧೦೭. ಪರಶಿವನು ಗಿರಿಪತಿ–ಮೇನಾದೇವಿ ಯರನ್ನು ಬೀಳ್ಕೊಟ್ಟು ತನ್ನಪ್ರಭಾವಳಯದಲ್ಲಿ ಪ್ರಕಾಶಿಸುತ್ತಿದ್ದನು. ೧೦೮. ಮಗಳೆ, ನಿನಗೆ ತಾಯಿ, ತಂದೆ ಎಲ್ಲವೂ ಶಿವನೇ! ಅವನೇ ಊರ್ಜಿತ, ಅವನೇ ಸ್ಥಿರಾಯು, ಅವನೇ ಒಪ್ಪ, ಸುಕೃತ, ಖ್ಯಾತಿ, ಧನ, ಅಪಾರಸುಖ ಎಲ್ಲವೂ ಶಿವನೇ! ಆದ್ದರಿಂದ ನಮ್ಮನ್ನು ಮರೆತು ಒಮ್ಮೆಯೂ ಯೋಚಿಸಬೇಡ! ವ॥ ಎಂದು ಹಿಮವಂತ ದಂಪತಿ ಗಳು ಇದ್ದುದನ್ನು ಇದ್ದಂತೆಯೇ ಹೇಳಿ ಹಿಂದಿರುಗಿದರು. ಈ ಕಡೆ ಚಂಡಕೀರ್ತಿಗಳು ವಂದಿಸಿ ೧೦೯. ಅನುಪಮ ಕಪಾಲಿ ಪಾಲಿಸು, ಉಮಾಪತಿ, ಮಾ(ಲಕ್ಷ್ಮಿ)ಪತಿಗೆ

ನತ ನತಸಿದ್ಧ ಸಿದ್ಧ ಸಕಳಾತ್ಮ ಕಳಾತ್ಮ ವಿಶೇಷಶೇಷಪೂ
ಜಿತ ಜಿತಕಾಲ ಕಾಲವಿಲಸದ್ಗಳ ಸದ್ಗಳ ಹಂಪೆಯಾಳ್ದನೇ ॥ ೧೯

ಚಂ॥ ಕರುಣಿಸು ನಾಥ ನಾಥಕುಲಸೇವಿತ ಸೇವಿತ ಕಾಲ ಕಾಲ ಸಂ
ಹರಣ ರಣಾಗ್ರರಂಜಿತಜಿತಾಮರತಾಮರಸಾಕ್ಷ ಸಾಕ್ಷಸಂ ।
ಸ್ಮರ ನಿಜದರ್ಪದರ್ಪಕವಿನಾಶ ವಿನಾಶನಿಕಾಯಕಾಯವಿ
ಸ್ಫುರಿತಭುಜಂಗ ಜಂಗಮಕೃಪಾವನ ಪಾವನ ಹಂಪೆಯಾಳ್ದನೇ ॥ ೧೧೦

ವ॥ ಎಂದಿಂತು ಸಂತಸದಿಂ ಕೆಯ್ವಾರಂ ಮಾಡೆ ಕೇಳ್ದು ದಂಡಧರಗರ್ವಪರ್ವತ ಕುಲಿಶಂ ಕುಸುಮಕೋದಂಡಕುಮುದಮಾರ್ತಂಡಂ ಪುರತ್ರಯಮೇಘಮಹಾನಿಲಂ ಶತಪತ್ರಪುತ್ರಶಿರಚ್ಛೇದನಕರಂ ಸರೋಜನಯನನಯನಸರೋಜಪೂಜಿತಪದಂ ಜಲಂಧರಮರಾಳಮೇಘಗರ್ಜಿತಂ ಅಂಧಕಾಸುರಾರಣ್ಯದಾವಾನಳಂ ಲಾಲಾಸುರೇಭಪಂಚಾನನಂ ದುರಿತಪಂಚಾನನಶರಭಮೂರ್ತಿ ದಕ್ಷಮಖನಿರ್ಧೂಮಧಾಮಂ ಚತುರ್ದಶಭುವನಚಕ್ರಭಾಸ್ಕರಂ ಬ್ರಹ್ಮಾಂಡಭರಿತಕೀರ್ತಿಮಯಂ ಸರ್ವಬ್ರಹ್ಮಾಂಡ ಫಳಭರಿತಮಹಾಮಹೀರುಹಂ ವರನಿಚಯರಚಿತಪ್ರಶಸ್ತಹಸ್ತಂ ಸೋಮಧರಂ

ರಾಜ, ರಾಜ (ಚಂದ್ರ) ಭೂಷಿತ, ಭಸ್ಮರೂಪಿತಕಾಯ, ಭಸ್ಮಗೊಳಿಸಿದ ಮನ್ಮಥವಿಗ್ರಹನೆ, ವಿಗ್ರಹ (ಶರೀರ) ಧಾರಿಗಳಿಂದ ವಂದಿಸಲ್ಪಟ್ಟವನೆ, ನಮಸ್ಕರಿಸಿದ ಸಿದ್ಧರುಳ್ಳವನೆ, ಸಿದ್ಧಿಸಿದ ಕಲೆಗಳುಳ್ಳವನೇ, ಕಳಾಮಯನೆ, ಶೇಷ (ಆದಿಶೇಷ) ಪೂಜಿತನೆ, ಕಾಲನನ್ನು ಗೆದ್ದವನೆ, ನೀಲಕಂಠನೆ ಎಂದು ಸ್ತುತಿಸಿದರು. ೧೧೦. ಒಡೆಯ, ನಾಥ ಕುಲಸೇವಿತನೆ, ಕಾಲನಿಂದ ಪೂಜೆಗೊಂಡವನೆ, ಕಾಲನನ್ನು ಸಂಹರಿಸಿದವನೆ, ರಣಾಗ್ರದಲ್ಲಿ ಪ್ರಕಾಶಿಸುವನೆ, ಅಮರ ಮತ್ತು ಕಮಲಾಕ್ಷರನ್ನು ವಶಪಡಿಸಿಕೊಂಡವನೆ, ಸಾಕ್ಷನೆ, ನಿಜದರ್ಪವನ್ನು ಬಲ್ಲವನೆ, ದರ್ಪಕ (ಮನ್ಮಥ) ನನ್ನು ಕೊಂದವನೆ, ವಿನಾಶನಿಕಾಯನೆ, ಭುಜಂಗ ಭೂಷಣನೆ, ಜಂಗಮದಲ್ಲಿ ಕೃಪೆಯುಳ್ಳವನೆ, ಪವಿತ್ರ ಹಂಪೆಯಾಳ್ದನೆ ಕರುಣಿಸು. ವ॥ ಹೀಗೆ ಚಂಡಕೀರ್ತಿಗಳ ಕೆಯ್ವಾರವನ್ನು ಕೇಳಿದ ಪರಶಿವನು ಅವರಿಗೆ ಉಡುಗೊರೆ ಕೊಟ್ಟನು. ಮುಂದಿನ ವಾಕ್ಯಗಳು ಪರಶಿವನ ಮಹಿಮಾವಿಶೇಷಗಳು–ಪರಮೇಶ್ವರ ಯಮನ ಗರ್ವನೆಂಬ ಪರ್ವತಕ್ಕೆ ವಜ್ರಾಯುಧ, ಪುಷ್ಪಬಾಣನೆಂಬ ನೈದಿಲೆಗೆ ಸೂರ್ಯ, ತ್ರಿಪುರಗಳೆಂಬ ಮೇಘಗಳಿಗೆ ಬಿರುಗಾಳಿ, ಪದ್ಮಜ (ಬ್ರಹ್ಮ) ನ ಶಿರಸ್ಸನ್ನು ಕತ್ತರಿಸಿದವ, ಕಮಲಾಕ್ಷನು ಕಮಲಗಳಿಂದ ಪೂಜಿಸಿದ ಪಾದವುಳ್ಳವನು, ಜಲಂಧರನೆಂಬ ಹಂಸಗಳಿಗೆ ಮೇಘಗರ್ಜನೆಯಂತಿರುವವನು, ಅಂಧಕಾಸುರನೆಂಬ ಕಾಡಿಗೆ ಕಾಡ್ಗಿಚ್ಚು, ಲಾಲಾಸುರನೆಂಬ ಆನೆಗೆ ಸಿಂಹಪ್ರಾಯ, ದುರಿತಗಳೆಂಬ ಸಿಂಹಗಳಿಗೆ ಶರಭಮೂರ್ತಿ, ದಕ್ಷಯಾಗಧ್ವಂಸಿ, ತ್ರಿಭುವನಗಳಿಗೆ ರವಿ, ಬ್ರಹ್ಮಾಂಡವೆಲ್ಲ ತುಂಬಿದ ಕೀರ್ತಿಯುಳ್ಳವ, ಸರ್ವಬ್ರಹ್ಮವೆಂಬ ಫಲಗಳಿಗೆ ಕಾರಣವಾದ ವೃಕ್ಷ, ವರಪ್ರದಾನಮಾಡುವಲ್ಲಿ ಪ್ರಶಸ್ತಹಸ್ತವುಳ್ಳವ, ಸೋಮಧರ,

ಸೋಮಂ ಸಾಮಗೇಯಪ್ರಿಯಂ ವಿಮಳತ್ರಿಣೇತ್ರಂ ಕಮಲಜಶಿರಃ ಪಾತ್ರಂ ಸುರರಾಜರಾಜಂ ಶರಣಸುರಭೂಜಂ ದೇವಗಣಸಮಾಜಂ ರವಿಕೋಟಿತೇಜಂ ಶೃಂಗಾರ ಸಾರಂ ವೀರರಸಪೂರಂ ರೌದ್ರ ಪ್ರತಾಪಂ ಭಯಾನಕರೂಪಂ ಪಿನಾಕಚಾಪಂ ಸಜ್ಜನಸಮೀಪಂ ಅದ್ಭುತಶೀಲಂ ಶೈಲಜಾಲೋಲಂ ಘನಘನಸ್ಥೂಲಂ ವಿಶ್ವಲೋಕಪಾಲಂ ನತಜನವಿತತಸಂಪದಂ ಪ್ರೇಮಜನಕಾಮದುಘಂ ಭಕ್ತಜನ ಭಾಗ್ಯೋದಯಂ ಮುಕ್ತಿಪ್ರದಾಯಕಂ ಪ್ರಮಥಗಣಪುಣ್ಯಫಲಾಕಾರಂ ಕೃಪಾಮೇರು ದಯಾನಿಧಿ ಪಾರ್ವತೀಪ್ರಾಣನಾಥನೆನಿಪ ಪಂಪಾಪುರಾಧಿಪ ಶ್ರೀವಿರೂಪಾಕ್ಷಂ ಚಂಡಕೀರ್ತಿಗಳ್ಗೆ ಮೆಚ್ಚಿ ಪಸಾಯನಮನಿತ್ತು,

ಮ॥ ಹರನುದ್ಯದ್‌ಗಿರಿಜಾಮನೋಹರಸುಖಾಂಭೋರಾಶಿಚಂಚತ್‌ಸುಧಾ<br>
ಕಿರಣಂ ತತ್ಸುಖದಿಂದಮಿರ್ದುದಯಿಸಿರ್ದಾ ಸ್ಕಂದನಿಂ ತಾರಕಾ ।<br>
ಸುರನಂ ತೀರ್ಚಿ ಸಮಸ್ತಲೋಕಜನತಾಸಂತುಷ್ಟಿಯಂ ಮಾಡಿ ಪಂ<br>
ಕರನೊಪ್ಪಿರ್ದನುದಾರಿ ಪಂಪೆಯ ವಿರೂಪಾಕ್ಷಂ ಲಲಾಟೇಕ್ಷಣಂ ॥ ೧೧೧

ಕಂ॥ ಹರಿಸಂ ಮಿಗೆ ಕೈಲಾಸದ<br>
ಪುರದೊಳಗೊಪ್ಪಿರ್ದನಭವನದ್ವಯರೂಪಂ ।<br>
ವರಶರಣಾಳಿಗೆ ಬೇಡಿದ<br>
ವರಮಂ ಕರುಣಿಸುತೆ ಹಂಪೆಯ ವಿರೂಪಾಕ್ಷಂ ॥ ೧೧೨

ಶಾ॥ ಎಂದಿಂತೊಪ್ಪಿರೆ ಮೆಚ್ಚಿ ಮೆಚ್ಚಿ ಹರಿದೇವಂ ಪೇಳ್ದ ಸತ್ಕಾವ್ಯಮಂ<br>
ಚೆಂದಂಬೆತ್ತಿರಲೋದುವಾರ್ತಸುಖದಿಂ ಕೇಳ್ದಾದರಿಪ್ಪರ್ಗೆ ಸಾ ।<br>
ನಂದಂ ಮಾಡುಗೆ ಪುಣ್ಯಭೋಗಜಯಮಂ ನಿತ್ಯಾಯುಮಂ ಶ್ರೀಯುಮಂ<br>
ನಂದೀಶಾದಿ ಗಣಪ್ರತಾನದೊಡೆಯಂ ಪಂಪಾಪುರಾಧೀಶ್ವರಂ ॥ ೧೧೩

ಸೋಮ, ಸಾಮಗಾನಪ್ರಿಯ, ಬ್ರಹ್ಮಕಪಾಲ ಹಿಡಿದವ, ಸುರಾಜನಿಗೆ ರಾಜ, ಶರಣಾದವರಿಗೆ ಸುರಭೂಜ (ಕಲ್ಪವೃಕ್ಷ) ಇಂಥ ಮಹಾನುಹಿಮನು ಪ್ರೇಮಜನ ರಾಮದುಘ ಎಂದರೆ ಕೇಳಿದವರಿಗೆ ಕೇಳಿದ್ದನ್ನು ನೀಡುವ ಕಾಮಧೇನು ಪರಮೇಶ್ವರ. ೧೧೧. ಪರಮೇಶ್ವರ ಗಿರಿಜಾಮನೋಹರ, ಆತ ಆನಂದಸಾಗರಕ್ಕೆ ಸುಧಾಕಿರಣ, ಗಿರಿಜಾ ಸುಖದಿಂದ ಇದ್ದು, ತಮಗೆ ಉದಯಿಸಿದ ಕುಮಾರನಿಂದ ತಾರಕಾಸುರನನ್ನು ಮುಗಿಸಿ ಲೋಕ ಸಂತುಷ್ಟಿಯನ್ನು ಉಂಟುಮಾಡಿ ಲಲಾಟಾಕ್ಷನಾದ ಹಂಪೆಯ ವಿರೂಪಾಕ್ಷನು ಒಪ್ಪಿದ್ದನು. ೧೧೨. ಅದ್ವಯರೂಪನಾದ ಅಭವನು ಅಮಿತ ಹರ್ಷದಿಂದ ಕೈಲಾಸದಲ್ಲಿ ಒಪ್ಪಿದ್ದನು. ಶರಣಾದವರಿಗೆ ಬೇಡಿದ ವರಗಳನ್ನು ಕರುಣಿಸುತ್ತಾ ಹಂಪೆಯ ವಿರೂಪಾಕ್ಷನು ಬೆಳಗುತ್ತಿದ್ದಾನೆ. ೧೧೩. ನಂದೀಶ್ವರನೆ ಮೊದಲಾದ ಪ್ರಮಥಗಣಕ್ಕೆ ಒಡೆಯನಾದ ಪಂಪಾಪತಿಯು, ಹರಿದೇವನು ರಚಿಸಿದ ಸತ್ಕಾವ್ಯವನ್ನು ಪ್ರೇಮದಿಂದ ಓದಿ ಸುಖಿಸುವ ಭಕ್ತರಿಗೆ

ಮ॥ ಸ್ರ॥ ತರದಿಂದಂ ಶಬ್ದಮರ್ಥಂ ರಸವಿಸರಮಲಂಕಾರಾದಿಂ ತೀವ್ರತೊಳ್ಪಿಂ
ಧರೆಯೊಳ್ ಕೆಯ್ಕೊಂಡು ಪಂಪಾಪುರದರಸ ವಿರೂಪಾಕ್ಷನಿತ್ತಾಜ್ಞೆಯಿಂದಂ।
ಹರಿದೇವಂ ಭಕ್ತಿಯಿಂದಂ ಗುರುಕರುಣದಿನುತ್ಸಾಹದಿಂ ಮಚ್ಚಿ ಪೇಳ್ದಾ
ಗಿರಿಜಾಕಲ್ಯಾಣಮಿಂತೀ ಶಶಿರವಿಧರೆಗಳ್ ನಿಲ್ವಿನಂ ನಿಲ್ಕೆ ಸಂತಂ॥ ೧೧೪

ಇಳೆಯೊಳ್ ಪೆರ್ಮಳೆಯುಂ ಸಮಸ್ತಫಲಪುಂ ಸಂತೋಷಮುಂ ಧರ್ಮಸಂ-
ಕುಳಮುಂ ಸತ್ಯಮುಮೀಶ್ವರಾರ್ಚನೆಯ ಸೊಂಪುಂ ಶ್ರೀಯುಮಾಯುಂ ನಿರಾ
ಕುಳಮೆಂದುಂ ನೆಲಸಿರ್ಪುದೊಂದು ತೆಱನಂ ತಾಂ ಮಾಳ್ಕೆ ಸರ್ವೇಶ್ವರೀ
ವಿಳಸತ್‌ಸಂಗಸುಖಾಬ್ಧಿಶೀತಕಿರಣಂ ಪಂಪಾಪುರಾಧೀಶ್ವರಂ॥ ೧೧೫

ಮ॥ ಪರಮಸ್ವಾಮಿ ಜಟಾಧರಂ ಶಶಿಧರಂ ಗಂಗಾಧರಂ ಕಾಲಸಂ
ಹರನಜ್ಞಾನಹರಂ ಪುರತ್ರಯಹರಂ ಸೌಖ್ಯಾಕರಂ ಶಂಭು ಶಂ।
ಕರನಾನಂದಕರಂ ಸಮಂತೆನಗೆ ಭಕ್ತಿಜ್ಞಾನವೈರಾಗ್ಯಮಂ
ಕರುಣಂಗೆಯ್ಗೊಲವಿಂದೆ ಪಂಪೆಯ ವಿರೂಪಾಕ್ಷಂ ಶಿವಾವಲ್ಲಭಂ॥ ೧೧೬

ಇದು ಸಮಸ್ತ ಸುರಾಸುರನಿಕರಮಕುಟ ಖಚಿತ
ದಿನಕರಕರಾಧಿಕ್ಯ ಮಾಣಿಕ್ಯ ಪ್ರಭಾಪುಂಜರಂಜಿತಚರಣ
ನೆನಿಪ ಪಂಪಾವಿರೂಪಾಕ್ಷ ಶ್ರೀಪಾದಕಮಲ
ಮಕರಂದ ಮಧುಕರಾಯಮಾಣ
ಸತ್ಕವೀಶ್ವರ ಪಂಪೆಯ
ಹರಿಹರದೇವ ವಿರಚಿತಮಪ್ಪ
ಶ್ರೀ ಗಿರಿಜಾಕಲ್ಯಾಣ ಮಹಾಪ್ರಬಂಧದೊಳ್
ಪಾರ್ವತೀಪರಮೇಶ್ವರ ವಿವಾಹವರ್ಣನಂ
ದಶಮಾಶ್ವಾಸಂ

ಸಂತೋಷವನ್ನೂ ಪುಣ್ಯಭೋಗಚಯವನ್ನು ನಿತ್ಯಾಯುವನ್ನೂ ಶ್ರೀಯನ್ನೂ ಉಂಟು ಮಾಡಲಿ. ೧೧೪. ಕ್ರಮವಾಗಿ ಶಬ್ದ ಅರ್ಥ ರಸಪ್ರಸಾದ, ಅಲಂಕಾರಗಳಿಂದ ತುಂಬಿರುವ ಪಂಪಾಪುರದ ವಿರೂಪಾಕ್ಷನ ಆಜ್ಞೆಯಿಂದ ಹರಿದೇವನು ಭಕ್ತಿಯಿಂದ ಗುರುಕೃಪೆಯಿಂದ ಉತ್ಸಾಹದಿಂದ ಮೆಚ್ಚಿ ಪೇಳಿದ ಗಿರಿಜಾಕಲ್ಯಾಣ ಮಹಾಕಾವ್ಯವು ಶಶಿ–ರವಿ–ಧರೆಗಳು ಇರುವವರೆಗೆ ಜನಪ್ರಿಯವಾಗಿರಲಿ. ೧೧೫. ನೆಲದಲ್ಲಿ ಒಳ್ಳೆಯ ಮಳೆ, ಫಲಸಸ್ಯ ಸಮೃದ್ಧಿ, ಸಂತೋಷ, ಧರ್ಮ, ಸತ್ಯ, ಶಿವಾರ್ಚನೆ, ಸೊಂಪು, ಶ್ರೀ, ಆಯುಸ್ಸು, ನಿರ್ಬಾಧೆ, ಇವೆಲ್ಲವನ್ನೂ ಸರ್ವೇಶ್ವರೀ ಸಮೇತನಾದ ಪಂಪಾಪತಿಯು ಉಂಟುಮಾಡಲಿ.

# ಕಠಿಣ ಶಬ್ದಾರ್ಥಕೋಶ

ಅ

ಅಂಶು–ಕಿರಣ
ಅಖ್ಖಡ–ಗರಡೀಮನೆ ತಗ್ಗು
ಅಗಚೂಡ–ಪರ್ವತ ಶಿಖರ
ಅಗಿ–ಅಂಜು
ಅಗುರ್ಬು–ವಿಸ್ತಾರ
ಅಗುರ್ವು–ಉತ್ಸಾಹ, ಭೀತಿ
ಅಗ್ಗಳಿಸು–ಹೆಚ್ಚಾಗು, ಉಬ್ಬು
ಅಘಮರ್ಷಣ–ಸ್ಪರ್ಧಿಸು, ಪಾಪನಾಶಕ ವಾದ ಮಂತ್ರಸ್ನಾನ
ಅಘೌಘ–ಪಾಪಸಮೂಹ
ಅಂಕಣಿ–ಸಂಜ್ಞೆ
ಅಂಗರಾಗ–ಮೈಗೆ ಹಚ್ಚುವ ಲೇಪನ
ಅಂಘ್ರಿಪ–ಮರ (ಬೇರಿನಿಂದ ನೀರು ಕುಡಿಯುವ) ಪಾದಪ
ಅಕ್ಷೂಣ–ಕೊರತೆಯಿಲ್ಲದ
ಅಚಲ–ಹೊಯ್ದಾಡುವ
ಅಚಲಗತಿ–ಗಮನವಿಲ್ಲದವನು
ಅಚಳನಿತಂಬ–ಬೆಟ್ಟದ ತಪ್ಪಲಪ್ರದೇಶ
ಅಚುಂಬಿತ–ಬಳಕೆಯಾಗದ, ಹೊಸ
ಅಜಸ್ರಂ–ಯಾವಾಗಲೂ
ಅಜಾತೆ–ಹುಟ್ಟಿಲ್ಲದವಳು
ಅಜಿನ–ಚರ್ಮ
ಅಂಜನ–ಕಾಡಿಗೆ, ಕಪ್ಪು
ಅಟ್ಟಹಾಸ–ಭಾರಿ ನಗೆ
ಅಟ್ಟಳೆ–ಕೋಟೆಯ ಅಟ್ಟ
ಅಡಕಿಲ್ವಾಸು–ಒಂದರ ಮೇಲೊಂದು ಅಡಕಿದ ಹಾಸಿಗೆ
ಅಡರ್ಪು–ಆಧಾರ
ಅಡಸು–ಗುಂಪುಗೂಡು, ತಡೆದು ನಿಲ್ಲಿಸು
ಅಣಂ–ಸ್ವಲ್ಪ
ಅಣೆಯರಂ–ವೇಗವಾಗಿ
ಅಣ್ಚಿ–ಹತ್ತಿಸಿ
ಅಣ್ಮು–ಪರಾಕ್ರಮ
ಅತನು–ಕಾಮ (ಶರೀರವಿಲ್ಲದವ–ಅನಂಗ)
ಅದಿರ್–ಹೆದರು, ನಡುಗು
ಅದಿರ್ಗಂತಿ–ಮಾಧವಿಪುಷ್ಪ, ಮಾಲತಿ
ಅದ್ವಯ–ಎರಡಿಲ್ಲದ
ಅಧಃಕರಿಸು–ತಿರಸ್ಕರಿಸು
ಅಧಿಕಾಕ್ಷ–ಮುಕ್ಕಣ್ಣ, ಹೆಚ್ಚು ಕಣ್ಣುಳ್ಳವನು
ಅಧಿಗತ–ಬಂದ, ದೊರಕಿದ
ಅನಂಗ–ಮನ್ಮಥ (ಶರೀರವಿಲ್ಲದವ)
ಅನರ್ಘ್ಯ–ಶ್ರೇಷ್ಠ
ಅನವದ್ಯ–ಪರಿಶುದ್ಧ
ಅನವಧಿ–ಮೇರೆಯಿಲ್ಲದ
ಅನನ್ಯ–ಇಂಥ ಇನ್ನೊಂದಿಲ್ಲದ
ಅಂತಸ್ಥ–ಅಂತರಂಗ
ಅಂದುಗೆ–ಕಾಲಿಗೆ ತೊಡುವ ಆಭರಣ
ಅನ್ನರ್–ಅಂತಹರು
ಅನಿಮಿಷ–ದೇವತೆ, ಮೀನು (ರೆಪ್ಪೆ ಹೊಡೆಯದ)
ಅನೀಕ–ಸಮುದಾಯ
ಅನುನಯ–ಮೆಚ್ಚಿಕೆ, ಸಮಾಧಾನಮಾಡು
ಅನುವರ–ಯುದ್ಧ
ಅನುವು–ಸಿದ್ಧಿ
ಅನುವಿಸು–ಸಿದ್ಧವಾಗು, ಸನ್ನದ್ಧನಾಗು
ಅನೂನ–ಕೊರತೆಯಿಲ್ಲದ
ಅಂತರ್ಧಾನವಾಗು–ಮಾಯವಾಗು
ಅನ್ಯಪುಟ್ಟ–ಕೋಗಿಲೆ, ಪರಪುಷ್ಟ (ಬೇರೆಯವರಿಂದ ಪೋಷಿತ)
ಅಪಚಯ–ಕೃಶವಾಗು, ಸಂಗ್ರಹ

ಅಪತ್ಯ–ಸಂತಾನ
ಅಪರ–ಮೋಕ್ಷ, ಹಿಂಭಾಗ, ಪಶ್ಚಿಮ
ಅಪಾಂಗ–ಕಡೆಗಣ್, ಓರೆನೋಟ
ಅಪ್ರತಿಮ–ಸಮನಿಲ್ಲದ
ಅಬಳಾನೀಕ–ಸ್ತ್ರೀಸಮೂಹ
ಅಬ್ಜ–ಕಮಲ (ನೀರಿನಲ್ಲಿ ಹುಟ್ಟಿದ್ದು)
ಅಬ್ಜವಿಷ್ಟರ–ಬ್ರಹ್ಮ (ಕಮಲಾಸನ)
ಅಬ್ಜಾಕರ–ಕಮಲ ಸರೋವರ
ಅಬ್ದ–ಮೋಡ, ವರ್ಷ
ಅಬ್ದಸಮಯ–ಮಳೆಗಾಲ
ಅಭಂಗಿ–ಕೊರತೆಯಿಲ್ಲದ್ದು
ಅಭವಗೇಹ–ಶಿವನ ಮನೆ
ಅಭಿಸಾರಿಕೆ–ರಾತ್ರಿ ಪ್ರಿಯನನ್ನು ಅರಸಿಕೊಂಡು ಹೋಗುವ ಜಾರೆ, ನಾಯಕಿ
ಅಭ್ರಕಾಯ–ಮೋಡವೇ ಶರೀರವಾಗಿರುವ
ಅಭ್ರಛಾಯೆ–ಮೋಡಗಳ ನೆರಳು
ಅಭ್ರಮಾತಂಗ–ಐರಾವತ
ಅಭ್ರಶಿಖಿ–ಮಿಂಚು
ಅಮರಭೂರುಹ–ಕಲ್ಪವೃಕ್ಷ
ಅಮರು–ಅಂಟಿಕೊಳ್ಳು
ಅಮಳ್ವಕ್ಕಿ–ಚಕ್ರವಾಕ, ಜೊತೆ ಜೊತೆಗಿರುವ ಹಕ್ಕಿ
ಅಮ್ಮಾವು–ಕುರರೀಮೃಗ
ಅಮೋಘ–ಶ್ರೇಷ್ಠ, ವ್ಯರ್ಥವಾಗದ
ಅಂಬಳಕಿ–ಅಂಬೆಗಾಲು
ಅಂಬುದ–ಮೋಡ
ಅಯಸ್ಕಾಂತ–ಸೂಜಿಗಲ್ಲು
ಅಯೋಗ್ರಾಹ್ಯತೆ–ಲೋಹಚುಂಬಕತ್ವ
ಅಯಃಪಿಂಡ–ಕಬ್ಬಿಣದ ತುಂಡು
ಅಯನ–ತಿರುಗಾಟ
ಅಱ–ಅರಿಹೋಗು
ಅರನೇರಿಲ್–ಜಂಬುನೇರಳೆ
ಅರವರಿಸು–ಅರಿತುಕೊಳ್ಳು
ಅರಳೆಲೆ–ಮಕ್ಕಳ ಆಭರಣ
ಅರಿದು–ಅಸಾಧ್ಯ, ಆಶ್ಚರ್ಯ
ಅರುಣಮಣಿ–ಕೆಂಪುರತ್ನ
ಅಱಿಯಟ್ಟು–ಬೆನ್ನುಬೀಳು
ಅರೆವಿನೋದು–ಅರ್ಧಮರ್ಧಜ್ಞಾನ
ಅರ್ಜುನ–ಬಿಳಿಮುತ್ತು
ಅರ್ತಿ–ಪ್ರೀತಿ
ಅರ್ವು–ಹರಡು, ಹಬ್ಬು
ಅಲಂಪು–ಸೌಂದರ್ಯ
ಅಲರ್ಗಣೆ–ಹೂಬಾಣ
ಅಲರ್ವಿಲ್ಲರಸ–ಹೂಬಾಣಗಳ ರಾಜ, ಕಾಮ
ಅವಗಾಹ–ಸ್ನಾನ
ಅವತಂಸ–ಆಭರಣ
ಅವಷ್ಟಂಭಿಸು–ಅಲಂಕರಿಸು, ಕೂತುಕೊಳ್ಳು
ಅವಿಧಾ ಅವಿಧಾ–ರಕ್ಷಿಸಿರಿ
ಅವ್ವಳಿಸು–ಅಪೇಕ್ಷಿಸಡು, ಆತುರಿಸು
ಅವ್ಯಗ್ರ–ಶಾಂತಭಾವ
ಅಶಿವ–ಉಗ್ರ, ಭಯಂಕರ
ಅಶ್ಮ–ಕಲ್ಲು
ಅಶ್ರಮ–ಸತತ, ಎಡೆಬಿಡದೆ
ಅಸತಿ–ಜಾರೆ
ಅಸವಸ–ಅವಸರ
ಅಸಿತಾತಪತ್ರ–ಕಪ್ಪುಕೊಡೆ
ಅಸಿಲತೆ–ಖಡ್ಗ
ಅಸುವೆಯ ಕಲ್ಲು–ಅರೆಯುವ ಕಲ್ಲು
ಅಸುಹೃತ್–ವೈರಿ
ಅಸ್ತಂಬೆಸ್ತ–ಅಸ್ತವ್ಯಸ್ತ
ಅಸ್ವಪ್ನರ್–ದೇವತೆಗಳು
ಅಹರಹಂ–ದಿನದಿನವೂ
ಅಳಲು–ದುಃಖ
ಅಳವು–ಶಕ್ತಿ, ಆಟೋಪ
ಅಳಿಪು–ಆಶೆ, ಬಯಕೆ

ಅಳಿಮನ–ಕೀಳುಮನಸ್ಸು
ಅಳಿಯಾಸೆ–ದುರಾಶೆ
ಅಳುರ್–ವ್ಯಾಪಿಸು
ಅಳ್ಕರ್–ವಾತ್ಸಲ್ಯ, ಪ್ರೀತಿ
ಅಳ್ತಿ–ಪ್ರೀತಿ
ಅಳ್ಳಿರಿ–ಉಬ್ಬಸಪಡು, ತಿವಿ, ಮರ್ಮಕ್ಕೆ ಚುಚ್ಚು

## ಆ

ಆಕಂಪನಗೊಳ್ಳು–ನಡುಗು
ಆಕರ–ಸಮೂಹ
ಆಕುಲಿಸು–ಚಿಂತೆಮಾಡು
ಆಖಂಡಲ–ದೇವೇಂದ್ರ
ಆಗಾರ–ಮನೆ
ಆಜಿ–ಯುದ್ಧ
ಆಡುಂಬೊಲ–ಆಟದ ಮೈದಾನ.
ಆಣ್ಮ–ಯಜಮಾನ
ಆತ್ತ–ಒದಗಿದ, ಹೊಂದಿದ, ಬಂದ
ಆದಂ–ಚೆನ್ನಾಗಿ, ಅಧಿಕವಾಗಿ
ಆಧಾವಕ–ದಂಡ
ಆನ್–ಸಿದ್ಧವಾಗು
ಆಂದೋಳ–ತೂಗುಮಂಚ
ಆಭೀಳ–ಭಯಂಕರ
ಆಮಯ–ರೋಗ
ಆಮೋದ–ಪರಿಮಳ
ಆಯ್ಕುಳಿ–ಆರಿಸಿಕೊಂಡು ಬಂದ
ಆಱಡಿ–ತುಂಬಿ, ಷಟ್ಪದ
ಆರಂಭಣ–ಪ್ರಾರಂಭ
ಆರಯ್–ವಿಚಾರಿಸು
ಆರವೆ–ಆರಾಮ, ತೋಟ
ಆರಾಜತ್–ಪೂರ್ತಿಹೊಳೆಯುವ
ಆರೆಕ್ಕಾರರು–ಗುಲ್ಲೆಬ್ಬಿಸುವವರು
ಆರೋಗಣೆ–ಊಟ, ನೈವೇದ್ಯ
ಆರ್ತಿ–ಕರುಣೆ
ಆರ್ದ್ರ–ನೆನೆ, ತೊಯ್ದ
ಆರ್ಪು–ಸಾಮರ್ಥ್ಯ
ಆರಭಟಿ–ಗಮಕದ ಒಂದು ರೀತಿ
ಆಲಿವರಲ್–ಆಲಿಕಲ್ಲು
ಆವರ್ತ–ಸುಳಿ, ತಿರುಗಣೆ
ಆಸಾರ–ಮಳೆ
ಆಸುರ–ಆರ್ಭಟ, ರಾಕ್ಷಸೀಯ
ಆಳ್–ಮುಳುಗು
ಆಳ್ಗಳ್–ಪೌರುಷಯುಕ್ತವಾದುವು
ಆಳ್ವರಿ–ಕೋಟೆಯ ಮೇಲಿನ ಕಾವಲುದಾರಿ

## ಇ–ಈ

ಇಂಗಳ–ಬೆಂಕಿ
ಇಟ್ಟಣಮೆನಿಸು–ಮನೋಹರವಾಗಿ ಕಾಣು
ಇಟ್ಟಣಿಸು–ಒಟ್ಟುಗೂಡು
ಇಟ್ಟಿ–ಚಿಕ್ಕ ಬರ್ಚಿ
ಇಡು–ರಭಸದಿಂದ ಎಸೆ, ಹೊಡೆ
ಇಂಡೆ–ಸಮೂಹ, ರಾಶಿ
ಇನ–ಸೂರ್ಯ
ಇನಿಯ–ಪ್ರಿಯ, ನಲ್ಲ
ಇಂದೀವರ–ಕಮಲ
ಇಂದ್ರಕಾಂತ–ಚಂದ್ರಕಾಂತಮಣಿ
ಇಂದ್ರಗೋಪ–ಮಿಂಚುಹುಳು
ಇಭ–ಆನೆ
ಇಂಬಯ್‌ದೆಗೆ–ಸ್ಥಳಬಿಡು
ಇಂಬುವಡೆ–ವಿಸ್ತಾರವಾಗು
ಇರ್ಕೆವನೆ–ಇಡುವಮನೆ
ಇಸು–ಬಾಣಪ್ರಯೋಗಮಾಡು
ಈಂಟು–ಕುಡಿ
ಈಡಿರಿ–ಚುಚ್ಚು, ಕೆದರು
ಈಷದ್‌ಗಾತ್ರ–ಬಡದೇಹ
ಈಳೆ–ದೊಡ್ಡ ನಿಂಬೆ, ಗಜನಿಂಬೆ,

ಉ - ಊ

ಉಕ್ಕಂಡ-ಕಾರಂಜಿ, ಚಿಲುಮೆ, ಸೆಲೆ
ಉಗಿ-ಜಗ್ಗು
ಉಳಿ-ಸೀಳು
ಉಗ್ಗಡಿಸು-ಹಾದಿಯ ಅನುಕೂಲ ಮಾಡಿ
ಕೊಡು ಘೋಷಿಸು
ಉಗ್ರಗ್ರಹ-ಭಯಂಕರ ಪಿಶಾಚ
ಉಚ್ಚಂಡ-ಅತಿಉಗ್ರ
ಉಚ್ಚಳಿಸು-ಚಿಮ್ಮು, ನಟ್ಟು ಪಾರಾಗು
ಉಡು-ನಕ್ಷತ್ರ
ಉಡೆವಣಿ-ಕಾಂಚೀರತ್ನ
ಉಣ್ಮು-ಹೊರಬರು, ಉರವಾಗು
ಉತ್ತಂಸ-ಕಿರೀಟ
ಉತ್ತಮಾಂಗ-ಶಿರಸ್ಸು
ಉತ್ತಾರಕ-ಮೇಲೆತ್ತುವವ, ದಾಟಿಸುವವ
ಉತ್ಥಿತ-ಎಬ್ಬಿಸಿದ
ಉತ್ಪಥಕ್ರಮ-ಮೀರಿ ನಡೆಯುವಿಕೆ
ಉದಗ್ರ-ಶ್ರೇಷ್ಠ
ಉದಗ್ರವೃತ್ತಿ-ಸಂತಪ್ತ ವೃತ್ತಿ
ಉದಂಚ-ಮೇಲೆತ್ತಿದ
ಉದ್ಗಲಿಸು-ಹೊರಟುಬರು
ಉದ್ಘ-ಉನ್ನತ, ಎತ್ತರ
ಉದ್ಧುರ-ಅತಿಯಾದ, ದುಷ್ಟ
ಉದ್ಧೂಳನ-ಲೇಪನ
ಉದ್ವರ್ತನಂಗೆಯ್-ಲೇಪಿಸು
ಉದ್ವಾಹ-ವಿವಾಹ
ಉನ್ನತ-ಸುಂದರ
ಉನ್ಮದನಬಾಣ-ಮೋಹನಾಸ್ತ್ರ
ಉಪಪ್ಲವ-ಗ್ರಹಣ, ಗಂಡಾಂತರ
ಉಪ್ಪವಡಿಸು-ಏಳು
ಉಬ್ಬೆಗ-ಸಂತಾಪ
ಉರವಣೆ-ತಭಸ, ಕ್ರೌರ್ಯ
ಉರುಗಿಸಿನೋಡು-ಇಣಿಕಿ ನೋಡು
ಉರೋಜ-ಮೊಲೆ
ಉರ್ಕು-ಹುರುಪು, ಉತ್ಸಾಹ
ಉರ್ವೀಧರ-ರಾಜ, ಕ್ಷತ್ರಿಯ, ಉರ್ವೀವರ
ಉಗಿಬಗೆ-ಕಳವಳ
ಉಲ್ಲೇಖನ-ಯಜ್ಞಕಟ್ಟೆಯಮೇಲೆ
ಬರೆಯುವ ಯಂತ್ರ
ಉಳಿದು-ಕೂಗಿ
ಉಳ್ಳಲರ್ದ-ಅರಳುವುದರಲ್ಲಿದ
ಊಳಿಗ-ಉಪದ್ರವ, ಪೀಡೆ

ಎ, ಏ, ಐ

ಎಕ್ಕಲ-ಹಂದಿ
ಎಕ್ಕ ಸಕ್ಕ-ಆಕಳಾ ಸಕಳ
ಎಚ್ಚು-ಹೊರಬಿದ್ದು
ಎಡೆಗಲಿ-ದಾಟು, ಮೀರು.
ಎಡೆಗೊಳ್-ಅವಕಾಶ ಪಡೆ
ಎಡೆಯುಡುಗು-ಸಮಯಕಳೆ
ಎಡ್ಡಂ-ಮನೋಹರ
ಎತ್ತರ, ತತ್ತರ-ಎತ್ತರ, ಪತ್ತರ
ಎಯ್ಯಮೃಗ-ಮುಳ್ಳುಹಂದಿ
ಎಱಂಕೆ-ರೆಕ್ಕೆ
ಎಱಿ-ನೀರು ಹನಿಸು
ಎಲವ-ಬೂರಲಗಿಡ(ಶಾಲ್ಮಲಿ)
ಎಳಲ್-ಜೋಲುಬೀಳು
ಎಳಕುಳಿಗೊಳ್-ಸುಲಿ, ಸೆಳೆ
ಎಳೆ-ಭೂಮಿ
ಎಳ್ಚರಿಸು ಎಳ್ಚಟ್ಟು-ಎಬ್ಬಿಸು, ಓಡಿಸು
ಏಣ-ಜಿಗರೆ
ಏಣವಾಹನ-ಗಾಳಿ
ಏಪೊಳ್ತು-ಯಾವಾಗಲೂ
ಏಸು, ಎಸು-ಬಾಣದ ಒಗೆತ
ಏಳಿಸು-ಅಣಕಿಸು, ಎಬ್ಬಿಸು
ಐದವು-ಸಾಲವು
ಐರದಾಳಿ-ಗುಳದಾಳಿ, ಮಾಂಗಲ್ಯ

ಒ, ಓ, ಔ

ಒಗೆ-ಉಂಟಾಗು, ಹುಟ್ಟು
ಒಗೆತರು-ಉಂಟಾಗು, ಹುಟ್ಟು
ಒಗೆತ್ತರು-ಹುಟ್ಟಿಬರು
ಒಗ್ಗು-ಐಕ್ಯ, ಒಕ್ಕಟ್ಟು
ಒಚ್ಚತಂಗೊಳ್ಳು-ಶ್ರೇಷ್ಠರೆಂದು ಭಾವಿಸು
ಒಜ್ಜರ-ನೀರಿನಪ್ರವಾಹ
ಒಟ್ಟಜೆ-ಸಮೂಹ
ಒಟ್ಟೈಸು-ಗುಂಪು, ಗುಂಪಾಗಿ
ಒಡರ್ಚು-ಸಿದ್ಧವಾಗು
ಒಡ್ಡಣೆ-ಒಡ್ಡು
ಒತ್ತು-ಗಾದಿ
ಒತ್ತೆ-ಸೂಳೆಯರಿಗೆ ಕೊಡುವ ಹಣ
ಒಪ್ಪ ಕಾಂತಿ
ಒರಲು-ದುಃಖದಿಂದ ಕೂಗು
ಒರ್ಬುಳಿ-ಗುಂಪು, ಒಟ್ಟು
ಒಳಗು-ಮರ್ಮ, ಅಂತರಂಗ
ಒಳ್ಪು-ಒಪ್ಪ,ಚೆಲುವು
ಓಜೆ-ಕ್ರಮ
ಓತು-ಒಲಿದು,ಪ್ರೀತಿಸು
ಓರಂತೆ-ಕ್ರಮವಾಗಿ
ಓರನ್ನ-ಸಮಾನವಾದ
ಓಲಗಿಸು-ಅನುಸರಿಸು
ಓಪಿ-ಚೆನ್ನಾಗಿ
ಓವು-ರಕ್ಷಿಸು,ಹೂಪೋಣಿಸು
ಓಸರಿಸು-ಬಿಚ್ಚು, ಬದಿಗೆಮಾಡು
ಔರ್ವ-ದಾವಾಗ್ನಿ

ಕ, ಖ

ಕಂಸಾಳ-ಕಂಚಿನತಾಳ
ಕಕುಭ-ದಿಕ್ಕು
ಕಕ್ಕಡ-ನಿಷ್ಠುರ
ಕಕ್ಷಾಂತ-ಕಪೋಲದ ಮೇಲ್ಭಾಗ
ಕಚ್ಛಪ-ಆಮೆ
ಕಂಜ-ಕಮಲ
ಕಟಕಿ-ಚುಚ್ಚುಮಾತು
ಕಟ್ಟಣಕ-ಕಟ್ಟಹತ
ಕಡಿ-ತುಂಡು
ಕಡಿಯಣ-ಲಗಾಮು
ಕಡೆ-ಉಳಿಯಿಂದ ಕಡಿ
ಕಣಿಕ-ಬತ್ತದತೆನೆ
ಕಣ್ಗೊಳಿಸು-ಚಂದಕಾಣು
ಕಂಡರಿಸು-ಕೆತ್ತು
ಕಣ್ದೆರವಿ-ಕಣ್ಣು ತೆರೆಯಿಸುವಂಥವು
ಕದಂಬ-ತಾಳೆಮರ
ಕಂತು-ಚಂಡು
ಕಂದು-ಗುಂಡುಕಲ್ಲು
ಕಪೋಳವಿಪುಳೆ-ತುಂಬಿದಗಲ್ಲದವಳು
ಕಬರೀಭರ-ಕೂದಲುಗಂಟು, ಮುಡಿ
ಕಮನ-ಮನೋಹರ
ಕಂಬು-ಶಂಖ
ಕಮ್ಮರ-ಸೀಸವೃಕ್ಷ
ಕರವಾಳ-ಕತ್ತಿ
ಕರವಿಚ್ಛೇದನ-ಕೈಕಡಿಯುವುದು
ಕರಾಗ್ರ-ಬೆರಳು
ಕರುಮಾಡು-ಉಪ್ಪರಿಗೆ
ಕರಿಮುರಿಗೊಳ್-ಕಮರಿಹೋಗು
ಕಟುತ್ತು-ಉದ್ದೇಶಿಸಿ
ಕರೆ-ಕೂಗು
ಕರ್ಣಪಾಲಿಕಾ-ಕಿವಿಯ ಆಭರಣ
ಕರ್ದುಂಕು-ಕುಕ್ಕು
ಕರ್ಬೊನ್-ಕಬ್ಬಿಣ
ಕರ್ವುವಿಲ್ಲ-ಕಬ್ಬಿನಬಿಲ್ಲುಳ್ಳಕಾಮ
ಕಲಾಪ-ನವಿಲುಗರಿ
ಕವರ್-ಕಿತ್ತುಕೋ
ಕಶಾ-ಕೊರಡಾ, ಚಿಮ್ಮಟಿಗೆ

ಕಳ–ಮಧುರವಾದ
ಕಳಲ್–ಬೇಸರಪಡು
ಕಳಮ–ಭತ್ತ
ಕಳಿಗೆ–ಮೊಗ್ಗು
ಕಾಕು-ಇಂಪಾದಧ್ವನಿ, ಅರ್ಥಗರ್ಭಿತ ಮಾತು
ಕಾದಲರ್–ಪ್ರಿಯರು
ಕಾಮದುಘ-ಕಾಮಧೇನು
ಕಾಮ್ಯ–ಬಯಸಿದ
ಕಾರರಸ-ಮಳೆರಾಜ
ಕಾರ್ಗಾಲ-ಮಳೆಗಾಲ
ಕಾರ್ಪಣ್ಯ-ದುಃಖ, ಬಡತನ
ಕಾರ್ಮೊಗ-ಮುಂಗಾರು
ಕಾಲ್ಪೊನಲ್-ಕಾಲುವೆಯಲ್ಲಿ ಹರಿಯುವ ನೀರು
ಕಾವ್ಯಶ್ರೇಷ್ಠ-ಶುಕ್ರ, ಕವಿ
ಕಾವು-ದೇಟು
ಕಾವುಳ-ಕಗ್ಗತ್ತಲೆ
ಕಾಸಾರ-ಮಡು
ಕಾಳಿಕೆ-ಕಾಡಿಗೆ
ಕಾಳಿಂದಿ-ಯಮುನಾನದಿ
ಕಿಗ್ಗಟ್ಟ-ಕಿರಿಯ ಕಟು
ಕೀನಾಶ-ಯಮ
ಕೀಱ್-ಕಿರಿಚು, ಕೂಗು
ಕೀರ-ಗಿಳಿ
ಕೀಲಿಸು-ನೆಡಿಸು
ಕುಕ್ಕರಿಸು-ಕೆಳಕ್ಕೆಬೀಳು
ಕುಜ-ಗಿಡ
ಕುಟಿಲತೆ-ಕೊಂಕುತನ
ಕುಟಿಲಪಥ-ವಕ್ರವಾದ(ಸೊಟ್ಟ)ದಾರಿ
ಕುಡುರ್ಪು-ಕೊಂಕಿದ ಹುಬ್ಬು
ಕುಧರ-ಪರ್ವತ
ಕುನಿ-ಬೊಗ್ಗು ಬಾಗು
ಕುಸುಂಗಿ–ಬೊಗ್ಗಿ
ಕುಂತಳ–ಮುಂಗುರುಳು
ಕುಮುದ–ತಾಪ
ಕುಮುಹ–ವ್ಯಾಧಿ
ಕುಂಭಿ–ಆನೆ
ಕುರರಿ–ಒಂದುಕ್ರೂರಮೃಗ ಹೆಣ್ಣು ಮರ
ಕುರುವಕ–ಗೋರಂಟೆ (ಮದರಂಗಿ)
ಕುರುಪುಗೊಳ್–(ಗುರುತಿಸು)
ಕುಲಿಶ–ವಜ್ರಾಯುಧ
ಕುವಲಯ–ಚಂದ್ರ, ಕಮಲ
ಕುಳ–ಚೂಪಾದ ಕಬ್ಬಿಣದಗೂಟ
ಕುಳಿಕ–ಒಂದು ಜಾತಿ ವಿಷಸರ್ಪ
ಕುಳಿರ್ಕೊಡು–ತಂಪನ್ನುಂಟುಮಾಡು
ಕೂನಿಸು–ಬಾಗಿಸು
ಕೂರಸಿ–ಹದನಾದಕತ್ತಿ
ಕೂರ್ತು–ಪ್ರೀತಿಸಿ
ಕೂರ್ಪು–ಹರಿತ
ಕೃತಕಾಚಳ–ಕೃತ್ರಿಮಪರ್ವತ
ಕೃತಿ-ಕಾವ್ಯ
ಕೃಶಾನು–ಬೆಂಕಿ
ಕೆತ್ತು-ಹಾರು, ಸ್ಫುರಿಸು
ಕೆಯ್ಗೆಯ್–ಸಿಂಗರಿಸು
ಕೆಯ್ಗೊಳಿಸು–ಅಲಂಕಾರಮಾಡು
ಕೆಯ್ದು-ಆಯುಧ
ಕೆಯ್ನೀರ್-ಮಂಗಳಧಾರೆ
ಕೆಯ್ಪಿಡೆ-ಕೈಯಿಂದ ಬಾರಿಸುವ ದುಮ್ಮಟ
ಕೆಯ್ಪೊಡೆ-ಬಾಣಾಸನ
ಕೆಯ್ಮಿಕ್ಕು–ಹೆಚ್ಚಾಗು
ಕೆಯ್ಮೆ–ಕುಶಲತೆ
ಕೆಯ್ವಾರಿಸು–ಜಯಘೋಷಮಾಡು
ಕೇಕಿ–ನವಿಲು
ಕೇಣ–ಸಿಟ್ಟು, ಛಲ

ಕೈಘಟ್ಟಿಗೊಳ್-ಸ್ಮೈಗೆ ತೀಯ್ದ ಗಂಧಪೂಸು
ಕೊಂಚೆ-ಕ್ರೌಂಚಪಕ್ಷಿ
ಕೊಂಡಕೆ-ಕಿವಿ
ಕೊಣಕು-ಕೋಣನ ಕೂಗು
ಕೊಂಡುಕೊನೆ-ತುಂಬಾಹೊಗಳು
ಕೊತ್ತಳ-ಹುಡೆ,ಸಮೂಹ
ಕೊಂತ-ಭಲ್ಲೆ
ಕೊಳರ್ವಕ್ಕಿ-ನೀರುಹಕ್ಕಿ
ಕೋಟರ-ಗಿಡಗಳಪೊದರು, ಪೊಟರೆ
ಕೋಟೀರ-ಕಿರೀಟ
ಕೋಡಿ-ತಂಪಾಗಿ
ಕೋರಕ-ಮೊಗ್ಗು
ಕೋವಿ-ಬಾಣ
ಕೋಳ್-ಏಟು, ಆಘಾತ
ಕೋಲಾಹಳೋತ್ಕರ-ದೊಡ್ಡ ಗದ್ದಲ
ಕೌಕ್ಷೇಯ-ಒರೆಯೊಳಗಿದ್ದ ಕತ್ತಿ
ಕೌರೇಳು-ಕಮರಿಹೋಗು
ಕೌಶಿಕ-ಗೂಗೆ, ಋಷಿ, ಹಾವಿನಪೊರೆ
ಕೌಳುಡೆ-ರೇಶಿಮೆಬಟ್ಟೆ
ಕ್ರೇಕಾಂಕುರ-ಹಂಸೆಗಳ ಕೂಗು
ಕ್ರೋಡ-ಹಂದಿ
ಕ್ವಣಿತ-ಮಂಜುಳನಾದ
ಕ್ಷ್ಮಾಪತಿ-ಭೂಪತಿ
ಖಗ-ಸೂರ್ಯ, ಪಕ್ಷಿ
ಖಟ್ವಂಗ-ಹೊರಸಿನಕಾಲು
ಖಡ್ಗಿ-ಗಂಡಕ
ಖರಕರ-ಸೂರ್ಯ

ಗ, ಘ

ಗಜಪತಿ-ಇಂದ್ರ
ಗಣಿತ-ಲೆಕ್ಕ
ಗಂಡ-ಗಲ್ಲಪ್ರದೇಶ
ಗಂಡಶೈಲ-ಎತ್ತರ ಶಿಖರ
ಗಂಡುಡುಗು-ಧೈರ್ಯಗುಂಡು
ಗಂಧವತಿ-ಭೂಮಿ
ಗಂಧವಹ-ಗಾಳಿ
ಗಂಧಸಿಂಧುರ-ಮದ್ದಾನೆ
ಗಮಕ-ಮನೋಭಾವ ಸೂಚಿಸುವ
ಗಹನ-ಅಡವಿ
ಗಹ್ವರ-ದೊಡ್ಡ ಗವಿ
ಗಳಪು-ಗಿಳಿಮಾತು
ಗಳಬಳ-ಗದ್ದಲ
ಗಿರು-ಭಾವಿಸು
ಗುಡಿಗಟ್ಟು-ರೋಮಾಂಚಿತನಾಗು
ಗುಣ-ಕಮಲದಂಟನ ಎಳೆ, ದಾರ
ಗುಣ್ಪು-ಆಳ ತಗ್ಗು
ಗುಲ್ಮ-ಕಂಬ
ಗುಳ-ಆನೆಬೆನ್ನಮೇಲೆ ಕಟ್ಟುವ ತೊಟ್ಟಿಲು
ಗೆತ್ತು-ಭಾವಿಸಿ
ಗೊಂಟು-ಗೊತ್ತುಮಾಡಿದಸ್ಥಳ
ಗೊಂದಣ-ಸಮುದಾಯ
ಗೊಲೆಗೆತ್ತು-ಹೆದೆಸಹಿತ ಎತ್ತು
ಗೋತ್ರ-ಪರ್ವತ, ಕುಲ, ಸಂತಾನ
ಗೋಪತಿ-ಸೂರ್ಯ
ಗೋವಳಗಟ್ಟಿಗೆ-ಕೈಬಡಿಗೆ, ಲಾಠಿ
ಗೌಂಜು-ಕೌಜುಗ
ಗ್ರೀವ-ಕುತ್ತಿಗೆ
ಘಟೆ-ಆನೆ
ಘಟ್ಟವಳ್ತಿ-ಗಂಧವನ್ನರೆಯುವವಳು
ಘಟ್ಟಮುಗುಳ್ಚು-ಗಂಧ ಅರೆ
ಘನ-ದೊಡ್ಡಸ್ತಿಕೆ
ಘನಪಥ-ಆಕಾಶ
ಘೀಳ್-ಆನೆಯ ಘೀಂಕರಿಸುವಿಕೆ
ಘುಸೃಣ-ಲೇಪನ
ಘೋಟ-ಕುದುರೆ

ಚ, ಛ

ಚಟುಳತರ-ಅತಿಚಂಚಲ

ಚಂಡಶೀಲ-ಉಗ್ರಆಚರಣೆಯುವ
ಚಂಡಾಸಿ-ಹರಿತವಾದ ಕತ್ತಿ
ಚಂಡಾಂಶು-ಸೂರ್ಯ
ಚಂದ್ರಲೇಖೆ-ಬಾಲಚಂದ್ರ
ಚಂದ್ರಾತಪ-ಬೆಳದಿಂಗಳು
ಚಪ್ಪರಣೆ-ಗಿಳಿಗಳ ಕೂಗು
ಚಮರ-ಗೊಂಡೆ
ಚಮ್ಮಟಿಕೆ-ಬಾರುಕೋಲು
ಚರಣಮುದ್ರಿಕಾ-ಕಾಲುಂಗುರ
ಚರಣಾಯುಧ-ಕೋಳಿ
ಚರ್ಮದಂಡ-ಬಾರುಕೋಲು
ಚಲಶಿವ-ಪರಬ್ರಹ್ಮನಸ್ವರೂಪ
ಚಾಪಳವೃತ್ತಿ-ಚಂಚಲಸ್ವಭಾವ
ಚಿತ್ರಕಾಯ-ಹುಲಿ
ಚಿರ-ಚಿರಾಯುತಕಡ್ಡಿಗಿಡ
ಚೂಳಿಕೆ-ದೀಪದಕುಡಿ
ಚೆಲ್ಲವಾಡು-ಧಿಕ್ಕರಿಸು
ಛಿದ್ರಿಸು-ಕನ್ನಕೊರೆ
ಜಕ್ಕಂದೊಳಲಿ-ಕೋಣ
ಜಟಾರಚನೆ-ಜಡೆಕಟ್ಟು
ಜಾಯಿಲ-ನಾಯಿ
ಜಾಲ-ಜಾಳಿಗೆ
ಜಿನುಗು-ಅಳಿನಾದ
ಜಿನುಂಗು-ಮೆಲುದನಿಮಾಡು
ಜೀವ-ಗುರು,ಬೃಹಸ್ಪತಿ
ಜೀವನ-ನೀರು,ಬಾಳುವೆ
ಜೋದ-ಮಾವಟಿಗ
ಝುಂಕೆ-ಬೆದರಿಸು
ಝುಷ-ಮೀನು
ಝುಷಕೇತ-ಕಾಮ

ಟ, ಠ

ಟಿಟ್ಟಿಭ-ಟಿಂವಕ್ಕಿ
ಠಾವು-ಸ್ಥಳ
ಡಂಬಳ-ಹುಚ್ಚಾಟ
ಡಿಂಡಿಮ-ನಗಾರಿ
ಡೆಂಕಣಿ-ಆಯುಧ,ಯಂತ್ರ
ಡೌಂಡೆ-ವಾದ್ಯವಿಶೇಷ
ಡೊಕ್ಕರಿಕೆ-ಕುಸ್ತಿಯಪೇಚು

ತ, ಥ

ತಕ್ಕು-ವಂಚನೆ
ತಟಿಲ್ಲತಾ-ಬಳ್ಳಿಮಿಂಚು
ತಡಿಕೆ-ತಟ್ಟಿ
ತಣಿವಿನಂ-ತೃಪ್ತಿಯಾಗುವಹಾಗೆ
ತನುವನೆಳಸು-ಶರೀರತನವನ್ನು ಅಪೇಕ್ಷಿಸು
ತಂದಲ್-ಜಡಿಮಳೆ
ತಮಾಲ-ಹೊಂಗೆ
ತರದಿಂ-ಕ್ರಮವಾಗಿ
ತರಳತರ-ತುಂಬಾ ಚಂಚಲ
ತರಿ-ಸವರು
ತರ್ಕಯಿಸು-ವಿಚಾರಿಸಿನೋಡು
ತವಿಲ್-ಕ್ಷಯ, ನಾಶ
ತಳರ್-ಚಲಿಸು
ತಳವೆಳಗು-ಭ್ರಮೆ
ತಳಾರರ್-ತಳವಾರ, ಕಾಪಿನಾಳು
ತಳೆ-ಛತ್ರ
ತಲ್ಪ-ಹಾಸಿಗೆ
ತಳ್ಪಲ್-ತಪ್ಪಲು
ತಳ್ತಿರಿ-ಜೋರಿನಿಂದ ತಿವಿ
ತಳ್ತು-ಎದುರಿಸಿ
ತಾತ್ಪರ್ಯ-ಸತ್ಯಸ್ವರೂಪ
ತಾರಕಿತಮಾದ-ನಕ್ಷತ್ರಗಳಿಂದ ಕೂಡಿದ
ತಾರಗಿರಿ-ಬೆಳ್ಳಿಪರ್ವತ
ತಾರಾ-ನಕ್ಷತ್ರ
ತಾರೆಗಬೀರಿಗ-ತರಗಾಬರಗಾ
ತಾರ್ಮುಟ್ಟು-ಒಣಗು, ಅಟ್ಟಿಸು
ತಾಳಿಗೆ-ಬಾಯಿಒಳಂಗಳ

ತಿಗ್ಮಾಂಶು-ತೀಕ್ಷ್ಣ ಕಿರಣ, ಸೂರ್ಯ
ತಿಂಗಳ್-ಚಂದ್ರ
ತಿಣ್ಣ-ದಟ್ಟ, ಭಾರವಾದ
ತಿತ್ತಿರಿ-ಒಂದು ಜಾತಿ ಪಕ್ಷಿ, ತುತ್ತೂರಿ
ತೀವ್ರ-ತೀಕ್ಷ್ಣ
ತೀಡು-ಬೀಸು
ತೀರದೊಪ್ಪ-ದಂಡೆಯಸೌಂದರ್ಯ
ತುಡು-ಕೊಡು, ಧರಿಸು
ತುಂಡ-ಚಂಚು
ತುಱುಗು-ದಟ್ಟವಾಗು
ತುಱುಂಗಲು-ಗುಂಪು
ತೂದು-ಮುಂದುವರಿಸು
ತೂಪಿರಿ-ಧ್ವನಿಯಿಂದ ನಿವಾಳಿತೆಗೆ
ತೂರಲ್ಗೊಂಬು-ತುದಿಯಕೊಂಬೆ
ತೂಳ್-ಮುಂದುವರಿ
ತೆಱಪುಗೊಳ್-ಅವಕಾಶ, ವ್ಯಾಪಿಸು
ತೆರಳ್ಚೆ-ಧಾಳಿ
ತೆರೆಮಸಗು-ಹೆಚ್ಚಾಗು
ತೇಂಕಾಡು-ಈಸಾಡು
ತೊಂಗಲ್-ಗೊಂಚಲು
ತೊಡಂಬೆ-ಆಭರಣ
ತೊಂಡುಗಡೆ-ಗಳಹು
ತೋಟಿ-ಜಗಳ
ತೋಮರ-ಕಬ್ಬಿಣದ ಒನಕೆ
ತೌದಲೆ-ಕೊನೆಗಾಲ
ಥಟ್ಟು-ಸಮುದಾಯ

ದ, ಧ, ನ

ದಂಡಣೆ-ಶಿಕ್ಷೆ
ದಂಡೆ-ತೋಳು
ದನುಪ್ರೋದ್ಭವ-ದನುಜ
ದರಿ-ಕಂದರಿ
ದಶಶತಕರ-ಸೂರ್ಯ
ದಳನ-ಪುಡಿಮಾಡುವಿಕೆ
ದಳವೇರು-ಚಿಗುರು
ದಾರವಂದ-ಬಾಗಿಲು, ಕದ
ದಾರ-ಹಗ್ಗ, ಕಿಚ್ಚು
ದೀಪನ-ಬೆಳಕನ್ನುಕೊಡುವ
ದೀಹದವುಲಿ-ಬೇಟೆಗಾಗಿ ಪಳಗಿಸಿದ ಹುಲಿ
ದುಶ್ಚವನ-ಇಂದ್ರ
ದೂರ್ವಾ-ಗರಿಕೆ
ದೂಸಿಗ-ಬಟ್ಟೆಯ ವ್ಯಾಪಾರಿ
ದೆಖ್ಖಾ ದೆಖ್ಖಿ-ದೃಷ್ಟಿಯುದ್ಧ
ದೆಖ್ಖಾಳ-ರಮಣೀಯತೆ
ದೇವಾಸಿ-ನೂಲಿನಬಟ್ಟೆ
ದೊರೆ-ಸಮಾನ
ದೊರೆಕೊಳ್-ಪ್ರಾಪ್ತವಾಗು
ದ್ವಿಜ-ಹುಲ್ಲು
ಧಮ್ಮಿಲ್ಲ-ಹೆಳಲು
ಧಾರಾಧರ-ಮೋಡ
ಧೀಂಕಿಡು-ಧಾಳಿಯಿಡು
ಧೃತಕಂಟಕ-ಮುಳ್ಳಿರುವ
ನಕ್ರ-ಮೊಸಳೆ
ನಕ್ಷತ್ರಪಾಠಕರು-ಜೋಯಿಸರು
ನಚ್ಚು-ನಂಬು
ನಲ್ಲೆ-ಪ್ರಿಯೆ
ನಳನಳಿಕೆ-ಕೋಮಲತೆ
ನಾನ್-ತೊಯ್ಯು, ವದ್ದೆಯಾಗು
ನಿಕುರುಂಬ-ಸಮೂಹ
ನಿಕೃಷ್ಟಾತ್ಮ-ಕೀಳುಮನಸ್ಸಿನ
ನಿಕೇತನಯೂಥ-ಮನೆಗಳ ಗುಂಪು
ನಿಗಳ-ಸರಪಳಿ
ನಿಟ್ಟೆ-ನಿಷ್ಠೆ
ನಿಡಿದುಗೊಳ್-ಉದ್ದವಾಗು
ನಿದಾಘ-ಬೇಸಗೆ
ನಿಧಿ-ನಿಕ್ಷೇಪ, ಸಮೂಹ, ಸಂಪತ್ತು
ನಿಭ-ಸಮಾನ

ನಿಮಿರ್–ನಿಗುರು, ಸೆಟೆ
ನಿಮಿರ್ಕೆ–ದೊಡ್ಡಸ್ತಿಕೆ
ನಿರ್ಮಿರ್ಚು-ರಚಿಸು
ನಿರತಿಶಯಪದ-ಮೋಕ್ಷ
ನಿರವದ್ಯ-ದೋಷರಹಿತ
ನಿರುಪಾಧಿಕ-ಯಾವ ಉಪಾಧಿಗಳು ಇಲ್ಲದ
ನಿರೋಧ–ಒತ್ತಡ
ನಿರ್ಘೋಷ-ಗರ್ಜನೆ
ನಿರ್ಯತ್-ಹೊರಡುವ
ನಿರ್ವೇದ-ಜೇಸರ
ನಿವಾತ-ಗಾಳಿಯಿಲ್ಲದ
ನಿವೇಶ-ಆಶ್ರಮ, ಬೀಡು
ನಿಶಿತ-ಹರಿತವಾದ
ನಿಶ್ಚಲ ಕೇದಾರ–ಪರ್ವತ ಶಿಖರ
ನಿಷ್ಕಂಪನ-ನಡುಕವಿಲ್ಲದ
ನಿಷ್ಪ್ರವರ-ಶ್ರೇಷ್ಠವಂಶವಿಲ್ಲದ
ನಿಸ್ವನ-ನಿಟ್ಟುಸಿರು
ನಿಳಿಂಪ–ಸುರ
ನೀಡ-ಮನೆ
ನೀಡಾಗು-ಸಹಿಸು
ನೀಡಾಡು-ಕೊಟ್ಟುಬಿಡು
ನೀರದ-ಮೋಡ
ನೀಱೆ-ಸುಂದರಸ್ತ್ರೀ
ನೀರೋಡು–ಸತ್ವಕಳೆದುಕೊಳ್ಳು
ನೀವು-ತಿಕ್ಕು
ನೀಳ್ಸೈರಿಸು–ಸಹಿಸು
ನೀಳ್–ಮುಂದೆ ಚಾಚು
ನೂತ್ನೋದಕ-ಮಳೆಯನೀರು
ನೆಗೆ-ಜಿಗಿ
ನೆಮ್ಮು-ಆಶ್ರಯಿಸು
ನೆರವಿ-ಗುಂಪು
ನೆಲೆಗೊಂಡ-ಮನೆಮಾಡಿಕೊಂಡ
ನೇಣ್-ಹಗ್ಗ
ನೇವಳ-ಕೊರಳಹಾರ
ನೇವುರ-ನೂಪುರ
ನೇಹ-ಸ್ನೇಹ

ಪ, ಫ

ಪಕ್ಕರಿಕೆ-ಥಡಿ
ಪಕ್ಕೆ-ಗೂಡು
ಪಟ-ಬಲೆಯವಸ್ತ್ರ
ಪಟುರವ-ಗಂಭೀರಧ್ವನಿ
ಪಟ್ಟಿಯ–ಕಿರುಗತ್ತಿ
ಪಜಿ–ಪರಿ, ರೀತಿ
ಪಡಿಚಂದ್ರ-ಪ್ರತಿಚಂದ್ರ
ಪಡಿಯರ-ದ್ವಾರಪಾಲಕ
ಪಡ್ಡಳಿ–ಕಣಗಿಲೆ
ಪಣ್ಯಾಂಗನೆ-ವೇಶ್ಯೆ
ಪತಂಗ-ಸೂರ್ಯ
ಪತಾಕಿನಿ-ಸೈನ್ಯ
ಪತ್ರಗತಿ-ಆಲಂಕಾರಿಕ ಎಲೆಯ ಚಿತ್ರ
ಪದ-ಸಮಯ, ವೇಳೆ
ಪದಿರ್-ವ್ಯಂಗ್ಯ, ಪರ್ಯಾಯ
ಪದುಳ-ಕ್ಷೇಮ, ಜಾಗ್ರತೆ
ಪದೆಪು–ಪ್ರೀತಿ, ಅಪೇಕ್ಷೆ
ಪಂದಲೆ-ಹಸಿಯತಲೆ
ಪನ್ನಿರ್ವರ್- ಹನ್ನೆರಡುಜನ
ಪಯೋಧರ-ಮೋಡ, ಮೊಲೆ
ಪಯೋಧಿ-ಕ್ಷೀರಸಾಗರ, ಸಮುದ್ರ
ಪರ-ಸ್ವರ್ಗ
ಪರಕೆ-ಆಶೀರ್ವಾದ
ಪರಪುಟ್ಟ–ಕೋಗಿಲೆ
ಪರಮೆ-ಭ್ರಮರ
ಪರಮೈಶ್ವರ್ಯ–ಮೋಕ್ಷಸಂಪತ್ತು
ಪರವಶತೆ–ಮೈಯಮರೆವು
ಪರಿಕರ–ಉಪಕರಣ
ಪರಿಖಾತ-ಅಗಳತೆ, ಕಂದಕ

ಪರಿಗತ–ಹೋಗಲಾಡಿಸಿದ
ಪರಿಣಮಿಸು–ಜೀವಿಸಿಕೊಂಡಿರು
ಪರಿಧಾನ–ಅಂತಃಪಟ
ಪರಿರಂಭಣ–ಆಲಿಂಗನ
ಪರಿವಡೆ–ಹುಬ್ಬು
ಪರಿವೀಥಿ–ದೊಡ್ಡ ಬೀದಿ
ಪರಿವೇಕ್ಷಿಸು–ಸುತ್ತುಗಟ್ಟು
ಪರಿವೃತ–ಸುತ್ತಿಕೊಂಡವ
ಪರಿಷ್ವಂಗ–ಆಲಿಂಗನ
ಪರಿಸ್ತರಣ–ಹಾಸುಗೆ
ಪರಿಸ್ಪಂದನ–ಆನಂದ, ವಿನೋದ
ಪರುಷ–ಸ್ಪರ್ಶಮಣಿ
ಪರೆ–ಚದುರಿಹೋಗು
ಪಲ್ಲವಿಸು–ಹಲ್ಲು ಬಾರಿಸು
ಪವನಪಥ–ಆಕಾಶ
ಪವಮಾನ–ಗಾಳಿ
ಪಸದನ–ಉಡುಗೊರೆ, ಕಾಣಿಕೆ
ಪಸರ–ಅಂಗಡಿ
ಪಸಲೆ–ಹುಲ್ಲುನೆಲ
ಪಸಾಯನ–ಉಡುಗೊರೆ
ಪಸಿಯ–ಅಪರಿಪಕ್ವ
ಪಸೆ–ಹಸೆ–ಮಂಗಲಪೀಠ
ಪಳಂಚಲೆ–ಬೆನ್ನು ಹತ್ತು
ಪಳಂಚು–ತಾಗು, ಏಟುಹಾಕು
ಪಳಿ–ನಿಂದಿಸು
ಪಳಯಿಸು–ಪ್ರಳಾಪಿಸು
ಪಳವಿಗೆ–ಧ್ವಜಪಟ
ಪಾದರಿ–ಪಾಟಲಪುಷ್ಪ
ಪಾಟ–ಸಪಾನ
ಪಾಠೀನ–ಮೊಸಳೆ,ಮೀನು,ಆಮೆ
ಪಾಯವಧಾರು–ಎಚ್ಚರಿಕೆಯಿಂದ ಹೆಜ್ಜೆಯಿಡು
ಪಾರಾವಾರ–ಸಮುದ್ರ
ಪಾರ್–ದಾರಿಕಾಯಲು ಅಪೇಕ್ಷಿಸು
ಪಾಸರೆ–ಹಾಸುಗಲ್ಲು
ಪಾಳಾಸ–ಮುತ್ತಲಿಗೂಟ
ಪಿಂಗಳ–ಕಪ್ಪು, ಕೆಂಪು, ಮಿಶ್ರಬಣ್ಣ
ಪಿಂಚಕಚುಂಬಕ–ಮೊದಲಮುದ್ದು
ಪಿಡಿ–ಹೆಣ್ಣಾನೆ
ಪೀನದೆ–ದೊಡ್ಡ
ಪೀಯೂಷ–ಅಮೃತ
ಪೀಲಿ–ನವಿಲುಗರಿ
ಪುಗುಳ್–ಹುಗುಳು, ಬೊಕ್ಕೆ
ಪುಟಿಕೆ–ಪುಡಿಕೆ
ಪುಂಡ್ರೇಕ್ಷು–ಬಿಳಿಯ ಕಬ್ಬು
ಪುದಿ–ವ್ಯಾಪಿಸು
ಪುಯ್ಯಲಿಕ್ಕು–ಮೊರೆಯಿಡು
ಪುರುಡಿಸು–ಸ್ಪರ್ಧಿಸು
ಪುರುಷಮೃಗ–ಶಿವಪೂಜಾಮೃಗ
ಪುರುಳಿ–ಗಿಳಿ
ಪುಲಿಮೊಗ–ಕೋಟೆ ಹೆಬ್ಬಾಗಿಲು
ಪುಲ್ದಂಡೆ–ಹುಲ್ಲಿನ ಮಾಲೆ
ಪುಷ್ಕರ–ಆನೆಸೊಂಡಿಲ ತುದಿ
ಪುಷ್ಪಕ–ತೆರೆಯ ಪಲ್ಲಕ್ಕಿ, ಮೇನೆ, ಮಾನ
ಪುಳಕಿತಮಾಗು–ರೋಮಾಂಚವೇಳು
ಪುಳಿನ–ಮರಳುದಿಬ್ಬ
ಪೂಗ–ಅಡಿಕೆ
ಪೂಣ್–ಪ್ರತಿಜ್ಞೆಮಾಡು
ಪವಲಿಗೆದಱು–ರಂಗೋಲಿಚಿತ್ರ
ಪೆಕ್ಕಣ–ನೃತ್ಯಭಂಗಿ
ಪೆಟ್ಟೆ–ಹೆಂಟೆ
ಪೆಡಮೆಟ್ಟು–ಹಿಮ್ಮೆಟ್ಟು
ಪೆಪ್ಪಳಿಸು–ಭೀತಿಗೊಳ್ಳು
ಪೆರಸಾರ್–ಹಿಂದಿರುಗು
ಪೆರ್ಗುಳಿ–ದೊಡ್ಡತಗ್ಗು
ಪೇಚಕ–ಮಲದ್ವಾರ
ಪೇರುರ–ದೊಡ್ಡಎದೆ

ಪೊಂಗು–ಉಬ್ಬು
ಪೊಡಕರಿಸು–ಉತ್ಸಾಹಗೊಳ್ಳು
ಪೊಡರ್ಪು–ಪರಾಕ್ರಮ
ಪೊತ್ತು-ಸುಡು
ಪೊಂಬಾಳೆ-ಅಡಕೆ, ಸಿಂಗಾರ, ಶ್ರೇಷ್ಠಬಾಳೆ
ಪೊಯ್ಲು -ಹೊಡೆತ
ಪೊರೆ–ತುಂಬು, ಸ್ಥಾಪಿಸು
ಪೊರೆಯೇಱು–ಮೈಯುಬ್ಬು
ಪೊರ್ದು-ಸ್ವೀಕರಿಸು
ಪೊಲ್ವ–ಹೋಲಿಯುವ
ಪೋತಕ-ಮರಿ
ಪೊಳಲ್–ಪೊಟ್ಟರೆ
ಪ್ರತಾನ-ಸಮೂಹ
ಪ್ರತಿಮುಖರ್–ಪ್ರಮುಖರು
ಪ್ರತಿಶೂನ್ಯ-ಜೋಡಿಲ್ಲದ
ಪ್ರತಿಹತ–ಏಟು ಹಾಕಲ್ಪಟ್ಟ
ಪ್ರತೀಹಾರದೇಶ-ಹೆಬ್ಬಾಗಿಲು
ಪ್ರದ-ಕೊಡುವಂತಹ
ಪ್ರದ್ಯೋತ-ಹೆಚ್ಚಿನ ಕಾಂತಿ
ಪ್ರಪಾ-ಅರವಟ್ಟಿಗೆ
ಪ್ರಬುದ್ಧ-ಧರಿಸಿದ
ಪ್ರಭೂತ-ಉಂಟಾದ
ಪ್ರರತ್ನ-ಶ್ರೇಷ್ಠರತ್ನ
ಪ್ರಸವ-ಮರಿ
ಪ್ರಸೂತಾತುರ-ಹಡೆಯುವ ಕುತೂಹಲ
ಪ್ರಸೂನ-ಹೂ
ಪ್ರಸ್ತಾವ-ಸಮಯ
ಪ್ರಸ್ಫುರಿತ–ಚಂಚಲ
ಪ್ರಾಗ್ರ-ಅತಿಶ್ರೇಷ್ಠ
ಪ್ರಾಂಜಲ–ಶುದ್ಧ
ಪ್ರಾತರ್ಕ್ಯ-ತರ್ಕಮಾಡಲು ಅಸಾಧ್ಯ
ಪ್ರಾಭವ-ಉದಯ
ಪ್ರಾಯ-ಸಮಾನ
ಪ್ರೋಚ್ಚಲತ್-ಮೇಲೆ ಹಾರುವ
ಪ್ರೋತ್ಕರ–ಉಂಟಾದ
ಪ್ರೋದ್ಗತ-ಹೊರಡುವ
ಪ್ರೋನ್ಮಿಳಿತ-ಒಟ್ಟುಗೂಡಿದ
ಫಟತ್ಕಾರ–ಫಟಫಟನೆಂಬ ಶಬ್ದ
ಫಣಿರಾಜ-ಆದಿಶೇಷ
ಫೇನ-ಬುರುಗು

ಬ, ಭ

ಬಗೆ-ಭಾವನೆ, ಅಪೇಕ್ಷಿಸು
ಬಗೆವೆರ್ಚು–ಮನಸ್ಸು ಹಿಗ್ಗು, ಹೃದಯ ವರಳು
ಬಗ್ಗಣೆ-ಕೋಗಿಲೆಯ ಕೂಗು
ಬಚ್ಚಣೆ–ಹೊದಿಕೆ
ಬಂಡಣ–ಯುದ್ಧ
ಬಂದುಗೆ(ತ್ಸ)-ಬಂಧೂಕ(ತ್ಭ)
ಬಂಧನ-ಮಾಲೆಗಟ್ಟುವಿಕೆ
ಬಂಧೂಕ-ಬಂದುಗೆ, ಗುಲ್ಬಾಕ್ಷ
ಬಱತುಹೋಗು-ಬತ್ತಿಹೋಗು
ಬಱಿ–ಪಕ್ಕೆ
ಬರಿಕೆಯ್–ಸೊಂಡಿಲು
ಬಲವಂದು-ಸುತ್ತುಗಟ್ಟು, ಪ್ರದಕ್ಷಿಣೆಹಾಕು
ಬಲಾರಿ-ಇಂದ್ರ
ಬಲ್ಲಹೆ-ಪಾಂಡಿತ್ಯ
ಬಸವಳಿ–ಶಕ್ತಿಗುಂದು
ಬಳಸಿಗಂ–ಸುತ್ತುಮುತ್ತು
ಬಳಾನೀಕ-ಸೈನ್ಯಸಮೂಹ
ಬಳಾಹಕ–ಮೋಡ
ಬಳಿಗೊಳ್-ಬೆನ್ನುಹತ್ತು
ಬಾಯುಳಿ-ಬಾಯಿಬಿಡು
ಬಾಯಿಣ-ಬಾಗಿನ
ಬಾಯ್ದೆರೆ-ತುಟಿ, ತೆರೆದ ಬಾಯಿ
ಬಾರಿಸು–ನಿವಾರಣೆಮಾಡು
ಬಾವನ್ನ–ಶ್ರೀಗಂಧ

ಬಾಷ್ಪ-ಹಬೆ, ಕಣ್ಣೀರು
ಬಾಸಣ-ಮುಸುಕು
ಬಾಸಣಿಸು-ಹೊದಿಸು
ಬಾಸೆ-ಹೊಟ್ಟೆಯ ಮೇಲಿನ ರೋಮರಾಜಿ
ಬಾಹುಪೂರ-ಭುಜಕಿರೀಟ
ಬಾಳ್-ಕತ್ತಿ, ಬದುಕು
ಬಿಗುರ್-ಅಂಜು
ಬಿಗುರ್ತು-ಭೀತಿಗೊಂಡು
ಬಿಣ್ಪು-ಭಾರ
ಬಿದಿರ್-ಹೊಯ್ದಾಡು
ಬಿದು-ಗಂಡಸ್ಥಲ
ಬಿನ್ನಣ-ವಿಜ್ಞಾನ
ಬಿಂಬ-ತೊಂಡೆಹಣ್ಣು, ರೂಪ
ಬಿಲ್ಲುಂಬೆರಗು-ಅತ್ಯಾಶ್ಚರ್ಯ
ಬಿಸ-ವಿಷ, ಕಮಲದ ದಂಟು
ಬಿಸರುಹ-ಕಮಲ
ಬಿಳ್ತು-ಬೀಜ
ಬಿಳ್ದಿನ-ಹಗಲು
ಬೀದಿವರಿ-ಹಬ್ಬು
ಬೀಳಿಲ್-ಇಳಿಬೇರು
ಬುದ್ಬುದ-ಗುರುಳೆ
ಬೆಂಚೆ-ಹೊಂಡ, ಸಣ್ಣ ಕೆರೆ
ಬೆಟ್ಟಿತ್ತು-ಬಿರು‿ು
ಬೆಡಂಗು-ಮಾತಿನ ಜಾಣ್ಮೆ
ಬೆಂಡೇಳ್-ನಿಸ್ಸತ್ವನಾಗು, ಹಗುರ
ಬೆನ್ನೀರ್-ಬೆಚ್ಚನೆ ನೀರು
ಬೆರಕೆವೆಳಗು-ಸಮ್ಮಿಶ್ರಪ್ರಕಾಶ
ಬೆರಂಟು-ಹರಡು, ಅಗಿ
ಬೆಸಕೆಯ್-ಅಪ್ಪಣೆ ಪಾಲಿಸು
ಬೆಸಲಾಗು-ಹೆರು
ಬೆಳತಿಗೆ-ಕಾಂತಿ
ಬೆಳವಾರ್ಯ್-ಒಳ್ಳೆ ಬಾಯಿಯುಳ್ಳ
ಬೆಳ್ವಾಗು-ಮಂಕುಗೊಳ್ಳು
ಬೆಳ್ಪಾರ-ಮೋಸದ ಬಲೆಗಳು
ಬೇಳ್-ಆಹುತಿಕೊಡು
ಬೈತರ್-ಘಟ್ಟಿಯಾಗಿ ಕೂಡ್ರಿಸು
ಬೋಳೈಸು-ಪ್ರೀತಿ ತೋರಿಸು
ಬ್ರಹ್ಮವೃಕ್ಷ-ಮುತ್ತಲಗಿಡ
ಭಗಣ-ನಕ್ಷತ್ರ
ಭಂಗ-ತೆರೆ
ಭದ್ರ-ಮಾಳಿಗೆ, ಆನೆ, ವೃಷಭ
ಭದ್ರಗಜ-ಪಟ್ಟದಾನೆ
ಬರಿಕೆಯ್-ಆನೆ ಸೊಂಡಿಲು
ಭಲ್ಲೂಕ-ಕರಡಿ
ಭಾವ-ಭಕ್ತಿ, ಬಗೆ
ಭಾವಕಿ-ಪ್ರೀತಿ ತೋರುವವಳು
ಭಾವ್ಯ-ಭಕ್ತಿ ಹೆಚ್ಚಿಸುವ
ಭಾಳತಳ-ವಿಶಾಲಹಣೆ
ಭುವನ-ನೀರು, ಜಗತ್ತು
ಭುವನಕಂಟಕ-ಕಮಲದ ದಂಟಿನಲ್ಲಿರುವ ಮುಳ್ಳು
ಭೂಮಿಜೆ-ಸೀತಾದೇವಿ

## ಮ

ಮಕರ-ಮೊಸಳೆ
ಮಕರಧ್ವಜ-ಮನ್ಮಥ
ಮಗುಳ್ಚು-ಅರೆ
ಮಚ್ಚನೇತ್ರ-ಮೀನ್ಗಣ್ಣು
ಮಚ್ಚು-ಒಲಿ
ಮಡಗು-ಬಚ್ಚಿಡು
ಮಡಸನ್ನೆ-ಹಿಮ್ಮಡಸನ್ನೆ
ಮಂಡನಮಿಥುನ-ಅಲಂಕೃತ ದಂಪತಿಗಳು
ಮಂಡಲಿ-ನೃತವಿಶೇಷ
ಮನಸ್ವಿ-ಪಂಡಿತ, ವೀರ
ಮನು-ರಾಜರ್ಷಿಗಳು
ಮಂತಣ-ಆಲೋಚನೆ

ಮಂದಯಿಸು-ದಟ್ಟವಾಗು
ಮಂದಿವಾಳತನ-ಸಾಮಾನ್ಯಪ್ರವೃತ್ತಿ
ಮಂದೈಸಿ-ಮೆಲ್ಲಮೆಲ್ಲನೆ
ಮರವಡು-ನಿಶ್ಚೇಷ್ಟವಾಗು
ಮರೀಚಿಕಾಜಲ-ಬಿಸಿಲುಕುದುರೆ
ಮರುದ್ಧತ-ಗಾಳಿಯ ಪೆಟ್ಟುತಿಂದ
ಮರುನ್ನದಿ-ದೇವನದಿ (ಗಂಗಾ)
ಮರ್ದನ-ಅರೆದು ಪುಡಿಮಾಡುವಿಕೆ
ಮಲಂಗು-ಆತುಕೊಳ್ಳು
ಮಲರ್-ಹೂ
ಮಲ್ಲಳಿಗೊಳ್-ಭ್ರಾಂತನಾಗು
ಮಲ್ಲಾಮಲ್ಲಿ-ಕುಸ್ತಿ
ಮಸಕ-ರಭಸ, ಚಟುವಟಿಕೆ
ಮಸಗು-ಹಿಗ್ಗು, ಪ್ರಕ್ಷೋಭವುಂಟುಮಾಡು
ಮಸ್ತಕಶೂಲ-ತಲೆಶೂಲೆ
ಮಹಾಬಲ-ವಾಯು
ಮಾಕಂದ-ಮಾವಿನಮರ
ಮಾಗಿ-ಮಾಘಮಾಸ, ಚಳಿಗಾಲ
ಮಾಜಾತ-ಲಕ್ಷ್ಮೀಪುತ್ರ, ಕಾಮ
ಮಾಣಿಕಂಗಾಣ್-ರಜಸ್ವಲೆಯಾಗು
ಮಾಧವಿ-ವಸಂತದೂತಿ
ಮಾದುಫಲ-ಮಾದಳದ ಹಣ್ಣು
ಮಾರೊಡ್ಡು-ಪ್ರತಿವ್ಯೂಹರಚಿಸು
ಮಾಸಾಳು-ವೀರ
ಮಿಳಿ-ಮಿಣಿ
ಮಿಸುಂಟುವರಿ-ಜಿಗಿಜಿಗಿದು ಹರಿ
ಮೀನ್-ನಕ್ಷತ್ರ
ಮುಕುಳಿತ-ಬಾಡಿದ
ಮುಖರ-ಧ್ವನಿ
ಮುಗಿ-ಮುಚ್ಚು
ಮುಗುಳ್-ಅರಳುವ ಮೊಗ್ಗು
ಮುಂಕಣಿಸು-ಮುಂದುವರಿ
ಮುಂಗುಡಿ-ಮುಂಭಾಗದ ಧ್ವಜ
ಮುಡಿಗಟ್ಟಿನ ಪಟ-ಮುಂಡಾಸ
ಮುಂಡಾಡು-ಪ್ರೀತಿಯಿಂದ ಮೈದಡವು
ಮುಂಡಿಗೆ-ಮರದ ದೊಡ್ಡ ಗೂಟ
ಮುತ್ತಿನ-ಮುಪ್ಪಿನ, ಸಂಜೆಯ
ಮುದ್ರಿತ-ಮೇರೆಯಾಗಿರುವ
ಮುದ್ರೆ-ಅಂಕಿತಳಾದವಳು
ಮುಂತಿಡು-ಪ್ರಕಟಿಸು
ಮುಯ್ಯಾನ್-ಎದುರಾಗು
ಮುರಜ-ಮೃದಂಗ, ಮದ್ದಲೆ
ಮುಸಲಿ-ಸೊಂಡಿಲಿ
ಮೂದಲಿಸು-ಅಣ್ಣಕವಾಡು
ಮೂರಿ-ಸಮೂಹ
ಮೂಲ-ಪಾದಗಳ ಹೆಬ್ಬೆರಳು
ಮೃದುತಳ-ಮೃದುವಾದ ಅಂಗಾಲು
ಮೆದೆಗೆಡೆ-ಮುದ್ದೆಯಾಗಿಬೀಳು
ಮೆಯ್ಗರೆ-ಅಡಗು
ಮೆಲ್ಸರಿ-ಜುಬುರುಮಳೆ
ಮೆಲ್ಲಿತ್ತು-ಮೃದು
ಮೆಲ್ಕಟ್ಟು-ಛತ್ತು
ಮೇವಂ ಮುಗುಳ್ಚು-ಮೆಲುಕುಹಾಕು
ಮೈದೆಗೆ-ತಪ್ಪಿಸಿಕೊಳ್ಳು
ಮೈವೆರ್-ಹೆಚ್ಚಾಗು
ಮೊಗ್ಗರಿಸು-ಒಟ್ಟುಗೂಡು
ಮೊಚಿ-ದುಃಖದ ದೂರು
ಮೊಳೆನುಡಿ-ಸಲಿಗೆಮಾತು
ಮೋಡಾಮೋಡಿ-ಮುರುಕು
ಮೋದು-ಮೆತ್ತಗಾಗು
ಮೋಹರ-ಸೈನ್ಯ

## ಯ, ರ, ಲ

ಯಮ-ಇಂದ್ರಿಯನಿಗ್ರಹ
ಯೂಥ-ಹೆಣ್ಣಾನೆಗಳ ಸಾಲು
ರತ-ಆಸಕ್ತಿ

ರಥಾಂಗ–ಚಕ್ರವಾಕ
ರದನಿ-ಆನೆ
ರನ್ನದಾಳಿ–ರತ್ನದ ಪದಕ
ರಯ್ಯ-ಐಶ್ವರ್ಯ, ವಿಭವ
ರವಿಕಾಂತೋಚ್ಚಾಗ್ನಿ-ಸೂರ್ಯಕಾಂತಮಣಿ ಯಿಂದ ಹೊರಡುವ ಬೆಂಕಿ
ರತಿ-ಚಿನ್ನ, ಬೆಳ್ಳಿಯ ತಂತಿ
ರಸೆ-ಭೂಮಿ
ರಾಘೆ-ತೊಡೆ
ರಾಜ-ಚಂದ್ರ, ಅರಸ
ರಾಜಪೂಜ್ಯ-ಚಂದ್ರನಿಂದ ಪೂಜೆಗೊಂಡವ (ಗುರು)
ರಾಜೋತ್ಪನ್ನ-ಚಂದ್ರನಿಂದ ಹುಟ್ಟಿದ
ರಾಮೆ-ಸುಂದರಿ
ರಾವ-ಗರ್ಜನೆ, ಧ್ವನಿ
ರೂಕ್ಷ-ನಿಸ್ಸಾರ, ಒಣ
ರೂಹಿಸು-ಪ್ರತಿಬಿಂಬ ತೋರಿಸು
ರೆಂಜೆಯ-ಜಾಲ
ಱೊಪ್ಪ-ದೊಡ್ಡಿ
ಱೋಡಾಡು-ಅಣಕಿಸು
ಲಂಪಟೆ-ತೊಡಗಿದ, ಮುಳುಗಿದ
ಲಂಬಿಸು-ಜೋತಾಡು
ಲಲಾಮ-ಹಣೆ, ನೆತ್ತಿ
ಲಲಿತಚರಿತ-ವೇಶ್ಯೆಯರ ಮಾತುಕತೆ
ಲಲ್ಲೆ–ಪ್ರೇಮ
ಲವಣಿಸಾರ-ಒಂದು ಕುಸ್ತಿ ಪೇಚು
ಲಾಂಛನ-ಚಂದ್ರನ ಮೇಲಿನ ಕಪ್ಪುಕಲೆ
ಲಾವಗೆ-ಲಾವಕ್ಕಿ
ಲಿಂಗ-ಕುರುಹಿನಿಂದ ಕೂಡಿದ್ದು
ಲೀಢ-ಅರಗಿಸಿಕೊಂಡವ (ನೆಕ್ಕಿದವ)
ಲುಬ್ಧಕ-ಬೇಟೆಕಾರ
ಲುಲಾಯ-ಕೋಣ
ಲೇಖೆ-ಚಿತ್ರಣ
ಲೇಶ-ಸೀರ, ಬಡ
ಲೋಲುಪೆ-ಆಶೆಯುಳ್ಳವಳು
ಲೋಲುಪ್ತ-ಆಶೆಪಟ್ಟ
ಲೋಹಬಂಧನ-ಗಾಲಿಯ ಹಳಿ
ಲೌಡಿ-ಕಬ್ಬಿಣದಾಯುಧ

ವ

ವಂಶ-ಬಿದಿರು, ಸಂತಾನ
ವಕ್ರ-ಮಂಗಳ
ವಕ್ತ್ರ-ಮುಖ
ವಕ್ಷೋಜ-ಮೊಲೆ
ವಜ್ರಮುಷ್ಟಿ–ಬಿಗಿಮುಷ್ಟಿ
ವಟವಿಟಪಿ–ಆಲದಮರ
ವಪುಸ್–ಶರೀರವುಳ್ಳವ
ವರ್ಷನರಪ-ಮಳೆರಾಜ
ವಲ್ಕಲ-ನಾರುಬಟ್ಟೆ
ವಸುಮತಿ–ಭೂಮಿ
ವಾಘೆ–ಲಗಾಮು
ವಾಮಾಂಗ-ದೇಹದ ಎಡಭಾಗ
ವಾರಸ್ತ್ರೀ–ವಾರಾಂಗನೆ, ಅರಮನೆಯಲ್ಲಿ ಕೆಲಸಕ್ಕೆ ಬರುವ ಹೆಂಗಸು
ವಾಲದಂಡ–ಉದ್ದವಾದ ಬಾಲ
ವಾಸಣಸಾ–ಇಂದ್ರ
ವಾಹ–ಕುದುರೆ
ವಾಹಕ–ರಾಹುತ
ವಿಕರ್ತನ–ಸೂರ್ಯ
ವಿಕಲ–ಬುದ್ಧಿಗೇಡಿ
ವಿಕೀರ್ಣ-ಚೆಲ್ಲುವ
ವಿಗತ-ಕಳೆದುಹೋದ
ವಿಡಂಬ–ಬಡಿವಾರ
ವಿತತ-ಪ್ರಸಿದ್ಧವಾದ
ವಿತಾನ-ಸಮೂಹ
ವಿದಗ್ಧೆ–ಅನುಭವಶಾಲಿನಿ

ವಿದಳಿತ_ಅರಳಿದ
ವಿದ್ರಾವಣ-ನಾಶಮಾಡುವವ
ವಿಭೂತಿ_ಸಂಪತ್ತು, ಭಸ್ಮ
ವಿಭ್ರಮ-ಆಕರ್ಷಕ, ಸೌಂದರ್ಯ,
ತೊಂದರೆ, ಮರುಕ, ಅರಳದ, ಭ್ರಾಂತಿ
ಯನ್ನುಂಟುಮಾಡುವ
ವಿಭ್ರಮಬಲಂ-ಅಜ್ಞಾನವನ್ನೇ ಬಲವನ್ನಾಗಿ
ಮಾಡಿಕೊಂಡವ
ವಿಯೋಗಿ-ನಿತ್ಯವಿರಾಗಿ
ವಿರಚಿಸು-ಲೆಕ್ಕಮಾಡಿಹೇಳು
ವಿರಥ_ನಿರಾಶೆಗೊಂಡವ, ನಿರಾಶೆ
ವಿಶಸನ-ದಂಡನೆ
ವಿಷಜ-ಮದಕುಣಿಕೆ
ವಿಷಭಂಗ_ತಿರುಗಣಿಮಡು
ವಿಷ-ನೀರು
ವಿಷಯ-ದೇಶ
ವಿಸಟಂಬರಿ-ಮುಂದುವರಿ
ವಿಹರಣ-ವಿಹಾರ
ವಿಹೀನ_ವಿಫಲ, ನಿಷ್ಪ್ರಯೋಜನ
ವಿಹ್ವಳ_ನರಳುವಿಕೆ
ವಿಳಾಸಿನಿ_ದಾಸಿ
ವೀಥಿ-ಸಮೂಹ, ಗುಂಪು, ದಾರಿ
ವೇತಂಡ_ಆನೆ
ವೇದಕ-ವೇದಬಲ್ಲವ
ವೈಹಾಳಿ_ಆನೆ ಕುದುರೆಗಳನ್ನು ಈಲು
ಮಾಡುವ ಸ್ಥಳ
ವೃಕ_ತೋಳ
ವ್ಯಾಜ-ಪ್ರೇಮಕಲಹ

ಶ, ಷ, ಸ

ಶಕುನಿ-ಹಾಲಹಕ್ಕಿ
ಶತಧಾರಾ_ಚಕ್ರ, ಮೋಡ
ಶತಪತ್ರನೇತ್ರ_ವಿಷ್ಣು
ಶತಪತ್ರಸೂತ್ರ_ಕಮಲದ ಎಳೆ
ಶರ-ನೀರು
ಶರದ-ಮೋಡ
ಶರದ್ಘನ_ಬಿಳಿಮೋಡ
ಶರಭ_ಎಂಟುಕಾಲು ಮೃಗ
ಶಶಕ-ಮೊಲ
ಶ್ರಾಂತ_ದಣಿದವ
ಶಾರ್ಙ್ಗ-ವಿಷ್ಣುವಿನ ಬಿಲ್ಲು
ಶಾಲಿ-ಸಣ್ಣ ಭತ್ತ
ಶಾಶ್ವತೆ_ನಾಶರಹಿತಳು, ದೇವಿ
ಶಿಖಿ_ನವಿಲು, ಅಗ್ನಿ
ಶಿರೀಷ-ಬಾಗೆಹೂ
ಶಿಶಿರಶಿಲಾ_ಚಂದ್ರಕಾಂತದ ಕಲ್ಲು
ಶಿಳೀಮುಖ_ಬಾಣ, ಭ್ರಮರ
ಶೀತಕೃತ್_ಚಂದ್ರ
ಶೂರ್ಪಕ_ಒಬ್ಬ ದೈತ್ಯ
ಶೈಲನಿತಂಬ-ಪರ್ವತದ ತಪ್ಪಲು
ಶೈವಸಾರ-ಶಿವಧರ್ಮದ ಕೆಚ್ಚು
ಶ್ರೀತಾರಕ_ಸಂಪತ್ತುಳ್ಳ ಹಣೆಬೊಟ್ಟು
ಶ್ರೀನಿಧಿ-ಸೌಂದರ್ಯದ ನಿಧಿ
ಶ್ರೀಸಾರ-ಶ್ರೇಷ್ಠವಾದ ಸೌಭಾಗ್ಯ
ಷಂಡ-ಸಮೂಹ
ಸಂರಂಭ-ಸಂಭ್ರಮ
ಸಂಹರಿಸು-ಅಚ್ಚುಕಟ್ಟಾಗಿರಿಸು
ಸಂಹನನ-ಕೊಲೆ
ಸಕಳಂಕ_ಚಂದ್ರ
ಸಖಾಯ_ಜೊತೆಗಾರ
ಸಂಕಲ್ಪಜನ್ಮ-ಮನ್ಮಥ
ಸಂಘಾತ-ಗುಂಪು, ಸಮೂಹ
ಸಂಚೋದ್ಯ_ಅತ್ಯಾಶ್ಚರ್ಯ
ಸದರ್ಥ-ಶ್ರೀಮಂತ ಶ್ರೇಷ್ಠ
ಬಯಕೆಯುಳ್ಳವ
ಸಂತಾಪನ_ಕಾಮ
ಸಂದ-ಶ್ರೇಷ್ಠವಾದ

ಸಂದಣಿಗೊಳ್-ಗುಂಪುಗೂಡು
ಸಬಳ-ಭರ್ಜಿ, ಸಲಾಕೆ
ಸಮಕಟ್ಟು-ಸಿಸ್ತು
ಸಮಂತು-ಚನ್ನಾಗಿ
ಸಮವರ್ತಿ-ಯಮ
ಸಂಪುಟ-ಕರಡಿಗೆ
ಸಂಪೂರ್ಣಸಂಕಾಶ-ಸೂರ್ಯ
ಸಂಭಿನ್ನ-ಒಡೆದು ಹೊರಬಿದ್ದ
ಸಂಭೇದ-ಒಡೆಯುವವ
ಸಂಭ್ರಮೋಕ್ತಿ-ಸಂಕುಗೊಳಿಸುವ ಮಾತು
ಸಮ್ಮದ-ಸೊಕ್ಕು ಕಾಣಿಸುವ
ಸಮ್ಮಾರ್ಜನ-ಹುಲ್ಲುಕಸಬರಿಗೆ
ಸರಟ-ಓತಿಕಾಟ
ಸರಸೀಷಂಡ-ಸರೋವರ ಸಮೂಹ
ಸರಳಿಸು-ನಾಟಿಸಿಕೊಳ್ಳು
ಸರಿಸ-ಸಮೀಪ, ನೆರೆಯ ಪ್ರದೇಶ
ಸಸ್ಮೇರ-ಅರ್ಧ ಅರಳಿದ
ಸಹಣಿ-ಕುದುರೆ ಪಳಗಿಸುವವ
ಸಾದು-ಕಸ್ತೂರಿ ಮಿಶ್ರಿತ ದ್ರವ್ಯ
ಸಾರಾಯ-ಸತ್ವ
ಸಾರ್ತರ್-ಹತ್ತಿರಬರು
ಸಾರ್ವರ್ತುಕ-ಎಲ್ಲ ಋತುಗಳಿಗೂ ಉಪಯುಕ್ತ
ಸಿಡಿಮಿಡಿಗೊಳ್-ಕಳವಳಿಸು
ಸಿತಪಕ್ಷ-ಹಂಸ, ಸಿಂಹ, ಶುಕ್ಲ ಪಕ್ಷ,
ಸಿದ್ಧರಸ-ಸಂಜೀವಿನೀ ನೀರು
ಸೀ-ಕಮರು, ಬಾಡು
ಸೀಕರ-ತುಂತುರುಹನಿ
ಸೀಗುರಿ-ನವಿಲುಗರಿಯಿಂದ ಮಾಡಿದ ಚವರಿ
ಸುಗಿ-ಸಂಕೋಚಗೊಳ್ಳು
ಸುತ್ತುಗವ್ವ-ಸುತ್ತುಮುತ್ತಲಿನ ಜನರು
ಸುಧಿ-ಒಳ್ಳೆಯ ಬುದ್ಧಿ
ಸುಮನೋವೃಷ್ಟಿ-ಹೂಮಳೆ
ಸುಮ್ಮನೆ-ಸಂತೋಷಭರಿತಳು
ಸುರದ್ರುಮ-ಕಲ್ಪವೃಕ್ಷ
ಸುರಾವಾಸ-ಸ್ವರ್ಗ
ಸುರುಳ್-ಸುರುಳಿಯಾಗು
ಸುವಿಧಾನ-ಆರೈಕೆ
ಸುಳಿ-ತಿರುಗಣಿ
ಸೂಕಳಾಶ್ವ-ತುಂಟುಕುದುರೆ
ಸೂಗುರಿಸು-ನಿಟ್ಟುಸಿರುಬಿಡು
ಸೂಸಕ-ಹೆಳಲಿನ ತುದಿಯ ಗೊಂಡೆ
ಸೂಳಜಾಡು-ಕ್ರಮವರಿದು
ಸೃಕಾ-ಹೋಮದಲ್ಲಿ ಬಳಸುವ ಸವುಟು
ಸೂಳಾಯ್ತು-ಪಹರೆಯವ
ಸೆಡೆ-ಹಿಂಜರಿ
ಸೆಡೆದು-ಸೆಟಗೊಂಡು
ಸೆಣಸು-ಸ್ಪರ್ಧಿಸು
ಸೆಲ್ಲೆಹ-ಚುಚ್ಚುವ ಆಯುಧ
ಸೆಳ್ಳುಗುರು-ಉದ್ದ ಉಗುರು
ಸೇದೆ-ಆಯಾಸ
ಸೇವಾಪುರಂಧ್ರಿ-ಸುಂದರಿಯಾದ ದಾಸಿ
ಸೈತಿಡು-ಸಮಾಧಾನಪಡಿಸು
ಸೈರಿಭ-ಕಾಡುಕೋಣ
ಸೈಪೆಜಗು-ವಿಸ್ಮಯ, ಆಶ್ಚರ್ಯ
ಸೊಂಪೇಱು-ಸೌಂದರ್ಯ ಹೆಚ್ಚಾಗು
ಸೊರ್ಕು-ಮದೋದಕ
ಸೊವಡು-ಕಂಪು
ಸೋಗಿಲ್-ಉಡಿ
ಸೋಗೆ-ನವಿಲು
ಸೋಮವೀಥಿ-ದಕ್ಷಿಣೋತ್ತರಬೀದಿ
ಸೋವು-ಬೆವರಿಸು
ಸೌರಭ್ಯ-ಸುಗಂಧದಿಂದ ಕೂಡಿದ
ಸ್ಥಂಡಿಲ-ಹೋಮವೇದಿಕೆ
ಸ್ನಿಗ್ಧ-ಸ್ನೇಹಯುಕ್ತವಾದ

ಸ್ರುವ–ಹೋಮದಲ್ಲಿ ಹವಿಸ್ಸು ಅರ್ಪಿಸುವ ಸವುಟು

ಸಾರ್ಥ–ಸ್ವಂತದ ಸಂಪತ್ತು

ಹ

ಹಂಸ–ಬೃಹಸ್ಪತಿ

ಹಮ್ಮದಂಬೋಗಿ–ಮೈಮರೆದು, ಮೂರ್ಛೆ ಹೋಗು

ಹರಡೆ–ಕಂಕಪಕ್ಷಿ

ಹರಿ–ಸಿಂಗ

ಹರಿಗವಿ–ಕೀಲುಕವಿ

ಹರಿಗೆ–ಢಾಲು

ಹರಿತ–ಹಸಿರುಬಣ್ಣ

ಹರಿಬ–ಕಾರಣ

ಹಲ್ಲಣ–ಥಡಿ

ಹಲ್ಲಣಿಸು–ಸಿದ್ಧಗೊಳಿಸು

ಹವಣಿಸು–ಹೊರಡು

ಹಸಾದ–ಪ್ರಸಾದ

ಹಳವಿಗೆ–ಧ್ವಜಪಟ

ಹಳುಂಗು–ಪ್ರಯತ್ನಪಡು

ಹಾಸ–ಕಣ್ಣಿ

ಹಾಹೆ–ಬೊಂಬೆ

ಹಿಮಚೂರ್ಣ–ಪಚ್ಚಕರ್ಪುರದ ಹಳಕು

ಹಿಮೋಪಲ–ಚಂದ್ರಕಾಂತಶಿಲೆ

ಹಿಳಿ–ಹಿಂಡು

ಹೀಳಿದಳೆ–ನವಿಲುಗರಿಸತ್ತಿಗೆ

ಹುತಭುಕ್–ಅಗ್ನಿ

ಹುತವಹ–ಅಗ್ನಿ

ಹೃದಾಜೀವ–ಹೃದಯಕಮಲ

ಹೆಕ್ಕಳ–ಗೌರವ, ದೊಡ್ಡಸ್ತಿಕೆ

ಹೆಱೆಸೂಡಿದ–ಚಂದ್ರಧಾರಿ, ಶಿವ

ಹೇಮಾದ್ರೀಂದ್ರ–ಮೇರುಪರ್ವತ

ಹೇರಿಟ್ಟ–ಉದ್ದವಾದಭರ್ಜಿ

ಹೊಗರೆತ್ತು–ಹದನಗೊಳಿಸು

ಹೊಗೆದು–ಹೊಗೆಯೆದ್ದು

ಹೊಪ್ಪಳಿಸು–ಗುಳ್ಳೆಯೇಳು

ಹೊಂಬಾಳೆ–ಅಡಿಕೆ ತೆಂಗುಗಳ ಗೊಂಚಲು

ಹೊಯ್ದು–ಹೊಡೆತ

